॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೮

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೮

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

# ಮುನ್ನುಡಿ

ದ್ವಾದಶಾಂಶಗಳಿಂದ ವಿರಾಜಿಸುವ ಶ್ರೀಶಿವರಹಸ್ಯಗ್ರಂಥಮಾಲೆಯಲ್ಲಿ ಇದು ಹದಿನೆಂಟನೆಯ ಪುಷ್ಪ. ಈ ಮಾಲೆಯಲ್ಲಿ ಎಲ್ಲವೂ ಒಂದೇ ಜಾತಿಯ ಹೂಗಳು. ಪ್ರತಿ ಹೂವಿನಲ್ಲಿಯೂ ಮಕರಂದವಿದೆ; ಸೌರಭವಿದೆ; ಮಾಧುರ್ಯವಿದೆ. ಭಕ್ತಿ ಮಾರ್ಗದಲ್ಲಿ ಶೈವಧರ್ಮವನ್ನು ಬೆಳಸಲೆತ್ನಿಸುವ ಈ ಗ್ರಂಥಕಾರರು, ಅಲ್ಲಲ್ಲಿ ಕಥಾರೂಪವಾದ ದೀಪಸ್ತಂಭವನ್ನಿಟ್ಟು ಆ ಮಾರ್ಗಾನುಯಾಯಿಗಳಿಗೆ ದಾರಿತೋರಿ ಸಿದ್ದಾರೆ. ಎಡರುತೊಡರುಗಳಿಲ್ಲದೆ ಗಂಗಾಪ್ರವಾಹದಂತೆ ನಿಶ್ಯಬ್ದವಾಗಿ, ಗಂಭೀರ ವಾಗಿ ಹೋಗುವ ಕವಿತಾಪ್ರವಾಹವು ಓದುವವರ ಅಂತರಂಗ ಕಶ್ಮಲವನ್ನು ತೊಳೆ ಯದೇ ಬಿಡದು. ಶಿವನು ಅನನ್ಯಸಮನು ; ಶಿವನೇ ಪರಾಪರವಸ್ತು ; ಶಿವೇತರವಾದ ಪ್ರಪಂಚವೆಲ್ಲಾ ಮಿಥ್ಯೆ ; ಶಿವಸಾಕ್ಷಾತ್ಕಾರವೇ ಮುಕ್ತಿ ; ಎಂಬುದನ್ನು ಸಮರ್ಥಿ ಸುವ ಮಹಾಗ್ರಂಥವೆಂದರೆ ಜಗತ್ತಿನಲ್ಲಿ ಇದೊಂದೇ. ಇದರಲ್ಲಿ ಉಪಾತ್ತವಾಗಿರುವ ಕಥೆಗಳೆಲ್ಲಾ ಸ್ಥೂಲವಿಮರ್ಶೆಯಿಂದ ಅಷ್ಟು ಸಮಂಜಸವಾಗಿ ಕಾಣದಿದ್ದರೂ, ಆಸ್ತಿಕರಿಗೆ, ಭಕ್ತಿಮಾರ್ಗದಲ್ಲಿ ಅಡಿಯಿಟ್ಟಿರುವವರಿಗೆ ಮಾತ್ರ ಕೈಪಿಡಿಯಂತಿವೆ. ಮಾಡಬಾರದ ಅಕಾರ್ಯಗಳನ್ನು ಮನಃಪೂರ್ವಕವಾಗಿ ಮಾಡಿದರೂ ಶಿವಪೂಜಾ ಫಲದಿಂದ ಶಿವಸಾನ್ನಿಧ್ಯಪ್ರಾಪ್ತಿಯಾದ ಅನೇಕ ಇತಿಹಾಸಗಳಿಗೆ ಸಾಮರಸ್ಯವನ್ನು ಕಲ್ಪಿಸುವುದು ಕಷ್ಟವಲ್ಲ. ಶೈವಧರ್ಮಾವಲಂಬನೆಯೇ ಮುಕ್ತಿಮಾರ್ಗಕ್ಕೆ ಸೋಪಾನ ಎಂಬ ಧ್ಯೇಯದಿಂದ ಗ್ರಂಥರಚಿಸುವಾಗ ಇಂತಹ ಕಥೆಗಳು ಅತ್ಯವಶ್ಯಕ. ಕಾಟಕೋಟರನೆಂಬವನು ಶಿವಲಿಂಗವನ್ನು ತುಳಿದ ತನ್ನ ತಂದೆಯನ್ನು ಕೊಂದನು ಎಂಬ ವಿಚಾರವು ಆಪಾತತಃ ಪಾಪಕಾರ್ಯವೆನಿಸಿದ್ದರೂ, ಶೈವಧರ್ಮದಲ್ಲಿ ಶಿವದ್ರೋ ಹಿಯ ವಧೆಯು ಅಷ್ಟು ದುಷ್ಕರ್ಮವೆನಿಸದೆ ಕರ್ತವ್ಯಕರ್ಮವಾಗಿರುವಂತೆ ಈ ಗ್ರಂಥವು ಬೋಧಿಸುತ್ತದೆ. ಜ್ಞಾನಮಾರ್ಗವು ಅರ್ಥವಾಗದೆ, ನಾಸ್ತಿಕ ಭಾವನೆಯಲ್ಲಿ ಜನರ ಮನಸ್ಸು ಪ್ರವಹಿಸುತ್ತಿರುವಾಗ ಪ್ರಾಯಶಃ ಇಂತಹ ಭಕ್ತಿರಸಪ್ರಧಾನವಾದ ಗ್ರಂಥಗಳ ಆವಶ್ಯಕತೆ ಜಗತ್ತಿಗೆ ಬೇಕಾಯಿತು. ಈ ವಿಧದ ಗ್ರಂಥಗಳಿಂದ ಹಿಂದೂ, ಇಂದೂ ಅನೇಕರು ಉದ್ಧಾರವಾಗಿದ್ದಾರೆ, ಆಗುತ್ತಿದ್ದಾರೆ.

ಪ್ರಪಂಚ ಸೃಷ್ಟಿಯಾದ ಕಾಲದಿಂದಲೂ ಇಂದಿನವರೆಗೂ ಆಸ್ತಿಕರು, ನಾಸ್ತಿಕರು ; ಯೋಗ್ಯರು, ಅಯೋಗ್ಯರು ; ಪಾಪಭೀರುಗಳೂ, ಪರಮಪಾಪಿಗಳೂ ;

ಒಂದಲ್ಲ ಒಂದು ರೀತಿಯಿಂದ ಕಂಡುಬರುತ್ತಲೇ ಇದ್ದಾರೆ. ಜನಸಮೂಹವನ್ನೆಲ್ಲಾ ತಿದ್ದಿ, ಸರಿಪಡಿಸಲು ಈಶ್ವರನೊಬ್ಬನಿಂದಲ್ಲದೆ ಮತ್ತಾರಿಂದಲೂ ಸಾಧ್ಯವೇ ಇಲ್ಲ. ದುರ್ಜನರಿಂದಾಗುವ ದುಷ್ಪರಿಣಾಮುಗಳು ಹಿಂದೂ ಇದ್ದುವು ಈಗಲೂ ಇವೆ. ಆದರೆ ಯಾರೂ ಯಾವುದೂ ಸ್ಥಿರವಲ್ಲ. ನಾನು ಮಾಡುತ್ತೇನೆ, ನಾನು ನಡೆಸುತ್ತೇನೆ ಎಂಬುದು ವೃಥಾಭಿಮಾನ. ಇತ್ಯಾದಿ ಅನೇಕ ವೈರಾಗ್ಯಭಾವನೆಗಳನ್ನು ಈವಿಧವಾದ ಗ್ರಂಥಗಳ ಸಾರಾವಲೋಕನದಿಂದ ಜನತೆಯು ಸುಲಭವಾಗಿ ಗ್ರಹಿಸಬಹುದು.

ಜ್ಞಾನಸಾಧನವಾದ ಗ್ರಂಥಪ್ರಕಾಶನದಮೂಲಕ, ನಮ್ಮನ್ನಾಳುವ ಶ್ರೀಮನ್ ಮಹಾರಾಜರವರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳು ನಿಜವಾಗಿಯೂ ಮಾನವ ಕೋಟಿಗೆ ಮಾದರಿಯಾಗಿರುತ್ತಾರೆ. ಜನರು ಸಚ್ಚರಿತರಾಗಿ ಸನ್ಮಾರ್ಗಾವಲಂಬಿಗಳಾಗಿ ಸುಖದಿಂದ ಬಾಳಲಿ ಎಂಬುದೇ ಮಹಾಸ್ವಾಮಿಯವರ ಉದಾತ್ತಧ್ಯೇಯ. ಇಂತಹ ಆದರ್ಶರಾಜರ್ಷಿಗಳಿಗೂ, ಅವರ ಕುಟುಂಬವರ್ಗಕ್ಕೂ ಈ ಗ್ರಂಥಾಭಿಮಾನಿಯಾದ ಪರಮೇಶ್ವರನು, ಸತ್ಸಂತಾನಾದಿ ಸಕಲ ಸಂಪತ್ತುಗಳನ್ನೂ ಕರುಣಿಸಿ ಅನವರತ ಸಲಹಲಿ ಎಂದು ಅನನ್ಯಭಕ್ತಿಯಿಂದ ಸರ್ವೇಶ್ವರನನ್ನು ಪ್ರಾರ್ಥಿಸುತ್ತೇನೆ.

ಶ್ರೀವಿರೋಧಿನಾಮ ಸಂವತ್ಸರದ
ಮಾರ್ಗಶಿರ ಶುದ್ಧ ಏಕಾದಶೀ
ಗುರುವಾರ
1—12—1949

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಏಳನೆಯ ಅಂಶದ
# ವಿಷಯಾನುಕ್ರಮಣಿಕಾ

## ಅಧ್ಯಾಯ ೧೬—೨೦

### ಹದಿನಾರನೆಯ ಅಧ್ಯಾಯ



### ಹದಿನೇಳನೆಯ ಅಧ್ಯಾಯ



### ಹದಿನೆಂಟನೆಯ ಅಧ್ಯಾಯ

ಯಾಗಿದ್ದ ತನ್ನ ತಂದೆಯನ್ನೇ ಕೊಂದುಹಾಕಿದ ವಿಷಯ. ಹಣೆಯಲ್ಲಿ ಭಸ್ಮವಿಟ್ಟಮೇಲೆ ಮತ್ತೇನನ್ನೂ ಇಡಬಾರದೆಂಬ ನಿಯಮ. ವಿಪ್ರನು ಹಣೆಯಲ್ಲಿ ಮೃತ್ತಿಕೆಯೇ ಮೊದಲಾದುವುಗಳನ್ನು ಧರಿಸಬಾರದೆಂಬ ವಿಷಯನಿರೂಪಣೆ. ಕಾಟಕೋಟರನು ತನ್ನ ದರ್ಶನಾರ್ಥವಾಗಿ ಬಂದ ರಾಜನಿಗೆ ಶಿವಧರ್ಮವನ್ನು ನಿರೂಪಿಸುವ ಪ್ರಕರಣ. ಸುಭಗಾ ಎಂಬ ಪತಿವ್ರತೆಯ ಕಥೆ— ಸುಭಗಾದೇವಿಯು ತನ್ನ ಪತಿಗೆ ಶಿವಪೂಜಾಮಹಿಮೆಯನ್ನು ವಿವರಿಸಿ, ಅವನಿಗೆ ಶಿವಭಕ್ತಿಯನ್ನುಂಟುಮಾಡುವಿಕೆ.

ಪುಟ ೧೭೭–೩೧೭

## ಹತ್ತೊಂಬತ್ತನೆಯ ಅಧ್ಯಾಯ

ಕಾಲಹಸ್ತೀಶ್ವರ ಮಹಿಮೆ. ದಕ್ಷಿಣ ಕೈಲಾಸವೆನಿಸಿದ ಆ ಕ್ಷೇತ್ರದಲ್ಲಿ ಭಿಲ್ಲನೊಬ್ಬನ ಕಥೆ — ಕಾಲಹಸ್ತೀ ಎಂಬ ಹೆಸರು ಆ ಕ್ಷೇತ್ರಕ್ಕೆ ಬರಲು ಕಾರಣ. ಸುಭಗಾದೇವಿಯು ಮುಕ್ತಿಯನ್ನು ಪಡೆದ ವಿಚಾರ. ಪಾರ್ಥಿವಲಿಂಗ, ಬಾಣಲಿಂಗ, ಸ್ಥಾವರಲಿಂಗ ಎಂಬ ಶಿವಲಿಂಗಗಳನ್ನು ಸ್ತ್ರೀಯರು ಸ್ಪರ್ಶಮಾಡಬಾರದೆಂಬ ವಿಚಾರ. .... ಪುಟ ೩೧೮–೪೦೪

## ಇಪ್ಪತ್ತನೆಯ ಅಧ್ಯಾಯ

ಕಾಂಚೀಕ್ಷೇತ್ರದಲ್ಲಿರುವ ಏಕಾಂಬರೇಶ್ವರ ಮತ್ತು ಕಾಮಾಕ್ಷೀದೇವಿಯ ವರ್ಣನೆ ವಿಷ್ಣುವು ಮಾಡಿದ ತಪಸ್ಸಿನ ವರ್ಣನೆ. ಕುಬೇರನು ರತ್ನಗೋಪುರವನ್ನು ನಿರ್ಮಿಸಿದುದು. ಒಬ್ಬ ಮಹಾಪಾಪಿಯು ಮರಣಕಾಲದಲ್ಲಿ ಸೋಮನೆಂಬ ತನ್ನ ಮಗನ ಹೆಸರನ್ನು ಕರೆದು ಮುಕ್ತಿಯನ್ನು ಪಡೆದ ವಿಷಯ. ಸುವರ್ಣ, ಬಿಲ್ವಪತ್ರೆ, ರತ್ನ, ಬೆಳ್ಳಿ, ಇವು ಯಾವಾಗಲೂ ಪವಿತ್ರವಾದವುಗಳು ಎಂಬ ತತ್ತ್ವನಿರೂಪಣೆ. ಹಳೆಯ ಬಿಲ್ವಪತ್ರೆಯನ್ನೂ ಪೂಜೆಮಾಡಬಹುದೆಂಬ ವಿಚಾರ. ವಿಶ್ವಾಭಿಧನೆಂಬ ರಾಜನು ಶಿವಪ್ರೀತ್ಯರ್ಥವಾಗಿ ಶಿವಾಲಯ, ಶಿವರಥ, ಇವುಗಳನ್ನು ನಿರ್ಮಾಣಮಾಡಿ ಶಿವೋತ್ಸವಗಳನ್ನು

ಕಾಂಚೀಕ್ಷೇತ್ರದಲ್ಲಿ ನಡೆಸಿದ ವಿಚಾರ. ಬ್ರಾಹ್ಮಣರಿಗೆ ಗೌತಮಋಷಿಗಳಿಂದ ಬಂದ ಶಾಪದ ವೃತ್ತಾಂತ. ಶಾಪಗ್ರಸ್ತರಾದವರು ಶೈವಧರ್ಮವನ್ನು ತ್ಯಜಿಸಿದ ವಿಚಾರ. ಜಪಮಾಲೆಯು ತರತಮಸ್ವಭಾವ. ಶಿವಮಂತ್ರ ಮಹಿಮೆ. ಶಿವಮಂತ್ರ ಜಪವಿಧಿ ಮತ್ತು ಅದರ ಫಲನಿರೂಪಣೆ. ಪುಟ ೪೦೫–೪೯೫



॥ ವಿಷ್ಣುರುವಾಚ ॥

ಕುತಃ ಸಮಾಗತಂ ಬ್ರಹ್ಮನ್ನಿಂದ್ರಾದ್ಯೈರಮರೈಃ ಸಹ ।
ಸ್ವಸ್ವಾಧಿಕಾರೇ ಸರ್ವೇಷಾಮಧುನಾ ಕುಶಲಂ ಖಲು ॥೩॥

ತಾವತ್ಕುಶಲಮಸ್ಮಾಕಂ ಸರ್ವೇಷಾಮಿತಿ ನಿಶ್ಚಿತಂ ।
ಯಾವತ್ಸಾಂಬೋ ಮಹಾದೇವಃ ಪೂಜ್ಯತೇ ಸರ್ವಯತ್ನತಃ ॥೪॥

ಅಶುಭಂ ತು ತದಾ ಭಾವಿ ಯದಾ ನಾಭ್ಯರ್ಚ್ಯತೇ ಶಿವಃ ।
ಶಿವಾನಭ್ಯರ್ಚನಾದೇವ ಸಂಪ್ರಾಪ್ಯಮಶುಭಂ ಧ್ರುವಂ ॥೫॥

ಶಿವಾರಾಧನಸಂಸಕ್ತೋ ದಾವಾನಲಗತೋಽಪಿ ಸನ್ ।
ದುಃಖಂ ಸರ್ವಾತ್ಮನಾ ಬ್ರಹ್ಮನ್ನ ಪ್ರಾಪ್ನೋತಿ ನ ಸಂಶಯಃ ॥೬॥

ಅಸ್ಮಾಭಿಃ ಶಿವಪೂಜಾಯಾಂ ಯತ್ನಃ ಕಾರ್ಯಃ ಪುನಃ ಪುನಃ ।
ಶಂಕರಾಭ್ಯರ್ಚನಂ ತ್ಯಕ್ತ್ವಾ ನ ಸ್ಥಾತವ್ಯಂ ಕದಾಚನ ॥೭॥

---

"ಅಯ್ಯ ಬ್ರಹ್ಮನೇ, ಇಂದ್ರಾದಿದೇವತೆಗಳೊಡನೆ ನೀನು ಇಲ್ಲಿಗೆ ಬಂದ ಕಾರ್ಯವೇನು ? ದೇವತೆಗಳೆಲ್ಲರೂ ತಮ್ಮ ತಮ್ಮ ಅಧಿಕಾರಗಳನ್ನು ಸರಿಯಾಗಿ ನೋಡಿಕೊಳ್ಳುತ್ತಾ ಕುಶಲರಾಗಿರುವರಷ್ಟೇ ? ॥೩॥

ನಿಯಮದಿಂದ ಅಂಬಾಸಮೇತನಾದ ಆ ಮಹಾದೇವನನ್ನು ನಾವು ಪೂಜೆ ಮಾಡುತ್ತಿರುವವರೆಗೂ ನಮ್ಮೆಲ್ಲರಿಗೂ ನಿಶ್ಚಯವಾಗಿಯೂ ಕುಶಲವೆಂದೇ ನಾನು ತಿಳಿದಿರುವೆನು. ॥೪॥

ನಾವು ಶಿವನನ್ನು ಪೂಜೆಮಾಡದೇ ಹೋದಾಗ ಮಾತ್ರ ನಮಗೆ ಅಶುಭವು (ಅಮಂಗಳವು) ಉಂಟಾಗುವುದು. ನಿಜವಾಗಿಯೂ ಆ ಪರಶಿವನನ್ನು ಪೂಜೆಮಾಡದಿರುವುದರಿಂದಲೇ ನಮಗೆ ಕೆಡಕುಂಟಾಗಬೇಕೇ ಹೊರತು ಬೇರೆ ಇಲ್ಲ. ॥೫॥

ಓ ಬ್ರಹ್ಮನೇ, ಶಿವಪೂಜಾತತ್ಪರನಾಗಿರುವವನು ಕಾಡುಗಿಚ್ಚಿನಲ್ಲಿಯೇ ಇದ್ದರೂ ಅವನಿಗೆ ಯಾವರೀತಿಯಿಂದಲೂ ದುಃಖವು ಬಾರದು. ॥೬॥

ನಾವು ಪದೇಪದೇ ಆ ಶಂಕರನ ಪೂಜೆಯ ವಿಷಯದಲ್ಲಿ ಪ್ರಯತ್ನಮಾಡಬೇಕೇ ಹೊರತು, ಆ ದೇವದೇವನ ಪೂಜೆಯನ್ನು ಬಿಟ್ಟು ಎಂದಿಗೂ ಕಾಲ ಕಳೆಯಬಾರದು. ॥೭॥

ಶಂಕರಾಭ್ಯರ್ಚನಾದೇವ ಸರ್ವಾಃ ಸಿದ್ಧ್ಯಂತಿ ಸಿದ್ಧಯಃ ।
ತಥಾಚ ಶಂಕರಸ್ಯೈವ ಪೂಜಾಂ ಕುರ್ವೀತ ನಿರಂತರಂ ॥೮॥

ಸ್ಮರ್ತವ್ಯಃ ಶಂಕರೋ ನಿತ್ಯಂ ಶಂ ಕರೋತೀತಿ ಶಂಕರಃ ।
ಶಂ ನಾಮಾನಲ್ಪಮಾನಂದಮನಿರ್ವಾಚ್ಯಮನಾಮಯಂ ॥೯॥

ಸತತಂ ನಾಮ ಜಿಹ್ವಾಗ್ರೇ ಶಂಕರೇತ್ಯಸ್ತಿ ಯಸ್ಯ ಸಃ ।
ದುಃಖಭಾಙ್ನ ಭವತ್ಯೇವ ಸತ್ಯಂ ಸತ್ಯಂ ನ ಸಂಶಯಃ ॥೧೦॥

ಶಿವೇತಿ ನಾಮ ವಿಮಲಂ ಶಿವನಾಮೋತ್ತಮೋತ್ತಮಂ ।
ತದ್ಯೇನ ಸ್ಮರ್ಯತೇ ನಿತ್ಯಂ ತಸ್ಯ ದಾಸೋ ಭವಾಮ್ಯಹಂ ॥೧೧॥

ತ್ರಿಪುಂಡ್ರಧಾರಣಂ ಕೃತ್ವಾ ಮಹಾದೇವಮನುತ್ತಮಂ ।
ಯೋ ಯಾತಿ ಯತ್ರ ತತ್ರೈವ ಮಹಾದೇವೋಽಧಿತಿಷ್ಠತಿ ॥೧೨॥

---

ಮಂಗಳಕರನಾದ ಶಿವನ ಪೂಜೆಯಿಂದಲೇ ನಮಗೆ ಸಕಲ ಸಿದ್ಧಿಗಳೂ ಸಿದ್ಧಿಸುವುವು. ಆದ್ದರಿಂದಲೇ ನಾವೆಲ್ಲರೂ ತಪ್ಪದೇ ಆ ಶಂಕರನನ್ನು ಭಕ್ತಿಯಿಂದ ಪೂಜಿಸಬೇಕು. ॥೮॥

ಅನವರತವೂ ಮಾನವನು ಆ ಶಂಕರನನ್ನು ಸ್ಮರಣೆಮಾಡಬೇಕು. ಶಂ ಎಂದರೆ, ಅಪಾರವೂ, ಹೇಳುವುದಕ್ಕೆ ಅಸಾಧ್ಯವೂ ಯಾವ ವಿಧವಾದ ದುಃಖ ಲೇಶಗಳಿಗೂ ಆಸ್ಪದವಾಗದದೂ ಆದ ಆನಂದವು. ಅದನ್ನು ತನ್ನ ಭಕ್ತರಿಗೆಲ್ಲಾ ಉಂಟು ಮಾಡುವವನಾದ್ದರಿಂದ ಮಹಾದೇವನು ಶಂಕರನೆಂದು ಪ್ರಸಿದ್ಧನಾಗಿರುವನು. ಆನಂದಪ್ರದನಾದ ಈ ಶಂಕರನ ದಿವ್ಯನಾಮವನ್ನು ನಾಲಿಗೆಯ ತುದಿಯಲ್ಲಿ ಅನವರತವೂ ಜಪಿಸುವವನು ಎಂದೆಂದಿಗೂ ದುಃಖಕ್ಕೀಡಾಗಲಾರನು. ಇದರಲ್ಲಿ ಸತ್ಯವಾಗಿಯೂ ಸಂದೇಹವಿಲ್ಲ. ॥೯-೧೦॥

ಆ ಪರಶಿವನ ದಿವ್ಯನಾಮಗಳಲ್ಲಿ ಅತ್ಯಂತ ಉತ್ತಮವಾದ ಶಿವನೆಂಬ ನಾಮವನ್ನು ನಿತ್ಯವೂ ಸ್ಮರಣೆಮಾಡುವ ಮಹಾತ್ಮನಿಗೆ ನಾನು ದಾಸನಾಗಿ ಉಪಚರಿಸುವೆನು. ॥೧೧॥

ಭಸ್ಮತ್ರಿಪುಂಡ್ರವನ್ನು ಧಾರಣೆಮಾಡಿ, ಸರ್ವೋತ್ತಮನಾದ ಆ ಮಹಾದೇವನು ಪೂಜೆ ಮತ್ತು ಧ್ಯಾನಾದಿಗಳನ್ನು ಮಾಡಲು ಅನುಸರಿಸಿ ಭಕ್ತನು ಹೋಗುವ ಸ್ಥಳದಲ್ಲಿಯೇ ಆ ಮಹಾದೇವನು ನೆಲಸಿರುವನು. ॥೧೨॥

ಮಹಾದೇವ ಮಹಾದೇವ ಮಹಾದೇವೇತಿ ವಾದಿನಂ ।
ವತ್ಸಂ ಗೌರಿವ ಗೌರೀಶೋ ಧಾವಂತಮನುಧಾವತಿ ॥೧೩॥

ಮಹಾದೇವ ಮಹಾದೇವ ಮಹಾದೇವೇತ್ಯಯಂ ಧ್ವನಿಃ ।
ಸುಧಿಯೋ ಮುಕ್ತಿಕಾಂತಾಯಾಃ ಪಾಣಿಗ್ರಹಣಡಿಂಡಿಮಃ ॥೧೪॥

ಮಹಾದೇವ ಮಹಾದೇವ ಮಹಾದೇವೇತ್ಯಯಂ ಧ್ವನಿಃ ।
ಅಪಮೃತ್ಯುಹರೋ ನೂನಂ ಕಾಲಮೃತ್ಯೋಶ್ಚ ನಾಶಕಃ ॥೧೫॥

ಮಹಾದೇವ ಮಹಾದೇವ ಮಹಾದೇವೇತ್ಯಯಂ ಧ್ವನಿಃ ।
ಸಂಸಾರಬೀಜದಾವಾಗ್ನಿಃ ಸತ್ಯಂ ಸತ್ಯಂ ನ ಸಂಶಯಃ ॥೧೬॥

ಮಹಾದೇವ ಮಹಾದೇವ ಮಹಾದೇವೇತ್ಯಯಂ ಧ್ವನಿಃ ।
ಸಂಸಾರಸರ್ಪದಷ್ಟಾನಾಂ ದಿವ್ಯೌಷಧಮನುತ್ತಮಂ ॥೧೭॥

---

ಮಹಾದೇವ! ಮಹಾದೇವ! ಮಹಾದೇವ! ಎಂದು ಸದಾ ತನ್ನ ನಾಮವನ್ನು ಹೇಳುತ್ತಿರುವ ಮಾನವನನ್ನು ಆ ಗೌರೀರಮಣನು ಕರುವನ್ನು ಹುಡುಕಿಕೊಂಡುಹೋಗುವ ಹಸುವಿನಂತೆ ಆರಸಿಕೊಂಡು ಹಿಂಬಾಲಿಸುವನು. ॥೧೩॥

ಮಹಾದೇವ! ಮಹಾದೇವ! ಮಹಾದೇವ! ಎನ್ನುವ ಈ ಧ್ವನಿಯು ಜ್ಞಾನಿಗಳಿಗೂ, ಮೋಕ್ಷವೆಂಬ ರಮಣಿಗೂ ವಿವಾಹಮಹೋತ್ಸವದಲ್ಲಾಗುವ ಡಿಂಡಿಮವಾದ್ಯದ ಶಬ್ದವೆಂದು ಹೇಳುವರು. ॥೧೪॥

ಮಹಾದೇವ! ಮಹಾದೇವ! ಮಹಾದೇವ! ಎಂಬ ಈ ಶಬ್ದವು, ಆ ಕಾಲದಲ್ಲಿ ಉಂಟಾಗುವ ವಿಪತ್ತುಗಳನ್ನೂ ಮತ್ತು ಮರಣ ಕಾಲಗಳಲ್ಲಿ ಒದಗುವ ಯಮನ ಬಾಧೆಯನ್ನೂ ಪರಿಹರಿಸಿ, ಶಾಶ್ವತವಾದ ಮೋಕ್ಷವನ್ನು ಕೊಡುತ್ತದೆ. ॥೧೫॥

ಮಹಾದೇವ! ಮಹಾದೇವ! ಮಹಾದೇವ! ಎಂಬ ಈ ಧ್ವನಿಯು ಸಂಸಾರದ ಉತ್ಪತ್ತಿಗೆ ಕಾಡುಗಿಚ್ಚಿನಂತೆ ನಾಶಕವಾಗಿರುವುದೆಂಬುದರಲ್ಲಿ ಸಂಶಯವೇ ಇಲ್ಲ. ಅಲ್ಲದೇ ಇದು ಸಂಸಾರಬಂಧನಕ್ಕೊಳಗಾದವರಿಗೆ ಅವರನ್ನು ಉದ್ಧಾರಮಾಡುವಂತಹ ಅತ್ಯುತ್ತಮವಾದ ದಿವ್ಯೌಷಧಿಯೆನಿಸಿರುವುದು. ॥೧೬-೧೭॥

ಮಹಾದೇವೇತಿ ವಾಗ್ವಲ್ಲೀ ಚತುರಕ್ಷರಪಲ್ಲವಾ ।
ಭಕ್ತಿಸಿಕ್ತಾ ಭವತ್ಯೇಕಾ ಚತುರ್ವರ್ಗಫಲಪ್ರದಾ ॥೧೮॥

ಮಹಾದೇವೇತಿ ವಿಮಲೋ ನಾಮಕಲ್ಪತರುರ್ನಿಘೇ ।
ಯಂ ಯಂ ಕಾಮಯತೇ ಕಾಮಂ ತಂ ತಂ ಕಾಮಂ ದದಾತಿ ಸಃ ॥೧೯॥

ಮಹಾದೇವ ಮಹಾದೇವೇತ್ಯರಣ್ಯೇ ಸಂಚರನ್ನನಃ ।
ವಶೀಕರೋತಿ ವ್ಯಾಘ್ರಾದೀನ್ಸತ್ಯಂ ಸತ್ಯಂ ಮಯೋಚ್ಯತೇ ॥೨೦॥

ಮಹಾದೇವ ಮಹಾದೇವೇತ್ಯುಚ್ಚರನ್ನಿಯತೇಂದ್ರಿಯಃ ।
ಮೃತ್ಯುಂ ನ ಗಣಯತ್ಯೇವ ಸತ್ಯಮೇವೋಚ್ಯತೇ ಮಯಾ ॥೨೧॥

ಕೋಟಯೋ ಬ್ರಹ್ಮಹತ್ಯಾನಾಮಗಮ್ಯಾಗಮಕೋಟಯಃ ।
ಸದ್ಯಃ ಪ್ರಲಯಮಾಯಾಂತಿ ಮಹಾದೇವೇತಿ ಕೀರ್ತನಾತ್ ॥೨೨॥

---

ನಾಲ್ಕು ಅಕ್ಷರಗಳೆಂಬ ಚಿಗುರುಗಳಿಂದ ಶೋಭಿಸುತ್ತಿರುವ ಮಹಾದೇವನೆಂಬ ಮಾತಿನ ಬಳ್ಳಿಯು, ಭಕ್ತಿರಸವೆಂಬ ನೀರಿನಿಂದ ತೋಯಿಸಲ್ಪಟ್ಟರೆ ಅದೊಂದೇ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಫಲರೂಪವಾಗಿ ಕೊಡಬಲ್ಲದು. ॥೧೮॥

ನಿರ್ಮಲವಾದ ಮಹಾದೇವನೆಂಬ ನಾಮರೂಪವಾದ ಕಲ್ಪವೃಕ್ಷವು, ಭಕ್ತನು ಬಯಸುವ ಪ್ರತಿಯೊಂದು ಬಯಕೆಗಳನ್ನೂ ಸಲ್ಲಿಸುವುದು. ॥೧೯॥

ಕಾಡಿನಲ್ಲಿ ಮಹಾದೇವ, ಮಹಾದೇವ ಎಂದು ಧ್ಯಾನಮಾಡುತ್ತಾ ಸಂಚರಿಸುವ ಮಾನವನು ಹುಲಿಯೇ ಮೊದಲಾದ ದುಷ್ಟಪ್ರಾಣಿಗಳನ್ನು ಸತ್ಯವಾಗಿಯೂ ವಶಮಾಡಿಕೊಳ್ಳುವನೆಂದು ನಾನು ಹೇಳುವೆನು. ॥೨೦॥

ಜಿತೇಂದ್ರಿಯನಾಗಿ ನಿಯಮದಿಂದ ಮಹಾದೇವ, ಮಹಾದೇವ ಎಂದು ದಿವ್ಯನಾಮಗಳನ್ನು ಉಚ್ಚರಿಸುವ ಮಾನವನು ಮೃತ್ಯುವನ್ನೂ ಲೆಕ್ಕಿಸುವುದಿಲ್ಲವೆಂದು ಸತ್ಯವಾಗಿಯೂ ನಾನು ಹೇಳುವೆನು. ॥೨೧॥

ಮಾಡಬಾರದ್ದನ್ನು ಮಾಡಿದುದರಿಂದುಂಟಾದ ಬ್ರಹ್ಮಹತ್ಯವೇ ಮೊದಲಾದ ಕೋಟ್ಯಂತರ ಪಾಪಗಳೂ ಸಹ ಮಹಾದೇವನೆಂಬ ನಾಮಸಂಕೀರ್ತನಮಾತ್ರದಿಂದ ಕೂಡಲೇ ನಾಶವಾಗುವುವು. ॥೨೨॥

ಮಹಾದೇವೇತಿ ನಾಮೇದಂ ಯಃ ಶೃಣೋತಿ ವದಿಷ್ಯತಿ ।
ನ ತಸ್ಯ ನರಕಾವಾಸಃ ಸತ್ಯಂ ಸತ್ಯಂ ನ ಸಂಶಯಃ ॥೨೩॥

ಪುರಾ ಕಶ್ಚಿದ್ದ್ವಿಜವರೋ ಮಹಾದೇವಮನುಸ್ಮರನ್ ।
ವದನ್ನುಚ್ಚೈರ್ಮಹಾದೇವೇತ್ಯರಣ್ಯೇ ಸಂಚಚಾರ ಹಿ ॥೨೪॥

ತದಾ ಕಶ್ಚಿದ್ಘೋರರೂಪೋ ಮಹಾಪರ್ವತಸನ್ನಿಭಃ ।
ಸೂಚ್ಯಗ್ರಮಾತ್ರವದನೋ ದೀರ್ಘಪಿಂಗಶಿರೋರುಹಃ ॥೨೫॥

ಜ್ವಲದ್ವಹ್ನಿಗಣಾಕಾರೋ ಮಹಾನಿಶ್ವಾಸಮೋಚಕಃ ।
ದೂರಾದ್ದದರ್ಶ ತಂ ವಿಪ್ರಂ ಮಹಾದೇವೇತಿ ವಾದಿನಂ ॥೨೬॥

ತಂ ದೃಷ್ಟ್ವಾ ಸೋಽಪಿ ಸಂತೋಷಾದ್ಭಕ್ಷ್ಯಂ ಪ್ರಾಪ್ತಮಿತಿ ಸ್ರುತಂ ।
ಸಂತೃಪ್ತೋಽದ್ಯ ಭವಾಮೀತಿ ವಿಪ್ರಾಭ್ಯಾಶಮುಪಾಯಯೌ ॥೨೭॥

---

ಮಹಾದೇವನೆಂಬ ಪರಶಿವನ ಆ ದಿವ್ಯನಾಮವನ್ನು ಮತ್ತೊಬ್ಬರು ಉಚ್ಚರಿಸುವಾಗ ಕೇಳುವವನಿಗೂ, ಮತ್ತು ಸ್ವತಃ ತಾನೇ ಜಪಿಸುವವನಿಗೂ ಸತ್ಯವಾಗಿ ನರಕಲೋಕವಾಸವು ಒದಗಲಾರದು. ಇದರಲ್ಲಿ ಸಂದೇಹವೇ ಇಲ್ಲ. ॥೨೩॥

ಹಿಂದೆ ಒಬ್ಬ ಬ್ರಾಹ್ಮಣೋತ್ತಮನು ಮಹಾದೇವನನ್ನು ಸ್ಮರಣೆಮಾಡುತ್ತಾ ಗಟ್ಟಿಯಾಗಿ ಶಿವನ ದಿವ್ಯನಾಮವನ್ನೇ ಉಚ್ಚರಿಸುತ್ತಾ ಕಾಡಿನಲ್ಲಿ ಸಂಚರಿಸುತ್ತಿದ್ದನು. ॥೨೪॥

ಆಗ ದೊಡ್ಡ ಪರ್ವತಕ್ಕೆ ಸಮಾನವಾದ ಶರೀರವುಳ್ಳ ಒಂದು ಪಿಶಾಚವು ತನ್ನ ಭಯಂಕರವಾದ ವೇಷವನ್ನು ಪ್ರಕಟಿಸುತ್ತಾ ಸೂಜಿಯ ಪ್ರಮಾಣದಷ್ಟು ಮುಖದಿಂದಲೂ, ಉದ್ದನಾಗಿಯೂ, ಹೊಂಬಣ್ಣವಾಗಿಯೂ ಇರುವ ಕೂದಲುಗಳಿಂದಲೂ, ಉರಿಯುತ್ತಿರುವ ಬೆಂಕಿಯ ಸಮೂಹದಂತೆ ಆಕಾರವುಳ್ಳದ್ದಾಗಿ ನಿಟ್ಟುಸಿರನ್ನು ಬಿಡುತ್ತಾ, ಮಹಾದೇವ, ಮಹಾದೇವ ಎಂದು ಶಿವನಾಮಧ್ಯಾನ ಮಾಡುತ್ತಾ ಬರುತ್ತಿರುವ ಆ ಬ್ರಾಹ್ಮಣನನ್ನು ದೂರದಲ್ಲಿಯೇ ನೋಡಿತು. ॥೨೫-೨೬॥

ಆ ಬ್ರಾಹ್ಮಣನನ್ನು ನೋಡಿ, ಕ್ಷುಧಾರ್ತವಾದ ಪಿಶಾಚವು ನನಗೆ ಈ ದಿನ ಒಳ್ಳೆಯ ಆಹಾರವು ದೊರಕಿತು. ಇವನನ್ನು ತಿಂದು ತೃಪ್ತನಾಗುವೆನೆಂದು ಸಂತೋಷದಿಂದ ಆ ಬ್ರಾಹ್ಮಣನ ಸಮೀಪಕ್ಕೆ ಜಾಗ್ರತೆಯಾಗಿ ಓಡಿಬಂದಿತು. ॥೨೭॥

ವಿಪ್ರೋಽಪಿ ತಾದೃಶಂ ದೃಷ್ಟ್ವಾ ಪಿಶಾಚಮತಿನಿಷ್ಫಲಃ ।
ಕೋಽಯಂ ಭಯಪ್ರದೋ ಮಹ್ಯಮಿತಿ ಚಿಂತಾಪರೋಽಭವತ್॥೨೮॥

ಯಃ ಕಶ್ಚನೋ ವಾ ಭವತು ಚಿಂತಾ ಕಾ ಮಮ ವರ್ತತೇ ।
ಮಹಾದೇವೋಽಮರಾಧೀಶೋ ರಕ್ಷಾಂ ಮಮ ಕರಿಷ್ಯತಿ ॥೨೯॥

ಭಸ್ಮೋದ್ಧೂಲಿತಸರ್ವಾಂಗಂ ಮಹಾದೇವೇತಿ ವಾದಿನಂ ।
ಸ್ಪ್ರಷ್ಟುಂ ಶಕ್ತಃ ಕಥಂ ಭೂಯಾತ್ಕಾಲಮೃತ್ಯುರಪಿ ಸ್ವಯಂ ॥೩೦॥

ಯದಿ ವೇದಾಃ ಪ್ರಮಾಣಂ ಸ್ಯುಸ್ತದಾ ತು ಭಯದೋಽಪ್ಯಯಂ ।
ಮಹ್ಯಂ ನ ಭಯದಃ ಸತ್ಯಂ ಶೈವಾಯಾತ್ರ ನ ಸಂಶಯಃ ॥೩೧॥

ಮಮ ಶಂಕರಭಕ್ತಸ್ಯ ಭಯಂ ಯದಿ ಭವೇತ್ತದಾ ।
ಕಥಂ ವೇದಾಃ ಪ್ರಮಾಣಂ ಸ್ಯುಃ ಶ್ರೀರುದ್ರಾಲಂಕೃತಾ ಧ್ರುವಂ॥೩೨॥

---

ಆ ಬ್ರಾಹ್ಮಣನಾದರೋ ಅತಿಭಯಂಕರನಾದ ಆ ಪಿಶಾಚವನ್ನು ನೋಡಿ, ನನಗೆ ಭಯವನ್ನುಂಟುಮಾಡಲು ಪ್ರಯತ್ನಿಸುತ್ತಿರುವ ಈ ಪಿಶಾಚವು ಎಂತಹ ಪ್ರಬಲವಿರಬಹುದು ಎಂದು ಯೋಚನಾಕ್ರಾಂತನಾದನು. ॥೨೮॥

ಇವನು ಯಾರಾದರೂ ಆಗಲಿ, ನನಗೇನೂ ಯೋಚನೆಯಿಲ್ಲ. ದೇವತೆಗಳೊಡೆಯನಾದ ಆ ಮಹಾದೇವನು ನನ್ನನ್ನು ಈಗ ಕಾಪಾಡುವನು. ॥೨೯॥

ಅಂಗಾಂಗಗಳಿಗೆಲ್ಲಾ ಭಸ್ಮವನ್ನು ಉದ್ಧೂಳನಮಾಡಿಕೊಂಡು (ಬಳಿದುಕೊಂಡು) ಮಹಾದೇವನೆಂದು ಆ ಪರಶಿವನ ನಾಮಸ್ಮರಣೆ ಮಾಡುತ್ತಿರುವನನ್ನು ಮುಟ್ಟಲು, ಕಾಲಸ್ವರೂಪನಾದ ಯಮನೇ ಒಂದುವೇಳೆ ಬಂದರೂ ಅವನಿಗೂ ಸಾಧ್ಯವಾಗಲಾರದು. ॥೩೦॥

ವೇದಗಳು ಸುಳ್ಳು ಹೇಳುವುದಿಲ್ಲ. ಪಿಶಾಚಿಯು ಭಯವನ್ನುಂಟುಮಾಡುವುದು ನಿಶ್ಚಯ. ಆದರೂ ಶಿವಭಕ್ತನಾದ ನನಗೆ ಮಾತ್ರ ಇದು ಎಂದಿಗೂ ಸತ್ಯವಾಗಿಯೂ ಭಯವನ್ನುಂಟುಮಾಡಲಾರದೆಂಬುದರಲ್ಲಿ ಸಂದೇಹವೇ ಇಲ್ಲ. ॥೩೧॥

ಇವನು ಶಂಕರನ ಭಕ್ತನಾದ ನನಗೂ ಒಂದುವೇಳೆ ಭಯವನ್ನುಂಟುಮಾಡುವುದಾದರೆ ರುದ್ರಮಂತ್ರಗಳಿಂದ ಅಲಂಕೃತವಾಗಿರುವ ವೇದಗಳು ಹೇಗೆ ತಾನೇ ಪ್ರಮಾಣವಾಗಿನಿಲ್ಲುವುವು ? ॥೩೨॥

ಇತ್ಯುಕ್ತ್ವಾ ಭಸ್ಮನಾಂಗಾನಿ ಸಂಸ್ಪೃಶ್ಯಾಹಿತಮಾನಸಃ।
ಶಿವಲಿಂಗಮುಪಸ್ಪೃಶ್ಯ ಜಗಾದ ವಚನಂ ತದಾ ॥೩೩॥

ಗೌರೀವಲ್ಲಭ ಕಾಮಾರೇ ಕಾಲಕೂಟವಿಷಾದನ।
ಮಾಮುದ್ಧರಾಪದಂಭೋಧೇಸ್ತ್ರಿಪುರಘ್ನಾಂತಕಾಂತಕ ॥೩೪॥

ಪಾಹಿ ಪಾಹಿ ಮಹಾದೇವ ಭಕ್ತವರ್ಗೈಕಜೀವನ।
ಭಯಂ ದೂರೀಕುರುಷ್ವಾದ್ಯ ಕಿಮೇತದನುವರ್ತತೇ ॥೩೫॥

ಮಹಾದೇವಂ ಸ್ಮರಂತಂ ಮಾಮಯಂ ಚೇದನುಧಾವತಿ।
ತದಾ ಸಂಸಾರಭೀತಿಂ ಮೇ ಕಥಂ ದೂರೀಕರಿಷ್ಯಸಿ ॥೩೬॥

---

ಹೀಗೆ ಹೇಳಿ ಭಸ್ಮವನ್ನು ಶರೀರದ ಅವಯವಗಳಿಗೆಲ್ಲಾ ಲೇಪಿಸಿಕೊಂಡು, ದೃಢಮನಸ್ಸಿನಿಂದ ಆ ಬ್ರಾಹ್ಮಣನು ಶಿವಲಿಂಗವನ್ನು ಮುಟ್ಟಿಕೊಂಡು ಮುಂದೆ ಹೇಳುವಂತೆ ಪರಮೇಶ್ವರನನ್ನು ಸ್ತೋತ್ರಮಾಡಿದನು. ॥೩೩॥

ಗೌರೀರಮಣನಾದ ಸ್ವಾಮಿಯೇ, ಮನ್ಮಥಶತ್ರುವೂ, ಕಾಲಕೂಟ ವಿಷವನ್ನು ತಿಂದವನೂ, ತ್ರಿಪುರಾಸುರನನ್ನು ಕೊಂದವನೂ, ಮತ್ತು ಯಮನನ್ನು ನಿಗ್ರಹಿಸಿದವನೂ ಆದ ದೇವದೇವನೇ, ಈಗ ನನಗೊದಗಿರುವ ವಿಪತ್ತೆಂಬ ಸಮುದ್ರದಿಂದ ನನ್ನನ್ನು ದಾಟಿಸಿ ಕಾಪಾಡು. ॥೩೪॥

ತನ್ನ ಭಕ್ತಸಮೂಹವನ್ನೆಲ್ಲಾ ಸುರಕ್ಷಿತವಾಗಿ ಕಾಪಾಡುವ ಮಹಾದೇವನೇ, ನನ್ನನ್ನು ಕಾಪಾಡು. ದೇವ, ನನ್ನ ಮುಂದೆ ಎದುರಾಗಿ ಭಯವನ್ನುಂಟುಮಾಡುತ್ತಾ ಬರುತ್ತಿರುವ ಈ ಪಿಶಾಚವನ್ನು ನಿಗ್ರಹಿಸಿ ನನ್ನನ್ನು ಸಲಹು, ಸ್ವಾಮಿ. ॥೩೫॥

ಮಹಾದೇವನೆಂಬ ನಿನ್ನ ದಿವ್ಯನಾಮವನ್ನು ಸ್ಮರಣೆಮಾಡುತ್ತಿದ್ದರೂ ಈ ಪಿಶಾಚವು ನನ್ನನ್ನು ಹಿಂಬಾಲಿಸಿ ಭಯಪಡಿಸುವುದಾದರೆ ಘೋರವಾದ ಸಂಸಾರದ ಭಯವನ್ನು ನೀನು ಹೇಗೆತಾನೇ ನನಗೆ ದೂರಮಾಡುವೆ ಸ್ವಾಮಿ. ॥೩೬॥

ಮಹಾದೇವಸ್ಮೃತಿರ್ಯಸ್ಯ ತಸ್ಯ ನಾಸ್ತಿ ಭಯಂ ಧ್ರುವಂ ।
ಇತಿ ವೇದಾ ವದಂತ್ಯೇವ ನ ತೇ ತ್ವನೃತವಾದಿನಃ ॥೩೭॥

ಅದ್ಯೈವ ಸತ್ಯಂ ದ್ರಷ್ಟವ್ಯಂ ವೇದಾನಾಮಪಿ ಸರ್ವಥಾ ।
ಭಯಂ ಯದಿ ಭವೇದದ್ಯ ತೇಷಾಂ ಸತ್ಯಂ ಕ್ವ ವರ್ತತೇ ॥೩೮॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಪುನರುದ್ಧೂಲ್ಯ ಭಸ್ಮನಾಂಗಾನಿ ಸಂಸ್ಪೃಶನ್ ।
ಬಿಲ್ವಪತ್ರಂ ಸಮಾಘ್ರಾಯ ದಧ್ಯೌ ದೇವೋತ್ತಮಂ ಶಿವಂ ॥೩೯॥

ತತೋಽತ್ಯುಚ್ಚೈರ್ಮಹಾದೇವೇತ್ಯನಾದೀನ್ನಾಮ ಶಾಂಕರಂ ।
ತನ್ನಾಮ ಸರ್ವಪಾಪಘ್ನಂ ಪಿಶಾಚೇನ ಶ್ರುತಂ ತದಾ ॥೪೦॥

---

ಆ ಮಹಾದೇವನನ್ನು ಸ್ಮರಣೆಮಾಡುವವನಿಗೆ ಸ್ವಲ್ಪವೂ ಭಯವಿಲ್ಲವೆಂದು ವೇದಗಳು ಸಾರುತ್ತಿರುವುವು. ವೇದಗಳು ಎಂದಿಗೂ ಸುಳ್ಳನ್ನು ನುಡಿಯಲಾರವಷ್ಟೆ! ॥೩೭॥

ಈಗ ಆ ವೇದಗಳ ಸತ್ಯಸ್ವರೂಪವನ್ನು ನಿಜವಾಗಿ ನೋಡಬೇಕು. ಈ ವಿಚಾರದಿಂದ ಮಹಾದೇವನಾಮಸ್ಮರಣೆಮಾಡುತ್ತಿರುವ ನನಗೆ ಒಂದುವೇಳೆ ಈಗ ಭಯವುಂಟಾಗುವುದಾದರೆ ಆ ವೇದಗಳಿಗೆ ಸತ್ಯತ್ವವು ಹೇಗೆ ಎಲ್ಲಿ ಉಂಟಾದೀತು ? ॥೩೮॥

ಹೀಗೆ ಹೇಳಿ ಆ ಬ್ರಾಹ್ಮಣನು ಪುನಃ ಭಸ್ಮವನ್ನು ಅಂಗಾಂಗಗಳಿಗೆಲ್ಲಾ ಬಳಿದುಕೊಂಡು ಆ ಪರಮೇಶ್ವರನಿಗೆ ಪೂಜೆಮಾಡಿದ್ದ ಪ್ರಸಾದರೂಪವಾದ ಬಿಲ್ವ ಪತ್ರೆಯನ್ನು ಮೂಸಿನೋಡಿ, ದೇವೋತ್ತಮನಾದ ಆ ಶಿವನನ್ನು ಧ್ಯಾನಮಾಡಿದನು. ॥೩೯॥

ಶಿವಧ್ಯಾನಮಾಡುತ್ತಾ ಆ ಬ್ರಾಹ್ಮಣನು ಮಹಾದೇವನೆಂಬ ಆ ಶಂಕರನ ದಿವ್ಯನಾಮವನ್ನು ಅತ್ಯಂತ ಗಟ್ಟಿಯಾಗಿ ಉಚ್ಚಾರಮಾಡಿದನು. ಆಗ ಸಕಲ ಪಾಪಗಳನ್ನೂ ನಿರ್ಮೂಲಮಾಡುವ ಆ ದಿವ್ಯನಾಮವು ಆ ಪಿಶಾಚದ ಕಿವಿಗೆ ಬಿದ್ದಿತು. ॥೪೦॥

ತನ್ನಾಮಶ್ರುತಿಮಾತ್ರೇಣ ಪಿಶಾಚೋಽಪಿ ಸ್ವಕಾಂ ತನುಂ ।
ಘೋರಂ ಜಹೌ ಕ್ಷಣಾರ್ಧೇನ ಬಹುದುಃಖಪ್ರದಂ ಸದಾ ॥೪೧॥

ಸ ಪಿಶಾಚತನುಂ ತ್ಯಕ್ತ್ವಾ ದಿವ್ಯರೂಪಧರಸ್ತತಃ ।
ನನಾಮ ದಂಡವದ್ಭೂಮೌ ವಿಪ್ರಮಾಲೋಕ್ಯ ಸಾದರಂ ॥೪೨॥

ಧನ್ಯೋಽಸ್ಮಿ ತ್ವತ್ಪ್ರಸಾದೇನ ಶೈವೋತ್ತಮ ಶಿವಾರ್ಚಕ ।
ಪಿಶಾಚತನುರೇಷಾದ್ಯ ತ್ಯಕ್ತಾ ಪಾಪಕುಲಾಶ್ರಯಾ ॥೪೩॥

ಬ್ರಹ್ಮಕಲ್ಪಾನ್ಯತೀತಾನಿ ಬಹೂನಿ ದ್ವಿಜಸತ್ತಮ ।
ಪಿಶಾಚತನುರೇಷಾ ಮೇ ನ ಗತಾ ಘೋರದುಃಖದಾ ॥೪೪॥

ಮಹಾದೇವೇತಿ ನಾಮ್ಯೈತದಧುನಾ ತ್ವನ್ಮುಖಾಚ್ಛ್ರುತಂ ।
ವೇದೋಪಗೀತಮನಿಶಂ ಸರ್ವಪಾಪಭಯಾಪಹಂ ॥೪೫॥

---

ಮಹಾದೇವನೆಂಬ ಆ ದಿವ್ಯನಾಮಶ್ರವಣಮಾತ್ರದಿಂದಲೇ ಆ ಪಿಶಾಚಿಯು ಯಾವಾಗಲೂ ಪ್ರಾಣಿಗಳಿಗೆ ಅನೇಕ ದುಃಖಗಳನ್ನುಂಟುಮಾಡುವ ತನ್ನ ಭಯಂಕರವಾದ ಪಿಶಾಚವೇಷವನ್ನು ಅರ್ಧಕ್ಷಣಮಾತ್ರದಲ್ಲಿಯೇ ಬಿಟ್ಟುಬಿಟ್ಟಿತು. ॥೪೧॥

ಪಿಶಾಚಶರೀರವನ್ನು ತ್ಯಾಗಮಾಡಿ, ದಿವ್ಯವಾದ ವೇಷವನ್ನು ಹೊಂದಿದ ನಂತರ ಆ ಪಿಶಾಚರೂಪಧಾರಿಯಾಗಿದ್ದವನು ಆ ಬ್ರಾಹ್ಮಣನನ್ನು ನೋಡಿ, ಆದರದಿಂದ ಭೂಮಿಯ ಮೇಲೆ ಅವನಿಗೆ ದಂಡಪ್ರಣಾಮಮಾಡಿದನು. ॥೪೨॥

ಎಲೈ ಶಿವಪೂಜಾನಿರತನಾದ ಶೈವಶ್ರೇಷ್ಠನೇ, ನಿನ್ನ ಅನುಗ್ರಹದಿಂದ ನಾನು ಧನ್ಯನಾದೆನು. ಪಾಪಸಮೂಹಕ್ಕೆಲ್ಲಾ ಬೀಡಿನಂತಿದ್ದ ಈ ಪಿಶಾಚಶರೀರವೂ ಸಹ ಈಗ ತ್ಯಾಗಮಾಡಲ್ಪಟ್ಟಿತು. ॥೪೩॥

ಓ ಬ್ರಾಹ್ಮಣೋತ್ತಮನೇ, ಅಸಂಖ್ಯಾತವಾದ ಬ್ರಹ್ಮಕಲ್ಪಗಳು ಕಳೆದು ಹೋದವು. ಆದರೂ ಭಯಂಕರವಾದ ದುಃಖಗಳನ್ನುಂಟುಮಾಡುವ ಪಿಶಾಚಶರೀರವು ಮಾತ್ರ ನನ್ನಿಂದ ತೊಲಗಿರಲಿಲ್ಲ. ॥೪೪॥

ವೇದಗಳಿಂದ ಅನವರತವೂ ಹೊಗಳಲ್ಪಡುತ್ತಾ ಸಕಲ ಪಾಪಭಯವನ್ನೂ ಹೋಗಲಾಡಿಸುವ ಈ ಮಹಾದೇವನೆಂಬ ದಿವ್ಯನಾಮವನ್ನು ಈಗ ನಿನ್ನ ಮುಖದಿಂದ ಕೇಳಿದೆನು. ॥೪೫॥

ಮಹಾದೇವೇತಿ ನಾಮ್ನೈತಚ್ಛ್ರುತಂ ಸರ್ವಾರ್ಥದಾಯಕಂ ।
ಕದಾಪಿ ನ ಶ್ರುತಂ ಪೂರ್ವಂ ಮಹಾಭಯನಿವಾರಕಂ ॥೪೬॥

॥ ವಿಪ್ರ ಉವಾಚ ॥

ದುಷ್ಕೃತಂ ಕಿಂ ಕೃತಂ ಪೂರ್ವಂ ಯೇನೈತತ್ತನುಭಾಗ್ಭವಾನ್ ।
ತದ್ವದಸ್ವಾವಿಶೇಷೇಣ ಲಜ್ಜಾಂ ತ್ಯಕ್ತ್ವಾ ವಿಚಾರ್ಯ ಚ ॥೪೭॥

ಕಃ ಪಿತಾ ತವ ಕಾ ಮಾತಾ ಕಿಂ ನಾಮ ತವ ಕಿಂ ಕುಲಂ ।
ಕಾ ಜಾತಿಸ್ತವ ಕಾ ವೃತ್ತಿಸ್ತತ್ಸರ್ವಂ ವದ ಸತ್ವರಂ ॥೪೮॥

॥ ಪಿಶಾಚ ಉವಾಚ ॥

ಪಿತಾ ಕುಲುಂಜಕೋ ಮಾತಾ ಸುಶೀಲಾ ನಾಮ ಕರ್ಕಶಾ ।
ಕುಲಂ ತು ಮಮ ಸಾವಿತ್ರಂ ಬ್ರಾಹ್ಮಣೋಽಹಂ ಬಹುಶ್ರುತಃ ॥೪೯॥

ಕೃತಮಧ್ಯಯನಂ ಪೂರ್ವಂ ವೇದಾನಾಮೇವ ಸಾದರಂ ।
ತಥಾಪಿ ಭಸ್ಮನಾ ನಾಂಗಮಿದಮುದ್ಧೂಲಿತಂ ಪುರಾ ॥೫೦॥

---

ನಿನ್ನ ಬಾಯಿಯಿಂದ ಕೇಳಿದ ಮಹಾದೇವನೆಂಬ ನಾಮವು ಸಕಲ ಇಷ್ಟಾರ್ಥಗಳನ್ನೂ ಕೊಡಬಲ್ಲುದು. ಮಹಾಭಯಗಳನ್ನೂ ನಿವಾರಣೆಮಾಡುವ ಈ ದಿವ್ಯನಾಮವನ್ನು ಹಿಂದೆ ನಾನು ಯಾವಾಗಲೂ ಕೇಳಿರಲಿಲ್ಲ ಎಂದು ಸುಮ್ಮನಾದನು. ॥೪೬॥

ಆಗ ಬ್ರಾಹ್ಮಣನು ಎಲೈ ಪುರುಷನೇ, ಈರೀತಿಯಾದ ಘೋರ ಪಿಶಾಚರೂಪವನ್ನು ಹೊಂದಲು ಯಾವ ವಿಧವಾದ ಪಾಪವನ್ನು ಹಿಂದೆ ನೀನು ಮಾಡಿದ್ದೆ? ಸ್ವಲ್ಪವೂ ಸಂಕೋಚಮಾಡಿಕೊಳ್ಳದೇ ಚೆನ್ನಾಗಿ ಆಲೋಚಿಸಿ ಅವುಗಳನ್ನೆಲ್ಲಾ ನನಗೆ ತಿಳಿಸುವನಾಗು. ॥೪೭॥

ನಿನ್ನ ತಂದೆತಾಯಿಗಳಾರು? ನಿಮ್ಮ ವಂಶವಾವುದು? ನಿಮ್ಮ ಜಾತಿ ಯಾವುದು? ವೃತ್ತಿಯೇನು? ಎಲ್ಲವನ್ನೂ ಜಾಗ್ರತೆಯಾಗಿ ಹೇಳೆಂದು ಪಿಶಾಚವೇಷವನ್ನು ಹೊಂದಿದ್ದವನನ್ನು ಕೇಳಿದನು. ಆಗ ಆತನು ಹೀಗೆಂದನು. ॥೪೮॥

ನನ್ನ ತಂದೆಯು ಕುಲುಂಜಕನೆಂಬುವನು, ಒರಟುಸ್ವಭಾವವುಳ್ಳ ಸುಶೀಲೆಯೆಂಬುವಳೇ ನನ್ನ ತಾಯಿಯು. ಸೂರ್ಯವಂಶದಲ್ಲಿ ನಾನು ಜನ್ಮತಾಳಿದೆನು.

ತ್ರಿಪುಂಡ್ರಂ ಭಸ್ಮನಾ ಪೂತಂ ಮಹಾಪಾತಕನಾಶಕಂ ।
ಶಿರೋ ಲಲಾಟಸ್ಕಂಧೋರಃಸ್ಕಂಧಾದೌ ನ ಕೃತಂ ಮಯಾ ॥೫೧॥

ರುದ್ರಾಕ್ಷಾಃ ಸರ್ವಪಾಪಘ್ನಾಃ ಜಾಬಾಲಶ್ರುತಿಸಂಮತಾಃ ।
ನ ಧೃತಾಃ ಕಂಠಕರ್ಣಾದಿಷ್ವಂಗೇಷ್ವಾದರಪೂರ್ವಕಂ ॥೫೨॥

ನಿತ್ಯಂ ತ್ರಿಸಂಧ್ಯಮಭ್ಯರ್ಚ್ಯಂ ದೇವದೇವೋತ್ತಮಂ ಶಿವಂ ।
ಅನಭ್ಯರ್ಚ್ಯಾಶಿತಂ ಪೂರ್ವಮಭಾಗ್ಯಪರಿಪಾಕತಃ ॥೫೩॥

ಬಿಲ್ವಪತ್ರೈರ್ಜಲಾಪ್ಲುಷ್ಟೈರಚ್ಛಿದ್ರೈಃ ಕೋಮಲೈರ್ನವೈಃ ।
ನಾರಾಧಿ ಗಿರಿಜಾನಾಥಃ ಪ್ರತ್ಯಹಂ ಭಕ್ತಿಪೂರ್ವಕಂ ॥೫೪॥

---

ನಾನು ಅನೇಕ ಶಾಸ್ತ್ರಗಳಲ್ಲಿ ಪಂಡಿತರಾದ ಬ್ರಾಹ್ಮಣ ಜಾತಿಯನ್ನಲಂಕರಿಸಿ, ಆದರದಿಂದ ಹಿಂದೆ ವೇದಗಳನ್ನು ಚೆನ್ನಾಗಿ ಅಧ್ಯಯನಮಾಡಿದ್ದೆನು. ಹೀಗೆ ವೇದಾಧ್ಯಯನಮಾಡಿದರೂ ಅವಯವಗಳಿಗೆ ಭಸ್ಮವನ್ನು ನಾನು ಹಿಂದೆ ಯಾವಾಗಲೂ ಉದ್ಧೂಳನಮಾಡಿಕೊಳ್ಳಲಿಲ್ಲ. ॥೪೯-೫೦॥

ದೊಡ್ಡದೊಡ್ಡ ಪಾಪಗಳನ್ನೂ ನಾಶಮಾಡುವ ಸಾಮರ್ಥ್ಯವುಳ್ಳ ಭಸ್ಮದಿಂದ, ಪರಿಶುದ್ಧವಾದ ತ್ರಿಪುಂಡ್ರವನ್ನು ತಲೆ, ಹಣೆ, ಹೆಗಲು, ಹೊಟ್ಟೆ, ಭುಜ ಮೊದಲಾದ ಸ್ಥಳಗಳಲ್ಲಿ ಎಂದಿಗೂ ನಾನು ಧಾರಣೆಮಾಡಲಿಲ್ಲ. ॥೫೧॥

ಸಕಲ ಪಾಪಗಳನ್ನೂ ನಾಶಮಾಡುವ ಜಾಬಾಲಶ್ರುತಿಪ್ರಸಿದ್ಧವಾದ ರುದ್ರಾಕ್ಷಗಳನ್ನು ಕೊರಳು, ಕಿವಿ ಮೊದಲಾದ ಅವಯವಗಳಲ್ಲಿ ಆದರಪೂರ್ವಕವಾಗಿ ನಾನು ಧರಿಸಲಿಲ್ಲ. ॥೫೨॥

ಪ್ರಾತರ್ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳಲ್ಲಿ ಪ್ರತಿನಿತ್ಯವೂ ಪೂಜಿಸಬೇಕಾದ ದೇವದೇವೋತ್ತಮನಾದ ಶಿವನನ್ನು ಪೂಜೆ ಮಾಡದೇ ದೌರ್ಭಾಗ್ಯಪರಿಪಾಕದಿಂದ ಹಿಂದೆ ಊಟಮಾಡುತ್ತಿದ್ದೆನು. ॥೫೩॥

ನೀರಿನಲ್ಲಿ ತೋಯಿಸಿದ, ದಳಮುರಿಯದೇ ಕೋಮಲವಾಗಿರುವ, ಹೊಸ ಬಿಲ್ವಪತ್ರೆಗಳನ್ನು ತೆಗೆದುಕೊಂಡು ಭಕ್ತಿಪುರಸ್ಸರವಾಗಿ ಪ್ರತಿದಿನವೂ ಆ ಗಿರಿಜಾರಮಣನನ್ನು ಪೂಜೆಮಾಡಲಿಲ್ಲ. ॥೫೪॥

ಅಭಿಷಿಚ್ಯ ಮಹಾದೇವಂ ರುದ್ರಾಧ್ಯಾಯೇನ ಸಾದರಂ ।
ರುದ್ರಾಭಿಷೇಕಪಾನೀಯಂ ನ ಪೀತಮಘನಾಶಕಂ ॥೫೫॥

ಸಂಪೂಜ್ಯ ಶಂಕರಂ ಪುಷ್ಪೈರ್ಬಿಲ್ವಪತ್ರೈಶ್ಚ ಕೋಮಲೈಃ ।
ಪ್ರದಕ್ಷಿಣನಮಸ್ಕಾರಾ ಯಥೇಷ್ಟಂ ನ ಕೃತಾ ಮಯಾ ॥೫೬॥

ಪ್ರಣಮ್ಯ ದಂಡವದ್ಭೂಮಾವುತ್ಥಾಯೋತ್ಥಾಯ ಭೂರಿಶಃ ।
ಪ್ರಣಾಮಾ ನ ಕೃತಾಃ ಪೂರ್ವಮತಿಭಕ್ತಿಪುರಸ್ಸರಂ ॥೫೭॥

ನರ್ತನಂ ಶಂಕರಸ್ಯಾಗ್ರೇ ಸಮ್ಯಗಾಸ್ವೇದಮಾದರಾತ್ ।
ನ ಕೃತಂ ಸರ್ವಪಾಪಘ್ನಮಾಲಸ್ಯೇನ ಪುರಾ ಮಯಾ ॥೫೮॥

ಮುಹುರ್ಮುಹುರ್ಬಿಲ್ವಪತ್ರೈರಾರಾಧ್ಯ ಪರಮೇಶ್ವರಂ ।
ದೃಷ್ಟ್ವಾ ಸಂಸ್ಪೃಶ್ಯ ಮಂತ್ರೇಣ ನಾನಂದಮಗಮಂ ಪುರಾ ॥೫೯॥

---

ಹಿಂದೆ ನಾನು ಆ ಮಹಾದೇವನಿಗೆ ಆದರದಿಂದ ರುದ್ರಾಭಿಷೇಕಮಾಡಿದರೂ ಸಕಲ ಪಾಪಗಳನ್ನೂ ಹೊಡೆದೋಡಿಸುವ ಆ ರುದ್ರಾಭಿಷೇಕದ ನೀರನ್ನು ತೀರ್ಥವೆಂದು ಕುಡಿಯಲಿಲ್ಲ. ॥೫೫॥

ಮೃದುವಾದ ಹೂ ಮತ್ತು ಬಿಲ್ವಪತ್ರೆಗಳಿಂದ ಆ ಶಂಕರನನ್ನು ಭಕ್ತಿಯಿಂದ ಪೂಜೆಮಾಡಿ, ನಾನು ಹಿಂದೆ ಆ ದೇವನಿಗೆ ಯಥೇಷ್ಟವಾಗಿ ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡಲಿಲ್ಲ. ॥೫೬॥

ಮೇಲಕ್ಕೆ ಎದ್ದು ಎದ್ದು ಭೂಮಿಯಮೇಲೆ ದಂಡಪ್ರಣಾಮಮಾಡಿದರೂ ಭಕ್ತಿಪುರಸ್ಸರವಾಗಿ ಶ್ರದ್ಧೆಯಿಂದ ಹಿಂದೆ ನಾನು ಶಂಕರನಿಗೆ ನಮಸ್ಕಾರಗಳನ್ನು ಮಾಡಲಿಲ್ಲ. ॥೫೭॥

ಆ ಶಂಕರನ ಮುಂದೆ ಬೆವರು ಬರುವವರೆಗೂ ನಾನು ಸಕಲ ಪಾಪಗಳನ್ನೂ ನಾಶಮಾಡುವ ನರ್ತನವನ್ನು ಆದರಪೂರ್ವಕವಾಗಿ ಮಾಡದೇ ಆಲಸ್ಯದಿಂದ ಉದಾಸೀನಮಾಡಿದೆನು. ॥೫೮॥

ಪದೇ ಪದೇ ಬಿಲ್ವಪತ್ರೆಗಳಿಂದ ಆ ಪರಮೇಶ್ವರನನ್ನು ಪೂಜಿಸಿ, ಹಾಗೆಯೇ ಮಂತ್ರಪೂರ್ವಕವಾಗಿ ಆ ಶಿವಲಿಂಗವನ್ನು ದರ್ಶನಮಾಡಿಯೂ ಹಿಂದೆ ನಾನು ಆನಂದಪಡಲಿಲ್ಲ. ॥೫೯॥

ಶಂಕರೇತಿ ಮಹೇಶೇತಿ ಮಹಾದೇವೇತಿ ಸಾದರಂ ।
ನ ಸ್ಮೃತಂ ಶಾಂಕರಂ ನಾಮ ಮಹಾಪಾತಕನಾಶನಂ ॥೬೦॥

ಮುಕ್ತಿಪ್ರಕಾಶಿಕಾ ಕಾಶೀ ಸಾಕ್ಷಾದೀಶ್ವರರೂಪಿಣೀ ।
ನ ದೃಷ್ಟಾ ನ ಸ್ತುತಾ ಪೂರ್ವಮಭಾಗ್ಯಪರಿಪಾಕತಃ ॥೬೧॥

ಯಸ್ಯಾಂ ಕಾಶ್ಯಾಂ ಮಹಾದೇವಃ ಪಾರ್ವತೀರಮಣಃ ಪ್ರಭುಃ ।
ಲೀಲಾಂ ಕರೋತಿ ಸಾ ಕಾಶೀ ನ ದೃಷ್ಟಾ ಪಾಪಯೋಗತಃ ॥೬೨॥

ಯಾ ಕಾಶೀ ಸಂಶ್ರುತಾ ದೃಷ್ಟಾ ಸ್ಮೃತಾಽಪ್ಯಘವಿನಾಶಿನೀ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೩॥

ಯಸ್ಯಾಂ ಸಂಸಾರಬೀಜಾನಾಂ ವಿನಾಶೋ ಜಾಯತೇ ದ್ವಿಜ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೪॥

---

ಶಂಕರ, ಮಹೇಶ, ಮಹಾದೇವ ಎಂಬುದಾಗಿ ಆದರದಿಂದ ಮಹಾಪಾಪಗಳನ್ನೂ ನಾಶಮಾಡುವ ಆ ಶಂಕರನ ದಿವ್ಯನಾಮಗಳನ್ನು ಸ್ಮರಣೆಮಾಡಲಿಲ್ಲ. ॥೬೦॥

ಮೋಕ್ಷವನ್ನು ಕರುಣಿಸುವ ಸಾಕ್ಷಾತ್ಪರಮೇಶ್ವರಸ್ವರೂಪಿಯಾದ ಕಾಶೀಪಟ್ಟಣವನ್ನು ನಾನು ದೌರ್ಭಾಗ್ಯಪರಿಪಾಕದಿಂದ ನೋಡಲಿಲ್ಲ. ಅಥವಾ ಸ್ತೋತ್ರವನ್ನೂ ಮಾಡಲಿಲ್ಲ. ॥೬೧॥

ಪಾರ್ವತೀಕಾಂತನೂ, ಸರ್ವಸಮರ್ಥನೂ ಆದ ಮಹಾದೇವನು ಸಂತೋಷದಿಂದ ತನ್ನ ಲೀಲೆಯನ್ನು ಪ್ರಕಟಗೊಳಿಸುತ್ತಿರುವ ಆ ಕಾಶೀಪಟ್ಟಣವನ್ನು ಪಾಪಸಂಬಂಧವಿದ್ದುದರಿಂದ ನಾನು ಹಿಂದೆ ದರ್ಶನಮಾಡಲಿಲ್ಲ. ॥೬೨॥

ಮತ್ತೊಬ್ಬರಿಂದ ಕೇಳಿದರೂ, ಪ್ರತ್ಯಕ್ಷವಾಗಿ ನೋಡಿದರೂ, ಒಂದುವೇಳೆ ಸ್ಮರಣೆಮಾಡಿದರೂ ಭಯಂಕರವಾದ ಪಾಪಗಳನ್ನೂ ನಾಶಮಾಡಬಲ್ಲ ಆ ಕಾಶೀಪಟ್ಟಣವನ್ನು ತೀವ್ರವಾದ ಪಾಪಕಾರ್ಯಮಾಡಿದ್ದುದರಿಂದ ಹಿಂದೆ ನಾನು ದರ್ಶನಮಾಡಲಿಲ್ಲ. ॥೬೩॥

ಅಯ್ಯ ಬ್ರಾಹ್ಮಣನೇ, ಈ ಸಂಸಾರದ ದುಃಖಬೀಜಗಳು ನಾಶವಾಗುವ ಆ ಪಾವನವಾದ ಕಾಶೀಪಟ್ಟಣವನ್ನು ಭಯಂಕರವಾದ ಪಾಪಕರ್ಮಗಳಿಂದ ನಾನು ಹಿಂದೆ ಎಂದೂ ನೋಡಲಿಲ್ಲ. ॥೬೪॥

ಯಸ್ಯಾಂ ಮೃತಸ್ಯ ವಿಶ್ವೇಶೋ ಮುಕ್ತಿಕಾಂತಾಂ ಪ್ರಯಚ್ಛತಿ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೫॥

ಯಸ್ಯಾಂ ಕಾಶ್ಯಾಂ ಮಹತ್ತೀರ್ಥಂ ಮಣಿಕರ್ಣೀತಿ ಸಂಜ್ಞಿತಂ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೬॥

ಯಸ್ಯಾಂ ಕಾಶ್ಯಾಂ ಮಹತ್ತೀರ್ಥಂ ಜ್ಞಾನವಾಪೀತಿ ಸಂಜ್ಞಿತಂ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೭॥

ಯಸ್ಯಾಂ ಕಾಶ್ಯಾಂ ಮಹತ್ಸ್ಥಾನಂ ಮುಕ್ತಿಮಂಟಪಸಂಜ್ಞಿತಂ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೮॥

ಯಸ್ಯಾಂ ಕಾಶ್ಯಾಂ ಮಹಾಲಿಂಗಂ ಶ್ರೀಮದ್ವಿಶ್ವೇಶ್ವರಾಭಿಧಂ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೬೯॥

ಯಸ್ಯಾಂ ಕಾಶ್ಯಾಮನ್ನಪೂರ್ಣಾ ಸರ್ವಸೌಭಾಗ್ಯದಾಯಿನೀ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೭೦॥

ಯಸ್ಯಾಂ ಸಂಸಾರವಿಟಪೋ ದಗ್ಧೋ ನೈವ ಪ್ರರೋಹತಿ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೭೧॥

---

ವಿಶ್ವೇಶ್ವರನೆನಿಸಿದ ಮಹಾದೇವನು ಮರಣಹೊಂದಿದವರಿಗೆಲ್ಲಾ ಮೋಕ್ಷವೆಂಬ ಕನ್ಯೆಯನ್ನು ಕೊಡುವ ಆ ಕಾಶೀಪಟ್ಟಣವನ್ನು ನಾನು ಹಿಂದೆ ಭಯಂಕರ ಪಾಪಕರ್ಮಗಳಿಂದ ಕೂಡಿದವನಾಗಿ ನೋಡಲಿಲ್ಲ. ॥೬೫॥

ಅತ್ಯುತ್ತಮವೆನಿಸಿರುವ, ಮಣಿಕರ್ಣಿಕಾ, ಮತ್ತು ಜ್ಞಾನವಾಪೀತೀರ್ಥಗಳು ಇವುಗಳಿಂದ ವಿರಾಜಿಸುತ್ತಿರುವ ಆ ಕಾಶೀಪಟ್ಟಣವನ್ನು ಭಯಂಕರವಾದ ಪಾಪ ಕರ್ಮಗಳ ಪರಿಪಾಕದಿಂದ ಹಿಂದೆ ನಾನು ದರ್ಶನಮಾಡಲಿಲ್ಲ. ॥೬೬-೬೭॥

ಮುಕ್ತಿಮಂಟಪವೆಂಬ ದೊಡ್ಡ ಸ್ಥಾನವೂ, ಕಾಂತಿಯುಕ್ತವಾದ ವಿಶ್ವೇಶ್ವರವೆಂಬ ದೊಡ್ಡಲಿಂಗವೂ ನೆಲಸಿರುವ ಆ ಕಾಶೀಪಟ್ಟಣವನ್ನು ಘೋರ ಪಾಪಕರ್ಮ ಪರಿಪಾಕದಿಂದ ನಾನು ಹಿಂದೆ ದರ್ಶನಮಾಡಲಿಲ್ಲ. ॥೬೮-೬೯॥

ಸಕಲಸೌಭಾಗ್ಯಗಳನ್ನೂ ಕೊಡುವ ಅನ್ನಪೂರ್ಣಾದೇವಿಯು ಎಲ್ಲಿ ನೆಲಸಿರುವಳೋ, ಮತ್ತು ಸಂಸಾರವೆಂಬ ಮರವು ಒಂದು ಸಲ ಸುಟ್ಟು ಪುನಃ ಎಲ್ಲಿ

ಯಸ್ಯಾಂ ಸ್ಮರಣಮಾತ್ರೇಣ ಮಂಗಲಂ ಪರಮಂ ದ್ವಿಜ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೭೨॥

ಯಸ್ಯಾಂ ವಿಭೂತಿಃ ಪರಮಂ ಭೂಷಣಂ ಪಾಪನಾಶಕಂ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೭೩॥

ಯಸ್ಯಾಂ ಸ್ಥಿತೋ ನರೋಽಪ್ಯಲ್ಪಃ ಪೂಜ್ಯತೇ ದೇವತಾಗಣೈಃ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೭೪॥

ಯಸ್ಯಾಂ ಸ್ಥಿತೋ ನರೋಽಪ್ಯಲ್ಪೋ ನೇಚ್ಛತಿ ಸ್ವರ್ಗಜಂ ಸುಖಂ ।
ಸಾ ಕಾಶೀ ನ ಮಯಾ ದೃಷ್ಟಾ ಘೋರದುಷ್ಕೃತಕರ್ಮಣಾ ॥೭೫॥

ಕಿಂ ಚ ಪೂರ್ವಂ ತು ಸಾಯಾಹ್ನೇ ಪುತ್ರಲಾಲನತತ್ಪರಃ ।
ಭಾರ್ಯಾಂ ವಿಲೋಕ್ಯ ಯುವತೀಂ ವಾಕ್ಯಮೇತದವಾದಿಷಂ ॥೭೬॥

ಸನ್ನದ್ಧಾಂಕುರಶಯ್ಯಾಂ ಮೇ ಮಹೋತ್ಸಾಹಕರಾಂ ಪರಾಂ ।
ಕ್ಷೀರಮಾಸಯ ಪಾನಾರ್ಥಂ ಶರ್ಕರಾಪ್ಲುತಸಂಯುತಂ ॥೭೭॥

---

ಚಿಗುರಲಾರದೋ ಅಂತಹ ಕಾಶೀಪಟ್ಟಣವನ್ನು ನನ್ನ ಘೋರಪಾಪಕರ್ಮಪರಿಪಾಕವು ದರ್ಶನಮಾಡಲು ನನಗೆ ಅವಕಾಶಕೊಡಲಿಲ್ಲ. ॥೭೦-೭೧॥

ಅಯ್ಯ ಬ್ರಾಹ್ಮಣನೇ! ಶಿವನಾಮಸ್ಮರಣಮಾತ್ರದಿಂದ ಎಲ್ಲಿ ಮಂಗಳ ವುಂಟಾಗುವುದೋ, ಸಕಲ ಪಾಪಗಳನ್ನೂ ನಾಶಮಾಡುವ ವಿಭೂತಿಯನ್ನೇ ಎಲ್ಲಿ ಶ್ರೇಷ್ಠ ಆಭರಣವೆಂದು ಭಾವಿಸಿರುವರೋ, ಅಂತಹ ಕಾಶಿಯನ್ನು ಭಯಂಕರವಾದ ಪಾಪಕರ್ಮಗಳ ದೆಸೆಯಿಂದ ನಾನು ಹಿಂದೆ ನೋಡಲಾಗಲಿಲ್ಲ. ॥೭೨-೭೩॥

ಅಲ್ಪನಾದ ಮಾನವನೂ ದೇವತಾಸಮೂಹದಿಂದ ಎಲ್ಲಿ ಪೂಜಿಸಲ್ಪಡು ವನೋ, ಅಲ್ಪನೂ ಸಹ ಎಲ್ಲಿರುವಾಗ ಸ್ವರ್ಗಸುಖವನ್ನು ಬಯಸುವುದಿಲ್ಲವೋ, ಅಂತಹ ಭಾಗ್ಯವಿಶಿಷ್ಟವಾದ ಕಾಶೀಪಟ್ಟಣವನ್ನು ನಾನು ಭಯಂಕರ ಪಾಪಕರ್ಮಗಳ ದೆಸೆಯಿಂದ ದರ್ಶನಮಾಡಲಿಲ್ಲ. ॥೭೪-೭೫॥

ಇದೂ ಅಲ್ಲದೇ, ಹಿಂದೆ ಒಂದು ದಿನ ಸಾಯಂಕಾಲದಲ್ಲಿ ಮಕ್ಕಳನ್ನು ಆಡಿಸು ತ್ತಿರುವಾಗ ನಾನು, ನನ್ನ ಪತ್ನಿಯನ್ನು ನೋಡಿ, ವಿಹಾರಮಾಡಲು ತುಂಬಾ ಉತ್ಸಾಹ ವನ್ನುಂಟುಮಾಡುವ ಶ್ರೇಷ್ಠವಾದ ಚಿಗುರುಗಳಿಂದಲೂ, ಸುಗಂಧವಸ್ತುಗಳಿಂದಲೂ,

ಇತ್ಯುಕ್ತ್ವಾ ಜಡವಮಾಲೋಕ್ಯ ಸಾ ಬಭಾಷೇ ವಚಸ್ತದಾ ।
ಸಾಯಂಕಾಲೇ ಮಹಾದೇವಂ ಪೂಜಯಸ್ವೇತಿ ಯತ್ನತಃ ॥೭೮॥

ಪಶ್ಯ ಪಶ್ಯಾಮುಲಾನ್ಲೋಕಾಂಛಿವಪೂಜಾಪರಾಯಣಾನ್ ।
ಪೂಜಾದ್ರವ್ಯಕರಾಃ ಸರ್ವೇ ಪ್ರಯಾಂತಿ ಶಿವಮಂದಿರಂ ॥೭೯॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭ್ರಾಂತಾಸೀತ್ಯಹಮುಚ್ಚರಂ ।
ತಚ್ಛ್ರುತಂ ಶಿವಭಕ್ತೇನ ಕೇನಚಿತ್ತದ್ವಚಸ್ತದಾ ॥೮೦॥

ಶಾಂಕರೇಣ ತದಾ ಶಪ್ತಸ್ತದೈವಾಹಂ ದ್ವಿಜೋತ್ತಮ ।
ತಚ್ಛಾಪೇನ ತನುಃ ಪ್ರಾಪ್ತಾ ಪೈಶಾಚೀ ದುಃಖದಾಯಿನೀ ॥೮೧॥

ನಾರಾಧಯತಿ ಯಃ ಸಾಯಂ ದೇವದೇವೋತ್ತಮಂ ಶಿವಂ ।
ಸ ಪಿಶಾಚೋ ಭವತ್ಯೇವ ಉಕ್ತಂ ಶೈವೇನ ತೇನ ಹಿ ॥೮೨॥

---

ಕೂಡಿದ ಪಾಸಿಗೆಯನ್ನೂ, ಪಾನಮಾಡಲು, ಸಕ್ಕರೆ, ತುಪ್ಪ ಮೊದಲಾದವುಗಳಿಂದ ಬೆರೆಸಿದ ಒಳ್ಳೆಯ ಹಾಲನ್ನೂ ಸಿದ್ಧಗೊಳಿಸು ಬಾ ಎಂದು, ನನ್ನ ಹೆಂಡತಿಗೆ ಆಜ್ಞೆ ಮಾಡಿದೆನು. ॥೭೬-೭೭॥

ಹೀಗೆ ನುಡಿದು ಜಡನಾಗಿರುವ ನನ್ನನ್ನು ನೋಡಿ, ನನ್ನ ಪತ್ನಿಯು, "ಸಾಯಂಕಾಲವೇಳೆಯಿದು ; ಶ್ರದ್ಧೆಯಿಂದ ಈ ಪ್ರದೋಷಕಾಲದಲ್ಲಿ ಆ ಮಹಾದೇವನನ್ನು ಪೂಜೆಮಾಡು ; ಇದೋ ಇತ್ತನೋಡು ! ಶಿವಪೂಜಾತತ್ಪರರಾದ ಈ ಜನಗಳೆಲ್ಲರೂ, ಪೂಜಾಸಾಮಗ್ರಿಗಳನ್ನು ಕೈಯಲ್ಲಿ ಹಿಡಿದು ಶಿವದೇವಾಲಯವನ್ನು ಕುರಿತು ಆ ದೇವೋತ್ತಮನನ್ನು ಪೂಜೆಮಾಡಲು ತೆರಳುತ್ತಿರುವರೆಂದು" ನುಡಿದಳು. ॥೭೮-೭೯॥

ಪ್ರಿಯೆಯು ಹೀಗೆ ನುಡಿದುದನ್ನು ಕೇಳಿ, ನೀನು ಭ್ರಾಂತಳಾಗಿರುವೆಯೆಂದು ನಾನು ಅವಳಿಗೆ ಹೇಳಲು, ಆ ಮಾತನ್ನು ಒಬ್ಬ ಶಾಂಭವನು ಆಗ ಕೇಳಿದನು. ॥೮೦॥

ಅಯ್ಯ ಬ್ರಾಹ್ಮಣೋತ್ತಮನೇ ! ಕೂಡಲೇ ಆ ಶಂಕರಭಕ್ತನು ನನಗೆ ಶಾಪ ಕೊಟ್ಟನು. ಆ ಶಾಪಮಹಿಮೆಯಿಂದ, ನನಗೆ ಇಂತಹ ದುಃಖಪ್ರದವಾದ ಈ ಪಿಶಾಚದೇಹವು ಬಂದಿತು. ॥೮೧॥

ಸಾಯಂಕಾಲಗಳಲ್ಲಿ ದೇವದೇವೋತ್ತಮನಾದ ಶಿವನನ್ನು ಪೂಜೆಮಾಡದೇ ಉದಾಸೀನಮಾಡುವವನು ನಿಶ್ಚಯವಾಗಿ ಪಿಶಾಚಿಯೇ ಆಗುವನೆಂದೂ ಆ ಶಾಂಭವನು ಹೇಳಿದ್ದನು. ॥೮೨॥

ತೇನ ಶಾಪೇನ ಪೈಶಾಚೀ ತನುಃ ಪ್ರಾಪ್ತಾ ಮಯಾ ತದಾ ।
ತೇನೈವಾತ್ರ ವನೇ ದುಃಖಂ ಬಹು ಪ್ರಾಪ್ತಂ ಮಯಾ ದ್ವಿಜ ॥೮೩॥

ಬಹವೋಽಸ್ಮಿನ್ವನೇ ಸಂತಿ ಪಿಶಾಚತನುಭಾಗಿನಃ ।
ಅನರ್ಚಿತಮಹಾದೇವಾಃ ಸಾಯಂಕಾಲೇ ಯಥಾವಿಧಿ ॥೮೪॥

ಅಹಂ ತು ತ್ವತ್ಪ್ರಸಾದೇನ ಮೋಚಿತಃ ಕರ್ಮಬಂಧನಾತ್ ।
ತವ ಶಿಷ್ಯೋ ಭವಿಷ್ಯಾಮಿ ಪಾಲಯಸ್ವ ಯಥೋಚಿತಂ ॥೮೫॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಪ್ರಣತಂ ವಿಪ್ರಮುತ್ಥಾಪ್ಯ ವಿನಯಾನ್ವಿತಂ ।
ಪಂಚಾಕ್ಷರಂ ಮಹಾಮಂತ್ರಂ ಸಸ್ಮಾರಾಘವಿನಾಶಕಂ ॥೮೬॥

---

ಆ ಶೈವನ ಶಾಪದಿಂದಲೇ ನನಗೆ ಈ ಪಿಶಾಚ ಶರೀರವು ಪ್ರಾಪ್ತವಾಗಿ, ಆದರಿಂದ ನಾನಾ ವಿಧವಾದ ದುಃಖಗಳನ್ನು ಈ ಕಾಡಿನಲ್ಲಿ ನಾನು ಅನುಭವಿಸಿದೆನು. ಅಯ್ಯ ಬ್ರಾಹ್ಮಣೋತ್ತಮನೇ! ಈ ಕಾಡಿನಲ್ಲಿ ಸಾಯಂಕಾಲದವೇಳೆ ವಿಧಿಯನ್ನರಿತು ಆ ಮಹಾದೇವನನ್ನು ಪೂಜೆಮಾಡದೇ ಪಿಶಾಚ ಶರೀರವನ್ನು ಹೊಂದಿರುವರನೇಕರು ಇನ್ನೂ ನನ್ನಂತೆಯೇ ಇರುವರು. ॥೮೩-೮೪॥

ನಾನಾದರೋ ನಿನ್ನ ಅನುಗ್ರಹದಿಂದ ಈಗ ಕರ್ಮಬಂಧನದಿಂದ ಬಿಡುಗಡೆ ಹೊಂದಿದೆನು. ಅಯ್ಯ ವಿಪ್ರನೇ! ನಿನ್ನ ಶಿಷ್ಯವೃತ್ತಿಯನ್ನಾಶ್ರಯಿಸಿ ನಿನ್ನ ಸೇವೆ ಮಾಡಲು ನನಗೆ ಅಪೇಕ್ಷೆಯುಂಟಾಗಿದೆ. ದಯವಿಟ್ಟು ನನ್ನನ್ನು ಅಂಗೀಕರಿಸಿ, ಉಚಿತ ರೀತಿಯಿಂದ ಸಲಹು, ಸ್ವಾಮಿ, ಎಂದು ಆ ಪಿಶಾಚವೇಷಧಾರಿಯಾಗಿದ್ದ ಬ್ರಾಹ್ಮಣನು ಶಾಂಭವನನ್ನು ಪ್ರಾರ್ಥಿಸಿದನು. ॥೮೫॥

ಹೀಗೆ ಪ್ರಾರ್ಥಿಸಿ ವಿನಯದಿಂದ ನಮಸ್ಕಾರಮಾಡಿ ಬಗ್ಗಿರುವ ಆ ಬ್ರಾಹ್ಮಣನನ್ನು ಮೇಲಕ್ಕೆ ಆದರದಿಂದ ಏಳಿಸಿ, ಪರಮಶಾಂಭವನು ಸಕಲ ಪಾಪಗಳನ್ನೂ ನಿರ್ಮೂಲಮಾಡುವ ಅತ್ಯುತ್ತಮವಾದ ಶಿವಪಂಚಾಕ್ಷರಮಹಾಮಂತ್ರವನ್ನು ಸ್ಮರಿಸಿಕೊಂಡನು. ॥೮೬॥

ತತಸ್ತಸ್ಮೈ ದದೌ ವಿಪ್ರೋ ಮಂತ್ರಂ ಶೈವಮನುತ್ತಮಂ ।
ಸ ಗೃಹೀತ್ವಾ ಮನುಂ ಶೈವಮತಿತುಷ್ಟೋಽಭವತ್ತದಾ ॥೮೭॥

ಅತೋ ಬ್ರಹ್ಮನ್ಮಹಾದೇವಃ ಪೂಜನೀಯಃ ಪ್ರಯತ್ನತಃ ।
ಸ್ಮರ್ತವ್ಯಃ ಸತತಂ ಶ್ರೇಷ್ಠೋ ಧ್ಯಾತವ್ಯಶ್ಚ ಯಥೇಚ್ಛಯಾ ॥೮೮॥

ಮಹೇಶನಾಮಸ್ಮರಣಂ ಸಂಸಾರಚ್ಛೇದಕಾರಣಂ ।
ತತ್ಕಿಂ ಪಿಶಾಚದೇಹಸ್ಯ ನಾಶಕಂ ನ ಭವಿಷ್ಯತಿ ॥೮೯॥

ಅನೇಕಜನ್ಮಸಂಸಾರಮೂಲೋಚ್ಛೇದಕರೋ ಹರಃ ।
ನ ಕಿಮೇಕಸ್ಯ ಸಂಸಾರಂ ನಾಶಯಿಷ್ಯತಿ ಶಂಕರಃ ॥೯೦॥

ಮಯಾ ಪ್ರಾಪ್ತೋಽಸ್ತಿ ವೈಕುಂಠೋ ಯತ್ಪಾದಾಂಬುಜಪೂಜಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೧॥

ಶಂಖಚಕ್ರೇ ಮಯಾ ಪ್ರಾಪ್ತೇ ಯತ್ಪಾದಾಂಬುಜಪೂಜಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೨॥

---

ತಾನು ಸರಿಯಾಗಿ ಸ್ಮರಿಸಿಕೊಂಡನಂತರ ಪರಶಿವಭಕ್ತನಾದ ಬ್ರಾಹ್ಮಣನು ಆ ವಿಪ್ರನಿಗೆ ಉತ್ತಮವಾದ ದಿವ್ಯ ಶಿವಪಂಚಾಕ್ಷರಮಂತ್ರವನ್ನುಪದೇಶಮಾಡಲು ಆತನು ಪ್ರೀತಿಯಿಂದ ಅದನ್ನು ಸ್ವೀಕರಿಸಿ ತುಂಬಾ ಸಂತೋಷಭರಿತನಾದನು.॥೮೭॥

ಅಯ್ಯ ಬ್ರಾಹ್ಮಣನೇ, ಇನ್ನು ಮುಂದೆ ಆ ಮಹಾದೇವನನ್ನು ಶ್ರದ್ಧೆಯಿಂದ ಪೂಜೆಮಾಡಬೇಕು. ಯಾವಾಗಲೂ ಶ್ರೇಷ್ಠನಾದ ಆ ಮಹೇಶ್ವರನನ್ನು ಸ್ಮರಿಸಿಕೊಂಡು ತನ್ನ ಅಪೇಕ್ಷೆಯಂತೆ ಧ್ಯಾನಮಾಡಬೇಕು. ॥೮೮॥

ಸಂಸಾರ ಬಂಧನವನ್ನೇ ನಾಶಮಾಡಲು ಕಾರಣವಾಗಿರುವ ಈ ಮಹೇಶ್ವರನ ನಾಮಸ್ಮರಣೆಯು ಈ ಪಿಶಾಚದೇಹವನ್ನು ನಾಶಮಾಡದೇ ಹೋಗುವುದೇ? ಅನೇಕ ಜನ್ಮಗಳಲ್ಲಿ ಪ್ರಾಣಿಯು ಹೊಂದಬಹುದಾದ ಸಂಸಾರ ದುಃಖವನ್ನೆಲ್ಲಾ ನಿರ್ಮೂಲ ಮಾಡಬಲ್ಲ ಆ ಪರಮೇಶ್ವರನು ಕೇವಲ ಒಂದೇ ಸಂಸಾರಬಂಧನವನ್ನು ಹೋಗಲಾಡಿಸಲಾರನೇ! (ಅವಶ್ಯವಾಗಿ ನಿರ್ಮೂಲಮಾಡಿಯೇ ತೀರುವನೆಂದು ಭಾವ.) ॥೮೯-೯೦॥

ಓ ದೇವತೆಗಳಿರಾ, ಯಾವ ಮಹೇಶ್ವರನ ಪಾದಕಮಲ ಸೇವೆಯಿಂದ

ಲಕ್ಷ್ಮೀಃ ಪ್ರಾಪ್ತಾ ಮಯಾ ಪೂರ್ವಂ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೩॥

ವಿಷ್ಣುತ್ವಂ ಚ ಮಯಾ ಪ್ರಾಪ್ತಂ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೪॥

ಜಗತ್ಪಾಲಕತಾ ಪ್ರಾಪ್ತಾ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೫॥

ಮೃತ್ಯುಃ ಸ್ವವಶಮಾಪ್ನೋತಿ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೬॥

ಸಂಪದಃ ಸ್ವವಶಂ ಯಾಂತಿ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೭॥

ಸರ್ವದೇವಾ ವಶಂ ಯಾಂತಿ ಯತ್ಪಾದಾಂಬುಜಪೂಜಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೮॥

---

ನನಗೆ ವೈಕುಂಠಲೋಕವೂ, ಶಂಖಚಕ್ರಗಳೂ ಲಭಿಸಿದವೋ ಆ ಅಂಬಿಕಾಕಾಂತನಾದ ಶಂಕರನನ್ನೇ ನಾವು ಮರೆಹೊಕ್ಕು ಸದಾ ಭಜನೆಮಾಡೋಣ. ॥೯೧-೯೨॥

ಯಾವ ಮಹಾದೇವನ ಕಮಲದಂತಿರುವ ಪಾದಯುಗ್ಮಗಳನ್ನು ಸೇವೆ ಮಾಡಿದುದರಿಂದ ನನಗೆ ಹಿಂದೆ ಮಹಾಲಕ್ಷ್ಮಿಯೂ, ವಿಷ್ಣುಪದವಿಯೂ ದೊರೆಕಿದವೋ ಅಂತಹ ಮಹಾಮಹಿಮನಾದ, ಅಂಬಿಕಾರಮಣನಾದ ಶಂಕರನನ್ನೇ ನಾವು ಅನವರತವೂ ಶರಣುಹೊಂದಿ ಸೇವೆಮಾಡೋಣ. ॥೯೩-೯೪॥

ಯಾವ ಜಗದೊಡೆಯನ ಪಾದಾರವಿಂದಗಳನ್ನು ಸೇವೆಮಾಡಿದುದರಿಂದ ಪ್ರಪಂಚವನ್ನು ಕಾಪಾಡುವ ಅಧಿಕಾರವೂ ನನಗೆ ದೊರೆಯಿತೋ, ಅಲ್ಲದೇ ಯಮನೂ ತನ್ನ ಅಧೀನನಾಗಿರುವನೋ, ಅಂತಹ ಅಂಬಿಕಾಪತಿಯಾದ ಶಂಕರನನ್ನೆ ನಾವು ಅನವರತವೂ ಶರಣುಹೊಂದಿ ಸೇವೆಮಾಡೋಣ. ॥೯೫-೯೬॥

ಸಕಲ ಸಂಪತ್ತುಗಳೂ, ಎಲ್ಲಾ ದೇವತೆಗಳೂ, ಯಾರ ಅಡಿದಾವರೆಗಳ ಪೂಜಾಮಾತ್ರದಿಂದಲೇ ತಮ್ಮ ಅಧೀನವಾಗಬಲ್ಲರೋ ಆ ಅಂಬಿಕಾರಮಣನಾದ ಶಂಕರನನ್ನೇ ನಾವು ಯಾವಾಗಲೂ ಮರೆಹೊಕ್ಕು ಸೇವೆಮಾಡೋಣ. ॥೯೭-೯೮॥

ಸಿದ್ಧಯೋಽಷ್ಟೌ ವಶಂ ಯಾಂತಿ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೯೯॥

ಸ್ವರ್ಗಃ ಸ್ವವಶಮಾಯಾತಿ ಯತ್ಪಾದಾಂಬುಜಪೂಜಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೧೦೦॥

ಸತ್ಯಲೋಕೋ ವಶಂ ಯಾತಿ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೧೦೧॥

ವೈಕುಂಠೋಽಯಂ ವಶಂ ಯಾತಿ ಯತ್ಪಾದಾಂಬುಜಸೇವಯಾ ।
ತಮೇವ ಶರಣಂ ಸಾಂಬಂ ಭಜಾಮಃ ಶರಣಂ ಸದಾ ॥೧೦೨॥

ಮೋಕ್ಷಃ ಸ್ವವಶಮಾಯಾತಿ ಯತ್ಪಾದಾಂಬುಜಸೇವಯಾ ।
ತಮೇವ ಶಂಕರಂ ಸಾಂಬಂ ಭಜಾಮಃ ಶರಣಂ ಸದಾ ॥೧೦೩॥

---

ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ಮತ್ತು ವಶಿತ್ವಗಳೆಂಬ ಎಂಟು ಸಿದ್ಧಿಗಳೂ, ಸ್ವರ್ಗಲೋಕವೂ ಸಹ ಯಾವ ದೇವೋತ್ತಮನ ಪಾದಾಂಬುಜಸೇವೆಯಿಂದ ಸುಲಭವಾಗಿ ತನ್ನ ಅಧೀನವಾಗುವುವೋ, ಅಂತಹ ಅಂಬಿಕಾಜಾನಿಯಾದ ಶಂಕರನನ್ನೇ ಶರಣಾಗತರಕ್ಷಕನೆಂದು ತಿಳಿದು ಸದಾ ಸೇವೆ ಮಾಡೋಣ. ॥೯೯-೧೦೦॥

ಬ್ರಹ್ಮದೇವನ ಸತ್ಯಲೋಕವೂ, ನನ್ನ (ವಿಷ್ಣುವಿನ) ಈ ವೈಕುಂಠಲೋಕವೂ ಯಾವ ದೇವೋತ್ತಮನ ಪಾದಕಮಲಸೇವೆಯಿಂದ ಸುಲಭವಾಗಿ ತನ್ನ ಅಧೀನವಾಗಬಲ್ಲವೋ, ಅಂತಹ ಅಂಬಿಕಾಪತಿಯನ್ನೇ ನಾವು ಮರೆಹೊಕ್ಕು ಯಾವಾಗಲೂ ಅವನನ್ನು ಪೂಜೆಮಾಡೋಣ. ॥೧೦೧-೧೦೨॥

ಮೋಕ್ಷವೂ ಸಹ ಯಾವ ದೇವದೇವನ ಅಡಿದಾವರೆಗಳ ಪೂಜೆಯಿಂದ ಮಾನವನ ಅಧೀನವಾಗಬಲ್ಲದೋ ಅಂತಹ ಅಂಬಿಕಾಪತಿಯಾದ ಶಂಕರನನ್ನೇ ನಾವು ಅನವರತವೂ ಮರೆಹೊಕ್ಕು ಸೇವೆಮಾಡೋಣ. ॥೧೦೩॥

ವಾಜಪೇಯಾದಿಯಾಗಾನಾಂ ಸ್ವರ್ಗಮಾತ್ರಫಲಂ ಸ್ಮೃತಂ।
ಫಲಂ ತು ಮೋಕ್ಷಪರ್ಯಂತಂ ಶಂಕರಸ್ಮರಣಸ್ಯ ತು ॥೧೦೪॥

ಯಾಗಾಶ್ಚ ಯದಿ ಸಾಂಗಾಃ ಸ್ಯುರ್ವಾಜಪೇಯಾದಯಸ್ತದಾ।
ಸ್ವರ್ಗೋಽನ್ಯಥಾ ತು ನಾಸ್ತ್ಯೇವ ತಾದೃಶೀ ನ ಶಿವಸ್ಮೃತಿಃ ॥೧೦೫॥

ಶಿವಸ್ಮರಣಮಾತ್ರೇಣ ವ್ಯಂಗೇನಾಪ್ಯಘಹಾರಿಣೀ।
ಮೋಕ್ಷಲಕ್ಷ್ಮೀರಯತ್ನೇನ ಪ್ರಾಪ್ತವ್ಯಾ ನಾತ್ರ ಸಂಶಯಃ ॥೧೦೬॥

ಶಿವಸ್ಮರಣಸಂಸಕ್ತಂ ಯಸ್ಯ ಚಿತ್ತಮಹರ್ನಿಶಂ।
ನ ತಸ್ಯ ದುರ್ಲಭಂ ವಸ್ತು ಬ್ರಹ್ಮನ್ಬ್ರಹ್ಮಾಂಡಮಂಡಲೇ ॥೧೦೭॥

ಶಿವಸ್ಮರಣಸಂಸಕ್ತೋ ವೈಕುಂಠಮಪಿ ವಸ್ತುತಃ।
ಮರ್ತ್ಯೋಽಯಂ ವಸತಿಂ ಪಶ್ಯತ್ಯತ್ರ ನಾಸ್ತ್ಯೇವ ಸಂಶಯಃ ॥೧೦೮॥

---

ವಾಜಪೇಯ, ಅತಿರಾತ್ರ, ಮೊದಲಾದ ಯಾಗಗಳಿಗಾದರೋ ಕೇವಲ ಸ್ವರ್ಗದವರೆಗಿರುವ ಫಲವೇ ಏರ್ಪಟ್ಟಿರುವುದು. ಶಂಕರನ ಸ್ಮರಣೆಯಿಂದಲಾದರೋ ಮೋಕ್ಷಪರ್ಯಂತವಾದ ಫಲವೂ ಲಭಿಸುವುದು. ವಾಜಪೇಯ ಮೊದಲಾದ ಈ ಯಾಗಗಳು ಒಂದುವೇಳೆ ಸಾಂಗವಾಗಿ ನಡೆದರೆ ಮಾತ್ರ ಸ್ವರ್ಗಲೋಕಪ್ರಾಪ್ತಿ ಯಾಗುವುದೇ ಹೊರತು, ಅಂಗವಿಕಲವಾದರಂತೂ ಯಾವ ಫಲವೂ ದೊರೆಯು ಲಾರದು. ಆ ಪರಶಿವನ ನಾಮಸ್ಮರಣೆಗಾದರೆ ಫಲವು ಎಂದಿಗೂ ವ್ಯರ್ಥವಾಗುವುದೇ ಇಲ್ಲ. ॥೧೦೪-೧೦೫॥

ಆ ಪರಶಿವನ ನಾಮಸ್ಮರಣೆಮಾತ್ರದಿಂದಲೇ ಅಂಗಕಾರ್ಯಸಂಬಂಧವಿಲ್ಲದೆ ಸಕಲ ಪಾಪಗಳೂ ನಾಶವಾಗಿ ಸುಲಭವಾಗಿ ಮೋಕ್ಷಸಂಪತ್ತು ದೊರೆಯುತ್ತದೆ ಯೆಂಬುದರಲ್ಲಿ ಸಂದೇಹವೇ ಇಲ್ಲ. ॥೧೦೬॥

ವಿಪ್ರನೇ! ಹಗಲೂ ರಾತ್ರಿ ಎಡಬಿಡದೇ ಆ ಶಿವನ ನಾಮಸ್ಮರಣೆಯಲ್ಲಿಯೇ ತೊಡಗಿರುವವನಿಗೆ ಈ ಬ್ರಹ್ಮಾಂಡದಲ್ಲಿ ಯಾವ ಪದಾರ್ಥವೂ ದುರ್ಲಭವಾಗಲಾರದು. ॥೧೦೭॥

ಶಿವನಾಮಸ್ಮರಣತತ್ಪರನಾದ ಮಾನವನೂ ಸಹ ಈ ವೈಕುಂಠ ಲೋಕ ವನ್ನು ತನ್ನ ವಾಸಭೂಮಿಯೆಂದು ತಿಳಿಯುವನೇ ಹೊರತು ಉತ್ಕೃಷ್ಟಲೋಕ ವೆಂದು ಭಾವಿಸಲಾರನು. ಇದರಲ್ಲಿ ಸಂದೇಹವಿಲ್ಲ. ॥೧೦೮॥

ಶಿವಪೂಜಾಪರೋ ನಿತ್ಯಂ ಶೈವಃ ಶಿವಪರಾಯಣಃ ।
ನ ಸತ್ಯಲೋಕವೈಕುಂಠೌ ಗಣಯತ್ಯೇವ ಸರ್ವಥಾ ॥೧೦೯॥

ಶಿವನಾಮಸಮಂ ನಾಮ ನಾಸ್ತಿ ನಾಸ್ತಿ ನ ಸಂಶಯಃ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೧೦॥

ಸರ್ವವೇದಶ್ರುತಂ ಪುಣ್ಯಂ ಸರ್ವಾಭೀಷ್ಟಪ್ರದಾಯಕಂ ।
ಅನನ್ಯಸದೃಶಂ ಶುದ್ಧಂ ಶಿವನಾಮೇತಿ ನಿಶ್ಚಿತಂ ॥೧೧೧॥

ಬ್ರಹ್ಮನ್ಸುರಾಸುರೈರ್ಮರ್ತ್ಯೈರ್ಗಂಧರ್ವೈರ್ಯಕ್ಷಪನ್ನಗೈಃ ।
ಪೂಜನೀಯಃ ಪ್ರಯತ್ನೇನ ಶಿವ ಏವ ಮಹೇಶ್ವರಃ ॥೧೧೨॥

ಯೇನ ಸಂಪೂಜ್ಯತೇ ನಿತ್ಯಂ ಲಿಂಗರೂಪೀ ಸದಾಶಿವಃ ।
ಸ ಧನ್ಯಸ್ತತ್ಕುಲಂ ಧನ್ಯಂ ಧನ್ಯಂ ತಜ್ಜನ್ಮ ಸರ್ವಥಾ ॥೧೧೩॥

---

ನಿತ್ಯವೂ ಶಿವಪೂಜಾತತ್ಪರನೂ, ಶಿವಧ್ಯಾನಪರಾಯಣನೂ ಆಗಿರುವ ಶೈವವರ್ಯನು ಈ ಸತ್ಯಲೋಕ, ವೈಕುಂಠಲೋಕಗಳನ್ನೆಂದಿಗೂ ಉತ್ಕೃಷ್ಟವೆಂದು ಗಣಿಸಲಾರನು. ಎಲೈ ಬ್ರಾಹ್ಮಣೋತ್ತಮನೇ! ಒಟ್ಟಿನಲ್ಲಿ ಆ ಶಿವನಾಮಕ್ಕೆ ಸರಿಸಮಾನವಾದ ಬೇರೊಂದು ನಾಮವು ಇಲ್ಲವೇ ಇಲ್ಲ. ಈ ವಿಷಯದಲ್ಲಿ ಬಾರಿಬಾರಿಗೂ ಸತ್ಯವಾಗಿಯೂ ಇಲ್ಲವೇ ಇಲ್ಲವೆಂದು ಭುಜವನ್ನು ಮೇಲಕ್ಕೆತ್ತಿ ಸಾರುವೆನು. ॥೧೦೯-೧೧೦॥

ಮತ್ತೊಂದಕ್ಕೆ ಸಮನಾಗದ, ಪರಿಶುದ್ಧವಾದ ಈ ಶಿವನಾಮವು ಸಕಲ ವೇದಗಳಲ್ಲಿಯೂ ಪ್ರಸಿದ್ಧವಾಗಿ ಪುಣ್ಯಸ್ವರೂಪವಾದುದು. ಅಲ್ಲದೇ ಸಮಸ್ತ ಮನೋರಥಗಳನ್ನೂ ಈಡೇರಿಸುವುದೆಂದೂ ನಿಶ್ಚಿತವಾಗಿದೆ. ॥೧೧೧॥

ಅಯ್ಯ ಬ್ರಾಹ್ಮಣನೇ! ದೇವರಾಕ್ಷಸರೂ, ಮಾನವರೂ, ಗಂಧರ್ವರೂ, ಯಕ್ಷರೂ, ನಾಗರೂ ನಿಯಮದಿಂದ ಆ ಮಹೇಶ್ವರನನ್ನೇ ಪೂಜಿಮಾಡಬೇಕು. ॥೧೧೨॥

ಪ್ರತಿದಿನವೂ ತಪ್ಪದೇ ಲಿಂಗಸ್ವರೂಪಿಯಾದ ಆ ಸದಾಶಿವನನ್ನು ಪೂಜೆ ಮಾಡುವವನೂ ಮತ್ತು ಅವನ ವಂಶವೂ ನಿಜವಾಗಿ ಧನ್ಯವೆನಿಸುವುವು. ॥೧೧೩॥

ಉದ್ಧೂಲನತ್ರಿಪುಂಡ್ರಾಭ್ಯಾಮಲಂಕೃತತನುಃ ಶಿವಮ್ ।
ಯೋಽರ್ಚಯಿಷ್ಯತಿ ತತ್ತುಲ್ಯೋ ಭುವಿ ಕೋ ವಾ ಭವಿಷ್ಯತಿ ॥೧೧೪॥

ಅನಭ್ಯರ್ಚ್ಯ ಮಹಾದೇವಂ ಯೋಽಶ್ನಾತಿ ಫಲಮಂಬು ವಾ ।
ಸ ಪ್ರಾಪ್ನೋತಿ ಮುಹುರ್ಜನ್ಮ ಕ್ಷುದ್ರಚಂಡಾಲಯೋನಿಷು ॥೧೧೫॥

ಸ್ಮೃತೋಽಪಿ ಮುಕ್ತಿದಃ ಸಾಂಬಃ ಶಂಕರಃ ಕರುಣಾಕರಃ ।
ಪೂಜಿತೋ ಬಿಲ್ವಪತ್ರಾದ್ಯೈರ್ಮುಕ್ತಿಂ ಕಿಂ ನ ಪ್ರಯಚ್ಛತಿ ॥೧೧೬॥

ಅನನ್ಯಸದೃಶಂ ಮತ್ವಾ ದೇವದೇವೋತ್ತಮಂ ಶಿವಮ್ ।
ಯೋ ನಾರ್ಚಯತಿ ಪುಷ್ಪಾದ್ಯೈಃ ಸ ಶಿವೇನೈವ ವಂಚಿತಃ ॥೧೧೭॥

---

ಭಸ್ಮೋದ್ಧೂಳನ, ಮತ್ತು ಭಸ್ಮತ್ರಿಪುಂಡ್ರ, ಇವುಗಳಿಂದ ಅಲಂಕೃತವಾದ ಶರೀರವುಳ್ಳವನಾಗಿ ಆ ಶಿವನನ್ನು ಪೂಜೆಮಾಡುವವನಿಗೆ ಸಮಾನವಾದವನು ಈ ಭೂಮಿಯಲ್ಲಿ ಮತ್ತಾರುತಾನೇ ಇರುವನು. ॥೧೧೪॥

ಆ ಮಹಾದೇವನನ್ನು ಪೂಜೆಮಾಡದೇ ಹಣ್ಣನ್ನಾಗಲೀ, ನೀರನ್ನಾಗಲೀ ಉಪಯೋಗಿಸುವವನು ಅನೇಕಜನ್ಮಗಳಲ್ಲಿ ನೀಚವಾದ ಚಂಡಾಲಯೋನಿಗಳಲ್ಲಿ ಬಿದ್ದು ನರಳುತ್ತಾನೆ. ॥೧೧೫॥

ಸ್ಮರಣೆಮಾಡಿದ ಮಾತ್ರದಿಂದಲೇ ಮೋಕ್ಷವನ್ನು ಕೊಡುವ ದಯಾಸಮುದ್ರನೂ, ಮಂಗಳಕರನೂ ಆದ ಆ ಅಂಬಿಕಾರಮಣನು ಬಿಲ್ವಪತ್ರೆ ಮೊದಲಾದ ಪೂಜಾದ್ರವ್ಯಗಳಿಂದ ಪೂಜಿಸಲ್ಪಟ್ಟರೆ ಏಕೆ ಮೋಕ್ಷವನ್ನು ಕೊಡುವುದಿಲ್ಲ? (ಕೊಟ್ಟೇಕೊಡುವನು.) ॥೧೧೬॥

ದೇವದೇವೋತ್ತಮನೆನಿಸಿರುವ ಶಿವನು ಮತ್ತಾವ ದೇವತೆಗಳಿಗೂ ಸಮಾನನಲ್ಲವೆಂದು ತಿಳಿದೂ, ಹೂ, ಪತ್ರೆ, ಮೊದಲಾದ ಸಾಧನಗಳಿಂದ ಆ ಶಿವನನ್ನು ಪೂಜೆಮಾಡದಿರುವ ಮಾನವರು ಆ ಪರಶಿವನಿಂದಲೇ ಮೋಸಮಾಡಲ್ಪಟ್ಟಿರುವರೆಂದು ತಿಳಿಯಬೇಕು. ॥೧೧೭॥

ಅನನ್ಯಸದೃಶೋ ದೇವಃ ಶಿವ ಏವ ಮಹೇಶ್ವರಃ ।
ತಮನ್ಯಸದೃಶಂ ಮತ್ವಾ ನರಕಂ ಯಾತಿ ಮಾನವಃ ॥೧೧೮॥

ಪುರಾ ಕಶ್ಚಿದ್ದ್ವಿಜವರೋ ಹಿಮವದ್ದೇಶಸಂಸ್ಥಿತಃ ।
ದದರ್ಶಾಽನ್ಯಂ ದ್ವಿಜಂ ತತ್ರ ತಮುವಾಚ ಸ ಸಾದರಂ ॥೧೧೯॥

॥ ದ್ವಿಜ ಉವಾಚ ॥

ದ್ವಿಜ ದೇವೇಷು ಕಃ ಪೂಜ್ಯಃ ಸರ್ವದೇವೋತ್ತಮಶ್ಚ ಕಃ ।
ಯತ್ಪೂಜಯಾ ಮೋಕ್ಷಲಕ್ಷ್ಮೀಃ ಪ್ರಾಪ್ತವ್ಯಾ ತದ್ವದಸ್ವ ಮೇ ॥೧೨೦॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭ್ರಮಾದ್ವಾಚಮುವಾಚ ಸಃ ।
ಶಿವೋಪೇಂದ್ರಾದಯೋ ದೇವಾಃ ಸಮಾ ಇತ್ಯೇವ ಸತ್ವರಂ ॥೧೨೧॥

---

ಮತ್ತಾವ ದೇವತೆಗಳಿಗೂ ಸರಿಸಮಾನನೆನಿಸದೇ ಸರ್ವೋತ್ಕೃಷ್ಟನಾಗಿರುವ ಆ ಮಹೇಶ್ವರನನ್ನು ಬೇರೆ ದೇವತೆಗಳಿಗೆ ಸಮಾನನೆಂದು ತಿಳಿದು ಮಾನವನು ನರಕವನ್ನು ಹೊಂದುವನು. ॥೧೧೮॥

ಹಿಂದೆ ಹಿಮಾಲಯ ಪರ್ವತಪ್ರದೇಶದಲ್ಲಿದ್ದ ಒಬ್ಬ ಬ್ರಾಹ್ಮಣನು ಮತ್ತೊಬ್ಬ ವಿಪ್ರನನ್ನು ನೋಡಿ, ಆದರದಿಂದ ಅವನನ್ನು ಕುರಿತು ಹೀಗೆ ಪ್ರಶ್ನೆಮಾಡಿದನು. ॥೧೧೯॥

ಅಯ್ಯ ಬ್ರಾಹ್ಮಣನೇ, ದೇವತೆಗಳಲ್ಲಿ ಯಾರು ಪೂಜಾರ್ಹರು? ದೇವತೆಗಳಲ್ಲೆಲ್ಲಾ ಶ್ರೇಷ್ಠನೆನಿಸಿರುವವರಾರು? ಯಾರನ್ನು ಪೂಜೆಮಾಡಿದರೆ ಮೋಕ್ಷಸಂಪತ್ತು ಬರುವುದು? ಇದನ್ನು ನನಗೆ ತಿಳಿಸೆಂದು ಆ ಬ್ರಾಹ್ಮಣನು ತನಗೆ ಕಾಣಿಸಿಕೊಂಡ ಮತ್ತೊಬ್ಬ ಬ್ರಾಹ್ಮಣನನ್ನು ಕೇಳಿದನು. ॥೧೨೦॥

ತನ್ನನ್ನು ಪ್ರಶ್ನಿಸಿದ ಆ ಬ್ರಾಹ್ಮಣನ ಮಾತುಗಳನ್ನು ಕೇಳಿ ಮತ್ತೊಬ್ಬ ಬ್ರಾಹ್ಮಣನು ಭ್ರಾಂತಿಯಿಂದ, ಕೂಡಲೆ, ಶಿವ, ವಿಷ್ಣು ಮೊದಲಾದ ದೇವತೆಗಳೆಲ್ಲಾ ಮಹಿಮೆಯಲ್ಲಿ ಸರಿಸಮಾನರೆಂದುತ್ತರಕೊಟ್ಟನು. ॥೧೨೧॥

ತತಸ್ತದ್ವಚನಂ ಶ್ರುತ್ವಾ ಭ್ರಾಂತೋಽಯಮಿತಿ ತಂ ದ್ವಿಜಂ ।
ಭರ್ತ್ಸಯಿತ್ವಾ ಯಯೌ ವಿಪ್ರಃ ಶಿವಂ ದೇವೋತ್ತಮಂ ಸ್ಮರನ್ ॥೧೨೨॥

ಶಿವೇಽನ್ಯಸುರತುಲ್ಯತ್ವಂ ಯೇನೋಕ್ತಂ ಭ್ರಾಂತಿಪೂರ್ವಕಂ ।
ತೇನೋಗ್ರಸರ್ಪದಷ್ಟೇನ ತನುಸ್ತ್ಯಕ್ತಾ ಕದಾಚನ ॥೧೨೩॥

ತತೋ ಯಮಾಂತಿಕಂ ನೀತಃ ಸ ಯಾಮ್ಯೈರತಿದಾರುಣೈಃ ।
ಯಮಾಗ್ರೇ ತಾಡಿತೋ ಘೋರಂ ಪ್ರಲಪನ್ನತಿದಾರುಣಂ ॥೧೨೪॥

॥ ಯಮದೂತ ಉವಾಚ ॥

ಯಮಾಯಂ ಬ್ರಾಹ್ಮಣಃ ಪೂರ್ವಂ ಹಿಮವದ್ಗಿರಿಸಂಶ್ರಯಃ ।
ಸರ್ವದಾಽನ್ಯಸುರೈಃ ಸಾರ್ಧಂ ಶಿವಂ ವದತಿ ಮೋಹಿತಃ ॥೧೨೫॥

ಇತ್ಯುದೀರಿತಮಾಕರ್ಣ್ಯ ಯಮದೂತವಚೋ ಯಮಃ ।
ವಿವೃತ್ಯ ಲೋಚನೇ ಘೋರೇ ಕ್ರೋಧಸಂಕುಲಿತೇಕ್ಷಣಃ ॥೧೨೬॥

---

ಆ ರೀತಿಯಾಗಿ ನುಡಿದ ಬ್ರಾಹ್ಮಣನ ನುಡಿಗಳನ್ನು ಲಾಲಿಸಿ, ಅವನನ್ನು ಹುಚ್ಚನೆಂದು ತಿಳಿದು, ನಿಂದಿಸಿ, ದೇವೋತ್ತಮನಾದ ಶಿವನನ್ನು ಸ್ಮರಣೆಮಾಡುತ್ತಾ ಮುಂದಕ್ಕೆ ಹೊರಟನು. ॥೧೨೨॥

ಆ ಪರಶಿವನಲ್ಲಿ ಇತರ ದೇವತಾಸಾಮ್ಯವನ್ನು ಭ್ರಾಂತಿಯಿಂದ ಹೇಳಿದ ಆ ಬ್ರಾಹ್ಮಣನನ್ನು ಒಂದು ಉಗ್ರವಾದ ಸರ್ಪವು ಕಚ್ಚಿ, ಅವನು ಅಲ್ಲಿಯೇ ಮೃತನಾದನು. ॥೧೨೩॥

ವಿಪ್ರನು ಮೃತನಾದಕೂಡಲೇ ಭಯಂಕರರಾದ ಯಮದೂತರು ಅವನನ್ನು ಯಮನ ಮುಂದೆ ಕರೆದುಕೊಂಡುಹೋಗಿ ನಿಲ್ಲಿಸಿ ಅವನನ್ನು ತೀವ್ರವಾಗಿ ಹೊಡೆಯುತ್ತಾ ಅವನು ಪ್ರಲಾಪಮಾಡಿದರೆ ಪುನಃ ಅವನನ್ನು ಶಿಕ್ಷಿಸುತ್ತಾ, ॥೧೨೪॥

ಯಮಧರ್ಮಸ್ವಾಮಿಯೇ, ಈ ಬ್ರಾಹ್ಮಣನು ಹಿಮವತ್ಪರ್ವತಪ್ರದೇಶದಲ್ಲಿ ವಾಸಮಾಡುವವನು. ಇವನು ಅಜ್ಞಾನವಶನಾಗಿ ಯಾವಾಗಲೂ ಆ ಶಿವನನ್ನು ಇತರ ದೇವತೆಗಳಿಗೆ ಸಮಾನನೆಂದು ಹೇಳುತ್ತಿದ್ದನೆಂದು ಯಮದೂತರು ತಮ್ಮ ಪ್ರಭುವಿಗೆ ವಿಜ್ಞಾಪಿಸಿದರು. ॥೧೨೫॥

ಯಮನು ತನ್ನ ಭಟರ ಮಾತುಗಳನ್ನು ಕೇಳಿ ಅವನ ವಿಚಾರವನ್ನರಿತ

ತೀಕ್ಷ್ಣಮತ್ಯಂತಕುಟಿಲಂ ಹೇತಿಮತ್ಯಂತಲೋಹಿತಂ ।
ಜಗ್ರಾಹಾತ್ಯಂತಸಂತಪ್ತಂ ಕಂಪಯನ್ನಖಿಲಾನಪಿ ॥೧೨೭॥

ತತಸ್ತದ್ರಸನಾಮಾಶು ಚಿಚ್ಛೇದ ಕುಪಿತೇಕ್ಷಣಃ ।
ತತಃ ಪ್ರವೇಶಯಾಮಾಸ ನರಕೇಽಪ್ಯತಿದಾರುಣೇ ॥೧೨೮॥

ತಸ್ಮಾದನನ್ಯಸದೃಶಂ ಮಹಾದೇವಂ ಸುರಾಧಿಪಂ ।
ಯೋಽನ್ಯತುಲ್ಯತಯಾ ವೇತ್ತಿ ಸ ಯಾತಿ ನರಕಂ ಧ್ರುವಂ ॥೧೨೯॥

ಅನ್ಯಸಾಧಾರಣಂ ಮತ್ವಾ ದೇವದೇವೋತ್ತಮಂ ಶಿವಂ ।
ಪಿಶಾಚತನವೋ ಭೂತ್ವಾ ವಸಂತಿ ಬಹವೋ ವನೇ ॥೧೩೦॥

---

ಬಳಿಕ ಕಣ್ಣುಗಳನ್ನು ಭಯಂಕರವಾಗಿ ಮರಳಿಸುತ್ತಾ ಕೋಪದಿಂದ ಉರಿಯುತ್ತಾ ಕೆಂಡದಂತೆ ದೃಷ್ಟಿಯುಳ್ಳವನಾದನು. ॥೧೨೬॥

ಕೂಡಲೇ ಯಮನು ತುಂಬಾ ವಕ್ರವೂ ಹರಿತವೂ ಆಗಿರುವ ಆಯುಧವನ್ನು ಬೆಂಕಿಯಲ್ಲಿ ಚೆನ್ನಾಗಿ ಕಾಯಿಸಿ, ಕಾದ ಆ ಆಯುಧವನ್ನು ಕೈಯಿಂದ ಹಿಡಿದುಕೊಂಡು ಎಲ್ಲರನ್ನೂ ನಡುಗಿಸುತ್ತಾ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಆ ಬ್ರಾಹ್ಮಣನ ನಾಲಿಗೆಯನ್ನು ಕೂಡಲೇ ಕತ್ತರಿಸಿಹಾಕಿದನಲ್ಲದೇ ಅವನನ್ನು ಭಯಂಕರವಾದ ನರಕಕ್ಕೆ ತಳ್ಳಿದನು. ॥೧೨೭-೧೨೮॥

ಆದ್ದರಿಂದ ಎಲೈ ದೇವತೆಗಳಿರಾ, ಮತ್ತಾರಿಗೂ ಸಮಾನನಾಗದ ದೇವೋತ್ತಮನಾದ ಮಹಾದೇವನನ್ನು ಇತರ ವಿಷ್ಣ್ವಾದಿ ದೇವತೆಗಳಿಗೆ ಸಮಾನನೆಂದು ತಿಳಿಯುವವನು ನಿಜವಾಗಿಯೂ ನರಕವನ್ನು ಹೊಂದುವನು. ॥೧೨೯॥

ದೇವದೇವೋತ್ತಮನೆನಿಸಿರುವ ಶಿವನನ್ನು ಬೇರೆ ದೇವತೆಗಳಂತೆ ಸಾಮಾನ್ಯನೆಂದು ತಿಳಿದು ಅನೇಕ ಮಂದಿ ಪಿಶಾಚಿಗಳಾಗಿ ಕಾಡಿನಲ್ಲಿ ಅಲೆಯುತ್ತಿರುವರು. ॥೧೩೦॥

॥ ವಿಷ್ಣುರುವಾಚ ॥

ಮನ್ಮೈವ ಪುತ್ರೋ ಮದನೋ ದೇವದೇವೋತ್ತಮಂ ಶಿವಂ ।
ಅನ್ಯಸಾಧಾರಣಂ ಮತ್ವಾ ದಗ್ಧ ಏವ ಹಿ ಸತ್ವರಂ ॥೧೩೧॥

ಯಥಾ ಪತಂತಿ ಶಲಭಾಃ ಪಾವಕೇ ನಕ್ತಮಂಜಸಾ ।
ತಥಾ ಪತಂತಿ ನರಕೇ ಶಿವದ್ರೋಹರತಾ ಜನಾಃ ॥೧೩೨॥

ಶಿವದ್ರೋಹಾತ್ಪರಂ ಪಾಪಂ ನಾಸ್ತಿ ಕುತ್ರಾಪಿ ಸರ್ವಥಾ ।
ತದ್ದ್ರೋಹೇಣಾತಿಘೋರೇಷು ನರಕೇಷು ಪತಿಷ್ಯತಿ ॥೧೩೩॥

ಪಾತಕಾನಾಂ ವಿಚಿತ್ರಾಣಾಂ ವಿಚಿತ್ರಾಯತನಾಃ ಸ್ಮೃತಾಃ ।
ವಿಚಿತ್ರಯಾತನಾಭಾಜೋ ವಿಚಿತ್ರಾ ಏವ ನಿಶ್ಚಿತಾಃ ॥೧೩೪॥

ಶಿವದ್ರೋಹರತೈರೇತಾಃ ಸರ್ವಾ ಏವ ಹಿ ಯಾತನಾಃ ।
ಭೋಕ್ತವ್ಯಾ ನಾತ್ರ ಸಂದೇಹಃ ಸತ್ಯಮೇವೋಚ್ಯತೇ ಮಯಾ॥೧೩೫॥

---

ನನ್ನ ಮಗನಾದ ಮನ್ಮಥನೇ ದೇವೋತ್ತಮನಾದ ಶಿವನನ್ನು ಸಾಮಾನ್ಯ ದೇವತೆಯೆಂದು ತಿಳಿದು ಅವನ ಮೇಲೆ ತನ್ನ ಬಾಣಪ್ರಯೋಗಮಾಡಿ ಕೂಡಲೇ ಸುಟ್ಟು ಭಸ್ಮವಾದನು. ॥೧೩೧॥

ರಾತ್ರಿಯ ವೇಳೆಯಲ್ಲಿ ಈಚಲು ಹುಳುಗಳು ಜಾಗ್ರತೆ ಬೆಂಕಿಗೆ ಬೀಳುವಂತೆ ಶಿವನಲ್ಲಿ ದ್ರೋಹಮಾಡಿದ ಜನಗಳು ಘೋರವಾದ ನರಕಗಳಲ್ಲಿ ಬಿದ್ದು ನರಳುವರು. ॥೧೩೨॥

ಎಲ್ಲಿಯೂ ಆ ಶಿವನಲ್ಲಿ ಮಾಡಿದ ಅಪರಾಧಕ್ಕಿಂತ ದೊಡ್ಡದಾದ ಪಾಪವು ಕಾಣುವುದೇ ಇಲ್ಲ. ಹಾಗೆ ಶಿವದ್ರೋಹಮಾಡುವುದರಿಂದ ಜನರು ತುಂಬಾ ಭಯಂಕರವಾದ ನರಕಗಳಲ್ಲಿ ಬಿದ್ದು ನರಳುವರು. ॥೧೩೩॥

ನಾನಾವಿಧವಾದ ವಿಚಿತ್ರ ಪಾಪಗಳಿಗೆ ವಿಚಿತ್ರಸ್ಥಾನವಾದ ಆಶ್ರಯಗಳೇ ಏರ್ಪಟ್ಟಿರುವುವು. ನಾನಾವಿಧವಾದ ವಿಚಿತ್ರ ಯಾತನೆಗಳನ್ನು ಹೊಂದಿರುವವರು ವಿಚಿತ್ರ ಪುರುಷರೆಂದೇ ಪ್ರಸಿದ್ಧರಾಗಿ ವಿಧವಿಧವಾದ ನರಕಗಳನ್ನು ಹೊಂದುವರು. ॥೧೩೪॥

ಶಿವದ್ರೋಹನಿರತರಾದವರು ಎಲ್ಲಾ ವಿಧವಾದ ನರಕಯಾತನೆಗಳನ್ನೂ ಅನುಭವಿಸಲೇಬೇಕೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲ. ॥೧೩೫॥

ಅನಂತಬ್ರಹ್ಮಹತ್ಯಾಭ್ಯೋ ಯಾವತ್ಪಾಪಮವಾಪ್ಯತೇ ।
ತಾವತ್ಪಾಪಂ ಶಿವದ್ರೋಹಾತ್ಪ್ರಾಪ್ತವ್ಯಂ ನಾತ್ರ ಸಂಶಯಃ ॥೧೩೬॥

ಶಿವೇ ಶಿವಾನ್ಯತುಲ್ಯತ್ವಧೀಃ ಶಿವದ್ರೋಹ ಉಚ್ಯತೇ ।
ತೇನ ದ್ರೋಹೇಣ ನರಕೇ ತಿಷ್ಠಂತಿ ಸತತಂ ಜನಾಃ ॥೧೩೭॥

ವಿಶ್ವಾಧಿಕಂ ಮಹಾರುದ್ರಂ ವಿಶ್ವಸ್ಯೇಶಾನಮವ್ಯಯಂ ।
ಕೋಽನ್ಯತುಲ್ಯತಯಾ ವೇದ ವಿನಾ ಚಂಡಾಲಯೋನಿಜಂ ॥೧೩೮॥

ಈಶಾನಂ ಸರ್ವವಿದ್ಯಾನಾಂ ಸರ್ವಭೂತೇಶ್ವರಂ ಶಿವಂ ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೩೯॥

ಸರ್ವಾಧಾರಮನಾಧಾರಂ ಹರಮಾದ್ಯಂತವರ್ಜಿತಂ ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೦॥

---

ಅಪಾರವಾದ ಬ್ರಹ್ಮಹತ್ಯಾದೋಷಗಳಿಂದ ಪ್ರಾಪ್ತವಾಗುವ ಪಾಪವು ಈ ಶಿವದ್ರೋಹದಿಂದಲೇ ಬರುವುದೆಂಬುದರಲ್ಲಿ ಸಂದೇಹವೇ ಇಲ್ಲ. ॥೧೩೬॥

ಶಿವದ್ರೋಹವೆಂದರೆ ಶಿವನಲ್ಲಿ ಶಿವೇತರವಾದ ದೇವತಾಸಾಮ್ಯವನ್ನು ಹೇಳುವುದು. ಈ ರೀತಿಯಾದ ಶಿವದ್ರೋಹಮಾಡುವುದರಿಂದ ಜನಗಳು ಅನವರತವೂ ನರಕದಲ್ಲಿ ನೆಲಸುವರು. ॥೧೩೭॥

ಜಗಚ್ಛ್ರೇಷ್ಠನೂ, ಜಗದೊಡೆಯನೂ, ನಾಶರಹಿತನೂ, ಆದ ಮಹಾರುದ್ರ ದೇವನನ್ನು ಚಂಡಾಲವಂಶದಲ್ಲಿ ಹುಟ್ಟಿದವನಲ್ಲದೇ ಮತ್ತಾರೂ ಇತರ ದೇವತೆಗಳಿಗೆ ಸಮಾನನೆಂದು ತಿಳಿಯಲಾರರು. ॥೧೩೮॥

ಸಕಲ ವಿದ್ಯೆಗಳಿಗೂ ಒಡೆಯನೂ, ಪಂಚಭೂತಮಯವಾದ ಸಕಲ ಪ್ರಾಣಿಗಳಿಗೂ ಸ್ವಾಮಿಯೂ ಆದ ಪರಶಿವನನ್ನು ಇತರ ದೇವತೆಗಳಿಗೆ ಸಮನೆಂದು ತಿಳಿಯುವನ ತಾಯಿಯು ವ್ಯಭಿಚಾರಿಣಿಯೆನಿಸುವಳು. (ಅಂದರೆ ಆತನು ಸತ್ಕುಲ ಪ್ರಸೂತನಾಗದೇ ವ್ಯಭಿಚಾರದಿಂದ ಜನಿಸಿದವನೆಂದು ತಿಳಿಯಬೇಕು.) ॥೧೩೯॥

ಸಕಲ ಬ್ರಹ್ಮಾಂಡಕ್ಕೂ ಆಧಾರನಾಗಿದ್ದರೂ, ತನಗೆ ಯಾವ ಆಧಾರವೂ ಇಲ್ಲದೇ ಸ್ವತಂತ್ರನಾಗಿರುವವನೂ, ಉತ್ಪತ್ತಿ ಮತ್ತು ನಾಶವಿಲ್ಲದವನೂ; ಭಕ್ತರ

ತ್ರಿಯಂಬಕಂ ಮಹಾದೇವಂ ಸಾಂಬಮವ್ಯಕ್ತಲಕ್ಷಣಂ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೧॥

ಅನಂತಂ ಶಂಕರಂ ಸಾಂಬಂ ಅಂಬಿಕಾಪ್ರಾಣವಲ್ಲಭಂ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೨॥

ಸೋಮಂ ರುದ್ರಂ ತಾಮ್ರಮೇಕಮರುಣಂ ಶಂಗಮಕ್ಷರಂ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೩॥

ಕರ್ಪೂರಗೌರಂ ವಿಶ್ವೇಶಂ ಸರ್ವಜ್ಞಂ ಮದನಾಂತಕಂ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೪॥

ಚಂದ್ರಚೂಡಂ ಸುರಾಧೀಶಮಪ್ರಮೇಯಮನಾಮಯಂ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೫॥

---

ಪಾಪಗಳನ್ನು ನಾಶಿಸುವವನೂ, ಆದ ಶಿವನನ್ನು ಇತರ ದೇವತೆಗಳಿಗೆ ಸಮಾನನೆಂದು ತಿಳಿಯುವವನ ತಾಯಿಯು ವ್ಯಭಿಚಾರಿಣಿಯೆನಿಸುವಳು. ॥೧೪೦॥

ಮುಕ್ಕಣ್ಣನೂ, ದೇವತೆಗಳಲ್ಲಿ ದೊಡ್ಡವನೂ, ಅಂಬಿಕಾರಮಣನೂ, ಮತ್ತೊಬ್ಬರಿಗೆ ಗೋಚರವಾಗದ ಸ್ವರೂಪವುಳ್ಳವನೂ, ನಾಶವಿಲ್ಲದವನೂ, ಮಂಗಳಕರನೂ, ಅಂಬಾಸಮೇತನೂ, ಅಂಬಿಕಾದೇವಿಯ ಪ್ರಾಣವಲ್ಲಭನೂ ಆದ ಶಿವನನ್ನು ಇತರ ದೇವತೆಗಳಿಗೆ ಸಮಾನನೆಂದು ತಿಳಿಯುವವನ ತಾಯಿಯು ಕುಲಟೆಯೆನಿಸುವಳು. ॥೧೪೧-೧೪೨॥

ಉಮಾಸಹಿತನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ತಾಮ್ರದಂತೆ ಕೆಂಪುಬಣ್ಣವುಳ್ಳವನೂ, ಅದ್ವಿತೀಯನೂ, ಅರುಣನಂತೆ ರಕ್ತವರ್ಣವುಳ್ಳವನೂ, ಸುಖಸ್ವರೂಪನೂ, ನಾಶರಹಿತನೂ, ಕರ್ಪೂರದಂತೆ ಶುಭ್ರವರ್ಣವುಳ್ಳವನೂ, ಜಗದೊಡೆಯನೂ, ಎಲ್ಲವನ್ನೂ ತಿಳಿದವನೂ, ಮನ್ಮಥಶತ್ರುವೂ, ಆದ ಶಿವನನ್ನು ಇತರ ದೇವತೆಗಳಿಗೆ ಸಮಾನವೆಂದು ತಿಳಿಯುವನ ತಾಯಿಯು ಜಾರಿಣಿಯೆನಿಸುವಳು. ॥೧೪೩-೧೪೪॥

ಚಂದ್ರಶೇಖರನೂ, ದೇವತಾಧಿಪತಿಯೂ, ಪ್ರಮಾಣರಹಿತನೂ, ಕಲ್ಮಷಶೂನ್ಯನೂ, ಗುಣರಹಿತನೂ, ಶಾಂತಸ್ವರೂಪನೂ, ಮಂಗಳಾಕಾರನೂ, ನಾಶವಿಲ್ಲ

ನಿಷ್ಕಲಂ ನಿರ್ಗುಣಂ ಶಾಂತಂ ಶಿವಮುಕ್ಷರಮವ್ಯಯಂ ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೬॥

ಅಷ್ಟಮೂರ್ತಿಂ ಮಹಾದೇವಂ ಸೃಷ್ಟಿಸ್ಥಿತ್ಯಂತಕಾರಿಣಂ ।
ಯೋಽನ್ಯತುಲ್ಯತಯಾ ವೇದ ತನ್ಮಾತಾ ವ್ಯಭಿಚಾರಿಣೀ ॥೧೪೭॥

ಕಲೌ ಕಲಿಹತಾ ಮರ್ತ್ಯಾಃ ದೇವದೇವೋತ್ತಮಂ ಶಿವಂ ।
ಅನ್ಯಸಾಧಾರಣಂ ಮತ್ವಾ ಯಾಸ್ಯಂತಿ ನರಕಂ ಧ್ರುವಂ ॥೧೪೮॥

ಜಗತಾಂ ಜನನೀ ಗೌರೀ ಯದ್ದೇವಾರ್ಧಾಂಗಭಾಗಿನೀ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೪೯॥

ಯಸ್ಯ ಪುತ್ರೋ ಗಣಾಧ್ಯಕ್ಷಃ ಸರ್ವವಿಘ್ನವಿನಾಶಕಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೦॥

---

ದವನೂ, ನಿತ್ಯನೂ, ಆದ ಶಿವನನ್ನು ಇತರ ದೇವತೆಗಳಿಗೆ ಸಮಾನವೆಂದು ತಿಳಿಯುವವನ ತಾಯಿಯು ವ್ಯಭಿಚಾರಿಣಿಯೆನಿಸುವಳು. ॥೧೪೪-೧೪೬॥

ಪೃಥಿವ್ಯಪ್ತೇಜೋವಾಯುರಾಕಾಶ, ಸೂರ್ಯ, ಚಂದ್ರ, ಮತ್ತು ಯಜಮಾನರೆಂಬ ಎಂಟುಮೂರ್ತಿಯುಳ್ಳವನೂ, ದೇವತೆಗಳಲ್ಲಿ ದೊಡ್ಡವನೂ, ಸೃಷ್ಟಿ, ಸ್ಥಿತಿ, ಸಂಹಾರಕಾರ್ಯವನ್ನು ಮಾಡುವವನೂ ಆದ ಪರಮೇಶ್ವರನನ್ನು ಇತರ ದೇವತೆಗಳಿಗೆ ಸಮಾನವಾಗಿ ತಿಳಿಯುವವನ ಮಾತೆಯು ವ್ಯಭಿಚಾರಿಣಿಯೆನಿಸುವಳು. ಈ ಕಲಿಯುಗದಲ್ಲಿ ಕಲಿಪಾಪದಿಂದ ಹೊಡೆಯಲ್ಪಟ್ಟ ಮಾನವರು, ದೇವೋತ್ತಮನಾದ ಶಿವನನ್ನು ಇತರ ದೇವತೆಗಳಂತೆ ಸಾಮಾನ್ಯನೆಂದು ತಿಳಿದು ನಿಶ್ಚಯವಾಗಿ ನರಕವನ್ನೈದುವರು. ॥೧೪೭-೧೪೮॥

ಜಗಜ್ಜನನಿಯಾದ ಗಿರಿಜಾದೇವಿಯೇ ಅರ್ಧಾಂಗಿಯೂ, ಸಕಲ ವಿಘ್ನಗಳನ್ನೂ ನಿವಾರಣಮಾಡುವ ಗಣಾಧಿಪತಿಯೇ ಪುತ್ರನೂ ಆಗಿರುವ ಆ ದೇವದೇವೋತ್ತಮನು ಇತರ ದೇವತೆಗಳಿಗೆ ಹೇಗೆ ಸಮನಾಗುವನು ? ಹೇಳು ನೋಡೋಣ ? ॥೧೪೯-೧೫೦॥

ಯಸ್ಯ ಪುತ್ರೋ ಮಹಾಸೇನಃ ಷಣ್ಮುಖೋಽಸುರಶಿಕ್ಷಕಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೧॥

ಯಸ್ಯ ಪ್ರಸಾದಲೇಶೇನ ವೈಕುಂಠಂ ಪ್ರಾಪ್ತವಾನಹಂ ।
ಸ ದೇವೋಽನ್ಯಾಸುರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೨॥

ಯದಾಜ್ಞಾವಶಗಂ ಸರ್ವಂ ಜಗತ್ಸ್ಥಾವರಜಂಗಮಂ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೩॥

ಯದ್ದ್ವಾರಪಾಲಕಾ ನಿತ್ಯಮಸ್ಮಾಕಮತಿಶಾಸಕಾಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೪॥

ಪಾತ್ರಂ ವೇತ್ರಪ್ರಹಾರಾಣಾಂ ಯದ್ದ್ವಾರಿ ವಯಮನ್ವಹಂ ।
ಸ ದೇವೋನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೫॥

ಯದ್ಭೃತ್ಯೈರೂರ್ಧ್ವಮುತ್ಪ್ರಾಪಿ ಪೃಥಿವೀ ಪೃಥುಶಕ್ತಿಭಿಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೬॥

---

ದೊಡ್ಡ ಸೈನ್ಯಯುಕ್ತನಾಗಿ ರಾಕ್ಷಸರನ್ನು ಶಿಕ್ಷೆಮಾಡುವ ಷಣ್ಮುಖನನ್ನೇ ಮಗನನ್ನಾಗಿ ಹೊಂದಿರುವ ಆ ಮಹಾದೇವನು ಇತರ ದೇವತೆಗಳಿಗೆ ಹೇಗೆ ಸಮಾನನಾದಾನು? ಯಾರ ಅನುಗ್ರಹಲೇಶದಿಂದ ನಾನು ವೈಕುಂಠಲೋಕವನ್ನು ಪಡೆದೆನೋ ಆ ದೇವದೇವನು ಮತ್ತೊಬ್ಬ ಸಾಮಾನ್ಯದೇವತೆಯ ಸಮನಾಗಬಲ್ಲನೆ? ಹೇಳು. ॥೧೫೧-೧೫೨॥

ಸ್ಥಾವರಜಂಗಮಾತ್ಮಕವಾದ ಈ ಸಕಲ ಪ್ರಪಂಚವೂ ಯಾರ ಅಪ್ಪಣೆಗೆ ಒಳಪಟ್ಟಿರುವುದೋ, ಯಾರ ದ್ವಾರಪಾಲಕರೇ ನಮ್ಮನ್ನು ನಿತ್ಯವೂ ವಿಶೇಷವಾಗಿ ಶಿಕ್ಷಿಸುತ್ತಿರುವರೋ ಆ ದೇವದೇವನು ಹೇಗೆತಾನೇ ಇತರ ದೇವತೆಗಳಿಗೆ ಸಮಾನನಾದಾನು? ॥೧೫೩-೧೫೪॥

ಯಾವ ದೇವನ ಮನೆಯಬಾಗಿಲಲ್ಲಿ ನಿಂತಿರುವ ಭಟರು ನಮ್ಮನ್ನೆಲ್ಲಾ ಪ್ರತಿದಿನವೂ ತಮ್ಮ ಕೈಯಲ್ಲಿರುವ ಬೆತ್ತದಿಂದ ಬೆದರಿಸುತ್ತಿರುವರೊ, ಅಲ್ಲದೇ ಅಪಾರವಾದ ಶಕ್ತಿಯುಳ್ಳ ಯಾರ ಭಟರು ಈ ಭೂಮಿಯನ್ನೇ ಮೇಲಕ್ಕೆ ಸಾಗಿಸಿದ್ದರೋ ಆ ದೇವದೇವನು ಇತರ ದೇವತೆಗಳಿಗೆ ಸಮನಾಗುವನೇ? ಹೇಳು. ॥೧೫೫-೧೫೬॥

ಯಸ್ಯೈಶ್ವರ್ಯಾಣ್ಯನಂತಾನಿ ಯಸ್ತು ದೇವಶಿಖಾಮಣಿಃ ।
ಸ ದೇವೋಽನ್ಯಾಮರ್ತ್ಯೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೭॥

ಯಸ್ಯ ನಿಶ್ವಸಿತಂ ವೇದಾಃ ನಾನಾಶಾಖಾವಿಜೃಂಭಿತಾಃ ।
ಸ ದೇವೋಽನ್ಯಾಮರ್ತ್ಯೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೮॥

ಯಲ್ಲಿಂಗಾರ್ಚನಮಾತ್ರೇಣ ತ್ರೈಲೋಕ್ಯಶ್ರೀರವಾಪ್ಯತೇ ।
ಸ ದೇವೋಽನ್ಯಾಮರ್ತ್ಯೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೫೯॥

ಯದ್ಧ್ಯಾನಾತ್ಪ್ರಾಪ್ಯತೇ ಮರ್ತ್ಯೈರ್ಮುಕ್ತಿಕಾಂತಾಽತಿದುರ್ಲಭಾ ।
ಸ ದೇವೋಽನ್ಯಾಮರ್ತ್ಯೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೦॥

ಯತಂತೇ ಯೋಗಿನಃ ಸರ್ವೇ ಯಮುಪಾಸಿತುಮನ್ವಹಂ ।
ಸ ದೇವೋಽನ್ಯಾಮರ್ತ್ಯೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೧॥

ಯಜಂತಿ ಯೋಗೈರ್ವಿವಿಧೈರ್ಯಜ್ವನೋಽಯಮನಾಮಯಂ ।
ಸ ದೇವೋಽನ್ಯಾಮರ್ತ್ಯೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೨॥

---

ಅಪಾರವಾದ ಐಶ್ವರ್ಯಗಳಿಂದ ಕೂಡಿ, ದೇವತೆಗಳಿಗೆಲ್ಲಾ ಚೂಡಾರತ್ನದಂತೆ ಪ್ರಮುಖನಾಗಿರುವವನೂ, ಅನೇಕ ಶಾಖೆಗಳಿಂದ ಯುಕ್ತವಾದ ವೇದಗಳನ್ನೆ ತನ್ನ ನಿಟ್ಟುಸಿರಿನ ರೂಪವಾಗಿ ಹೊಂದಿರುವವನೂ ಆದ ಆ ದೇವದೇವನು ಇತರ ದೇವತೆಗಳಿಗೆ ಸಮವಾಗಲು ಹೇಗೆ ಸಾಧ್ಯವಾದೀತು? ನೀನು ಹೇಳು. ॥೧೫೭-೧೫೮॥

ತನ್ನ ಲಿಂಗಪೂಜಾಮಾತ್ರದಿಂದಲೇ ಮೂರು ಲೋಕದ ಸಂಪತ್ತನ್ನೂ ಭಕ್ತರಿಗೆ ಕೊಡುವವನೂ, ಧ್ಯಾನಮಾತ್ರದಿಂದ ಮಾನವರಿಗೆ ಸುಲಭಸಾಧ್ಯವಲ್ಲದ ಮೋಕ್ಷವನಿತೆಯನ್ನೇ ಕರುಣಿಸುವವನೂ ಆದ ಆ ಮಹಾದೇವನು ಇತರ ದೇವತೆಗಳಿಗೆ ಹೇಗೆತಾನೆ ಸರಿಸಮನಾದಾನು? ನೀನೇ ಹೇಳುವವನಾಗು. ॥೧೫೯-೧೬೦॥

ಯೋಗಿಗಳೆಲ್ಲರೂ ಯಾರನ್ನು ಉಪಾಸನೆಮಾಡಲು ಪ್ರತಿದಿನವೂ ಪ್ರಯತ್ನಿಸುತ್ತಿರುವರೋ, ನಾನಾವಿಧವಾದ ಯೋಗಗಳಿಂದ ಯೋಗಫಲವನ್ನು ಸಾಧಿಸುವ ಮುನಿಗಳು ಹವಿಸ್ಸನ್ನು ಅರ್ಪಿಸಿ ಯಾರಿಂದ ಇಷ್ಟಾರ್ಥವನ್ನು ಹೊಂದುವರೋ ಆ ದೇವನು ಇತರ ದೇವತೆಗಳಿಗೆ ಹೇಗೆ ಸಮಾನನಾದಾನು? ॥೧೬೧-೧೬೨॥

ಯಸ್ಯ ನ ಜ್ಞಾಯತೇ ತತ್ತ್ವಮನಂತೈರಪಿ ಸಾಧನೈಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೩॥

ಯಃ ಕಲ್ಪಾಂತೇಽಖಿಲಾನಸ್ಮಾನ್ಸಂಹೃತ್ಯೈಕೋ ಹಿ ತಿಷ್ಠತಿ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೪॥

ಯದ್ವಾಮಾಂಗಾದಹಂ ಜಾತೋ ದಕ್ಷಿಣಾಂಗಾದ್ಭವಾನ್ವಿಧೇ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೫॥

ಲಲಾಟಾತ್ಕಾಲರುದ್ರಾಖ್ಯೋ ಸಂಹರ್ತಾ ಸ ಚರಾಚರಂ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೬॥

ಯತ್ರ ನೇತ್ರತ್ರಯಂ ಶುದ್ಧಂ ಸೋಮಸೂರ್ಯಾಗ್ನಿಸಂಜ್ಞಿತಂ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೭॥

ಯಸ್ತ್ವಪ್ರಮೇಯವಿಭವೋ ಯೋಽನನ್ಯಶರಣಪ್ರಿಯಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೮॥

---

ನಾನಾವಿಧವಾದ ಸಾಧನೆಗಳಿಂದಲೂ ತಿಳಿಯಲಸಾಧ್ಯವಾದ ಸ್ವರೂಪವುಳ್ಳವನೂ, ಕಲ್ಪದ ಕೊನೆಯಲ್ಲಿ ಸಕಲ ಪ್ರಪಂಚವನ್ನೂ ಸಂಹಾರಮಾಡಿ ತಾನೊಬ್ಬನೇ ಲೀಲೆಯಿಂದ ವಿಹರಿಸುವವನೂ ಆದ ಆ ದೇವದೇವನು ಇತರ ದೇವತೆಗಳಿಗೆ ಹೇಗೆ ಸರಿಸಮನಾಗಿಯಾನು ಹೇಳು ? ॥೧೬೩-೧೬೪॥

ಯಾವ ದೇವನ ಶರೀರದ ಎಡಭಾಗದಿಂದ ನಾನೂ (ವಿಷ್ಣುವೂ) ಬಲಭಾಗದಿಂದ ಬ್ರಹ್ಮನೆನಿಸಿದ ನೀನೂ, ಹಣೆಯಿಂದ ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚವನ್ನೂ ಸಂಹಾರಮಾಡುವ ರುದ್ರನೂ ಜನಿಸಿದೆವೋ ಆ ದೇವದೇವನು ಹೇಗೆ ಇತರ ದೇವತೆಗಳಿಗೆ ಸಮಾನನೆನಿಸುವನು ? ॥೧೬೫-೧೬೬॥

ಚಂದ್ರ, ಸೂರ್ಯ, ಅಗ್ನಿ ಈ ರೀತಿಯಾದ ಮೂರು ಪರಿಶುದ್ಧವಾದ ಕಣ್ಣುಗಳುಳ್ಳವನೂ, ಪ್ರಮಾಣಕ್ಕೆ ಸಿಗದ ವೈಭವವುಳ್ಳವನೂ, ತನ್ನನ್ನು ಬಿಟ್ಟು ಬೇರೆ ದೇವತೆಗಳಲ್ಲಿ ಶರಣುಹೊಂದದವರಿಗೆ ಪ್ರೀತಿಯನ್ನು ತೋರಿಸುವವನೂ ಆದ ಆ ಮಹಾದೇವನು ಇತರ ದೇವತೆಗಳಿಗೆ ಹೇಗೆ ಸಮನಾದಾನು ? ॥೧೬೭-೧೬೮॥

ಯಃ ಶಾಸ್ತಾ ಸರ್ವದೇವಾನಾಂ ಪಿತಾ ಮಾತಾ ಚ ರಕ್ಷಕಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೬೯॥

ಯಸ್ತು ದಾಪಯಿತಾ ಭೋಜ್ಯಂ ಭೋಗೋ ಭೋಜಕ ಏವ ಚ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೭೦॥

ಯಸ್ತ್ವಪ್ರಮೇಯವಿಭವೋ ಯೋಽನನ್ಯಶರಣಪ್ರಿಯಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೭೧॥

ಯಃ ಶಾಸ್ತಾ ಸರ್ವದೇವಾನಾಂ ಪಿತಾ ಮಾತಾ ಚ ರಕ್ಷಕಃ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೭೨॥

ಯಃ ಸತ್ಯಂ ಜ್ಞಾನಮಾನಂದೋ ವಿಜ್ಞಾನಂ ಜ್ಞೇಯಮೇವ ಚ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೭೩॥

ಯಃ ಸಾಕ್ಷೀ ಪರಮಾದ್ವೈತಂ ಪರಂ ಬ್ರಹ್ಮ ಪರಾತ್ಪರಂ ।
ಸ ದೇವೋಽನ್ಯಾಮರೈಸ್ತುಲ್ಯೋ ಭವಿಷ್ಯತಿ ಕಥಂ ವದ ॥೧೭೪॥

---

ಎಲ್ಲಾ ದೇವತೆಗಳನ್ನೂ ಅವರವರ ಕಾರ್ಯಗಳಲ್ಲಿ ನಿಯಮಿಸುವವನೂ ಸರ್ವರಿಗೂ ತಂದೆ, ತಾಯಿ ಮತ್ತು ಪೋಷಕನೆನಿಸಿರುವವನೂ, ಎಲ್ಲರಿಗೂ ಆಹಾರಪದಾರ್ಥವನ್ನು ಒದಗಿಸುವವನೂ, ತಾನೇ ಭೋಗಸ್ವರೂಪನಾಗಿರುವನೂ, ಅಲ್ಲದೇ ಊಟಮಾಡುವನೂ ತಾನೇ ಆಗಿರುವನೂ ಆದ ಆ ದೇವದೇವನು ಇತರ ದೇವತೆಗಳಿಗೆ ಹೇಗೆ ತಾನೇ ಸಮಾನನೆನಿಸಿಯಾನು ? ॥೧೬೯-೧೭೦॥

ಎಣಿಕೆಗೆ ಸಿಕ್ಕದ ವೈಭವವುಳ್ಳವನೂ, ತನ್ನನ್ನೇ ಮರೆಹೊಕ್ಕವರಲ್ಲಿ ಪ್ರೀತಿಯುಳ್ಳವನೂ, ದೇವತೆಗಳನ್ನೆಲ್ಲಾ ತಂದೆ ತಾಯಿ ಮತ್ತು ಪೋಷಕರಂತೆ ಕಾಪಾಡುವವನೂ ಆದ ದೇವದೇವನು ಮತ್ತಾವ ದೇವತೆಗಳಿಗೂ ಸಮಾನನಾಗಲಾರನು. ॥೧೭೧-೧೭೨॥

ಸತ್ಯಸ್ವರೂಪನೂ, ಜ್ಞಾನಸ್ವರೂಪನೂ, ಆನಂದಮಯನೂ, ವಿಜ್ಞಾನ ರೂಪಿಯೂ, ತಿಳಿಯಲು ಯೋಗ್ಯನಾದವನೂ, ಸಕಲ ಕರ್ಮಗಳನ್ನೂ ಪ್ರತ್ಯಕ್ಷವಾಗಿ ನೋಡುವವನೂ, ಉತ್ತಮವಾದ ಅದ್ವೈತಸ್ವರೂಪವುಳ್ಳವನೂ, ಪರಬ್ರಹ್ಮನೆನಿಸಿ

ಅತಃ ಸರ್ವಾಮರಾಧಾರಃ ಶಂಕರಃ ಕರುಣಾಕರಃ ।
ಪೂಜನೀಯಃ ಪ್ರಯತ್ನೇನ ಚತುರ್ವರ್ಗಫಲಾರ್ಥಿಭಿಃ ॥೧೭೫॥

ಶಿವಸ್ಮೃತೇರನಾಯಾಸಾನ್ಮೋಕ್ಷಲಕ್ಷ್ಮೀರವಾಪ್ಯತೇ ।
ಅತೋ ನ ತಂ ವಿಹಾಯಾನ್ಯಃ ಸ್ಮರ್ತವ್ಯೋ ಮುಕ್ತಿಕಾಂಕ್ಷಿಭಿಃ॥೧೭೬॥

ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ।
ತತ್ಪೂಜಯಾ ಮೋಕ್ಷಲಕ್ಷ್ಮೀಃ ಪ್ರಾಪ್ತವ್ಯಾ ನಾತ್ರಸಂಶಯಃ॥೧೭೭॥

ತಮಾಪದೋ ನ ಸ್ಪೃಶಂತಿ ಯೋ ನಿತ್ಯಂ ಶಿವಪೂಜಕಃ ।
ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ॥೧೭೮॥

ತಮೇವ ಭಜತೇ ಲಕ್ಷ್ಮೀರ್ಯೋ ನಿತ್ಯಂ ಶಿವಪೂಜಕಃ ।
ತಮೇವ ಸರ್ವೇ ಸೇವಂತೇ ಯೋ ನಿತ್ಯಂ ಶಿವಪೂಜಕಃ ॥೧೭೯॥

---

ದವನೂ, ಪರಮೋತ್ಕೃಷ್ಟನೂ ಆಗಿರುವ ಆ ಮಹಾದೇವನು ಇತರ ದೇವತೆಗಳಿಗೆ ಹೇಗೆ ಸಮಾನವಾಗುವನು ? ॥೧೭೩-೧೭೪॥

ಸಕಲ ದೇವತೆಗಳಿಗೂ ಆಧಾರಭೂತನೂ, ಲೋಕಮಂಗಳವನ್ನುಂಟು ಮಾಡುವವನೂ, ದಯಾಸಮುದ್ರನೂ ಆದ ಶಿವನನ್ನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನು ಅಪೇಕ್ಷಿಸುವವರು ಪ್ರಯತ್ನಪೂರ್ವಕವಾಗಿ ಪೂಜೆಮಾಡಬೇಕು. ಆ ಪರಶಿವನ ಸ್ಮರಣೆಯಿಂದ ಸುಲಭವಾಗಿ ಮೋಕ್ಷ ಸಂಪತ್ತು ಲಭಿಸುವುದರಿಂದ ಮೋಕ್ಷಾಪೇಕ್ಷಿಗಳಾದವರು ಅವನನ್ನು ಬಿಟ್ಟು ಬೇರೆ ಯಾವ ದೇವತೆಯನ್ನೂ ಸ್ಮರಣೆಮಾಡಬಾರದು. ॥೧೭೫-೧೭೬॥

ಆ ದೇವನನ್ನು ಪೂಜೆಮಾಡುವುದರಿಂದ ನಿಶ್ಚಯವಾಗಿ ಮೋಕ್ಷಲಕ್ಷ್ಮಿಯು ಹಸ್ತಗತವಾಗುವಳು. ಅಲ್ಲದೇ ನಿತ್ಯವೂ ಶಿವನನ್ನು ಭಕ್ತಿಯಿಂದ ಪೂಜಿಸುವವನಿಗೆ ಯಾವ ಆಪತ್ತುಗಳೂ (ತೊಂದರೆಗಳೂ) ಹತ್ತಿರಕ್ಕೂ ಸುಳಿಯಲಾರವಾದ್ದರಿಂದ ಬೇರೆ ಕೆಲಸಗಳನ್ನೆಲ್ಲಾ ಬಿಟ್ಟು ಆ ಶಂಕರನನ್ನು ಆದರದಿಂದ ಪೂಜೆಮಾಡು. ॥೧೭೭-೧೭೮॥

ನಿತ್ಯವೂ ಶಿವನನ್ನು ಪೂಜೆಮಾಡುವವನನ್ನೇ ಲಕ್ಷ್ಮಿಯೂ, ಇತರದೇವತೆಗಳೂ ಪ್ರೀತಿಪೂರ್ವಕವಾಗಿ ಸೇವಿಸುವರು. ಆ ಮಹಾನುಭಾವನೇ ಮಕ್ಕಳು ಮತ್ತು

ಸ ಏವ ಪುತ್ರಪೌತ್ರಾಢ್ಯೋ ಯೋ ನಿತ್ಯಂ ಶಿವಪೂಜಕಃ ।
ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ॥೧೮೦॥

ಸ ಏವಾಶ್ರಯತಾಂ ಯಾತಿ ಯೋ ನಿತ್ಯಂ ಶಿವಪೂಜಕಃ ।
ಸ ಏವ ಪುಣ್ಯನಿಲಯೋ ಯೋ ನಿತ್ಯಂ ಶಿವಪೂಜಕಃ ॥೧೮೧॥

ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ।
ಸ ಏವ ಸರ್ವಧರ್ಮಾಣಾಮಾಶ್ರಯಃ ಸತತಂ ವಿಧೇ ॥೧೮೨॥

ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ।
ಸ ಏವ ಭಗವಾನ್ ಬ್ರಹ್ಮನ್ಯೋ ನಿತ್ಯಂ ಶಿವಪೂಜಕಃ ॥೧೮೩॥

ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ।
ಸ ಏವ ಲಭತೇ ಮೋಕ್ಷಂ ಯೋ ನಿತ್ಯಂ ಶಿವಪೂಜಕಃ ॥೧೮೪॥

---

ಮುಮ್ಮಕ್ಕಳನ್ನು ಹೊಂದಿ ಸಂತೋಷಭರಿತನಾಗುವನಾದ್ದರಿಂದ, ಇತರ ಕೆಲಸಗಳನ್ನೆಲ್ಲಾ ಬಿಟ್ಟು ಮೊದಲು ಆದರದಿಂದ ಆ ಪರಶಿವನನ್ನು ಪೂಜೆಮಾಡು. ॥೧೭೯-೧೮೦॥

ಅನವರತವೂ ಆ ಶಿವನನ್ನು ಪೂಜೆಮಾಡುವವನೇ ಎಲ್ಲರಿಗೂ ಆಶ್ರಯನಾಗುವನು. ಪುಣ್ಯಗಳಿಗೆಲ್ಲಾ ನೆಲೆಯೂ ಅವನೇ ಎನಿಸುವನು. ಸಕಲ ಧರ್ಮಗಳಿಗೂ ಆತನೇ ಆಶ್ರಯನಾಗಿರುವುದರಿಂದ ಎಲೈ ಬ್ರಹ್ಮನೇ! ಯಾವಾಗಲೂ ನಿನ್ನ ಇತರ ಕೆಲಸಗಳನ್ನೆಲ್ಲಾ ಬಿಟ್ಟು ಮುಖ್ಯವಾಗಿ ಆ ಶಂಕರನನ್ನೇ ಭಕ್ತಿಯಿಂದ ಪೂಜೆ ಮಾಡು. ॥೧೮೧-೧೮೨॥

ನಿತ್ಯವೂ ಶಿವನನ್ನು ಪೂಜಿಸುವವನೇ ಷಡ್ಗುಣೈಶ್ವರ್ಯಸಂಪನ್ನನಾದ ಬ್ರಾಹ್ಮಣನು. ಅನವರತವೂ ಆತನಿಗೇ ಮೋಕ್ಷಸುಖವು ಪ್ರಾಪ್ತವಾಗುವುದಾದ್ದರಿಂದ ಆ ಶಂಕರನನ್ನೇ ಇತರ ಕೆಲಸಗಳನ್ನೆಲ್ಲಾ ಬಿಟ್ಟು ಮುಖ್ಯವಾಗಿ ಪೂಜೆಮಾಡು. ॥೧೮೩-೧೮೪॥

ಅತಃ ಕಾರ್ಯಂ ವಿಹಾಯಾನ್ಯತ್ಕುರು ಶಂಕರಪೂಜನಂ ।
ಆಲೋಡ್ಯ ವೇದಾನಖಿಲಾನ್ಸಾರಮೇತತ್ಸಮುದ್ಧೃತಂ ॥೧೮೫॥

ಶಿವಪೂಜನಮೇವೇದಂ ಚತುರ್ವರ್ಗಫಲಪ್ರದಂ ।
ಶಿವಸ್ಯಾಭ್ಯರ್ಚನಾತ್ಪುಂಸಾಂ ಕಿಮಲಭ್ಯಂ ಜಗತ್ತ್ರಯೇ ॥೧೮೬॥

ಯತ್ಪೂಜನಾನ್ಮೋಕ್ಷಲಕ್ಷ್ಮೀಃ ಸುಲಭಾ ದುರ್ಲಭಾಽಪಿ ಸಾ ।
ಅಸ್ಮಾಕಂ ತು ಶಿವಾದನ್ಯೋ ನಾಸ್ತಿ ಸಂರಕ್ಷಕಸ್ತತಃ ॥೧೮೭॥

ವ್ರಜಾಮಃ ಶರಣಂ ಸಾಂಬಂ ಶಂಕರಂ ಕರುಣಾಕರಂ ।
ಶಿವೋಽಸ್ಮಾಕಂ ಧನಂ ದಾತಾ ಶಿವೋಽಸ್ಮಾಕಂ ಪ್ರಭುಃ ಪಿತಾ ॥೧೮೮॥

ಶಿವೋಽಸ್ಮಾಕಂ ಪರಂ ಸೇವ್ಯಃ ಸತ್ಯಂ ಸತ್ಯಂ ಮಯೋಚ್ಯತೇ ।
ಸ್ಮರ್ತವ್ಯಃ ಪಾರ್ವತೀನಾಥಃ ಕರ್ತವ್ಯಂ ಶಿವಪೂಜನಂ ॥೧೮೯॥

ಸ್ಥಾತವ್ಯಂ ಶಂಕರಸ್ಥಾನೇ ಮರ್ತವ್ಯಂ ಶಿವಸನ್ನಿಧೌ ॥೧೯೦॥

---

ಎಲ್ಲಾ ವೇದಗಳನ್ನೂ ಚೆನ್ನಾಗಿ ಶೋಧಿಸಿ, ಸಾರವನ್ನು ಹುಡುಕಿ ಹೇಳುವೆನು. ಈ ಶಿವಪೂಜೆಯು ನಿಜವಾದ ಧರ್ಮಾರ್ಥಕಾಮಮೋಕ್ಷಗಳೆಂಬ ಫಲವನ್ನು ಕೊಡ ಬಲ್ಲದು. ಆ ಪರಶಿವನ ಪೂಜೆಮಾಡುವುದರಿಂದ ಪುರುಷರಿಗೆ ಈ ಮೂರುಲೋಕ ಗಳಲ್ಲಿ ಯಾವುದೂ ದುರ್ಲಭವಾಗುವುದಿಲ್ಲವಾದ್ದರಿಂದ ಮಿಕ್ಕಕಾರ್ಯಗಳನ್ನೆಲ್ಲಾ ಬಿಟ್ಟು ಮೊದಲು ಆ ಶಂಕರನನ್ನು ಭಕ್ತಿಯಿಂದ ಪೂಜೆಮಾಡು. ॥೧೮೫-೧೮೬॥

ಅತ್ಯಂತ ಕಷ್ಟದಿಂದ ಹೊಂದಲು ಶಕ್ಯವಾದ ಮೋಕ್ಷಲಕ್ಷ್ಮಿಯೂ ಸಹ ಯಾವ ದೇವನ ಪೂಜೆಯಿಂದ ಅನಾಯಾಸವಾಗಿ ದೊರೆಯುವುದೋ ಅಂತಹ ಪರಶಿವನನ್ನು ಬಿಟ್ಟು ನಮಗೆ ಮತ್ತಾರೂ ರಕ್ಷಕರೇ ಇಲ್ಲ. ॥೧೮೭॥

ಅಂಬಿಕಾರಮಣನೂ, ದಯಾಸಮುದ್ರನೂ ಆದ ಆ ಶಂಕರನನ್ನೇ ನಾವು ಶರಣುಹೊಂದೋಣ. ಆ ಪರಶಿವನೇ ನಮಗೆ ಧನವೂ, ದಾತೃವೂ, ಪ್ರಭುವೂ ತಂದೆಯೂ ಸಹ ಆಗಿರುವನು. ॥೧೮೮॥

ಶ್ರೇಷ್ಠನಾದ ಆ ಶಿವನನ್ನೇ ನಾವು ಸತ್ಯವಾಗಿ ಸೇವೆಮಾಡಬೇಕು. ಆ ಪಾರ್ವತೀರಮಣನನ್ನೇ ಸ್ಮರಣೆಮಾಡಬೇಕು. ಅವಶ್ಯವಾಗಿ ಎಲ್ಲರೂ ಆ ಶಿವನನ್ನೇ

ಯಸ್ಯ ಸ್ವರ್ಗಾಪವರ್ಗೇಚ್ಛಾ ತೇನ ಪೂಜ್ಯಃ ಸದಾ ಶಿವಃ ।
ಸ್ವತಂತ್ರಃ ಪಾರ್ವತೀನಾಥೋ ಯತಃ ಸ್ವರ್ಗಾಪವರ್ಗದಃ ॥೧೯೧॥

ರಹಸ್ಯಂ ಶೃಣು ವಕ್ಷ್ಯಾಮಿ ಗೋಪನೀಯಂ ಪ್ರಯತ್ನತಃ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಕ್ತೋ ಮುಕ್ತಿಂ ಚ ವಿಂದತಿ ॥೧೯೨॥

ಪುರಾ ತು ಹಿಮವತ್ಪ್ರಾಂತೇ ಕಶ್ಚಿದಾಸೀದ್ದ್ವಿಜೋತ್ತಮಃ ।
ಲಿಂಗಪೂಜಾದರೋ ನಿತ್ಯಂ ನಿಷ್ಕಾಮಃ ಶಂಕರಪ್ರಿಯಃ ॥೧೯೩॥

ಐಹಿಕಾಮುಷ್ಮಿಕಾನ್ಭೋಗಾನವಧಾರ್ಯ ಶಿವಾರ್ಚಕಃ ।
ಸರ್ವದಾ ಬಿಲ್ವಪತ್ರಾದ್ಯೈರರ್ಚಯಾಮಾಸ ಶಂಕರಂ ॥೧೯೪॥

---

ಪೂಜಿಸಬೇಕು. ।ಶಂಕರನು ನೆಲಸಿರುವ ಕಡೆಯಲ್ಲಿಯೇ ವಾಸಿಸುತ್ತಾ ಕೊನೆಗೆ ಆ ಶಿವನ ಸನ್ನಿಧಾನದಲ್ಲಿಯೇ ಮರಣಹೊಂದಬೇಕು. ॥೧೮೯-೧೯೦॥

ಸ್ವರ್ಗ, ಮೋಕ್ಷಗಳನ್ನು ಅಪೇಕ್ಷಿಸುವವನು ನಿತ್ಯಮಂಗಳಸ್ವರೂಪನಾದ ಆ ಪರಮೇಶ್ವರನನ್ನು ಪೂಜೆಮಾಡಬೇಕು. ಆ ಪಾರ್ವತೀರಮಣನು ಸ್ವತಂತ್ರನಾದ್ದರಿಂದ ಈ ಸ್ವರ್ಗ ಮತ್ತು ಮೋಕ್ಷರೂಪವಾದ ಫಲಗಳನ್ನು ಅವನು ಕೊಡಬಲ್ಲನು. ॥೧೯೧॥

ಅಯ್ಯ ವಿಧಿಯೇ, ಗುಟ್ಟಾಗಿ ನಿಯಮದಿಂದ ರಕ್ಷಿಸುವಂತಹ ಒಂದು ರಹಸ್ಯವನ್ನು ಹೇಳುತ್ತೇನೆ ಕೇಳು. ಈ ರಹಸ್ಯವನ್ನು ಕೇಳುವುದರಿಂದ ಮಾನವನು ಸಕಲ ಪಾಪಗಳನ್ನೂ ಕಳೆದುಕೊಳ್ಳುವನಲ್ಲದೇ ಕೊನೆಗೆ ಮೋಕ್ಷವನ್ನೂ ಹೊಂದುವನು. ॥೧೯೨॥

ಹಿಂದೆ ಹಿಮಾಲಯಪರ್ವತಪ್ರದೇಶದಲ್ಲಿ ಲಿಂಗಪೂಜಾತತ್ಪರನೂ, ಶಂಕರನಿಗೆ ಪ್ರೀತಿಪಾತ್ರನಾದವನೂ ಆದ ಒಬ್ಬ ಬ್ರಾಹ್ಮಣೋತ್ತಮನು ನಿತ್ಯವೂ ಯಾವ ಅಪೇಕ್ಷೆಯೂ ಇಲ್ಲದೆ ಶಿವಪೂಜಾಧುರಂಧರನಾಗಿದ್ದನು. ಆ ಶಿವಪೂಜಾನಿರತನು ಇಹಪರಭೋಗಗಳೆಲ್ಲವೂ ಆ ಶಂಕರನಿಂದಲೇ ಬರುವುದೆಂದು ತಿಳಿದು ಆ ದೇವದೇವನನ್ನೇ ಯಾವಾಗಲೂ ಬಿಲ್ವಪತ್ರೆ ಮೊದಲಾದ ಪೂಜಾಸಾಧನಗಳಿಂದ ಪೂಜೆ ಮಾಡುತ್ತಿದ್ದನು. ॥೧೯೩-೧೯೪॥

ಉದ್ಧೂಳನತ್ರಿಪುಂಡ್ರಾಭ್ಯಾಮಲಂಕೃತ್ಯ ತನುಂ ಮುದಾ ।
ರುದ್ರಾಕ್ಷೈರಪ್ಯಲಂಕೃತ್ಯ ಧ್ಯಾತ್ವೇಶಂ ಸ ತು ಸಂಸ್ಥಿತಃ ॥೯೫॥

ರುದ್ರಾಕ್ಷಕಂಕಣೋ ನಿತ್ಯಂ ವಹನ್ರುದ್ರಾಕ್ಷಮಾಲಿಕಾಂ ।
ಪಂಚಾಕ್ಷರಂ ಪರಂ ಮಂತ್ರಂ ಜಜಾಪಾಯಮಪನಿರ್ಶಂ ॥೯೬॥

ಪೂಜಯಿತ್ವಾ ಮಹಾದೇವಂ ನೃತ್ಯತ್ಯಗ್ರೇ ಪಿನಾಕಿನಃ ।
ಆಸ್ವೇದಮತಿಯತ್ನೇನ ಕರತಾಡನಪೂರ್ವಕಂ ॥೯೭॥

ಸ್ತೌತಿ ಶಂಭುಂ ಕೃಪಾಸಿಂಧುಂ ಸರ್ವದೇವಶಿಖಾಮಣಿಂ ।
ಅನನ್ಯಶರಣೋ ನಿತ್ಯಂ ಶಿವೈಕಶರಣೋ ಮುದಾ ॥೯೮॥

ಏವಂ ಪ್ರತ್ಯಹಮಾರಾಧ್ಯಮಾರಾಧಯತಿ ಶಂಕರಂ ।
ಕಾರ್ಯಾಂತರಂ ವಿಹಾಯೈವ ಜಾಡ್ಯಲೇಶವಿವರ್ಜಿತಃ ॥೯೯॥

ಜಲೈಃ ಶುದ್ಧೈರ್ಮಹಾದೇವಂ ಅಭಿಷಿಚ್ಯ ಪುನಃ ಪುನಃ ।
ಮುಹುರ್ಮುಹುರ್ಬಿಲ್ವಪತ್ರೈರಭ್ಯರ್ಚಯತಿ ಶಂಕರಂ ॥೧೦೦॥

---

ಭಸ್ಮೋದ್ಧೂಳನ ತ್ರಿಪುಂಡ್ರಧಾರಣೆಯಿಂದ ಸಂತೋಷವಾಗಿ ಈ ಶರೀರವನ್ನು ಸುಂದರವಾಗಿ ಅಲಂಕರಿಸಿಕೊಂಡು, ರುದ್ರಾಕ್ಷಮಾಲೆಗಳನ್ನೂ ಆಯಾ ಸ್ಥಾನಗಳಲ್ಲಿ ಧರಿಸಿ ಆ ಪರಮೇಶ್ವರನನ್ನು ಧ್ಯಾನಮಾಡುತ್ತಾ ನೆಲಸಿದ್ದನು. ॥೯೫॥

ನಿತ್ಯವೂ ರುದ್ರಾಕ್ಷವನ್ನು ಕಂಕಣವಾಗಿ ಧರಿಸಿ, ಕೊರಳಲ್ಲಿಯೂ ರುದ್ರಾಕ್ಷ ಮಾಲೆಯನ್ನು ಹಾಕಿಕೊಂಡು ಈತನು ಶಿವಪಂಚಾಕ್ಷರಮಹಾಮಂತ್ರವನ್ನು ಅನವರ ತವೂ ಜಪಮಾಡುತ್ತಿದ್ದನು. ॥೯೬॥

ಈರೀತಿ ಮಹಾದೇವನನ್ನು ಧ್ಯಾನಮಾಡಿ ಅನಂತರ ಪಿನಾಕಪಾಣಿಯಾದ ಆ ಶಂಕರನ ಮುಂದೆ ಬೆವರು ಬರುವವರೆಗೂ, ಕೈತಾಳದೊಡನೆ ನರ್ತನಮಾಡುತ್ತಿದ್ದನು. ಅಲ್ಲದೇ ದಯಾಸಮುದ್ರನೂ, ಸಕಲ ದೇವತೆಗಳಿಗೂ ಶ್ರೇಷ್ಠನಾಗಿರುವವನೂ ಆದ ಆ ಶಂಭುವನ್ನು, ನೆಟ್ಟಮನಸ್ಸುಳ್ಳವನಾಗಿ ನಿತ್ಯವೂ ಪ್ರೀತಿಯಿಂದ ಸ್ತೋತ್ರಮಾಡು ತ್ತಿದ್ದನು. ॥೯೭-೯೮॥

ಹೀಗೆ ಪ್ರತಿನಿತ್ಯವೂ ಪೂಜಾರ್ಹನಾದ ಆ ಶಂಕರನನ್ನು ಪೂಜೆಮಾಡಿ, ಬೇರೆ ಕಾರ್ಯಗಳನ್ನೆಲ್ಲಾ ಬಿಟ್ಟು ಅರ್ಚಿಸಿದುದರಿಂದ ಆತನು ಯಾವ ವಿಧವಾದ ರೋಗ

ಶಿವಪೂಜಾಂ ಕರೋತ್ಯೇಷಃ ಶಿವಧ್ಯಾನಪುರಃಸರಂ ।
ಪ್ರದಕ್ಷಿಣಪ್ರಣಾಮಾದೀನಪೀಶಧ್ಯಾನಪೂರ್ವಕಂ ॥೨೦೧॥

ಶಿವಮಭ್ಯರ್ಚ್ಯ ಬಿಲ್ವಾದ್ಯೈಃ ಶೃಣ್ವಂಛಿವಕಥಾಂ ಮುಹುಃ ।
ವಿಪ್ರಸ್ತಿಷ್ಠತ್ಯಹೋರಾತ್ರಮನ್ಯಕಾರ್ಯವಿವರ್ಜಿತಃ ॥೨೦೨॥

ಏತಾದೃಶಂ ದ್ವಿಜಂ ದೃಷ್ಟ್ವಾ ತತ್ಪತ್ನೀ ಪತಿದೇವತಾ ।
ಕೃತಾಂಜಲಿರುವಾಚೇದಂ ವಚನಂ ಲಲಿತಾನನಾ ॥೨೦೩॥

ಸ್ವಾಮಿನ್ಭವದ್ಭಿರನಿಶಂ ಕ್ರಿಯತೇ ಶಿವಪೂಜನಂ ।
ಅನೇನ ಮೋಕ್ಷೋ ಭವತಾಂ ಭವಿಷ್ಯತ್ಯೇವ ಸರ್ವಥಾ ॥೨೦೪॥

ಸಕೃದಪ್ಯರ್ಚಿತಃ ಶಂಭುರ್ದದಾತಿ ಪರಮಾಂ ಗತಿಂ ।
ಕರುಣಾಸಾಗರಃ ಸಾಂಬಃ ಕಿಂ ಪುನರ್ಮುಹುರರ್ಚಿತಃ ॥೨೦೫॥

---

ಗಳಿಗೂ ಸ್ವಲ್ಪವೂ ಆಸ್ಪದನಾಗದೇ ಇದ್ದನು. ಅಲ್ಲದೇ ಬಾರಿಬಾರಿಗೂ ಪರಿಶುದ್ಧವಾದ ನೀರಿನಿಂದ ಆ ಮಹಾದೇವನಿಗೆ ಅಭಿಷೇಕಮಾಡಿ, ಕೋಮಲವಾದ ಬಿಲ್ವಪತ್ರೆಗಳಿಂದ ಶಂಕರನನ್ನು ಪೂಜೆಮಾಡುತ್ತಿದ್ದನು. ॥೧೯೯-೨೦೦॥

ಶಿವಧ್ಯಾನಪೂರ್ವಕವಾಗಿ ಈತನು ಆ ಶಂಕರನಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುತ್ತಾ ಆ ದೇವದೇವನನ್ನು ಬಿಲ್ವಪತ್ರೆ ಮೊದಲಾದವುಗಳಿಂದ ಪೂಜೆಗೈದು, ಅನಂತರ ಆ ಪರಶಿವನ ಕಥೆಯನ್ನೇ ಪದೇಪದೇ ಕೇಳುತ್ತಾ ಹಗಲೂ ರಾತ್ರಿ ಇತರ ಕಾರ್ಯಗಳಿಗೆ ಕೈಹಾಕದೇ ಭಕ್ತಿಯಿಂದ ಕಾಲಕಳೆಯುತ್ತಿದ್ದನು. ॥೨೦೧-೨೦೨॥

ಹೀಗೆ ಪರಶಿವನ ಪೂಜಾನಿರತನಾದ ಬ್ರಾಹ್ಮಣನನ್ನು ನೋಡಿ, ಪತಿಯೇ ತನ್ನ ದೈವವೆಂದು ತಿಳಿದಿದ್ದ ಆತನ ಪತ್ನಿಯು, ಸುಂದರವಾದ ತನ್ನ ಮುಖದಿಂದ ಶೋಭಿಸುತ್ತಾ ಕೈಜೋಡಿಸಿಕೊಂಡು, ಸ್ವಾಮಿ! ತಾವು ಅನವರತವೂ ಪರಶಿವನನ್ನು ಪೂಜೆಮಾಡುತ್ತಿರುವುದರಿಂದ ನಿಮಗೆ ತಪ್ಪದೇ ಮೋಕ್ಷವು ದೊರತೇ ತೀರುವುದು ; ॥೨೦೩-೨೦೪॥

ಒಂದು ಬಾರಿ ಪೂಜೆಮಾಡಿದರೇ ಆ ಶಂಭುವು ಉತ್ತಮವಾದ ಸದ್ಗತಿಯನ್ನು ಕೊಡುವಾಗ, ದಯಾಸಮುದ್ರನಾದ ಆ ಅಂಬಿಕಾರಮಣನನ್ನು ಅನೇಕ

ಅನನ್ಯಶರಣೋ ಯಸ್ತು ನಿತ್ಯಂ ಶಂಕರಮರ್ಚಯೇತ್ ।
ತಮಭ್ಯಾಯಾತಿ ಮುದಿತಾ ಮುಕ್ತಿಕಾಂತಾ ನ ಸಂಶಯಃ ॥೨೦೬॥

ಶಿವಾರಾಧನಸಂಸಕ್ತಮನನ್ಯಶರಣಂ ಸದಾ ।
ಕಥಂ ತ್ಯಕ್ಷ್ಯತಿ ವಿಪ್ರೇಂದ್ರ ಮುಕ್ತಿಕಾಂತಾ ವಿವೇಕಿನೀ ॥೨೦೭॥

ಮುಕ್ತಿಕಾಂತಾಕಾಮುಕಸ್ತು ನ ಶಿವಾನರ್ಚಕಸ್ತತಃ ।
ಶಿವಾರ್ಚಕಂ ವಿಹಾಯೇಯಂ ಕ್ವ ಗಮಿಷ್ಯತಿ ತದ್ವದ ॥೨೦೮॥

ಯಥಾ ಕಾಮಯತೇ ವೇಶ್ಯಾ ಧನಿಕಂ ಧನದಂ ಮುಹುಃ ।
ತಥಾ ಕಾಮಯತೇ ವಿಪ್ರ ಮುಕ್ತಿಕಾಂತಾ ಶಿವಾರ್ಚಕಂ ॥೨೦೯॥

ನ ಶಿವಾರಾಧಕಾದನ್ಯೋ ಮುಕ್ತಿಕಾಂತಾ ಮನೋಹರಃ ।
ತಥಾ ಚ ಮುಕ್ತಿಕಾಂತಾಯಾಃ ಪತಿಸ್ತು ಶಿವಪೂಜಕಃ ॥೨೧೦॥

---

ಬಾರಿ ಪೂಜಿಸಿದರೆ ಹೇಳಬೇಕಾದ್ದೇನು! ಮತ್ತಾವ ದೇವರನ್ನೂ ಆಶ್ರಯಿಸದೇ ಪ್ರತಿದಿನವೂ ಭಕ್ತಿಯಿಂದ ಆ ಶಂಕರನನ್ನು ಪೂಜೆಮಾಡುವವನ ಸಮೀಪಕ್ಕೆ ಮೋಕ್ಷ ವನಿತೆಯು ತಾನಾಗಿಯೇ ಒಲಿದು ಅವನನ್ನು ಪ್ರೀತಿಯಿಂದ ವರಿಸುವಳೆಂಬುದರಲ್ಲಿ ಸಂದೇಹವೇ ಇಲ್ಲ. ॥೨೦೫-೨೦೬॥

ಬ್ರಾಹ್ಮಣಶ್ರೇಷ್ಠನೇ! ಬೇರೆ ದೇವತೆಯನ್ನು ಮರೆಹೋಗದೇ ಆ ಶಿವಪೂಜೆ ಯಲ್ಲಿಯೇ ನಿರತನಾಗಿರುವವನನ್ನು ವಿವೇಕಶಾಲಿನಿಯಾದ ಮೋಕ್ಷಕನ್ಯೆಯು ಹೇಗೆ ತಾನೇ ಬಿಟ್ಟಾಳು! ಶಿವಪೂಜೆಯನ್ನು ಮಾಡದವನು ಎಂದಿಗೂ ಮೋಕ್ಷಾಂಗನೆಯ ರಮಣನಲ್ಲವಾದ್ದರಿಂದ ಆಕೆಯು ಶಿವಪೂಜಾಧುರಂಧರನನ್ನು ಬಿಟ್ಟು ಮತ್ತೆಲ್ಲಿ ಹೋಗುವಳು? ನೀನೇ ಹೇಳು. ॥೨೦೭-೨೦೮॥

ತನಗೆ ಯಥೇಚ್ಛವಾಗಿ ಹಣವನ್ನು ಕೊಡುವ ಧನಿಕನಾದ ಸಾಹುಕಾರನನ್ನು ಬಯಸುವ ಸೂಳೆಯಂತೆ ಮೋಕ್ಷಾಂಗನೆಯು ನಿತ್ಯವೂ ಶಿವಪೂಜೆಮಾಡುವ ವನನ್ನೇ ಅಪೇಕ್ಷಿಸುವಳು. ಶಿವಪೂಜಕನನ್ನು ಬಿಟ್ಟು ಬೇರೆಯವರು, ಆ ಮೋಕ್ಷಾಂಗ ನೆಗೆ ಎಂದಿಗೂ ಮನೋಹರರಾಗಲಾರರು. ಆದರಿಂದ ಆ ಶಿವಪೂಜಕನೊಬ್ಬನೇ ಆಕೆಯ ಸರಿಯಾದ ಪತಿಯೆನಿಸುವನು. ॥೨೦೯-೨೧೦॥

ಕಿಂ ಚಾನ್ಯದ್ವಕ್ತುಮಿಚ್ಛಾಮಿ ತಚ್ಛ್ರೋತವ್ಯಂ ಪ್ರಯತ್ನತಃ ।
ತತ್ಸಮ್ಯಗಸ್ತ್ವಸಮ್ಯಗ್ವಾ ತತ್ರ ಚಿತ್ತಂ ನ ದೀಯತಾಂ ॥೨೧೧॥

॥ ವಿಮಲೋವಾಚ ॥

ಧರ್ಮಪ್ರಜಾರ್ಥಮುದ್ವಾಹಃ ಕೃತಃ ಸಮ್ಯಗ್ಯಥಾವಿಧಿ ।
ಏತಾವತ್ಕಾಲಪರ್ಯಂತಂ ಪ್ರಜಾ ಮಯಿ ನ ದೃಶ್ಯತೇ ॥೨೧೨॥

ಯದ್ಯೇಕೋ ವಾ ಭವೇತ್ಪುತ್ರಸ್ತಸ್ಮಾದಗ್ರೇಽಪಿ ಸಂತತಿಃ ।
ವೃದ್ಧಿಮೇಷ್ಯತ್ಯನ್ಯಥಾ ಸಾ ಕಥಂ ವಾ ವೃದ್ಧಿಮೇಷ್ಯತಿ ॥೨೧೩॥

ಶಿವಭಕ್ತಃ ಸದಾಚಾರಃ ಸರ್ವದಾ ಶಿವಪೂಜಕಃ ।
ಯಸ್ಯ ವಂಶೇ ನ ಸಂಜಾತಸ್ತತ್ಕುಲಂ ಕಿಂ ನ ನಶ್ಯತಿ ॥೨೧೪॥

ಇತ್ಯುಕ್ತ್ವಾ ನಮ್ರವದನಾ ಕಂಪಮಾನಾ ಮುಹುರ್ಮುಹುಃ ।
ತೂಷ್ಣೀಮುವಾಸ ವಿಮಲಾ ತಾಮುವಾಚಾಥ ಸ ದ್ವಿಜಃ ॥೨೧೫॥

---

ಪತಿದೇವ! ತಮ್ಮಲ್ಲಿ ನಾನೊಂದು ವಿಷಯವನ್ನು ಹೇಳಲಿಚ್ಛಿಸುವೆನು. ಅದನ್ನು ನೀವು ನಿಯಮದಿಂದ ಲಾಲಿಸಿ, ಒಂದುವೇಳೆ ಅದು ಸರಿಯಾಗಿರಲಿ, ಅಥವಾ ತಪ್ಪಾಗಿಯೇ ಇರಲಿ ಆ ವಿಷಯದಲ್ಲಿ ಗಮನಕೊಡದೇ ಕೇಳಬೇಕೆಂದು ಆ ಬ್ರಾಹ್ಮಣನ ಪತ್ನಿಯಾದ ವಿಮಲಾದೇವಿಯು ತನ್ನ ಪತಿಯನ್ನು ಕುರಿತು ಮುಂದೆ ಹೇಳುವಂತೆ ಬಿನ್ನವಿಸಿದಳು. ॥೨೧೧॥

ಸ್ವಾಮಿ, ಧರ್ಮದಿಂದ ಪ್ರಜಾಸಂತತಿಯನ್ನು ಹೊಂದುವುದಕ್ಕೋಸ್ಕರ ತಾವು ಶಾಸ್ತ್ರೋಕ್ತವಾಗಿ ವಿವಾಹಮಾಡಿಕೊಂಡದ್ದಾಯ್ತು. ಆದರೆ ಇಲ್ಲಿಯವರೆಗೂ ನಮಗೆ ಯಾವ ರೀತಿಯಾದ ಸಂತಾನವೂ ಕಾಣಲಿಲ್ಲ. ನಮಗೆ ಒಬ್ಬನಾದರೂ ಮಗನಾಗಿದ್ದರೆ ಮುಂದೆ ಆ ಕುಮಾರನಿಂದ ನಮ್ಮ ಸಂತಾನವು ಬೆಳೆದು ವಂಶಾಭಿವೃದ್ಧಿಹೊಂದಬಹುದಾಗಿದ್ದಿತು. ಈಗ ಅಂತಹ ಪುತ್ರಸಂತಾನವೇ ಇಲ್ಲದಿರುವಾಗ ವಂಶವು ಅಭಿವೃದ್ಧಿಹೊಂದುವ ಬಗೆ ಹೇಗೆ? ॥೨೧೨-೨೧೩॥

ಪರಶಿವನ ಭಕ್ತನೂ, ಉತ್ತಮವಾದ ಆಚಾರಸಂಪನ್ನನೂ, ಯಾವಾಗಲೂ ಆ ಶಿವನನ್ನು ಪೂಜಿಸುವವನೂ ಆದ ಸುಕುಮಾರನು ಜನಿಸದೇ ಇರುವ ವಂಶವು ಹೇಗೆ ತಾನೇ ನಾಶವಾಗದೇ ಇರುವುದು? ಎಂದು ಹೇಳಿ ಆ ಬ್ರಾಹ್ಮಣಪತ್ನಿಯಾದ

ಶೃಣು ಕೌತೂಹಲಂ ಭದ್ರೇ ಯದುಕ್ತಂ ತತ್ತಥೈವ ಹಿ ।
ಪರಂ ತು ಮೋಹಮಾಯಾ ಸಾ ಯಾ ವಿಚ್ಛಿನ್ನಾ ನ ಹಿ ತ್ವಯಿ॥೨೧೬॥

ಶಿವೈಕಶರಣಃ ಪುತ್ರೋ ಭವೇದ್ಯದಿ ತಥೈವ ಹಿ ।
ಸುಖಂ ಭವತ್ಯನ್ಯಥಾ ತು ಸುಖಲೇಶೋಽಪಿ ನ ಧ್ರುವಂ ॥೨೧೭॥

ಜಾತೋಽಪಿ ಪುತ್ರಃ ಸತತಂ ಶಿವೈಕಶರಣಃ ಸದಾ ।
ಶಿವಂ ಸಂಪೂಜ್ಯ ಸತತಂ ಸ್ಥಾಸ್ಯತೀತಿ ನ ನಿಶ್ಚಯಃ ॥೨೧೮॥

ಪುರಾ ಲಕ್ಷ್ಮೀರುವಾಚೈವಂ ವಿಷ್ಣುಂ ಪ್ರತಿ ಹರಿಸ್ತತಃ ।
ಏವಮೇವೋತ್ತರಂ ದತ್ವಾ ಪುನರನ್ಯಮುವಾಚ ಚ ॥೨೧೯॥

ಪುತ್ರಸ್ತೇ ಭವಿತಾ ಲಕ್ಷ್ಮೀಃ ಕಶ್ಚಿದತ್ಯಂತಸುಂದರಃ ।
ಸುಪುಷ್ಪಬಾಣೋ ಭವಿತಾ ಜಗನ್ಮೋಹಕರಃ ಸದಾ ॥೨೨೦॥

---

ವಿಮಲಾದೇವಿಯು ತಲೆಯನ್ನು ಬಗ್ಗಿಸಿ ಪದೇ ಪದೇ ತನ್ನ ಮಾತನ್ನು ಕೇಳಿ ಪತಿಯು ಏನು ಕೋಪಮಾಡುವನೋ ಎಂದು ನಡುಗುತ್ತಾ ನಿಂತುಕೊಂಡಳು. ಆಗ ಆ ಬ್ರಾಹ್ಮಣನು ವಿನಯದಿಂದ ನುಡಿದ ತನ್ನ ಪತ್ನಿಯನ್ನು ಕುರಿತು ಹೀಗೆ ಹೇಳಿದನು. ॥೨೧೪-೨೧೫॥

ಎಲೌ ಮಂಗಳಾಂಗಿಯೇ, ಒಂದು ವಿಷಯವನ್ನು ಹೇಳುವೆನು ಕೇಳು, ನೀನು ಈಗ ಹೇಳಿದ್ದು ನಿಜವಾಗಿಯೂ ಸರಿಯಾದದ್ದೇ. ಆದರೆ ನಿನಗೆ ಇನ್ನೂ ಅಜ್ಞಾನಾಂಧಕಾರವು ತೊಲಗಿಲ್ಲ. ॥೨೧೬॥

ಆ ಶಿವನೊಬ್ಬನಲ್ಲಿಯೇ ನೆಲಸಿದ ಮನಸ್ಸುಳ್ಳ ಪುತ್ರನು ಜನಿಸಿದರೇನೋ ನೀನು ಹೇಳಿದಂತೆ ಸುಖವುಂಟಾಗುವುದು ನಿಜ. ವಿರುದ್ಧವಾದರೆ ಕೊಂಚವೂ ಸುಖ ಪ್ರಾಪ್ತಿಯಿಲ್ಲವೆಂಬುದರಲ್ಲಿ ಸಂದೇಹವೇ ಇಲ್ಲ. ಒಂದುವೇಳೆ ಹುಟ್ಟಿದರೂ ಆ ಕುಮಾರನೂ ಅನವರತವೂ ಆ ಶಿವನನ್ನೇ ರಕ್ಷಕನೆಂದು ತಿಳಿದು ಯಾವಾಗಲೂ ಆತನನ್ನೇ ಪೂಜಿಸುವನೆಂಬುದರಲ್ಲಿ ನಂಬಿಕೆಯಿಲ್ಲ. ॥೨೧೭-೨೧೮॥

ದೇವಿ, ಹಿಂದೆ ಲಕ್ಷ್ಮೀದೇವಿಯು ನೀನು ನನ್ನನ್ನು ಪ್ರಶ್ನೆಮಾಡಿದಂತೆಯೇ ತನ್ನ ಪತಿಯಾದ ವಿಷ್ಣುದೇವನನ್ನೂ ಪ್ರಾರ್ಥಿಸಿದಳು. ಆಗ ಆ ವಿಷ್ಣುವೂ ಈಗ ನಾನು ನಿನಗೆ ಹೇಳಿದಂತೆಯೇ ಉತ್ತರಕೊಟ್ಟನಲ್ಲದೇ ಮತ್ತೆ ಹೀಗೆಂದನು. ಪ್ರಿಯೇ,

ಕದಾಚಿತ್ತಾದೃಶಃ ಪುತ್ರೋ ಭಗವತ್ಕೃಪಯಾ ವಿನಾ ।
ಯದಿ ನಶ್ಯೇತ್ತದಾ ದುಃಖಂ ನ ಕಾರ್ಯಂ ಸರ್ವಥಾ ತ್ವಯಾ ॥೨೨೦॥

ಅನ್ಯಸಾಧಾರಣತ್ವೇನ ಯದಿ ಜಾನಾತಿ ಶಂಕರಂ ।
ಸ ತು ಜಾತೋಽಪಿ ತೇ ಪುತ್ರೋ ಮರಿಷ್ಯತಿ ನ ಸಂಶಯಃ ॥೨೨೨॥

ಅನ್ಯಸಾಧಾರಣತ್ವೇನ ಮತ್ವಾ ದೇವೋತ್ತಮಂ ಶಿವಂ ।
ಕೋ ವಾ ಜೀವತಿ ಕೋ ವಾಂತೇ ಸುಖಂ ಪ್ರಾಪ್ನೋತಿ ತದ್ವದ ॥೨೨೩॥

ಕೋ ವಾ ಮಾಹೇಶ್ವರೀಮಾಜ್ಞಾಮನ್ಯಥಾ ಕರ್ತುಮಿಚ್ಛತಿ ।
ಶಿವದ್ವೇಷರತೋ ಯಸ್ತು ಸ ನ ಸಂಜೀವಯಿಷ್ಯತಿ ॥೨೨೪॥

ಚಂದ್ರೇಣ ವಿಧಿನೇಂದ್ರೇಣ ಮಯಾ ವಾ ಶಿವದೂಷಕಃ ।
ನ ದ್ರಷ್ಟವ್ಯೋ ರಕ್ಷಣಂ ತು ದೂರತೋಽಪಾಸ್ತಮಬ್ಧಿಜೇ ॥೨೨೫॥

---

ನಿನಗೆ ಅತ್ಯಂತ ಸುಂದರನೂ ಒಳ್ಳೆಯ ಹೂಗಳನ್ನೇ ಬಾಣಗಳನ್ನಾಗಿ ಮಾಡಿಕೊಂಡು ಪ್ರಪಂಚವನ್ನೆಲ್ಲಾ ಮೋಹಗೊಳಿಸುವವನೂ ಆದ ಒಬ್ಬ ಸುಕುಮಾರನು ಹುಟ್ಟು ವನು. ॥೨೧೯-೨೨೦॥

ಆದರೆ ಈ ರೀತಿಯಾಗಿ ಜನಿಸುವ ಕುಮಾರನು ಒಂದಾನೊಂದು ದಿನ ಆ ಭಗವಂತನ ದಯೆಯಿಲ್ಲದೇ ಮರಣಹೊಂದುವಾಗ ಮಾತ್ರ ನೀನು ಕೊಂಚವೂ ದುಃಖಪಡಬಾರದು. ॥೨೨೧॥

ಆ ಮಂಗಳಕರನಾದ ಶಂಕರನನ್ನು ಇತರ ದೇವತೆಗಳಂತೆ ಸಾಮಾನ್ಯವಾಗಿ ತಿಳಿಯುವನಾದರೆ ಮಾತ್ರ ನಿನಗೆ ಮಗನು ಜನಿಸಿದರೂ ಸಂದೇಹವಿಲ್ಲದೇ ನಾಶವಾ ಗುವನು. ॥೨೨೨॥

ದೇವೋತ್ತಮನಾದ ಶಿವನನ್ನು ಇತರರಂತೆ ಸಾಮಾನ್ಯನೆಂದು ತಿಳಿಯುವ ಯಾರು ತಾನೇ ಬದುಕಬಲ್ಲನು? ಅಥವಾ ಕೊನೆಯಲ್ಲಿ ಸುಖವನ್ನು ಹೊಂದಬಲ್ಲನೆ ಎಂಬುದನ್ನೂ ಹೇಳು. ॥೨೨೩॥

ಆ ಮಹೇಶ್ವರನ ಅಪ್ಪಣೆಯನ್ನು ಮೀರಿ ನಡೆಯಲು ಯಾರುತಾನೇ ಬಯ ಸುವನು? ಆ ಶಿವನಲ್ಲಿ ದ್ವೇಷವನ್ನಿಟ್ಟವನು ಎಂದಿಗೂ ಬದುಕಲಾರನು. ॥೨೨೪॥

ಸಮುದ್ರರಾಜಕುಮಾರಿಯೇ! ಚಂದ್ರ, ಬ್ರಹ್ಮ, ದೇವೇಂದ್ರ, ಅಥವಾ ನಾನು ಇವರಲ್ಲಿ ಯಾರಾದರೂ ಸರಿ, ಆ ಶಿವನನ್ನು ದೂಷಣೆಮಾಡುವವನನ್ನು ಎಂದಿಗೂ

ಕದಾಚಿದ್ಯದಿ ಪಶ್ಯಾಮೋ ವಯಂ ಶಂಕರದೂಷಕಂ ।
ತದಾಸ್ಮಾಕಮವಸ್ಥಾನಂ ನ ಕುತ್ರಾಪಿ ಭವಿಷ್ಯತಿ ॥೨೨೬॥

ತಾಡಯಿಷ್ಯಂತಿ ಶೂಲಾಗ್ರೈರಸ್ಮಾನ್ ಶಂಕರಕಿಂಕರಾಃ ।
ತೇ ಯತೋ ನಿರ್ಭಯಾ ವೀರಾ ನಾಸ್ಮಾನ್ ತೇ ಗಣಯಂತಿ ಹಿ॥೨೨೭॥

ಶಿವಭಕ್ತಿಂ ಪ್ರಕುರ್ವಾಣೈರಪ್ಯಸ್ಮಾಭಿರಹರ್ನಿಶಂ ।
ಕಂಪಾಯಮಾನೈರಮರೈಃ ಸ್ಥೀಯತೇ ಸತ್ಯಮುಚ್ಯತೇ ॥೨೨೮॥

ಪುರಾ ತು ಶಿವಪೂಜಾರ್ಥಮಸ್ಮಾಭಿರಮರೈರ್ಗತಂ ।
ಸಾಯಂಕಾಲೇ ಹರದ್ವಾರಿ ಪ್ರವೇಶೋ ನಾಭವತ್ತದಾ ॥೨೨೯॥

ತತೋಽಸ್ಮಾಭಿಃ ಸುರೈಃ ಸರ್ವೈಃ ಸಮೂಹೀಭೂಯ ಸತ್ವರಂ ।
ದ್ವಾರಿ ಪ್ರವೇಷ್ಟುಮುದ್ಯುಕ್ತಮಾದಾಯಾರ್ಚನಸಾಧನಂ ॥೨೩೦॥

---

ದರ್ಶನ ಮಾಡಬಾರದು. ಹೀಗಿರುವಾಗ ಅವನನ್ನು ವಹಿಸಿಕೊಂಡು, ಕಾಪಾಡುವ ವಿಷಯವಂತೂ ಬಹು ದೂರವಾಗುವುದು. ॥೨೨೫॥

ಹಾಗೇನಾದರೂ ನಾವು ಆ ಶಿವದೂಷಕನನ್ನು ನೋಡಿದ್ದೇ ಆದರೆ, ನಮಗೆ ಎಲ್ಲಿಯೂ ವಾಸಿಸಲು ಅವಕಾಶವೇ ಇಲ್ಲದಂತಾಗುವುದು. ॥೨೨೬॥

ಮತ್ತೂ ಶಂಕರನ ದೂತರು ನಮ್ಮನ್ನು ತಮ್ಮ ಶೂಲಾಯುಧದ ತುದಿಯಿಂದ ತಿವಿದು ನೋಯಿಸುವರು. ಅವರಿಗೆ ಯಾರ ಭಯವೂ ಇಲ್ಲದೇ ಸ್ವತಃ ವೀರರಾಗಿರುವುದರಿಂದ, ಅವರು ನಮ್ಮನ್ನು ಸ್ವಲ್ಪವೂ ಲೆಕ್ಕಿಸುವುದೇ ಇಲ್ಲ. ॥೨೨೭॥

ಹಗಲೂ ರಾತ್ರಿ ಎಡಬಿಡದೇ ಆ ಪರಶಿವನಲ್ಲಿ ಭಕ್ತಿಯನ್ನು ತೋರ್ಪಡಿಸುತ್ತಿರುವ ನಾವುಗಳೂ, ಇತರ ದೇವತೆಗಳೂ ಸಹ ಸತ್ಯವಾಗಿಯೂ ಆ ಶಂಕರ ದೂತರನ್ನು ನೋಡಿ ಹೆದರಿ ನಡುಗುತ್ತಿರುವೆವು. ॥೨೨೮॥

ಹಿಂದೆ ನಾನೇ ಮೊದಲಾಗಿ ದೇವತೆಗಳೆಲ್ಲರೂ ಶಿವನನ್ನು ಪೂಜೆಮಾಡುವುದಕ್ಕೋಸ್ಕರ ಹೋದೆವು. ಆದರೆ ಸಾಯಂಕಾಲದಲ್ಲಿ ಪರಮೇಶ್ವರನ ಆಲಯದ ಬಾಗಿಲಿನಲ್ಲಿ ನಮಗೆ ಪ್ರವೇಶವು ದೊರೆಯಲಿಲ್ಲ. ಆಗ ನಾವೆಲ್ಲರೂ ಗುಂಪಾಗಿ ಒಟ್ಟಿಗೆ ಆ ಬಾಗಿಲಿನಲ್ಲಿ ಜಾಗ್ರತೆಯಾಗಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಮುಂದೆ ನುಗ್ಗಿದೆವು. ॥೨೨೯-೨೩೦॥

ತದಾ ವೇತ್ರಂ ಸಮಾದಾಯ ಕಶ್ಚಿಚ್ಛಂಕರಕಿಂಕರಃ ।
ಅಭ್ಯಧಾವತಿ ಸಂಕ್ರುದ್ಧಃ ಕ್ರೋಧಸಂರಕ್ತಲೋಚನಃ ॥೨೩೦॥

ಸ ತತೋ ಭ್ರಾಮಯಾಮಾಸ ವೇತ್ರಂ ಕಾಂಚನರಂಜಿತಂ ।
ವೇತ್ರಾಂಗಸಂಗಮಾತ್ರೇಣ ಸರ್ವೇಽಪಿ ಪತಿತಾ ವಯಂ ॥೨೩೧॥

ಕಃ ಸಮರ್ಥೋಽನ್ಯಥಾಕರ್ತುಂ ಶೈವಾಜ್ಞಾಂ ಜಗತೀತಲೇ ।
ಸುರಾಣಾಮಪಿ ಶಾಸ್ತಾರಸ್ತೇ ಯತಃ ಕ್ರೂರಶಾಸನಾಃ ॥೨೩೩॥

ಆದೌ ಸಾಯಂ ಮಹಾದೇವಂ ಪೂಜಯತ್ಯಂಬಿಕಾ ತತಃ ।
ಷಣ್ಮುಖೋಽಭ್ಯರ್ಚಯಂತ್ಯಂಬಾಂ ಶಂಕರಂ ಚ ಸುರೇಶ್ವರಂ ॥೨೩೪॥

ತತೋ ಗಣಪತಿಃ ಸಾಂಬಮಭ್ಯರ್ಚಯತಿ ಸಾದರಂ ।
ತತೋಽರ್ಚಯತಿ ಸರ್ವೇಶಂ ನಂದೀಶೋಽತೀವ ಭಕ್ತಿತಃ ॥೨೩೫॥

---

ಆಗ ಒಬ್ಬ ಶಂಕರನ ದೂತನು ಕೈಯಲ್ಲಿ ಬೆತ್ತವನ್ನು ಹಿಡಿದು ಕೋಪದಿಂದ ಕೆಂಡದಂತಿರುವ ಕಣ್ಣುಗಳನ್ನುಳ್ಳವನಾಗಿ ಓಡಿಬಂದು ಚಿನ್ನದ ಹಿಡಿಯಿಂದ ಶೋಭಿಸುತ್ತಿದ್ದ ಆ ಬೆತ್ತವನ್ನು ಜೋರಾಗಿ ಬೀಸತೊಡಗಿದನು. ಆಗ ಆ ಶಿವದೂತನ ಬೆತ್ತದ ತುದಿಯು ತಗುಲಿದ ಮಾತ್ರದಿಂದಲೇ ನಾವೆಲ್ಲರೂ ನೆಲಕ್ಕುರುಳಿ ಬಿದ್ದೆವು. ॥೨೩೦-೨೩೧॥

ಆ ಶಿವಭಕ್ತರ ಅಪ್ಪಣೆಯನ್ನು ಮೀರಿ ನಡೆಯಲು ಈ ಭೂಮಂಡಲದಲ್ಲಿ ಯಾರುತಾನೇ ಸಮರ್ಥರಾದಾರು? ಭಯಂಕರವಾದ ಅಪ್ಪಣೆಯುಳ್ಳ ಆ ಶಂಕರ ದೂತರು ದೇವತೆಗಳನ್ನೂ ದರ್ಪದಿಂದ ಬೇಕಾದಹಾಗೆ ನಿಯಮಿಸಬಲ್ಲರು. ॥೨೩೩॥

ಸಾಯಂಕಾಲವೇಳೆಯಲ್ಲಿ ಆ ಮಹಾದೇವನನ್ನು ಮೊದಲು ಜಗದಂಬಿಕೆಯಾದ ಪಾರ್ವತಿಯು ಪೂಜೆಮಾಡುತ್ತಾಳೆ. ಅನಂತರ ದೇವೋತ್ತಮನಾದ ಆ ಶಂಕರನನ್ನೂ ಮತ್ತು ಅಂಬಿಕಾದೇವಿಯನ್ನೂ ಕುಮಾರಸ್ವಾಮಿಯು ಪೂಜಿಸುವನು. ಆಮೇಲೆ, ಗಣಪತಿಯೆನಿಸಿದ ವಿಘ್ನರಾಜನೂ, ಅದಾದಮೇಲೆ ನಂದಿಕೇಶ್ವರನೂ, ಆದರದಿಂದಲೂ ತುಂಬಾ ಭಕ್ತಿಯಿಂದಲೂ ಆ ಅಂಬಿಕಾಸಮೇತನಾದ ಮಹೇಶ್ವರನನ್ನು ಹೀಗೆ ಕ್ರಮವಾಗಿ ಪೂಜೆಮಾಡುತ್ತಾರೆ. ॥೨೩೪-೨೩೫॥

ತತೋಽರ್ಚಯಂತಿ ಸರ್ವೇಶಂ ಪ್ರಮಥಾಃ ಸಾಧುಸಾಧನಾಃ ।
ಅನಂತಾಃ ಪ್ರಮಥಾಸ್ತೇಷಾಂ ಸಂಖ್ಯಾಂ ಕರ್ತುಂ ನ ಶಕ್ಯತೇ॥೨೩೬॥

ತತಃ ಪರಂ ಸುರೈಃ ಸಾರ್ಧಮಸ್ಮಾಭಿಃ ಪೂಜ್ಯತೇ ಶಿವಃ ।
ತತಃ ಪರಂ ಪ್ರಯತ್ನೇನ ಗಂಧರ್ವೈಃ ಪೂಜ್ಯತೇ ಶಿವಃ ॥೨೩೭॥

ತತಃ ಸಂಪೂಜ್ಯತೇ ಶಂಭುಃ ಕಿನ್ನರೈರ್ಭೂರಿಸಾಧನೈಃ ।
ತತಃ ಸಂಪೂಜ್ಯತೇ ಶಂಭುಃ ಶೇಷಾದ್ಯೈರುರಗೇಶ್ವರೈಃ ॥೨೩೮॥

ತತೋ ಮುನಿಗಣೈರನ್ಯೈಃ ಪೂಜ್ಯತೇ ಪರಮೇಶ್ವರಃ ।
ತತೋ ನರವರೈರನ್ಯೈಃ ಪೂಜ್ಯತೇ ಸತತಂ ಶಿವಃ ॥೨೩೯॥

ಏವಮೇವ ಕ್ರಮೇಣೈವ ಸಾಯಮನ್ವಹಮೀಶ್ವರಃ ।
ಸರ್ವೈರಭ್ಯರ್ಚ್ಯತೇ ಸಾಂಬೋ ದೇವದೇವೋತ್ತಮಃ ಶಿವಃ ॥೨೪೦॥

---

ಆಮೇಲೆ ಎಲ್ಲರಿಗೂ ಒಡೆಯನಾದ ಆ ಮಹಾದೇವನನ್ನು ಪ್ರಮಥಗಣಗಳು ಉತ್ತಮವಾದ ಪೂಜಾದ್ರವ್ಯಗಳಿಂದ ಪೂಜೆಮಾಡುವುವು. ಆ ಪ್ರಥಮ ಗಣಗಳು ಅಸಂಖ್ಯಾತರಾಗಿರುವುದರಿಂದ ಅವುಗಳನ್ನು ಇಷ್ಟೇ ಎಂದು ಎಣಿಸಲೂ ಸಾಧ್ಯವಿಲ್ಲ. ॥೨೩೬॥

ಅನಂತರ ದೇವತೆಗಳೊಡನೆ ನಾವೂ, ಆಮೇಲೆ ಗಂಧರ್ವರೂ, ಅನಂತರ ಕಿನ್ನರರೂ, ತರುವಾಯ ಆದಿಶೇಷನೇ ಮೊದಲಾದ ಸರ್ಪಶ್ರೇಷ್ಠರೂ ನಾನಾ ವಿಧವಾದ ಪೂಜಾಸಾಮಗ್ರಿಗಳಿಂದ ಆ ಮಹಾದೇವನನ್ನು ಪೂಜೆಮಾಡಿದೆವು. ॥೨೩೭-೨೩೮॥

ಆಮೇಲೆ ಇತರ ಮುನಿಗಣಗಳೂ, ಅದಾದನಂತರ ಉಳಿದ ಮಾನವ ಶ್ರೇಷ್ಠರೂ ಮಂಗಳಸ್ವರೂಪನಾದ ಆ ಪರಮೇಶ್ವರನನ್ನು ಅನವರತವೂ ಪೂಜೆಮಾಡುವರು. ದೇವಿ! ಹೀಗೆಯೇ ಕ್ರಮವಾಗಿ ಪ್ರತಿನಿತ್ಯವೂ ಸಾಯಂಕಾಲದಲ್ಲಿ ಸರ್ವೇಶ್ವರನೂ, ದೇವದೇವೋತ್ತಮನೂ ಅಂಬಿಕಾರಮಣನೂ ಆದ ಶಿವನು ಎಲ್ಲರಿಂದಲೂ ಪೂಜಿಸಲ್ಪಡುತ್ತಾನೆ. ॥೨೩೯-೨೪೦॥

ಶೈವವೇತ್ರಪ್ರಹಾರಾಣಾಂ ಪಾತ್ರಂ ಚೇದಮರಾ ವಯಂ ।
ಕೋಽನ್ಯಃ ಸಮರ್ಥಃ ಶೈವಾಜ್ಞಾಮನ್ಯಥಾ ಕರ್ತುಮುಚ್ಯತಾಂ ॥೨೪೧॥

ಪುರಾ ಸಮಾಗತಃ ಕಶ್ಚಿದಿಹ ಶಂಕರಕಿಂಕರಃ ।
ಸಮಾಗತೇ ತದಾ ಶೀಘ್ರಂ ಭ್ರಮಾನ್ನೈವೋತ್ಥಿತಂ ಮಯಾ ॥೨೪೨॥

ತದಾ ಜಹಾರ ವೈಕುಂಠಂ ಸ ಸಿಂಹಾಸನಸಂಸ್ಥಿತಃ ।
ಪತಿತೋಽಹಂ ಮಹಾರಣ್ಯೇ ಜಲಾನ್ನಾದಿವಿವರ್ಜಿತೇ ॥೨೪೩॥

ತತಃ ಪರಂ ನಿರಾಹಾರಂ ಸಮಾಶ್ರಿತ್ಯ ಸ್ವಕಂ ವಪುಃ ।
ತಪಶ್ಚೀರ್ಣಂ ಮಯಾ ಪೂರ್ವಂ ಶಿವಮುದ್ದಿಶ್ಯ ಸಾದರಂ ॥೨೪೪॥

ತತಃ ಪರಂ ಮಯಾ ಪ್ರಾಪ್ತೋ ವೈಕುಂಠೋಽಯಂ ಶಿವಾಜ್ಞಯಾ ।
ಶಿವಪೂಜಾಪ್ರಭಾವೇನ ಲಬ್ಧೋಽಯಂ ನಾನ್ಯಥಾ ಧ್ರುವಂ ॥೨೪೫॥

---

ದೇವತೆಗಳಲ್ಲಿ ಶ್ರೇಷ್ಠರೆನಿಸಿದ ನಾವೇ ಈಶ್ವರಭಕ್ತರ ಬೆತ್ತದೇಟುಗಳಿಗೆ ತುತ್ತಾದಮೇಲೆ ಆ ಶೈವರ ಅಪ್ಪಣೆಯನ್ನು ಮೀರಲು ಯಾರಿಗೆ ತಾನೇ ಸಾಧ್ಯವಾದೀತು? ಹೇಳು. ॥೨೪೧॥

ಹಿಂದೆ ಒಬ್ಬ ಶಂಕರನ ದೂತನು ನನ್ನ ಬಳಿಗೆ ಬಂದನು. ಆಗ ಆತನು ಬಂದದ್ದನ್ನು ನೋಡಿ ನಾನು ಕೂಡಲೇ ಭ್ರಾಂತಿಯಿಂದ ಎದ್ದು ನಿಲ್ಲಲಿಲ್ಲ. ಆಗ ಆತನು ನನ್ನನ್ನು ಸೋಲಿಸಿ ಈ ವೈಕುಂಠಲೋಕವನ್ನೇ ನನ್ನಿಂದ ಅಪಹರಿಸಿ ನನ್ನನ್ನು ತಳ್ಳಿಬಿಟ್ಟನು. ಆಗ ನಾನು ಅವನ ಏಟುಗಳಿಗೆ ಗುರಿಯಾಗಿ ಅನ್ನ ನೀರುಗಳಿಲ್ಲದ ದೊಡ್ಡದೊಂದು ಕಾಡಿನಲ್ಲಿ ಬಿದ್ದೆನು. ॥೨೪೨-೨೪೩॥

ಅಲ್ಲಿ ಬಹುಕಾಲ ಆಹಾರವನ್ನು ತೆಗೆದುಕೊಳ್ಳದೇ ಆ ಶರೀರದಿಂದಲೇ ನಾನು ಆ ಶಿವನನ್ನುದ್ದೇಶಿಸಿ ಆದರದಿಂದ ತಪಸ್ಸುಮಾಡಿದೆನು. ಆಗ ಮಹೇಶ್ವರನು ನನ್ನ ತಪಸ್ಸಿಗೆ ಸಂತುಷ್ಟನಾಗಿ ಪುನಃ ನನಗೆ ಈ ವೈಕುಂಠಲೋಕವನ್ನು ಕರುಣಿಸಿ ಕೊಟ್ಟನು. ದೇವಿ, ಈ ವೈಕುಂಠಲೋಕವು ನನಗೆ ಶಿವಪೂಜಾಮಹಿಮೆಯಿಂದಲೇ ಬಂದಿರುವುದೇ ಹೊರತು ನಿಶ್ಚಯವಾಗಿ ಬೇರೆ ಯಾವುದರಿಂದಲೂ ದೊರಕಿಲ್ಲವೆಂದು ತಿಳಿ. ॥೨೪೪-೨೪೫॥

ಅತ್ಯಂತಂ ಸಾವಧಾನೇನ ತದಾ ಪ್ರಭೃತಿ ಸರ್ವದಾ ।
ಶಿವಪೂಜಾರತೇನೈವ ಸ್ಥಿಯತೇಽತ್ರ ಮಯಾ ಧ್ರುವಮ್ ॥೨೪೬॥

ಶಿವನಿಂದಕಸಂಗಶ್ಚೇತ್ ಕ್ರಿಯತೇ ಭ್ರಾಂತಿತೋ ಮಯಾ ।
ತದಾ ಜೀವನಮೇವಾಸ್ಯ ಮಮಾತ್ಯಂತಂ ಹಿ ದುರ್ಲಭಮ್ ॥೨೪೭॥

ಇತ್ಯುವಾಚ ಪುರಾ ಲಕ್ಷ್ಮೀಂ ವಿಷ್ಣುಃ ಶಿವಪರಾಯಣಃ ।
ತಥಾ ಚ ಸಂತತಿಃ ಶುದ್ಧಾ ದುರ್ಲಭಾ ಸತ್ಯಮುಚ್ಯತೇ ॥೨೪೮॥

ಅಶುದ್ಧಾ ಸಂತತಿರ್ಜಾತಾ ಹ್ಯಸ್ಮಾಕಂ ತ್ವಪ್ರಯೋಜಿಕಾ ।
ಸಾ ಸಂತತಿರ್ಯತೋಽಸ್ಮಾಕಂ ಸುಖದಾ ನ ಭವಿಷ್ಯತಿ ॥೨೪೯॥

ಶಿವವ್ರತಪರೋ ನಿತ್ಯಂ ಸರ್ವದಾ ಶಿವಪೂಜಕಃ ।
ಪುತ್ರೋ ಯಸ್ಯ ಭವೇದ್ಭಾಗ್ಯಾತ್ತಸ್ಯ ಭಾಗ್ಯಂ ಮಹತ್ತರಮ್ ॥೨೫೦॥

ಜಾತೋಽಪಿ ಪುತ್ರಃ ಸ ವೃಥಾ ಯೋ ನ ಶೈವೋ ಭವಿಷ್ಯತಿ ।
ವ್ಯರ್ಥಂ ಚ ಜೀವನಂ ತಸ್ಯ ಶಿವಾರ್ಚಾವಿಮುಖಸ್ಯ ತು ॥೨೫೧॥

---

ಅದು ಮೊದಲುಗೊಂಡು ನಾನು ಯಾವಾಗಲೂ ಸಾವಧಾನದಿಂದ ಆ ಪರಶಿವನ ಪೂಜೆಯಲ್ಲಿಯೇ ನಿಶ್ಚಯವಾಗಿಯೂ ನಿರತನಾಗಿರುವೆನು. ॥೨೪೬॥

ಏನಾದರೂ ಅಜ್ಞಾನವಶದಿಂದ ನಾವು ಶಿವನಿಂದೆಮಾಡುವವರೊಡನೆ ಸ್ನೇಹ ಮಾಡಿದರೆ ನಾವು ಬದುಕುವುದೇ ದುರ್ಲಭವಾಗುವುದೆಂದು ಹಿಂದೆ ಪರಶಿವಭಕ್ತನಾದ ನಾರಾಯಣನು ಲಕ್ಷ್ಮೀದೇವಿಗೆ ತಿಳಿಸಿದನು. ಪ್ರಿಯೇ, ಆದ್ದರಿಂದ ಸತ್ಯವಾಗಿಯೂ ಶುದ್ಧವಾದ ಸಂತಾನವುಂಟಾಗುವುದು ಬಹಳ ಕಷ್ಟವೆಂದು ತಿಳಿಯುವವಳಾಗು. ॥೨೪೭-೨೪೮॥

ಪರಿಶುದ್ಧವಲ್ಲದ ಸಂತಾನವು ನನಗೆ ಲಭಿಸಿದರೂ ಅದು ಅಪ್ರಯೋಜಕವೇ. ಆದರಿಂದ ನಮಗೆ ಯಾವ ವಿಧವಾದ ಸುಖವೂ ಉಂಟಾಗಲಾರದು. ॥೨೪೯॥

ನಿತ್ಯವೂ ಶಿವವ್ರತದಲ್ಲಿ ನಿರತನಾಗಿ ಆ ಪರಶಿವನನ್ನೇ ಪೂಜೆಮಾಡುವ ಮಗನು ಯಾರಿಗೆ ಜನಿಸುವನೋ ಆತನ ಭಾಗ್ಯವೇ ಹೆಚ್ಚಿನದು. ॥೨೫೦॥

ಶಿವಭಕ್ತನಲ್ಲದ ಮಗನು ಹುಟ್ಟಿದರೂ ಆತನಜೀವನವೂ ಹುಟ್ಟುವಿಕೆಯೂ ಶಿವಪೂಜೆಮಾಡದಿರುವುದರಿಂದ ನಿಶ್ಚಯವಾಗಿ ವ್ಯರ್ಥವೇ ಸರಿ. ॥೨೫೧॥

ಅಶೈವೋ ಯದಿ ಯದ್ವಂಶೇ ಭವತ್ಯೇಕೋಽಪಿ ಕೋಮಲೇ ।
ಸ ವಂಶಃ ಸರ್ವಥಾ ಯಾತಿ ನರಕಂ ಸತ್ಯಮುಚ್ಯತೇ ॥೨೫೨॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಯಾಮಿನೀಮಧ್ಯೇ ಭಾರ್ಯಾಂ ಸಂಗಮಕಾಮಿನೀಂ ।
ಸಂವೀಕ್ಷ್ಯ ಸಂಗಮಂ ಚಕ್ರೇ ತತೋ ಗರ್ಭಂ ದಧಾರ ಸಾ ॥೨೫೩॥

ತತೋಽಸೂತ ಚ ಸಾ ಪುತ್ರಂ ಪದ್ಮಪತ್ರಾಯತೇಕ್ಷಣಂ ।
ದೃಷ್ಟ್ವಾ ತಮತಿಸಂತುಷ್ಟಾ ಬಭೂವ ಸುತವತ್ಸಲಾ ॥೨೫೪॥

ತತಃ ಪುತ್ರಂ ಸಮುತ್ಪನ್ನಂ ಶ್ರುತ್ವಾ ತಜ್ಜನಕಸ್ತದಾ ।
ಜಾತಕರ್ಮಾದಿಕಂ ಕರ್ಮ ಚಕಾರ ಮುದಿತಾನನಃ ॥೨೫೫॥

---

ಕೋಮಲಾಂಗಿಯೇ! ಯಾರ ವಂಶದಲ್ಲಿ ಈಶ್ವರಭಕ್ತನಲ್ಲದವನೊಬ್ಬನು ಜನಿಸುವನೋ ಆ ವಂಶವು ನಿಜವಾಗಿಯೂ ನರಕವನ್ನೈದುವುದೆಂಬುದು ಸತ್ಯವಾದ ವಿಷಯವೆಂದು ತಿಳಿ." ॥೨೫೨॥

ಆ ಬ್ರಾಹ್ಮಣನು ತನ್ನ ಪತ್ನಿಗೆ ಈರೀತಿ ಹೇಳಿ ರಾತ್ರಿಯಮಧ್ಯದಲ್ಲಿ ಸಂಭೋಗಕಾತುರಳಾಗಿರುವ ಪತ್ನಿಯನ್ನು ನೋಡಿ, ಅವಳೊಡನೆ ಸಂಭೋಗಮಾಡಿದನು. ಅದರಿಂದಲೇ ಆ ವಿಮಲಾದೇವಿಯು ಗರ್ಭವನ್ನು ಧರಿಸಿದಳು. ॥೨೫೩॥

ಹಾಗೆಯೇ ಪ್ರಸವಕಾಲ ಬರಲು ಆ ಪತಿವ್ರತಾಶಿರೋಮಣಿಯು, ಕಮಲದ ದಳದಂತೆ ವಿಶಾಲವೂ ಸುಂದರವೂ ಆದ ಕಣ್ಣುಗಳುಳ್ಳ, ಕುವರನನ್ನು ಹಡೆದಳು. ಅನಂತರ ಆ ಸುಂದರ ಕುಮಾರನನ್ನು ನೋಡಿ ತುಂಬಾ ಸುತವಾತ್ಸಲ್ಯವುಳ್ಳ ಆಕೆಯು ಆನಂದಭರಿತಳಾದಳು. ॥೨೫೪॥

ಗಂಡುಮಗುವು ಜನಿಸಿದುದನ್ನು ಕೇಳಿ ತಂದೆಯು, ಸಂತೋಷದಿಂದ ಅರಳಿದ ಮುಖವುಳ್ಳವನಾಗಿ, ಆ ಕಾಲದಲ್ಲಿ ಮಾಡಬೇಕಾದ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಮಾಡಿದನು. ॥೨೫೫॥

ತತೋಽನ್ನಪ್ರಾಶನಾದೀನಿ ತತ್ತತ್ಕಾಲೇಷು ತತ್ಪಿತಾ ।
ಕೃತ್ವೋಪನಯನಂ ಚಕ್ರೇ ಸುಮುಹೂರ್ತೇ ಯಥಾವಿಧಿ ॥೨೫೬॥

ತಮೇವಾಧ್ಯಾಪಯಾಮಾಸ ಸಾಂಗಾನ್ವೇದಾನ್ಯಥಾಕ್ರಮಂ ।
ಶಾಸ್ತ್ರಾಣಿ ಧರ್ಮಶಾಸ್ತ್ರಾದೀನ್ಯಪಿ ಮೇಧಾವಿನಂ ಸುತಂ ॥೨೫೭॥

ತಾದೃಶಂ ತಂ ಸುತಂ ವೀಕ್ಷ್ಯ ಪಿತರೌ ಮುದಿತಾನನೌ ।
ಪುತ್ರಪೋಷಣಸಂಸಕ್ತೌ ಸ್ಥಿತಾವನ್ನಾದಿಭಿಃ ಸದಾ ॥೨೫೮॥

ತತಃ ಕದಾಚಿತ್ತಂ ಪುತ್ರಂ ವಿಲೋಕ್ಯಾತೀವ ಸುಂದರಂ ।
ಕಿಮಸ್ಯ ಭಾಗ್ಯಂ ಭಾವೀತಿ ದಧ್ಯೌ ಯೋಗಪರಃ ಪಿತಾ ॥೨೫೯॥

---

ಆಮೇಲೆ ತಂದೆಯು ಮಗನಿಗೆ ಆಯಾಯ ಕಾಲಗಳಲ್ಲಿ ಮಾಡಬೇಕಾದ ಅನ್ನಪ್ರಾಶನ, ಚೌಲಾದಿ ಕರ್ಮಗಳನ್ನು ನೆರವೇರಿಸಿ, ಸರಿಯಾದ ಮುಹೂರ್ತದಲ್ಲಿ ಶಾಸ್ತ್ರೋಕ್ತವಾಗಿ ಉಪನಯನವನ್ನೂ ಮಾಡಿದನು. ॥೨೫೬॥

ಉಪನಯನವಾದನಂತರ ಮೇಧಾವಿಯಾದ ತನ್ನ ಮಗನಿಗೆ, ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೌತಿಷ, ಕಲ್ಪಗಳೆಂಬ ಆರು ಅಂಗಗಳೊಡಗೂಡಿದ ವೇದಗಳನ್ನೂ (ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಗಳನ್ನೂ) ಧರ್ಮಶಾಸ್ತ್ರವೇ ಮೊದಲಾದ ಇತರ ಶಾಸ್ತ್ರಗಳನ್ನೂ ಅಧ್ಯಯನಮಾಡಿಸಿದನು. ॥೨೫೭॥

ಆ ರೀತಿ ವಿದ್ವಾಂಸನಾದ ಆ ಕುಮಾರನನ್ನು ನೋಡಿ ತಂದೆತಾಯಿಗಳು ನಗುಮುಖವುಳ್ಳವರಾಗಿ ಅನ್ನ, ಹಾಲು ಮೊದಲಾದವುಗಳಿಂದ ಯಾವಾಗಲೂ ಆ ಕುಮಾರನನ್ನು ಪೋಷಣೆಮಾಡುವುದರಲ್ಲಿಯೇ ತತ್ಪರರಾದರು ॥೨೫೮॥

ಹಾಗೆಯೇ ಕಳೆಯುತ್ತಿರಲು ಒಂದು ದಿನ ಸುಂದರನಾದ ಆ ತನ್ನ ಮಗನನ್ನು ನೋಡಿ, ಈತನ ಭಾಗ್ಯವು ಮುಂದೆ ಹೇಗಿರಬಹುದೆಂದು ಯೋಚಿಸಿ ಯೋಗಾಭ್ಯಾಸನಿರತನಾದ ತಂದೆಯು ಹಾಗೆಯೇ ಸ್ವಲ್ಪ ಧ್ಯಾನಮಗ್ನನಾದನು. ॥೨೫೯॥

ತತಃ ಸ ಷೋಡಶೇ ವರ್ಷೇ ಮೃತ್ಯುಪಾಶಂ ಗಮಿಷ್ಯತಿ ।
ಅಲ್ಪಾಯುರಿತಿ ನಿಶ್ಚಿತ್ಯ ಕ್ಷಣಂ ದುಃಖವಶೋಽಭವತ್ ॥೨೬೦॥

ತತಶ್ಚಿತ್ತಂ ಸಮಾಧಾಯ ಸ ಏವ ದ್ವಿಜಪುಂಗವಃ ।
ಪುತ್ರಮಾಹೂಯ ಸಂಶ್ಲಿಷ್ಯ ಬಭಾಷೇ ವಚನಂ ತದಾ ॥೨೬೧॥

ಶ್ರುತಿಪಾರಗ ಪುತ್ರಾಽಹಂ ದರ್ಶನಾತ್ತವ ಸರ್ವದಾ ।
ಖಿನ್ನ ಏವ ವಸಾಮ್ಯದ್ಯ ಸಂತೋಷೋ ನೋಪಲಭ್ಯತೇ ॥೨೬೨॥

ಧ್ಯಾನಂ ತ್ವದ್ವಿಷಯಂ ಪುತ್ರ ಕೃತಮದ್ಯ ಮಯಾ ತತಃ ।
ಅಲ್ಪಾಯುಷ್ಯಂ ತ್ವಯಿ ಜ್ಞಾತಂ ಪಿತೃದುಃಖಪ್ರವರ್ತಕಂ ॥೨೬೩॥

ಇತ್ಯುಕ್ತಂ ತದ್ವಚಃ ಶ್ರುತ್ವಾ ತದಾ ತಜ್ಜನನೀ ಸುತಂ ।
ಸಮಾಲಿಂಗ್ಯಾತಿದುಃಖೇನ ರುರೋದ ಭೃಶಮಂಜಸಾ ॥೨೬೪॥

---

ಧ್ಯಾನಾಸಕ್ತನಾದ ಆ ಬ್ರಾಹ್ಮಣನು ತನ್ನ ಕುಮಾರನು ಅವನ ಹದಿನಾರನೆಯ ವಯಸ್ಸಿನಲ್ಲಿ ಮರಣಹೊಂದುವನು ; ಇವನು ಅಲ್ಪ ವಯಸ್ಸುಳ್ಳವನೆಂದು ನಿಶ್ಚಯಿಸಿ ಕ್ಷಣಕಾಲ ದುಃಖಿತನಾದನು. ॥೨೬೦॥

ಅನಂತರ ಆ ಬ್ರಾಹ್ಮಣೋತ್ತಮನು ಮನಸ್ಸನ್ನು ಹಾಗೆಯೇ ಸಮಾಧಾನ ಮಾಡಿಕೊಂಡು ತನ್ನ ಮಗನನ್ನು ಕರೆದು ಆಲಿಂಗಿಸಿಕೊಂಡು, ಅವನನ್ನು ಕುರಿತು, ॥೨೬೧॥

“ ವೇದಪಾರಂಗತನಾದ ಮಗನೇ, ಯಾವಾಗಲೂ ನಿನ್ನನ್ನು ನೋಡುತ್ತಿದ್ದರೂ, ನಾನು ಖಿನ್ನವಾಗಿರುವೆನೇ ಹೊರತು, ನನಗೆ ಸಂತೋಷವೇ ಉಂಟಾಗುತ್ತಿಲ್ಲ. ಏಕೆಂದರೆ ಕುಮಾರ, ನಿನ್ನ ವಿಷಯವನ್ನರಿಯಲು ಈಗ ನಾನು ಧ್ಯಾನಮಗ್ನನಾಗಿದ್ದೆನು. ಆದರಿಂದ ನಿನಗೆ ತಂದೆತಾಯಿಗಳಿಗೆ ದುಃಖವನ್ನುಂಟುಮಾಡುವ ಅಲ್ಪಾಯುಷ್ಯವುಂಟೆಂದು ತಿಳಿಯಿತು ” ಎಂದು ತಂದೆಯು ಮಗನಿಗೆ ಹೇಳಿದನು. ॥೨೬೨-೨೬೩॥

ತನ್ನ ಗಂಡನು ಮಗನ ಅಲ್ಪಾಯುಷ್ಯವೃತ್ತಾಂತವನ್ನು ನುಡಿದುದನ್ನು ಕೇಳಿ, ಆ ಹುಡುಗನ ತಾಯಿಯು ಮಗನನ್ನು ಆಲಿಂಗಿಸಿಕೊಂಡು ತುಂಬಾ ದುಃಖದಿಂದ ರೋದನಮಾಡತೊಡಗಿದಳು. ॥೨೬೪॥

ತತಸ್ತಾಂ ಜನನೀಂ ದೃಷ್ಟ್ವಾ ಶೋಕಾರ್ತಾಂ ಪಿತರಂ ಚ ತಂ ।
ಉವಾಚ ವಚನಂ ಪುತ್ರಃ ಪಿತೃಸಂತೋಷವರ್ಧಕಃ ॥೨೬೫॥

॥ ಪುತ್ರ ಉವಾಚ ॥

ಕಿಮರ್ಥಂ ಕ್ರಿಯತೇ ದುಃಖಂ ಮಾತರ್ಮಾ ಶುಚ ಮಾ ಶುಚ ।
ಶರೀರಂ ಚೇದಿದಂ ಗಚ್ಛೇನ್ಮಮ ಹಾನಿರ್ನ ಸರ್ವಥಾ ॥೨೬೬॥

ನಿತ್ಯೋಽಹಮಜರೋಽನಂತೋ ಮಮ ನಾಶಃ ಕಥಂ ಭವೇತ್ ।
ಕಾಲತ್ರಯೇಽಪಿ ನಾಶಸ್ತು ಮಯಿ ಬಾಧಿತ ಏವ ಹಿ ॥೨೬೭॥

ಶರೀರಮೇತದನಿಶಂ ಸ್ಥಾತವ್ಯಮಿತಿ ಚೇನ್ಮತಿಃ ।
ಜನ್ಯಸ್ಯಾಸ್ಯ ಶರೀರಸ್ಯ ದುರ್ಲಭಾಽವಸ್ಥಿತಿಃ ಸದಾ ॥೨೬೮॥

---

ಆಗ ದುಃಖದಿಂದ ಬಳಲುತ್ತಿರುವ ತನ್ನ ತಾಯಿತಂದೆಗಳನ್ನು ನೋಡಿ, ಅವರಿಗೆ ಆನಂದವನ್ನುಂಟುಮಾಡಲೋಸುಗ ಮಗನು ಮಾತಾಪಿತೃಗಳನ್ನು ಕುರಿತು ಹೀಗೆ ನುಡಿದನು. ॥೨೬೫॥

"ಅಮ್ಮ, ಏಕೆ ದುಃಖಪಡುತ್ತಿಯೆ? ಶಾಂತಳಾಗು ಹೀಗೆ ದುಃಖಿಸಬೇಡ. ನನ್ನ ಈ ಶರೀರವು ನಾಶವಾದ ಮಾತ್ರಕ್ಕೆ ನನಗೆಂದಿಗೂ ಹಾನಿಯೊದಗಲಾರದು. ॥೨೬೬॥

ನಾನು ನಿತ್ಯಸ್ವರೂಪನು (ಜನನಮರಣಗಳಿಗೊಳಗಾಗದ ಪರಬ್ರಹ್ಮಸ್ವರೂಪನು) ನನಗೆ ಮುಪ್ಪಾಗಲೀ ನಾಶವಾಗಲಿ ಇಲ್ಲ. ಹೀಗಿರುವಾಗ ನನಗೆ ನಾಶವು ಎಲ್ಲಿಂದ ಬಂದೀತು? ಪ್ರಾತರ್ಮಧ್ಯಾಹ್ನಸಾಯಂಕಾಲಗಳಲ್ಲಿಯೂ ಸಹ ನನ್ನ ವಿಷಯದಲ್ಲಿ ಈ ನಾಶರೂಪವಾದ ವೃತ್ತಾಂತವು ಸಂಭವಿಸಲಾರದು. ॥೨೬೭॥

ಪಾಂಚಭೌತಿಕವಾದ ಈ ಮಾನುಷಶರೀರವೇ ಅನವರತವೂ ಇರಬೇಕೆಂಬ ಬುದ್ಧಿಯಿದ್ದರೆ, ಹೇಳುವೆನು ಕೇಳು. ಈ ಶರೀರವು ಜನ್ಯವಾದದ್ದು. ಜನ್ಮವುಳ್ಳ ವಸ್ತುವಿಗೆ ಮರಣವು ನಿಶ್ಚಿತವಾಗಿದೆಯೇ ಹೊರತು ಅದು ಯಾವಾಗಲೂ ಸ್ಥಿರವಾಗಿರುವುದು ದುರ್ಲಭವೇ ಸರಿ. ॥೨೬೮॥

ಶರೀರನಾಶೋ ವಿಜ್ಞಾತೋ ದೈವಾದದ್ಯ ಮಯಾಽಧುನಾ ।
ಅತಃ ಪರಂ ಸಾವಧಾನಂ ಪೂಜಯಾಮಿ ಮಹೇಶ್ವರಂ ॥೨೬೯॥

ಭಸ್ಮನೋದ್ಧೂಲ್ಯ ಸರ್ವಾಂಗಂ ಧೃತ್ವಾ ತ್ರೈಪುಂಡ್ರಕಂ ತತಃ ।
ರುದ್ರಾಕ್ಷಧಾರಣಂ ಕೃತ್ವಾ ಪೂಜಯಾಮಿ ಸದಾ ಶಿವಂ ॥೨೭೦॥

ಶಿವಕಾಶೀತಿ ಸತತಂ ಪ್ರವಕ್ಷ್ಯೇ ನಾಮ ಶಾಂಕರಂ ।
ಏತನ್ನಾಮದ್ವಯಂ ಯಸ್ಮಾನ್ಮೋಕ್ಷದಂ ಸರ್ವಸಿದ್ಧಿದಂ ॥೨೭೧॥

ಶಿವ ಇತ್ಯಕ್ಷರದ್ವಂದ್ವಂ ಯೇನ ಸಂಸ್ಮೃತಮಾದರಾತ್ ।
ತೇನ ಸರ್ವಾಣಿ ಪಾಪಾನಿ ನಿರ್ಜಿತಾನ್ಯೇವ ವಸ್ತುತಃ ॥೨೭೨॥

ಕಾಶೀತಿ ಪರಮೋ ಮಂತ್ರೋ ಗರ್ಭರಕ್ಷಾಮಣಿಸ್ತತಃ ।
ಸ ಯೇನ ಜಪ್ಯತೇ ತೇನ ಜಿತಂ ಲೋಕತ್ರಯಂ ಧ್ರುವಂ ॥೨೭೩॥

---

ಅದೃಷ್ಟವಶದಿಂದ ನನಗೆ ನನ್ನ ಶರೀರನಾಶವಿಚಾರವು ತಿಳಿಯಿತಾದ್ದರಿಂದ ಇನ್ನು ಮುಂದೆ ಸಾವಧಾನವಾದ ಮನಸ್ಸಿನಿಂದ ಆ ಮಹೇಶ್ವರನನ್ನು ಪೂಜೆಮಾಡುವೆನು. ॥೨೬೯॥

ಸಕಲ ಅವಯವಗಳಿಗೂ ಭಸ್ಮವನ್ನು ಬಳಿದುಕೊಂಡು, ಅನಂತರ ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಧಾರಣೆಯನ್ನೂ ಧರಿಸಿ ಆ ಸರ್ವಮಂಗಳಸ್ವರೂಪನಾದ ಶಿವನನ್ನು ಯಾವಾಗಲೂ ಪೂಜೆಮಾಡುತ್ತೇನೆ. ॥೨೭೦॥

ಶಿವ, ಮತ್ತು ಕಾಶೀ ಎಂಬ ಎರಡು ಆ ಶಂಕರನ ದಿವ್ಯನಾಮಗಳನ್ನು ಯಾವಾಗಲೂ ಹೇಳುವೆನು. ಈ ಎರಡು ಹೆಸರುಗಳೂ ಸಕಲ ಇಷ್ಟ ಸಿದ್ಧಿಗಳನ್ನೂ ಕೊಡುವುವಲ್ಲದೇ ಕೊನೆಗೆ ಮೋಕ್ಷವನ್ನೂ ಕರುಣಿಸುವುವು. ॥೨೭೧॥

'ಶಿವ' ಎಂಬ ಎರಡು ಅಕ್ಷರಗಳನ್ನು ಆದರದಿಂದ ಸ್ಮರಣೆಮಾಡಿದವನು ಸಕಲ ಪಾಪಗಳನ್ನೂ ನಿಜವಾಗಿಯೂ ಜಯಿಸಿದಂತೆಯೇ ಆಗುವುದು. ॥೨೭೨॥

'ಕಾಶೀ' ಎಂಬ ಉತ್ಕೃಷ್ಟವಾದ ಮಂತ್ರವು ಗರ್ಭವನ್ನು ಕಾಪಾಡುವುದರಲ್ಲಿ ತತ್ಪರವಾದ ಮಣಿಯಂತಿರುವುದು. ಈ ಮಂತ್ರವನ್ನು ನಿಯಮದಿಂದ ಜಪಮಾಡುವವನು ಮೂರುಲೋಕಗಳನ್ನೂ ನಿಜವಾಗಿ ಜಯಿಸಿದಂತೆಯೇ ಆಗುವನು. ॥೨೭೩॥

ಶರೀರಸ್ಯಾವಸಾನೇಽಸ್ಮಿನ್ಕಾಶೀಪ್ರಾಪ್ತಿರ್ಮಮಾಽಧುನಾ ।
ದುರ್ಲಭಾ ಸಾ ಯತಃ ಕಾಶೀ ದೇವಾನಾಮಪಿ ದುರ್ಲಭಾ ॥೨೭೪॥

ಯಸ್ಯಾಂ ಕಾಶ್ಯಾಂ ಸುರಾಧೀಶೋ ವಿಶ್ವೇಶೋ ವಿಶ್ವವಂದಿತಃ ।
ಸಾಂಬಸ್ತಿಷ್ಠತಿ ಸಾ ಕಾಶೀ ದುರ್ಲಭೈವ ನೃಣಾಂ ಧ್ರುವಮ್ ॥೨೭೫॥

ಯಸ್ಯಾಂ ಕಾಶ್ಯಾಂ ನಿವಿಷ್ಟೇನ ಸ್ವರ್ಗಭೋಗಸ್ತೃಣೀಕೃತಃ ।
ಸಾ ಕಾಶೀ ಮೋಕ್ಷದಾ ನಿತ್ಯಾ ಕಥಂ ಪ್ರಾಪ್ಯಾ ಮಯಾಽಧುನಾ ॥೨೭೬॥

ಯಸ್ಯಾಂ ಕಾಶ್ಯಾಂ ತು ಚಂಡಾಲಃ ಪೂಜ್ಯತೇ ವಿಬುಧೋತ್ತಮೈಃ ।
ಸಾ ಕಾಶೀ ದುರ್ಲಭಾ ಜಾತಾ ಮರಣಾವಸರೇ ಮಮ ॥೨೭೭॥

ಯಸ್ಯಾಂ ನ ಕಲಿಪಾಪಾನಿ ಪ್ರರೋಹಂತಿ ಕದಾಚನ ।
ಸಾ ಕಾಶೀ ಮುಕ್ತಿದಾ ಸಾಕ್ಷಾನ್ಮರಣೇ ದುರ್ಲಭಾ ಮಮ ॥೨೭೮॥

---

ಈ ಶರೀರದ ನಾಶವಾದನಂತರ ದೇವತೆಗಳಿಗೂ ದುರ್ಲಭವಾದ ಆ ಕಾಶಿಯು ನನಗೂ ದುರ್ಲಭವೇ ಆಗುವುದು. ॥೨೭೪॥

ದೇವತೆಗಳಿಗೆ ಅಧಿಪತಿಯೂ, ಜಗದೊಡೆಯನೂ, ಸಕಲ ಜನಗಳಿಂದಲೂ ನಮಸ್ಕೃತನೂ ಆದ ಅಂಬಿಕಾರಮಣನು ನೆಲಸಿರುವ ಆ ಕಾಶೀಪಟ್ಟಣವು ಮಾನವರಿಗೆ ದುರ್ಲಭವೇ ಆಗಿರುವುದು. ॥೨೭೫॥

ಯಾವ ಕಾಶೀಪಟ್ಟಣದಲ್ಲಿ ವಾಸಮಾಡುವವನು ಸ್ವರ್ಗಸುಖವನ್ನೂ ತೃಣದಂತೆ ಭಾವಿಸುವನೋ ಅಂತಹ ಮೋಕ್ಷಪ್ರದವಾದ ಕಾಶಿಯು ನನಗೆ ಈಗ ಹೇಗೆ ತಾನೇ ದೊರಕೀತು ? ॥೨೭೬॥

ಚಂಡಾಲನೂ ಸಹ ಪಂಡಿತೋತ್ತಮರಿಂದ ಪೂಜಿಸಲ್ಪಡುವ ಆ ಕಾಶೀಪಟ್ಟಣವು ನನಗೆ ಮರಣಕಾಲದಲ್ಲಿಯೂ ದುರ್ಲಭವೇ ಆಗುವುದು. ॥೨೭೭॥

ಕಲಿಯುಗದ ಪಾಪಗಳಲ್ಲಿ ಸ್ವಲ್ಪವೂ ಎಂದಿಗೂ ತಲೆಹಾಕದ ಆ ಕಾಶೀಕ್ಷೇತ್ರವು ಮೋಕ್ಷಪ್ರದವೆನಿಸಿರುವುದು. ಅಂತಹ ಕಾಶಿಯು ಪ್ರತ್ಯಕ್ಷವಾಗಿ ನನ್ನ ಮರಣಕಾಲದಲ್ಲಿ ದುರ್ಲಭವಾಗಿರುವುದಲ್ಲಾ ! ॥೨೭೮॥

ಜನನೀಗರ್ಭದುಃಖಾನಿ ಕಾಶ್ಯಾಂ ತು ಮರಣೇ ಸತಿ ।
ನ ಬಾಧಂತೇ ನ ಬಾಧಂತೇ ನ ಬಾಧಂತೇ ನ ಸಂಶಯಃ ॥೨೭೯॥

ಸಂಸಾರಬೀಜನಾಶಸ್ತು ಕಾಶ್ಯಾಮೇವ ಪ್ರಜಾಯತೇ ।
ಸ ಬೀಜನಾಶೋ ನಾನ್ಯತ್ರ ಸತ್ಯಂ ಸತ್ಯಂ ನ ಸಂಶಯಃ ॥೨೮೦॥

ಮಮ ಜನ್ಮಾನ್ಯತೀತಾನಿ ಕೋಟಿಶೋ ದುಷ್ಟಯೋನಿಷು ।
ತೇಷು ದುಃಖಾನಿ ಭುಕ್ತಾನಿ ಕೋಟಿಶೋ ಹಿ ಮುಹುರ್ಮುಹುಃ ॥೨೮೧॥

ಮಾತೃಗರ್ಭೇ ಮಲಾಕ್ರಾಂತೇ ಮೂತ್ರಶೋಣಿತಸಂಕುಲೇ ।
ಮಹದ್ದುಃಖಂ ಮಯಾ ಭುಕ್ತಂ ಬಹುಧಾ ನಾತ್ರ ಸಂಶಯಃ ॥೨೮೨॥

ಪ್ರಸವಾವಸರೇ ದುಃಖಂ ಯದ್ಭುಕ್ತಂ ಪೂರ್ವಮುತ್ಕಟಂ ।
ತಾದೃಶಂ ದುಃಖಮನ್ಯೇನ ಭೋಕ್ತುಮೇವ ನ ಶಕ್ಯತೇ ॥೨೮೩॥

ನರಕೇಷು ವಿಚಿತ್ರೇಷು ಸಂಸ್ಥಿತಿಶ್ಚಾಭವನ್ಮಮ ।
ತೇಷು ದುಃಖಾನಿ ಭುಕ್ತಾನಿ ಬಹುಧಾಲಮತಃ ಪರಂ ॥೨೮೪॥

---

ಆ ಕಾಶೀಪಟ್ಟಣದಲ್ಲಿ ಮರಣಹೊಂದಿದರೆ ಮುಂದೆ ಜನ್ಮತಾಳಿ ಗರ್ಭದಲ್ಲಿ ವಾಸಮಾಡುವ ದುಃಖವು ಪುನಃ ಪುನಃ ನಮ್ಮನ್ನು ಎಂದಿಗೂ ಬಾಧಿಸುವುದಿಲ್ಲ. ಇದು ನಿಶ್ಚಯ. ॥೨೭೯॥

ಈ ಸಂಸಾರದುಃಖಜನಕವಾದ ಬೀಜವು ಕಾಶೀಕ್ಷೇತ್ರದಲ್ಲಿ ಮಾತ್ರ ನಾಶವಾಗುವುದೇ ಹೊರತು ಮತ್ತೆಲ್ಲಿಯೂ ಸತ್ಯವಾಗಿಯೂ ನಾಶಹೊಂದಲಾರದು. ॥೨೮೦॥

ದೇವ! ನಾನು ಅನೇಕ ಜನ್ಮಗಳಲ್ಲಿ ಕೋಟ್ಯಂತರ ದುಷ್ಟಯೋನಿಗಳಲ್ಲಿ ಅನೇಕ ದುಃಖಗಳನ್ನು ಪದೇ ಪದೇ ಅನುಭವಿಸಿದೆನು. ॥೨೮೧॥

ದೇವ! ನಾನಾವಿಧವಾದ ಮೂತ್ರ, ರಕ್ತ ಮೊದಲಾದ ಮಲಗಳಿಂದ (ಕಲ್ಮಷಗಳಿಂದ) ಯುಕ್ತವಾದ ತಾಯಿಯ ಗರ್ಭಕೋಶದಲ್ಲಿ ನೆಲಸಿ,(ನಾನು ಅನೇಕ ದುಃಖಗಳನ್ನನುಭವಿಸಿದೆನೆಂಬುದರಲ್ಲಿ ಸಂದೇಹವಿಲ್ಲ. ॥೨೮೨॥

ಹಿಂದೆ ಜನನಕಾಲದಲ್ಲಿ ನಾನು ಅನುಭವಿಸಿದ ಅತ್ಯುತ್ಕಟವಾದ ದುಃಖವನ್ನು ಮತ್ತಾರಿಂದಲೂ ಉಪಭೋಗಿಸಲು ಸಾಧ್ಯವೇ ಇಲ್ಲ. ॥೨೮೩॥

ವಿಚಿತ್ರವಾದ ನರಕಗಳಲ್ಲಿ ವಾಸಮಾಡಿ, ಅಲ್ಲಿ ನಾನಾ ವಿಧವಾದ ಕ್ಲೇಶಗಳನ್ನು

ಯತೋ ನಾರಾಧಿತಃ ಶಂಭುಃ ಪೂರ್ವಮಾದರಪೂರ್ವಕಂ ।
ಅತೋ ದುಃಖಾನಿ ಬಹುಧಾ ಪ್ರಾಪ್ತಾನ್ಯೇವ ಮಯಾ ಪುರಾ ॥೨೮೫॥

ವಿಜ್ಞಾತತನುನಾಶೋಽಹಂ ಭಸ್ಮೋದ್ಧೂಲನಪೂರ್ವಕಂ ।
ಪೂಜಯಿತ್ವಾ ಮಹಾದೇವಂ ಶಿವನಾಮ ವದಾಮ್ಯಹಂ ॥೨೮೬॥

ಮಮಾಸ್ಯ ತು ಶರೀರಸ್ಯ ನಾಪೇಕ್ಷಾ ವರ್ತತೇ ಧ್ರುವಂ ।
ಸ್ನೇಹಪಾಶೇನ ಭವತಾಂ ಶರೀರಪ್ರೀತಿರಸ್ತಿ ಮೇ ॥೨೮೭॥

ಕಿಯತ್ಕಾಲಮವಸ್ಥಾನಂ ಶರೀರಸ್ಯಾಸ್ಯ ರೋಚತೇ ।
ತವ ತನ್ಮೇ ವದಸ್ವಾದ್ಯ ತತ್ಕರಿಷ್ಯೇ ನ ಸಂಶಯಃ ॥೨೮೮॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಜನನೀ ನಿಜಗಾದ ಸಾ ।
ಸಮಾಲಿಂಗ್ಯಾಶ್ರುಪೂರ್ಣಾಕ್ಷೀ ಪುತ್ರಂ ವೀಕ್ಷ್ಯಾತಿಸುಂದರಂ ॥೨೮೯॥

---

ಅನುಭವಿಸಿದೆನು. ದೇವ ! ಇನ್ನು ಅದಕ್ಕಿಂತಲೂ ಹೆಚ್ಚಿನ ದುಃಖಗಳನ್ನನುಭವಿಸು ವುದೆಂದಿಗೂ ಬೇಡ ! ॥೨೮೪॥

ಆ ಶಂಭುವನ್ನು ಆದರದಿಂದ ನಾನು ಹಿಂದಿನ ಜನ್ಮಗಳಲ್ಲಿ ಪೂಜೆಮಾಡದಿ ರುವುದರಿಂದ ಈಗ ನಾನಾ ವಿಧವಾದ ದುಃಖಗಳನ್ನು ಅನುಭವಿಸಬೇಕಾಗಿ ಬಂದಿತು. ॥೨೮೫॥

ಈ ಶರೀರದ ನಾಶವನ್ನು ತಿಳಿದು, ಮೈಯ ಅಂಗಾಂಗಗಳಿಗೆಲ್ಲಾ ಭಸ್ಮೋದ್ಧೂ ಳನಮಾಡಿಕೊಂಡು, ಆ ಮಹಾದೇವನನ್ನು ಪೂಜೆಮಾಡಿ, ಯಾವಾಗಲೂ ಶಿವನಾ ಮವನ್ನು ಜಪಿಸುತ್ತಿರುವೆನು. ನಿಜವಾಗಿ ನನಗೆ ಈ ಶರೀರದ ಅಪೇಕ್ಷೆಯೇನೂ ಇಲ್ಲ. ನಿಮ್ಮ ಸ್ನೇಹಪಾಶಕ್ಕೆ ಒಳಗಾಗಿರುವುದರಿಂದ ಮಾತ್ರ ನನಗೆ ಕೊಂಚ ಈ ಶರೀರದಲ್ಲಿ ಪ್ರೀತಿಯಿರುವುದು. ॥೨೮೬-೨೮೭॥

ಅಪ್ಪ! ಈ ಶರೀರವು ಎಷ್ಟು ಕಾಲ ಇರಬೇಕೆಂದು ನೀವು ಅಪೇಕ್ಷಿಸುವರೋ ಅದನ್ನು ತಿಳಿಸಿದರೆ ಆಗ ಅದಕ್ಕೋಸ್ಕರ ಸಂದೇಹವಿಲ್ಲದೇ ಪ್ರಯತ್ನಿಸುವೆನು.'' ॥೨೮೮॥

ಮಗನು ಹೀಗೆ ನುಡಿದುದನ್ನು ಕೇಳಿ, ತಾಯಿಯಾದ ವಿಮಲಾಂಬೆಯು ಸುಂದರಶರೀರಿಯಾದ ತನ್ನ ಮಗನನ್ನು ತಬ್ಬಿಕೊಂಡು, ಕಣ್ಣೀರು ಸುರಿಸುತ್ತಾ

ಆಬ್ರಹ್ಮಕಲ್ಪಪುತ್ರೇದಂ ಶರೀರಂ ತವ ತಿಷ್ಠತು ।
ತಾವತಾ ಮಮ ಸಂಪ್ರೀತಿರನ್ಯಥಾ ದುಃಖಮೇವ ಮೇ ॥೨೯೦॥

ಇತ್ಯುದೀರಿತಮಾಕರ್ಣ್ಯ ಮಾತುಸ್ತದ್ವಚನಂ ಸುತಃ ।
ಭವಿಷ್ಯತಿ ತಥೈವೇತಿ ಜಗಾದ ವಚನಂ ಮುದಾ ॥೨೯೧॥

ಶರೀರರಕ್ಷಣೋಪಾಯಸ್ತಿಷ್ಠತ್ಯೇಕೋ ಮಹಾನ್ಮಮ ।
ತೇನೋಪಾಯೇನ ಮೇ ಮಾತಃ ಸ್ಥಾಸ್ಯತ್ಯೇಷಾ ತನುಃ ಸದಾ॥೨೯೨॥

ಶಿವಪೂಜೈವ ಸರ್ವೇಷಾಂ ಚತುರ್ವರ್ಗಫಲಪ್ರದಾ ।
ತತಃ ಸಾ ಕಿಮಮುಂ ದೇಹಂ ಸಮ್ಯಗ್ರಕ್ಷಿತುಮಕ್ಷಮಾ ॥೨೯೩॥

ಶಿವಪೂಜೈವ ಸರ್ವೇಷಾಂ ಸರ್ವಾಭೀಷ್ಟಪ್ರದಾಯಿನೀ ।
ತತಃ ಶಿವಾರ್ಚನಂ ನಿತ್ಯಂ ಕರಿಷ್ಯಾಮೀಷ್ಟಸಿದ್ಧಯೇ ॥೨೯೪॥

---

ಮಗನೇ, ಈ ನಿನ್ನ ಸುಂದರ ಶರೀರವು ಬ್ರಹ್ಮಕಲ್ಪವಿರುವವರೆಗೂ ಇದ್ದರೆ ಮಾತ್ರ ನನಗೆ ಸಂತೋಷವೇ ಹೊರತು, ಇಲ್ಲದಿದ್ದರೆ ದುಃಖವೆಂದೇ ತಿಳಿ. ॥೨೮೯-೨೯೦॥

ತಾಯಿಯ ಈ ಮಾತನ್ನು ಕೇಳಿ ಕುಮಾರನು, ಅಮ್ಮ! ನಿನ್ನ ಇಷ್ಟದಂತೆಯೇ ಆಗಲೆಂದು ಪ್ರೀತಿಯಿಂದ ನುಡಿದು, ತಾಯೇ, ಈ ಶರೀರವನ್ನು ಕಾಪಾಡಿಕೊಳ್ಳುವ ಒಂದು ದೊಡ್ಡ ಉಪಾಯವು ನನಗೆ ಗೊತ್ತಿರುವುದು. ಅದರ ಸಹಾಯದಿಂದ ಈ ನನ್ನ ಶರೀರವು ಯಾವಾಗಲೂ ಶಾಶ್ವತವಾಗಿ ಇರಬಲ್ಲದು. ॥೨೯೧-೨೯೨॥

ಎಲ್ಲರಿಗೂ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥ ಫಲವನ್ನು ಕೊಡುವ ಆ ಪರಶಿವನ ಪೂಜೆಯೇ ಈ ದೇಹವನ್ನು ಚೆನ್ನಾಗಿ ಕಾಪಾಡಲು ಸಮರ್ಥವಾಗಲಾರದೇ ಏನು? (ಅದರಿಂದಲೇ ಈ ಶರೀರರಕ್ಷಣೆಯೂ ಆಗುವುದು) ॥೨೯೩॥

ಆ ಪರಶಿವನ ಪೂಜೆಯೊಂದೇ ಎಲ್ಲರಿಗೂ ಸಕಲ ಇಷ್ಟಾರ್ಥಗಳನ್ನೂ ಕೊಡಬಲ್ಲುದಾದುದರಿಂದ ನಿತ್ಯವೂ ಇಷ್ಟಾರ್ಥಸಿದ್ಧಿಗೋಸ್ಕರ ನಾನೂ ಆ ಶಿವನನ್ನು ಪೂಜೆಮಾಡುತ್ತೇನೆ. ॥೨೯೪॥

ಬ್ರಹ್ಮತ್ವಂ ಬ್ರಹ್ಮಣೇ ದತ್ತಂ ಶಿವೇನ ಶಿವಪೂಜಯಾ ।
ತಾದೃಶಃ ಕಿಂ ಮಹಾದೇವಃ ಶರೀರಂ ಮೇ ನ ರಕ್ಷತಿ ॥೨೯೫॥

ವಿಷ್ಣುತ್ವಂ ವಿಷ್ಣವೇ ದತ್ತಂ ಶಿವೇನ ಶಿವಪೂಜಯಾ ।
ತಾದೃಶಃ ಕಿಂ ಮಹಾದೇವಃ ಶರೀರಂ ಮೇ ನ ರಕ್ಷತಿ ॥೨೯೬॥

ಇಂದ್ರತ್ವಂ ದತ್ತಮಿಂದ್ರಾಯ ಶಿವೇನ ಶಿವಪೂಜಯಾ ।
ತಾದೃಶಃ ಕಿಂ ಮಹಾದೇವಃ ಶರೀರಂ ಮೇ ನ ರಕ್ಷತಿ ॥೨೯೭॥

ಇತ್ಯುಕ್ತ್ವಾ ಪಿತರಂ ನತ್ವಾ ಬಭಾಷೇ ವಚನಂ ತದಾ ।
ಮೃತ್ಯುಂಜಯಮನುಂ ಮಹ್ಯಮಂಜಸೋಪದಿಶೇತಿ ಸಃ ॥೨೯೮॥

ತತಸ್ತಮಾಸ್ತಿಕಂ ದೃಷ್ಟ್ವಾ ಶಂಕರಾರ್ಚನತತ್ಪರಂ ।
ಆನಂದಪರಿಪೂರ್ಣೋಽಭೂದಾಶ್ಲಿಷ್ಯ ಸುತಮಾದರಾತ್ ॥೨೯೯॥

---

ತನ್ನನ್ನು ಭಕ್ತಿಯಿಂದ ಪೂಜೆಮಾಡಿದ ಬ್ರಹ್ಮನಿಗೆ ಬ್ರಹ್ಮಪದವಿಯನ್ನೂ ವಿಷ್ಣುವಿಗೆ ವಿಷ್ಣುಪದವಿಯನ್ನೂ ಕೊಟ್ಟಿರುವ ಆ ಮಹಾದೇವನು ಈ ನನ್ನ ಶರೀರವನ್ನು ಕಾಪಾಡಲಾರನೇ! ॥೨೯೫-೨೯೬॥

ಇಂದ್ರನಿಗೆ ದೇವೇಂದ್ರಪದವಿಯನ್ನು, ತನ್ನನ್ನು ಭಕ್ತಿಯಿಂದ ಪೂಜೆಮಾಡಿದುದರಿಂದ ಅನುಗ್ರಹಿಸಿದ ಆ ಮಹಾದೇವನು, ಈ ನನ್ನ ಶರೀರವನ್ನು ಕಾಪಾಡಲಾರನೇ, ಎಂದು ಹೇಳಿ ಆ ಕುಮಾರನು ತನ್ನ ತಂದೆಗೆ ನಮಸ್ಕಾರಮಾಡಿ, ಪೂಜ್ಯ ತಾತನೇ, ಜಾಗ್ರತೆಯಾಗಿ ನನಗೆ 'ಮೃತ್ಯುಂಜಯ' ಮಂತ್ರವನ್ನು ಉಪದೇಶಮಾಡಿ ಅನುಗ್ರಹಿಸೆಂದು ಪ್ರಾರ್ಥಿಸಿದನು. ॥೨೯೭-೨೯೮॥

ಮಗನ ಆ ಮಾತನ್ನು ಕೇಳಿ ತಂದೆಯು ಆಸ್ತಿಕನಾಗಿ ಆ ಶಂಕರನ ಪೂಜಾತತ್ಪರನಾಗಿರುವ ಮಗನನ್ನು ನೋಡಿ, ಆದರದಿಂದ ಅವನನ್ನು ತಬ್ಬಿಕೊಂಡು, ಆನಂದಭರಿತನಾದನು. ತಂದೆಯು ಮಗನ ಅಭಿಪ್ರಾಯದಂತೆ ಭಸ್ಮತ್ರಿಪುಂಡ್ರ, ರುದ್ರಾಕ್ಷ ಇವುಗಳನ್ನಲಂಕರಿಸಿಕೊಂಡು, ಯಾವವಿಧವಾದ ಕಲ್ಮಷಕ್ಕೂ ಆಶ್ರಯ ನಾಗದೇ ಇರುವ ಪರಿಶುದ್ಧನಾದ ಕುಮಾರನನ್ನು ತನ್ನ ತೊಡೆಯಮೇಲೆ ಕೂರಿಸಿ

ತತಸ್ತಂ ಭಸ್ಮರುದ್ರಾಕ್ಷಾಲಂಕೃತಾಂಗಮಕಲ್ಮಷಂ ।
ಪುತ್ರಂ ಸ್ವಾಂಕೇ ಸನ್ನಿವೇಶ್ಯ ಮನುಂ ತ್ರ್ಯಂಬಕಂ ದದೌ ॥೩೦೦॥

ತತಃ ಸಂತುಷ್ಟಹೃದಯಃ ಪ್ರಾಪ್ಯ ತ್ರ್ಯಂಬಕಂ ಮನುಂ ।
ಸಂಪೂಜ್ಯ ಪಿತರಂ ಸಮ್ಯಙ್ಮೇಧಾವೀ ನಿರ್ಯಯೌ ಗೃಹಾತ್ ॥೩೦೧॥

ತತಸ್ತಂ ನಿರ್ಗತಂ ದೃಷ್ಟ್ವಾ ಪುತ್ರಂ ತಜ್ಜನನೀ ತದಾ ।
ಹಾ ಪುತ್ರ ಪುತ್ರ ಪುತ್ರೇತಿ ತೇನೈವ ಸಹ ನಿರ್ಯಯೌ ॥೩೦೨॥

ತತಃ ಸಗತ್ವಾ ಮೇಧಾವೀ ಸರಸ್ತೀರಮನುತ್ತಮಂ ।
ಸ್ನಾನಂ ಚಕ್ರೇ ವಿಧಾನೇನ ಮನುಂ ತ್ರ್ಯಂಬಕಂ ಸ್ಮರನ್ ॥೩೦೩॥

ಸ್ನಾತ್ವಾ ವಾಸಃ ಸಮಾದಾಯ ಪ್ರೋಕ್ಷಿತಂ ಭಸ್ಮವಾರಿಣಾ ।
ಉದ್ಧೂಲನಂ ಚಕಾರಾದೌ ಮಂತ್ರಪೂತೇನ ಭಸ್ಮನಾ ॥೩೦೪॥

---

ಕೊಂಡು ಅವನಿಗೆ 'ತ್ರ್ಯಂಬಕಂ ಯಜಾಮಹೆ' ಎಂಬ ಪರಶಿವನ ಸಂಬಂಧವಾದ ಮೃತ್ಯುಂಜಯ ಮಂತ್ರವನ್ನು ಉಪದೇಶಮಾಡಿದನು. ॥೨೯೯-೩೦೦॥

ಆನಂತರ ಆ ಬಾಲಕನು ಮೃತ್ಯುಂಜಯಮಹಾಮಂತ್ರವನ್ನು ಪಡೆದು ಅತ್ಯಂತ ಸಂತೋಷಭರಿತನಾಗಿ, ತಂದೆತಾಯಿಗಳನ್ನು ಆದರದಿಂದ ಪೂಜೆಮಾಡಿ ಶಿವಭಕ್ತಿಯುತನೂ ಮೇಧಾವಿಯೂ ಆದ ಆ ಕುಮಾರನು ಮನೆಯಿಂದ ಹೊರ ಹೊರಟನು. ॥೩೦೧॥

ಕುಮಾರನು ಹಾಗೆ ಮನೆಯನ್ನು ಬಿಟ್ಟು ಹೊರಟದ್ದನ್ನು ನೋಡಿ ತಾಯಿಯು ಪುತ್ರವಿರಹವನ್ನು ತಾಳಲಾರದೇ ಮಗನೇ, ಕುಮಾರ ಎಂದು ಹಂಬಲಿಸುತ್ತಾ ಅವನ ಜೊತೆಯಲ್ಲಿಯೇ ಹೊರಟಳು. ॥೩೦೨॥

ಆನಂತರ ಮೇಧಾವಿಯಾದ ಆ ಕುಮಾರನು ಉತ್ತಮವಾದ ಸರೋವರದ ದಡವನ್ನು ಸೇರಿ ಅಲ್ಲಿ ವಿಧಿಪೂರ್ವಕವಾಗಿ 'ತ್ರ್ಯಂಬಕ' ಮಂತ್ರವನ್ನು ಸ್ಮರಿಸುತ್ತಾ ಸ್ನಾನಮಾಡಿ ಭಸ್ಮೋದಕದಿಂದ ಪ್ರೋಕ್ಷಿಸಲ್ಪಟ್ಟ ಬಟ್ಟೆಯನ್ನು ಧರಿಸಿಕೊಂಡು ಮಂತ್ರದಿಂದ ಪರಿಶುದ್ಧವಾದ ಭಸ್ಮವನ್ನು ಮೈ ಅಂಗಾಂಗಗಳಿಗೆಲ್ಲಾ ಉದ್ಧೂಳನ ಮಾಡಿಕೊಂಡನು. ॥೩೦೩-೩೦೪॥

ತ್ರಿಪುಂಡ್ರಾಲಂಕೃತಂ ಚಕ್ರೇ ಲಲಾಟಂ ಸಿತಭಸ್ಮನಾ ।
ತ್ರಿಯಾಯುಷೇತಿ ವೇದೋಕ್ತಂ ಸ್ಮರನ್ಮಂತ್ರಂ ಶಿವಾತ್ಮಕಂ ॥೩೦೫॥

ಆದೌ ಮೂರ್ಧ್ನಿ ವಿಧಾಯೈವ ತ್ರಿಪುಂಡ್ರಂ ಸಿತಭಸ್ಮನಾ ।
ತ್ರಿಪುಂಡ್ರಧಾರಣಂ ಚಕ್ರೇ ಲಲಾಟೇ ತದನಂತರಂ ॥೩೦೬॥

ತತೋಽಂಗೇಷ್ವಪಿ ಸರ್ವೇಷು ತ್ರಿಪುಂಡ್ರಂ ವಿಧಿಪೂರ್ವಕಂ ।
ಜಾಬಾಲೋಕ್ತೇನ ವರ್ಗೇಣ ಚಕಾರ ಸಿತಭಸ್ಮನಾ ॥೩೦೭॥

ತತಃ ಪರಂ ಯಥಾಯೋಗ್ಯಂ ರುದ್ರಾಕ್ಷಾಲಂಕೃತಃ ಶುಚಿಃ ।
ಸಂಧ್ಯಾಂ ಸಮಾಪ್ಯ ತದನು ನತ್ವಾ ಮಾತರಮಾದರಾತ್ ॥೩೦೮॥

ಸಂಪಾದ್ಯ ಬಿಲ್ವಪತ್ರಾಣಿ ಪುಷ್ಪಾಣಿ ವಿವಿಧಾನಿ ಚ ।
ವಿಧಾಯ ಮೃನ್ಮಯಂ ಲಿಂಗಂ ಪೂಜಯಾಮಾಸ ಶಂಕರಂ ॥೩೦೯॥

ಏವಂ ದಿನಾಷ್ಟಕಂ ತಸ್ಥೌ ಸಂಪೂಜ್ಯ ಪರಮೇಶ್ವರಂ ।
ಪ್ರಾಪ್ತೇಽಹ್ನಿ ನವಮೇ ಪ್ರಾತಃ ಪುನಃ ಪೂಜಾಪರೋಽಭವತ್॥೩೧೦॥

---

ಶಿವಸ್ವರೂಪವಾದ 'ತ್ರಿಯಾಯುಷ' ಎಂಬ ವೇದೋಕ್ತಮಂತ್ರವನ್ನು ಸ್ಮರಣೆಮಾಡುತ್ತಾ ಶುಭ್ರವಾದ ಭಸ್ಮದಿಂದ ಹಣೆಯಲ್ಲಿ ತ್ರಿಪುಂಡ್ರಧಾರಣೆ ಮಾಡಿಕೊಂಡನು. ಮೊದಲು ತಲೆಯಲ್ಲಿಯೂ ಅನಂತರ ಹಣೆಯಲ್ಲಿಯೂ ತ್ರಿಪುಂಡ್ರಗಳನ್ನು ಧರಿಸಿಕೊಂಡನು. ॥೩೦೫-೩೦೬॥

ಹಾಗೆಯೇ ಇತರ ಅವಯವಗಳಿಗೆಲ್ಲಾ ವಿಧಿಪೂರ್ವಕವಾಗಿ ಶುಭ್ರವಾದ ಭಸ್ಮವನ್ನು ಬಳಿದುಕೊಂಡು ಜಾಬಾಲಮಹರ್ಷಿಯು ಹೇಳಿದ ರೀತಿಯಲ್ಲಿ ಭಸ್ಮತ್ರಿಪುಂಡ್ರವನ್ನೂ ಮತ್ತು ಯಥಾಶಕ್ತಿ ರುದ್ರಾಕ್ಷಗಳನ್ನೂ ಅಲಂಕರಿಸಿಕೊಂಡು, ಶುಚಿರ್ಭೂತನಾಗಿ ನಿತ್ಯಸಂಧ್ಯಾಕರ್ಮಗಳನ್ನು ನೆರವೇರಿಸಿಕೊಂಡು ಅನಂತರ ಆದರದಿಂದ ತಾಯಿಗೆ ನಮಸ್ಕಾರಮಾಡಿದನು. ॥೩೦೭-೩೦೮॥

ಆಮೇಲೆ ನಾನಾವಿಧವಾದ ಬಿಲ್ವಪತ್ರೆಗಳನ್ನೂ ಹೂಗಳನ್ನೂ ಸಂಗ್ರಹಿಸಿಕೊಂಡು ಮಣ್ಣಿನಿಂದ ಮಾಡಿದ ಶಿವಲಿಂಗದಲ್ಲಿ ಶಂಕರನನ್ನು ಭಕ್ತಿಯಿಂದ ಪೂಜೆಮಾಡಿದನು. ॥೩೦೯॥

ಹೀಗೆ ಎಂಟು ದಿನಗಳ ಕಾಲ ಆ ಪರಮೇಶ್ವರನನ್ನು ಪೂಜೆಮಾಡಿ ಒಂಭತ್ತನೆಯ ದಿವಸ ಪ್ರಾತಃಕಾಲ ಪುನಃ ಶಿವಪೂಜಾತತ್ಪರನಾದನು. ॥೩೧೦॥

ಆದಾಯ ಜಲಪುಷ್ಪಾದೀನ್ಯನೇಕಾನಿ ಶಿವಾರ್ಚಕಃ ।
ಸಂಕಲ್ಪಪೂರ್ವಕಂ ಶಂಭೋಶ್ಚಕ್ರೇ ರುದ್ರಾಭಿಷೇಚನಂ ॥೩೧೧॥

ತದೈವ ಮೃತ್ಯುರ್ವಿವಿಧೈರ್ದೂತೈರುಗ್ರೈಃ ಸಮಾವೃತಃ ।
ಸಮಾಯಾತಿ ತದಾ ಕ್ರುದ್ಧೋ ವಿಮೃಶಂಸ್ತಮಿತಸ್ತತಃ ॥೩೧೨॥

ತದಾ ತಮಾಗತಂ ವೀಕ್ಷ್ಯ ಪುತ್ರಂ ಸಂವೀಕ್ಷ್ಯ ಬಾಲಕಂ ।
ಉವಾಚ ವಚನಂ ಭೀತ್ವಾ ತನ್ಮಾತಾ ಸ್ವಸುತಂ ಪ್ರತಿ ॥೩೧೩॥

॥ ವಿಮಲೋವಾಚ ॥

ಪುತ್ರ ಕೋಽಯಮಿಹಾಯಾತಿ ಪಶ್ಯ ಪಶ್ಯಾತಿಭೀಷಣಃ ।
ಪ್ರಾಯಶೋ ಮೃತ್ಯುರೇವಾಯಂ ಭವಿಷ್ಯತಿ ನ ಸಂಶಯಃ ॥೩೧೪॥

ವಿಶೀರ್ಣ್ಯಂ ಜಾಯತೇ ನೂನಮಿದಾನೀಂ ಹೃದಯಂ ಮಮ ।
ನಾನುಭೂತಂ ಮಯಾ ಪೂರ್ವಂ ಭಯಮೇತಾದೃಶಂ ಭೃಶಂ ॥೩೧೫॥

---

ನೀರು, ಹೂ, ಮೊದಲಾದ ಅನೇಕ ಪೂಜಾಸಾಧನಗಳನ್ನು ತೆಗೆದುಕೊಂಡು ಆ ಶಿವಪೂಜಾತತ್ಪರನಾದ ಕುಮಾರನು ಪೂಜಾಸಂಕಲ್ಪಮಾಡಿ, ಆ ಶಂಕರನಿಗೆ ವಿಧಿಪೂರ್ವಕವಾದ ರುದ್ರಾಭಿಷೇಕವನ್ನು ಮಾಡಿದನು. ॥೩೧೧॥

ಅದೇ ಸಮಯದಲ್ಲಿಯೇ ಮೃತ್ಯುವೂ ಅನೇಕ ಭಯಂಕರರಾದ ತನ್ನ ದೂತರೊಡನೆ ಪರಿವೃತನಾಗಿ, ಅತ್ಯಂತ ಕೋಪದಿಂದ ಆ ಬಾಲಕನನ್ನೇ ಎಲ್ಲೆಲ್ಲಿಯೂ ಹುಡುಕುತ್ತಾ ಬರುತ್ತಿದ್ದನು. ॥೩೧೨॥

ಹಾಗೆ ಬರುತ್ತಿರುವ ಮೃತ್ಯುವನ್ನು ನೋಡಿ, ತಾಯಿಯಾದ ವಿಮಲಾದೇವಿಯು ಭಯದಿಂದ ಬಾಲಕನಾದ ತನ್ನ ಮಗನನ್ನು ಕುರಿತು, ಹೀಗೆ ನುಡಿದಳು. ॥೩೧೩॥

ಮಗನೇ! ಇವನಾರು? ಅತಿಭಯಂಕರನಾದ ಈತನನ್ನು ನೋಡು, ಪ್ರಾಯಶಃ ಈತನು ಸಾಕ್ಷಾನ್ಮೃತ್ಯುವೇ ಆಗಿರುವನೆಂಬುದರಲ್ಲಿ ಸಂದೇಹವೇ ಇಲ್ಲ. ॥೩೧೪॥

ಹಿಂದೆ ನಾನು ಈರೀತಿಯಾದ ಭಯವನ್ನೆಂದೂ ವಿಶೇಷವಾಗಿ ಅನುಭವಿಸದೇ ಇದ್ದುದರಿಂದ ಈಗ ನಿಜವಾಗಿಯೂ ನನ್ನ ಹೃದಯವು ಒಡೆದುಹೋಗುತ್ತಿರುವುದು. ಅಯ್ಯೋ! ಮುಂದೇನು ಗತಿ! ಎಂದು ತಾಯಿಯಾದ ವಿಮಲೆಯು ಗೋಳಿಟ್ಟಳು. ॥೩೧೫॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಪೂಜಯನ್ಶಂಕರಂ ಮುದಾ ।
ಮೌನೀ ಧೈರ್ಯಂ ವಹೇತ್ಯೇನಾಂ ಜ್ಞಾಪಯಾಮಾಸ ಸಂಜ್ಞಯಾ ॥೩೧೬॥

ತತೋ ಯಥಾಕ್ರಮಂ ಪೂಜಾಂ ಕೃತ್ವಾ ದೇವಸ್ಯ ಶೂಲಿನಃ ।
ತ್ರ್ಯಂಬಕಂ ಮಹಾಮಂತ್ರಂ ಜಜಾಪ ಸ್ಥಿರಮಾನಸಃ ॥೩೧೭॥

ತತಃ ಸ್ತೋತ್ರಂ ಚಕಾರೇದಂ ಮಹಾಮೃತ್ಯುವಿನಾಶಕಂ ।
ಅಂಜಲಿಂ ಮೂರ್ಧ್ನಿ ವಿನ್ಯಸ್ಯ ಧ್ಯಾಯನ್ನೇವ ತ್ರಿಶೂಲಿನಂ ॥೩೧೮॥

॥ ಮೇಧಾವ್ಯುವಾಚ ॥

ಓಂ ನಮಃ ಶಂಭವೇ ನಿತ್ಯಂ ಮೃತ್ಯುಂಜಯ ನಮೋಽಸ್ತು ತೇ ।
ಓಂ ನಮಃ ಪಾರ್ವತೀನಾಥ ಶರಣಾಗತವತ್ಸಲ ॥೩೧೯॥

ಓಂ ನಮೋ ವಿಶ್ವರೂಪಾಯ ಓಂ ನಮೋಽನಂತಮೂರ್ತಯೇ ।
ಓಂ ನಮೋ ರೂಪಹೀನಾಯ ನಾನಾರೂಪಾಯ ತೇ ನಮಃ ॥೩೨೦॥

---

ತನ್ನ ತಾಯಿಯಾಡಿದ ಈ ಮಾತುಗಳನ್ನು ಕೇಳಿ ಸಂತೋಷದಿಂದ ಆ ಶಂಕರನನ್ನು ಪೂಜೆಮಾಡುತ್ತಾ ಮೌನವ್ರತವನ್ನಾಚರಿಸಿದ್ದ ಕುಮಾರನು ತನ್ನ ತಾಯಿಗೆ, ಅಮ್ಮ! ಹೆದರದೇ ಧೈರ್ಯವನ್ನು ತಾಳೆಂದು ಸಂಜ್ಞೆ ಮಾಡಿದನು. ॥೩೧೬॥

ಅನಂತರ ತಾನು ತ್ರಿಶೂಲಾಯುಧಧಾರಿಯಾದ ಆ ಮಹಾದೇವನನ್ನು ವಿಧಿಪೂರ್ವಕವಾಗಿ ಪೂಜಿಸಿ, ಮುಕ್ಕಣ್ಣನಾದ ಆ ಮಹೇಶ್ವರನ ಸಂಬಂಧಿಯಾದ ಮೃತ್ಯುಂಜಯಮಂತ್ರವನ್ನು ಸ್ಥಿರಮನಸ್ಸಿನಿಂದ ಜಪಮಾಡಿದನು. ॥೩೧೭॥

ಆಮೇಲೆ ಕೈಗಳನ್ನು ಜೋಡಿಸಿ ತಲೆಯಮೇಲಿಟ್ಟುಕೊಂಡು ತ್ರಿಶೂಲಹಸ್ತನಾದ ಮಹಾದೇವನನ್ನು ಧ್ಯಾನಮಾಡುತ್ತಾ ಮಹಾಮೃತ್ಯುವನ್ನೂ ನಾಶಮಾಡುವ ಈ ಸ್ತೋತ್ರವನ್ನು ಹೀಗೆ ಪಠಿಸಿದನು. ॥೩೧೮॥

ಸಕಲ ಜಗತ್ತಿಗೂ ಸುಖವನ್ನು ದೊರಕಿಸುವವನೂ, ಮೃತ್ಯುವನ್ನು ಜಯಿಸಿದವನೂ, ಪಾರ್ವತೀದೇವಿಯ ರಮಣನೂ, ಮರೆಹೊಕ್ಕವರನ್ನು ಪ್ರೀತಿಯಿಂದ ಕಾಪಾಡುವವನೂ ಆದ ಮಹಾದೇವನೇ, ನಿನಗೆ ನಮಸ್ಕಾರಮಾಡುವೆನು. ॥೩೧೯॥

ಜಗತ್ಸ್ವರೂಪನೂ, ಅಪಾರವಾದ ಆಕಾರವುಳ್ಳವನೂ, ಸ್ವತಃ ರೂಪವಿಲ್ಲದವನೂ ತನಗೆ ಬೇಕಾದಾಗ ನಾನಾರೂಪುಗಳನ್ನು ಧರಿಸಬಲ್ಲವನೂ ಆದ ದೇವನೇ ನಿನಗೆ ನಮಸ್ಕಾರಮಾಡುವೆನು. ॥೩೨೦॥

ಓಂ ನಮೋ ನಿಷ್ಕಲೇಶಾಯ ಓಂ ನಮೋ ನಿರ್ಗುಣಾಯ ತೇ ।
ಓಂ ನಮೋ ನಿರ್ವಿಕಾರಾಯ ಶಾಂತಾಕಾರಾಯ ತೇ ನಮಃ ॥೩೨೧॥

ಓಂ ನಮೋ ನಿಷ್ಪ್ರಪಂಚಾಯ ನಮಃ ಶ್ರುತ್ಯಾತ್ಮಕಾಯ ತೇ ।
ಓಂ ನಮಃ ಕಾಲರೂಪಾಯ ಕಾಲಾತೀತಾಯ ತೇ ನಮಃ ॥೩೨೨॥

ಓಂ ನಮಃ ಶ್ರೀಮಹೇಶಾಯ ಸರ್ವಾಧಾರಾಯ ತೇ ನಮಃ ।
ಓಂ ನಮಃ ಪುಣ್ಯರೂಪಾಯ ಪುಣ್ಯಾತೀತಾಯ ತೇ ನಮಃ ॥೩೨೩॥

ಓಂ ನಮೋ ಭೂಸ್ವರೂಪಾಯ ಓಂ ನಮೋ ಜಲಮೂರ್ತಯೇ ।
ಓಂ ನಮೋಽಗ್ನಿಸ್ವರೂಪಾಯ ಓಂ ನಮೋ ವಾಯುಮೂರ್ತಯೇ ॥೩೨೪॥

ಓಂ ನಮ ಆಕಾಶರೂಪಾಯ ದಿಕ್ಸ್ವರೂಪಾಯ ತೇ ನಮಃ ।
ಓಂ ನಮಃ ಕಾಲರೂಪಾಯ ಯಜ್ವರೂಪಾಯ ತೇ ನಮಃ ॥೩೨೫॥

ಓಂ ನಮೋ ಭಾನುರೂಪಾಯ ಚಂದ್ರರೂಪಾಯ ತೇ ನಮಃ ।
ಓಂ ನಮಃ ಸರ್ವರೂಪಾಯ ಶರಣ್ಯಾಯ ನಮೋ ನಮಃ ॥೩೨೬॥

---

ಕಲ್ಮಷಗಳಿಲ್ಲದವನೂ, ಗುಣರಹಿತನೂ, ಯಾವ ವಿಧವಾದ ವಿಕಾರಗಳನ್ನೂ ಹೊಂದದವನೂ, ಶಾಂತವಾದ ಆಕೃತಿಯಿಂದ ಶೋಭಿಸುತ್ತಿರುವವನೂ ಆದ ನಿನಗೆ ನಮಸ್ಕಾರವು. ॥೩೨೧॥

ಈ ಪ್ರಾಪಂಚಿಕಕ್ಲೇಶಗಳಿಗೊಳಗಾಗದವನೂ, ವೇದಸ್ವರೂಪನೂ, ಕಾಲ ಸ್ವರೂಪನೂ, ಕಾಲಸ್ವರೂಪನಾದ ಯಮನನ್ನು ನಿಗ್ರಹಿಸಿ ಅವನನ್ನು ಮೀರಿರು ವನೂ ಆದ ದೇವದೇವನಿಗೆ ನಮಸ್ಕಾರಮಾಡುವೆನು. ॥೩೨೨॥

ಅಪಾರವಾದ ಐಶ್ವರ್ಯಗಳಿಗೆ ಅಧಿಪತಿಯೂ, ಸಕಲ ಜಗತ್ತಿಗೂ ಆಧಾರನೂ ಸಾಕ್ಷಾತ್ಪುಣ್ಯಸ್ವರೂಪನೂ, ಪುಣ್ಯವನ್ನೇ ಅತಿಕ್ರಮಿಸಿದವನೂ ಆದ ಮಹಾದೇವ ನಾದ ನಿನಗೆ ಪ್ರಣಾಮಗಳು. ॥೩೨೩॥

ಭೂಮಿ, ನೀರು, ಅಗ್ನಿ, ವಾಯು, ಆಕಾಶ, ದಿಕ್ಕುಗಳು, ಕಾಲ, ಯಜಮಾನ, ಸೂರ್ಯ, ಚಂದ್ರ, ಇವರುಗಳ ರೂಪವುಳ್ಳವನೂ, ಅಲ್ಲದೇ ಸಕಲ ಚರಾಚರಾತ್ಮಕವಾದ ಪ್ರಪಂಚದ ಸ್ವರೂಪನೇ ತಾನಾಗಿರುವವನೂ, ತನ್ನ ಭಕ್ತರಿ

ನಮಸ್ತೇ ರುದ್ರಮನ್ಯವ ಉತೋತ ಇಷವೇ ನಮಃ
ಇತ್ಯಾದಿತಂ ವೋಜಂಭೇ ದಧಾಮೀತಿ ಪರ್ಯಂತಂ ।

ನಮಕಂ ಪಠಿತ್ವಾ ಸ್ತೋತ್ರಂ—

ಪ್ರಣತೋಽಸ್ಮಿ ಮಹಾದೇವ ಪ್ರಪನ್ನೋಽಸ್ಮಿ ಸದಾಶಿವ
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೨॥

ಗೌರೀಪತೇ ವಿರೂಪಾಕ್ಷ ಶರಣಾಗತವತ್ಸಲ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೨॥

ಕಾಲಕೂಟಧರ ಶ್ರೀಮನ್ಕಾಲಕಾಲ ಕೃಪಾನಿಧೇ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೪॥

---

ಗೆಲ್ಲಾ ರಕ್ಷಕನೆನಿಸಿರುವನೂ ಆದ ದೇವೋತ್ತಮನೇ! ನಿನಗೆ ನಮಸ್ಕಾರಮಾಡು ವೆನು. ॥೩೨೪-೩೨೫-೩೨೬॥

" ನಮಸ್ತೇ ರುದ್ರಮನ್ಯವ ಉತೋತ ಇಷವೇ ನಮಃ ಎಂಬ ಮಂತ್ರದಿಂದ ಪ್ರಾರಂಭವಾಗಿ ವೋ ಜಂ ಭೇ ದಧಾಮಿ " ಎನ್ನುವವರೆಗಿರುವ ಶ್ರೀರುದ್ರದ ಪ್ರತಿ ಮಂತ್ರವನ್ನು ಚ್ಚರಿಸಿದನಂತರ ಹೀಗೆ ಸ್ತೋತ್ರಮಾಡಿದನು.

ಮಹಾದೇವ! ನಿನಗೆ ತಲೆಬಾಗಿ ನಮಸ್ಕರಿಸುವೆನು. ನಿತ್ಯಮಂಗಳಸ್ವರೂಪ ನಾದ ಸ್ವಾಮಿಯೇ! ನಿನ್ನ ಮರೆಬಿದ್ದಿರುವೆನು. ಎಲೈ ಮೃತ್ಯುವನ್ನು ಜಯಿಸಿದ ಮಹೇಶನೇ! ನನಗೊದಗಿರುವ ದೊಡ್ಡ ವಿಪತ್ತನ್ನು ನಿವಾರಿಸು ಸ್ವಾಮಿ! ನಿನಗೆ ಪ್ರಣಾಮಮಾಡುವೆನು. ॥೩೨॥

ಗೌರೀರಮಣನಾದ ಶಂಭುವೇ! ಲೋಕದಲ್ಲಿ ಯಾರಿಗೂ ಇಲ್ಲದೇ ಇರುವ ಮೂರು ಕಣ್ಣುಗಳುಳ್ಳವನಾದ್ದರಿಂದ ನೀನು ವಿರೂಪಾಕ್ಷನೆನಿಸಿರುವೆ. ಮರೆಹೊಕ್ಕ ವರಲ್ಲಿವಾತ್ಸಲ್ಯವುಳ್ಳವನೂ, ಮೃತ್ಯುವನ್ನು ಜಯಿಸಿದವನೂ ಆದ ಸ್ವಾಮಿಯೇ! ಈಗ ನನಗೆ ಒದಗಿರುವ ದೊಡ್ಡ ಮೃತ್ಯುವನ್ನು ನಿವಾರಿಸುವನಾಗು. ಇದೋ ನಿನಗೆ ನಮಸ್ಕಾರಮಾಡುವೆನು. ॥೩೩॥

ಕಾಲಕೂಟವಿಷವನ್ನು ಕೊರಳಲ್ಲಿ ಧರಿಸಿರುವವನೂ, ಸಂಪದ್ಯುಕ್ತನೂ, ಯಮ ನನ್ನು ನಿಗ್ರಹಿಸಿದವನೂ, ದಯಾಸಮುದ್ರನೂ, ಮೃತ್ಯುವನ್ನು ಜಯಿಸಿದವನೂ,

ಚಂದ್ರಶೇಖರ ವಿಶ್ವಾತ್ಮನ್ಕರುಣಾಕರ ಶಂಕರ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ ॥೩೩೦॥

ಋಗ್ಯಜುಃಸಾಮರೂಪೇಶ ತ್ರಿಲೋಚನ ಸುರೋತ್ತಮ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ ॥೩೩೧॥

ಅನಂತಾಮೇಯಕಲ್ಯಾಣ ಕಲ್ಯಾಣಗುಣಸಂಶ್ರಯ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ ॥೩೩೨॥

ಸುರೇಶ್ವರ ಸುರಾಧ್ಯಕ್ಷ ದಗ್ಧತ್ರಿಪುರಕಾನನ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ ॥೩೩೩॥

ತ್ರಿಶೂಲಪಾಣೇ ಪಾಪಾರಿನ್ ಕಲ್ಪಕ್ಷಯಕರಾನಘ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ ॥೩೩೪॥

---

ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಪ್ರಪಂಚಸ್ವರೂಪನೂ, ದಯಾಸಮುದ್ರನೂ, ಮಂಗಳಕರನೂ ಆದ ಮೃತ್ಯುಂಜಯ ದೇವನೇ! ನಿನಗೆ ನಮಸ್ಕಾರಮಾಡುವೆನು. ನನ್ನ ಈ ದೊಡ್ಡ ಮೃತ್ಯುವನ್ನು ನಿವಾರಣೆಮಾಡಿ ಕಾಪಾಡುವನಾಗು? ॥೩೨೯-೩೩೦॥

ಋಗ್ಯಜುಃ ಸಾಮಗಳೆಂಬ ಮೂರು ವೇದಗಳಿಗೂ ಒಡೆಯನೂ, ಮೂರು ಕಣ್ಣುಳ್ಳವನೂ, ದೇವತೋತ್ತಮನೂ, ಮೃತ್ಯುವನ್ನು ಜಯಿಸಿದವನೂ, ಅಪಾರವೂ ಎಣಿಸಲು ಅಸಾಧ್ಯವೂ ಆದ ಕಲ್ಯಾಣಗುಣಗಳಿಗೆ ಆಶ್ರಯನೂ, ಎನಿಸಿದ ಮೃತ್ಯುಂಜಯದೇವನೇ! ನಿನಗೆ ನಮಸ್ಕಾರಮಾಡುವೆನು. ನನಗೆ ಒದಗಿರುವ ಈ ದೊಡ್ಡ ಮೃತ್ಯುವನ್ನು ನಿವಾರಿಸು. ॥೩೩೧-೩೩೨॥

ದೇವತೆಗಳಿಗೆಲ್ಲಾ ಅಧಿಪತಿಯೂ, ದೇವತಾಧ್ಯಕ್ಷನೂ, ತ್ರಿಪುರಾಸುರರೆಂಬ ಕಾಡುಗಳನ್ನು ಸುಟ್ಟವನೂ, ಮೃತ್ಯುವನ್ನು ಜಯಿಸಿದವನೂ, ತ್ರಿಶೂಲಾಯುಧವನ್ನು ಧರಿಸಿರುವವನೂ, ಪಾಪಗಳಿಗೆಲ್ಲಾ ಶತ್ರುವೂ, ಕಲ್ಪದ ಕೊನೆಯಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನೂ, ನಿರ್ದುಷ್ಟನೂ, ಆದ ಮೃತ್ಯುಂಜಯಸ್ವಾಮಿಯೇ! ನನಗೆ ಒದಗಿರುವ ಈ ಮಹಾಮೃತ್ಯುವನ್ನು ನಿವಾರಣೆಮಾಡುವನಾಗು. ॥೩೩೩-೩೩೪॥

ಪಾಶಾಂಕುಶಧರ ಶ್ರೀಮನ್ನಮೋ ಡಮರುಭೂಷಣ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೩೫॥

ಭಸ್ಮೋದ್ಧೂಲಿತಸರ್ವಾಂಗ ಹರ ನಿರ್ಧೂತಕಲ್ಮಷ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೩೬॥

ಪ್ರದರ್ಶಯ ಮಹಾಶೂಲಂ ಕಲ್ಪಕ್ಷಯಕರಂ ಹರ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೩೭॥

ಭುಜಂಗಭೂಷಣ ಶ್ರೀಮನ್ವೃಷಭಧ್ವಜ ವಿಶ್ವಗ ।
ನಿವಾರಯ ಮಹಾಮೃತ್ಯುಂ ಮೃತ್ಯುಂಜಯ ನಮೋಽಸ್ತು ತೇ॥೩೩೮॥

ಇತಿ ಸ್ತುತ್ವಾ ಮಹಾದೇವಂ ದತ್ವಾ ಪುಷ್ಪಾಂಜಲಿಂ ತತಃ ।
ಪ್ರಣಮ್ಯ ಬಹುಧಾ ಪ್ರೀತ್ಯಾ ನನರ್ತಾಸ್ವೇದಮಾದರಾತ್ ॥೩೩೯॥

---

ಪಾಶ ಮತ್ತು ಅಂಕುಶ ಈ ಆಯುಧಗಳನ್ನು ಹಿಡಿದಿರುವವನೂ, ಕಾಂತಿಮಂತನೂ, ಡಮರುಗ ವಾದ್ಯದಿಂದ ಅಲಂಕೃತನೂ, ಮೃತ್ಯುವನ್ನು ಜಯಿಸಿದವನೂ, ಭಸ್ಮದಿಂದ ಸಕಲ ಅವಯವಗಳನ್ನೂ ಉದ್ಧೂಳನಮಾಡಿಕೊಂಡಿರುವನೂ, ಭಕ್ತರ ಪಾಪಗಳನ್ನೆಲ್ಲಾ ನಾಶಮಾಡುವವನೂ, ಕಲ್ಮಷಗಳಿಲ್ಲದವನೂ, ಆದ ಮೃತ್ಯುಂಜಯ ಸ್ವಾಮಿಯೇ! ನಿನಗೆ ನಮಸ್ಕಾರ ಮಾಡುವೆನು. ದೇವ! ನನಗೆ ಒದಗಿರುವ ದೊಡ್ಡ ಮೃತ್ಯುವನ್ನು ನಿವಾರಿಸಿ ಸಲಹುವನಾಗು. ॥೩೩೫-೩೩೬॥

ಪ್ರಪಂಚವೆಲ್ಲಾ ಪ್ರಳಯವಾಗುವಂತೆ ಮಾಡುವ ಸಾಮರ್ಥ್ಯವುಳ್ಳ ನಿನ್ನ ತ್ರಿಶೂಲಾಯುಧವನ್ನು ತೋರಿಸಿ ಈ ದೊಡ್ಡ ಮೃತ್ಯುವನ್ನು ನಿವಾರಿಸುವನಾಗು. ಸರ್ಪಾಭರಣನಾದ ಸ್ವಾಮಿಯೇ! ನಿನಗೆ ಪ್ರಣಾಮಮಾಡುವೆನು. ಕಾಂತಿಯುಕ್ತವಾದ ವೃಷಭವನ್ನು ಧ್ವಜವಾಗಿ ಮಾಡಿಕೊಂಡು, ಸಕಲ ಪ್ರಪಂಚದಲ್ಲಿಯೂ ಸಂಚರಿಸುವ ಮೃತ್ಯುಂಜಯ ದೇವನೇ! ನನಗೆ ಒದಗಿರುವ ಈ ಅಪಾರವಾದ ಮೃತ್ಯುವನ್ನು ನಿವಾರಣೆಮಾಡಿ ಉದ್ಧಾರಮಾಡು ಸ್ವಾಮಿ! ॥೩೩೭-೩೩೮॥

ಈರೀತಿಯಾಗಿ ಮೇಧಾವಿಯೆನಿಸಿದ ಆ ಬ್ರಾಹ್ಮಣ ಕುಮಾರನು ಮಹಾದೇವನನ್ನು ಸ್ತೋತ್ರಮಾಡಿ, ಪುಷ್ಪಾಂಜಲಿಯನ್ನು ಸಮರ್ಪಿಸಿ ಪ್ರದಕ್ಷಿಣ ನಮಸ್ಕಾರ ಮಾಡಿ, ಆ ದೇವದೇವನ ಮುಂದೆ ಬೆವರು ಬರುವವರೆಗೂ ಆದರದಿಂದಲೂ ಪ್ರೀತಿಯಿಂದಲೂ ನರ್ತನಮಾಡಿದನು. ॥೩೩೯॥

ಪುನಃ ಸಂಪೂಜ್ಯ ವಿಶ್ವೇಶಂ ಬಿಲ್ವಪತ್ರೈರ್ಮನೋಹರೈಃ ।
ಪುನರ್ಮೃತ್ಯುಹರಂ ಮಂತ್ರಂ ಜಜಾಪ ದ್ವಿಜಪುಂಗವಃ ॥೩೪೦॥

ತದಾನೀಂ ದ್ವಿಜಮಾಲೋಕ್ಯ ಶಿವಪೂಜಾಪರಾಯಣಂ ।
ಚಿತ್ರಗುಪ್ತಂ ವಿಲೋಕ್ಯೇದಂ ಮೃತ್ಯುರ್ವಚನಮಬ್ರವೀತ್ ॥೩೪೧॥

॥ ಮೃತ್ಯುರುವಾಚ ॥

ಏನಮಲ್ಪಾಯುಷಂ ವಿಪ್ರಮಹಂ ನೇತುಮುಪಾಗತಃ ।
ಪಾಶಪ್ರಹರಣೇ ಶಕ್ತಿಃ ಕುಂಠಿತೈವ ಮಮಾಧುನಾ ॥೩೪೨॥

ಅತಃ ಪರಂ ಕಥಂ ನೇಯೋ ಮೃತ್ಯುಕಾಲೋ ಮಯಾಽಸ್ಯ ಹಿ ।
ಧೈರ್ಯೇಣ ಶಿವಲಿಂಗಾಗ್ರೇ ಕಥಂ ತಿಷ್ಠತಿ ಪಶ್ಯ ತಂ ॥೩೪೩॥

---

ನಾಟ್ಯವಾಡಿದ ನಂತರ ಆ ಬ್ರಾಹ್ಮಣ ಬಾಲಕನು ಪುನಃ ಆ ಜಗದೊಡೆಯನಾದ ಶಂಕರನನ್ನು ಮನೋಹರವಾದ ಬಿಲ್ವಪತ್ರೆಗಳಿಂದ ಪೂಜೆಮಾಡಿ, ಮೃತ್ಯುವನ್ನು ನಿವಾರಣೆಮಾಡುವ ಆ ಮೃತ್ಯುಂಜಯ ಮಹಾಮಂತ್ರವನ್ನು ಜಪಿಸಿದನು. ॥೩೪೦॥

ಈರೀತಿಯಾಗಿ ಅನವರತವೂ, ಮಹಾದೇವನನ್ನೇ ಪೂಜಿಸುತ್ತಾ ಮಹಾ ಮೃತ್ಯುಂಜಯ ಮಂತ್ರವನ್ನು ಜಪಮಾಡುತ್ತಿರುವ ಆ ಬ್ರಾಹ್ಮಣ ಕುಮಾರನನ್ನು ನೋಡಿ, ಮೃತ್ಯುವು, ತನ್ನ ಜತೆಯಲ್ಲಿದ್ದ ಚಿತ್ರಗುಪ್ತನನ್ನು ಕುರಿತು ಹೀಗೆ ನುಡಿದನು. ॥೩೪೧॥

ಎಲೈ ಚಿತ್ರಗುಪ್ತನೇ! ಸ್ವಲ್ಪವೇ ಆಯುಸ್ಸುಳ್ಳ ಈ ಬ್ರಾಹ್ಮಣ ಕುಮಾರನನ್ನು ಕರೆದುಕೊಂಡು ಹೋಗಲು, ನಾನು ಇಲ್ಲಿಗೆ ಬಂದೆನು. ಆದರೆ ಈತನ ಮೇಲೆ ಈ ಪಾಶಾಯುಧವನ್ನು ಪ್ರಯೋಗಿಸಲು ಈಗ ನನಗೆ ಶಕ್ತಿಯೇ ಕುಂದಿಹೋಗಿದೆ. ಇವನಿಗಾದರೋ ಮರಣಕಾಲ ಸಮೀಪಿಸಿರುವುದು. ಹೀಗಿದ್ದರೂ ಈತನು ಎಷ್ಟು ಧೈರ್ಯದಿಂದ ಶಿವಲಿಂಗದ ಮುಂದೆ ಕುಳಿತು ಧ್ಯಾನಮಾಡುತ್ತಿರುವನು ನೋಡು! ಈಗ ಈತನನ್ನು ಹೇಗೆ ಒಯ್ಯುವುದೋ ನನಗೇ ತೋರುತ್ತಿಲ್ಲವಲ್ಲಾ. ॥೩೪೨-೩೪೩॥

ಏನಮುದ್ದಿಶ್ಯ ಬಹುಧಾ ವ್ಯಾಧಯಃ ಪ್ರೇರಿತಾಃ ಪುರಾ ।
ತೇಽಪಿ ನೈನಂ ಸ್ಪೃಶಂತ್ಯೇವ ಬಹುದುಃಖಪ್ರದಾ ಅಪಿ ॥೩೪೪॥

ಮಯಾಽದ್ಯ ಯೇನ ವೇಗೇನ ನೇತುಮೇನಂ ಸಮಾಗತಂ ।
ತೇನ ವೇಗೇನ ಕಾರ್ಯಂ ತು ದೃಶ್ಯತೇ ನಾದ್ಯ ಸರ್ವಥಾ ॥೩೪೫॥

ಧೃತ್ವಾ ಸಮಾನಯಿಷ್ಯಾಮೀತ್ಯಸ್ಯಾಗ್ರೇ ಗಮ್ಯತೇ ಮಯಾ ।
ಪರಂ ತು ಗತಿರೇವಾಽತ್ರ ಕುಂಠಿತಾ ಮಮ ಸರ್ವಥಾ ॥೩೪೬॥

ಅವ್ಯಾಹತಂ ತು ಗಮನಂ ಮಮ ಪೂರ್ವಮಭೂತ್ಸದಾ ।
ಅದ್ಯೈವ ಕುಂಠಿತಂ ಜಾತಂ ಗಮನಂ ದ್ವಿಜಬಾಲಕೇ ॥೩೪೭॥

ನಾಯಂ ಜೀವನಕಾಲೋಽಸ್ಯ ಮೃತ್ಯುಕಾಲೋಽಯಮಿತ್ಯಹಂ ।
ಸಮಾಗತೋಽಸ್ಮಿ ಮರಣಂ ಕಥಮಸ್ಯ ನ ಜಾಯತೇ ॥೩೪೮॥

---

ಇವನ ಮೇಲೆ ನಾನು ಅನೇಕ ರೋಗಗಳನ್ನು, ಹೋಗಿ ಪೀಡಿಸುವಂತೆ ಹಿಂದೆ ಪ್ರೇರಿಸಿದೆನು. ಆದರೆ ಅನೇಕ ದುಃಖಗಳನ್ನು ಕೊಡಬಲ್ಲ ಆ ವ್ಯಾಧಿಗಳೂ ಈತನನ್ನು ಮುಟ್ಟಲಾರದೇ ಹೋದವು. ॥೩೪೪॥

ನಾನು ಇವನನ್ನು ಎಷ್ಟು ವೇಗದಿಂದ ತೆಗೆದುಕೊಂಡು ಹೋಗಲು ಬಂದೆನೋ ಆ ವೇಗವೇ ಈಗ ಸರ್ವಥಾ ಕಾರ್ಯಕಾರಿಯಾಗಲಿಲ್ಲ. ಈತನನ್ನು ಎತ್ತಿಕೊಂಡು ಹೋಗೋಣವೆಂದು ಮುಂದುವರಿದರೆ ಗಮನವೇ ಕಂದಿಹೋಗುತ್ತಿದೆ, ಏನುಮಾಡುವುದೋ ತೋರದು. ॥೩೪೫-೩೪೬॥

ಹಿಂದೆ ಯಾವಾಗಲೂ ಎಲ್ಲಿಯೂ ನನ್ನ ಗಮನವು ತಡೆಯಿಲ್ಲದೇ ನಡೆದಿತ್ತು. ಆದರೆ ಈಗಲಾದರೋ ಈ ಬ್ರಾಹ್ಮಣಕುಮಾರನ ಮುಂದೆ ಎಲ್ಲವೂ ಕುಂದಿಹೋಗಿದೆ. ॥೩೪೭॥

ಈತನಿಗೆ ಇದು ಬದುಕುವ ಸಮಯವಲ್ಲ, ಮರಣಕಾಲವೆಂದು ನಾನು ನಿಶ್ಚಯಿಸಿ ಇಲ್ಲಿಗೆ ಬಂದೆನು. ಆದರೂ ಈತನಿಗೆ ಹೇಗೆ ಮರಣವುಂಟಾಗುತ್ತಿಲ್ಲವೋ ತಿಳಿಯದು. ॥೩೪೮॥

ಮಯಾ ತು ತಾದೃಶಾ ನೀತಾಃ ಯಾದೃಶಾಃ ಸುರವಂದಿತಾಃ ।
ಕಥಂ ವೈ ಕುಂಠಿತಾ ಶಕ್ತಿರೇತಸ್ಮಿನ್ ದ್ವಿಜಬಾಲಕೇ ॥೩೪॥

ಇಂದ್ರಪುತ್ರೋ ಮಯಾ ನೀತಃ ಪೂರ್ವಮತ್ಯಂತಲೀಲಯಾ ।
ಬ್ರಹ್ಮಪುತ್ರಾಶ್ಚ ಬಹವೋ ನೀತಾ ಏವ ಮುಹುರ್ಮುಹುಃ ॥೩೫॥

ವಿಷ್ಣುಪುತ್ರೋಽಪಿ ಮದನೋ ಲಕ್ಷ್ಮೀಪ್ರಿಯವಿವರ್ಧನಃ ।
ಅತ್ಯಂತಬಲವಾನ್ನೀತಃ ಕ್ಷಣೇನೈವ ಹಿ ಲೀಲಯಾ ॥೩೬॥

ಏತಾದೃಶಸ್ಯ ಶಕ್ತಿರ್ಮೇ ಕಥಮತ್ಯಂತಕುಂಠಿತಾ ।
ಕಿಂ ಕರ್ತವ್ಯಂ ಮಯೇದಾನೀಂ ಕರ್ತವ್ಯಂ ನೋಪಲಭ್ಯತೇ ॥೩೭॥

ಕಥಮೇತಾದೃಶಃ ಕಾಲೋ ಮಮೇದಾನೀಂ ಸಮಾಗತಃ ।
ಅಯಮಲ್ಪಾಯುರತ್ಯಲ್ಪೋ ಮಯಾ ನೇತುಂ ನ ಶಕ್ಯತೇ ॥೩೮॥

---

ಹಿಂದೆ ದೇವತೆಗಳಿಂದಲೂ ನಮಸ್ಕಾರಮಾಡಲ್ಪಟ್ಟ ದೊಡ್ಡವರೂ ಸಹ ನನ್ನಿಂದ ಒಯ್ಯಲ್ಪಟ್ಟಿರುವರು. ಆದರೆ ಈಗ ಮಾತ್ರ ಈ ಬ್ರಾಹ್ಮಣ ಬಾಲಕನ ವಿಷಯದಲ್ಲಿ ನನ್ನ ಆ ಶಕ್ತಿಯು ಕಡಿಮೆಯಾಗಲು ಕಾರಣವೇನೋ ತಿಳಿಯದು. ॥೩೪॥

ಹಿಂದೆ ಮಹಾಬಲಿಷ್ಠರೆನಿಸಿದ್ದ ಇಂದ್ರಕುಮಾರನನ್ನೂ ಬ್ರಹ್ಮಕುಮಾರನೇ ಮೊದಲಾದ ಅನೇಕ ಮಂದಿಯನ್ನೂ ನಾನು ಅನಾಯಾಸವಾಗಿ ಪದೇ ಪದೇ ಒಯ್ದಿರುವೆನು. ॥೩೫॥

ಲಕ್ಷ್ಮೀದೇವಿಗೆ ತುಂಬಾ ಪ್ರೀತಿಯನ್ನುಂಟುಮಾಡುತ್ತಿದ್ದ ವಿಷ್ಣುಪುತ್ರನಾದ ಮನ್ಮಥನು ಅತ್ಯಂತ ಬಲಶಾಲಿಯೆನಿಸಿದ್ದರೂ, ಆತನನ್ನು ನಾನು ಅನಾಯಾಸವಾಗಿ ಕ್ಷಣಮಾತ್ರದಲ್ಲಿ ಕೊಂಡೊಯ್ದೆನು. ॥೩೬॥

ಈ ರೀತಿಯಾಗಿದ್ದ ನನ್ನ ಸಾಮರ್ಥ್ಯವು ಹೇಗೆ ಏಕೆ ಕಡಿಮೆಯಾಯಿತೋ! ನಾನು ಈಗೇನು ಮಾಡಲಿ. ಯಾವುದೂ ತೋರುವುದೇ ಇಲ್ಲವಲ್ಲಾ, ಇದೆಂತಹ ಕಾಲವು ನನಗೆ ಒದಗಿತು! ಅತ್ಯಂತ ಸ್ವಲ್ಪವಾದ ಆಯುಸ್ಸುಳ್ಳ ಈತನನ್ನು ತೆಗೆದುಕೊಂಡು ಹೋಗಲೂ ನನಗೆ ಶಕ್ತಿಯಿಲ್ಲದಂತಾಯಿತಲ್ಲಾ! ॥೩೭-೩೮॥

ಅಧಿಕಾರಃ ಶಿವೇನಾದ್ಯ ಮಮ ದೂರೀಕೃತೋಽಥವಾ ।
ಯದಿ ದೂರೀಕೃತೋಽನ್ಯೋಽಪಿ ಮೃತ್ಯುರ್ನೈವಾತ್ರ ದೃಶ್ಯತೇ॥೩೫೪॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಚಿತ್ರಗುಪ್ತೋ ಮಹಾಮತಿಃ ।
ವಚೋ ಮೃತ್ಯುಮುವಾಚೇದಮತಿವಿಸ್ಮಯಕಾರಣಂ ॥೩೫೫॥

ಮಹಾಮೃತ್ಯುಹರಂ ಮಂತ್ರಂ ಜಪತ್ಯಯಮಿಹಾರ್ಭಕಃ ।
ಸಂಪೂಜ್ಯ ಶಂಕರಂ ಲಿಂಗಂ ಬಿಲ್ವಪತ್ರಾದಿಭಿರ್ಮುದಾ ॥೩೫೬॥

ಸ್ವರ್ಗಾಪವರ್ಗದಾತಾರಂ ಶಂಕರಂ ಯೋಽರ್ಚಯಿಷ್ಯತಿ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೫೭॥

ಅಭೀಪ್ಸಿತಾರ್ಥದಂ ನಿತ್ಯಂ ಮಹೇಶಂ ಯೋಽರ್ಚಯಿಷ್ಯತಿ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೫೮॥

---

ಆ ಪರಮೇಶ್ವರನೇ ಏನಾದರೂ ನನ್ನ ಅಧಿಕಾರವನ್ನು ಕಿತ್ತುಹಾಕಿದನೋ ಏನೋ ಎಂದರೆ, ಆರೀತಿಯಾದ ನನ್ನ ಸ್ಥಾನದಲ್ಲಿರಬೇಕಾದ ಮತ್ತೊಬ್ಬ ಮೃತ್ಯುವು ಇಲ್ಲಿ ಕಾಣುವುದಿಲ್ಲವಲ್ಲ! ॥೩೫೪॥

ಯಮನು ಹೀಗೆ ಮಾತನಾಡಿದುದನ್ನು ಕೇಳಿ ಸೂಕ್ಷ್ಮ ಬುದ್ಧಿಶಾಲಿಯಾದ ಚಿತ್ರಗುಪ್ತನು, ಯಮನಿಗೆ ಆಶ್ಚರ್ಯವುಂಟಾಗುವಂತೆ ಅವನನ್ನು ಕುರಿತು ಹೀಗೆ ನುಡಿದನು. ॥೩೫೫॥

ಯಮಧರ್ಮರಾಜ! ಈ ಬಾಲಕನು ದೊಡ್ಡದೊಡ್ಡ ವಿಪತ್ತುಗಳನ್ನೆಲ್ಲಾ ನಾಶಮಾಡುವ ಮೃತ್ಯುಂಜಯ ಮಹಾಮಂತ್ರವನ್ನು ಜಪಮಾಡುತ್ತಾ, ಪ್ರೀತಿಯಿಂದ ಬಿಲ್ವಪತ್ರೆ ಮೊದಲಾದ ಪೂಜಾಸಾಧನಗಳಿಂದ ಆ ಶಂಕರನ ದಿವ್ಯಲಿಂಗವನ್ನು ಪೂಜೆಮಾಡುತ್ತಿರುವನು. ॥೩೫೬॥

ಸ್ವರ್ಗ, ಮೋಕ್ಷ, ಇವುಗಳನ್ನು ಕೊಡುವವನೂ, ಜಗನ್ಮಂಗಳಕರನೂ, ತನ್ನ ಭಕ್ತರಿಗೆ ಬೇಕಾದ ಇಷ್ಟಾರ್ಥಗಳನ್ನು ಸಲ್ಲಿಸುವವನೂ ಆದ ಆ ಮಹೇಶ್ವರನನ್ನು ನಿತ್ಯವೂ ಪೂಜೆಮಾಡುವವನು ಎಂದಿಗೂ ಮೃತ್ಯುವಿಗೆ ಅಧೀನನಾಗಲಾರನು. ಇದರಲ್ಲಿ ಸಂದೇಹವೇ ಇಲ್ಲ. ಇದು ಸತ್ಯವು. ॥೩೫೭-೩೫೮॥

ಅನನ್ಯಶರಣೋ ನಿತ್ಯಂ ಯೋಽರ್ಚಯಿಷ್ಯತಿ ಶಂಕರಂ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೫॥

ಮೃತ್ಯುಂಜಯಂ ಮಹಾರುದ್ರಂ ಯೋಽರ್ಚಯಿಷ್ಯತಿ ಶಂಕರಂ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೬೦॥

ಸರ್ವದೇವೋತ್ತಮಂ ಸಾಂಬಂ ಯೋಽರ್ಚಯಿಷ್ಯತಿ ಶಂಕರಂ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೬೧॥

ಅಪ್ರಮೇಯಮನಾದ್ಯಂತಂ ಯೋಽರ್ಚಯಿಷ್ಯತಿ ಶಂಕರಂ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೬೨॥

ಉಮಾಕಾಂತಂ ಪ್ರಯತ್ನೇನ ಸತತಂ ಯೋಽರ್ಚಯಿಷ್ಯತಿ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೬೩॥

ಶ್ರೀನೀಲಕಂಠಂ ವಿಶ್ವೇಶಂ ಸತತಂ ಯೋಽರ್ಚಯಿಷ್ಯತಿ ।
ಸ ನ ಮೃತ್ಯುವಶಂ ಯಾತಿ ಸತ್ಯಂ ಸತ್ಯಂ ನ ಸಂಶಯಃ ॥೩೬೪॥

---

ಮೃತ್ಯುವನ್ನು ಜಯಿಸಿದವನೂ, ವಿರೋಧಿಗಳಿಗೆ ತುಂಬಾ ಭಯಂಕರ ಸ್ವರೂಪನೂ, ಭಕ್ತರಿಗೆ ಮಂಗಳಕರನೂ ಆಗಿರುವ ಆ ಶಂಕರನನ್ನು ಸ್ಥಿರಮನಸ್ಸಿನಿಂದ ಇನ್ನಾವ ದೇವತೆಗಳನ್ನೂ ಆಶ್ರಯಿಸದೆ ಪೂಜೆಮಾಡುವವನು ಸತ್ಯವಾಗಿಯೂ ಮೃತ್ಯುವಿಗೆ ಅಧೀನನಾಗುವುದಿಲ್ಲ. ಇದರಲ್ಲಿ ಸಂಶಯವೇ ಬೇಡ. ॥೩೫-೩೬೦॥

ಸಕಲ ದೇವತೆಗಳಲ್ಲಿಯೂ ಉತ್ತಮನೂ, ಅಂಬಿಕಾರಮಣನೂ, ಲೋಕ ಮಂಗಳಕರನೂ, ಪ್ರಮಾಣಕ್ಕೆ ಸಿಗದವನೂ ಜನನ, ಮರಣಗಳಿಗೊಳಗಾಗದವನೂ, ಆದ ಆ ಶಂಕರನನ್ನು ನಿತ್ಯವೂ ಪೂಜೆಮಾಡುವವನು ಸತ್ಯವಾಗಿಯೂ ಮೃತ್ಯುವಿಗೆ ಅಧೀನನಾಗಲಾರನೆಂಬುದರಲ್ಲಿ ಸಂದೇಹವೇ ಇಲ್ಲ. ॥೩೬೧-೩೬೨॥

ಉಮಾರಮಣನೂ, ವಿಷಪಾನದಿಂದ ಕಪ್ಪಾದ ಕೊರಳುಳ್ಳವನೂ, ಜಗದೊಡೆಯನೂ ಆದ ಆ ಶಂಕರನನ್ನು ಅನವರತವೂ ನಿಯಮದಿಂದ ಪೂಜೆಮಾಡುವವನಿಗೆ ಎಂದಿಗೂ ಸತ್ಯವಾಗಿ ಮೃತ್ಯುವಿನ ಬಾಧೆಯಿಲ್ಲ. ಇದರಲ್ಲಿ ಸಂದೇಹವಿಲ್ಲ. ॥೩೬೩-೩೬೪॥

ಮೃತ್ಯುಂಜಯಂ ಸಮಭ್ಯರ್ಚ್ಯ ಬಿಲ್ವಪತ್ರಾದಿಸಾಧನೈಃ ।
ಕಾಲಮೃತ್ಯುಂ ತರತ್ಯೇವ ಕಿಮು ತಸ್ಯಾಪಮೃತ್ಯವಃ ॥೩೬೫॥

ಯತ್ಪೂಜಯಾ ಮಹಾವಿಷ್ಣುರ್ವಿಷ್ಣುತ್ವಂ ಪ್ರಾಪ ದುರ್ಲಭಂ ।
ಯತ್ಪೂಜಯಾ ಪುರಾ ಬ್ರಹ್ಮಾ ಬ್ರಹ್ಮತ್ವಂ ಪ್ರಾಪ ದುರ್ಲಭಂ ॥೩೬೬॥

ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ।
ಯತ್ಪೂಜಯಾ ಪುರಾ ದೇವಾಃ ಸರ್ವದೇವತ್ವಮಾಯಯುಃ ॥೩೬೭॥

ಯತ್ಪೂಜಯಾ ಪರೋ ಮೋಕ್ಷೋಽಪ್ಯಯತ್ನೇನೈವ ಲಭ್ಯತೇ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೬೮॥

ಯಸ್ಯ ಸ್ಮರಣಮಾತ್ರೇಣ ವಿನಶ್ಯಂತ್ಯಾಪದಃ ಕ್ಷಣಾತ್ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೬೯॥

ಯತ್ಪ್ರಭಾವಂ ನ ಜಾನಂತಿ ವೇದಾ ಅಪಿ ಸಹಸ್ರಶಃ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೭೦॥

---

ಬಿಲ್ವಪತ್ರೆ ಮೊದಲಾದ ಪೂಜಾಸಾಮಗ್ರಿಗಳಿಂದ ಆ ಮೃತ್ಯುಂಜಯನೆನಿಸಿದ ಮಹಾದೇವನನ್ನು ಪೂಜೆಮಾಡಿದ ಮಾನವನು ಕಾಲಮೃತ್ಯುವನ್ನೇ ದಾಟುತ್ತಾನಾದ್ದರಿಂದ ಈ ಮಧ್ಯಕಾಲದಲ್ಲೊದಗುವ ಅಪಮೃತ್ಯುಗಳವನನ್ನೇನು ಮಾಡಬಲ್ಲವು ? ॥೩೬೫॥

ಮಹಾವಿಷ್ಣುವು ಹೊಂದಲಸಾಧ್ಯವಾದ ವಿಷ್ಣುಪದವಿಯನ್ನೂ, ಬ್ರಹ್ಮದೇವನು ಬ್ರಹ್ಮಪಟ್ಟವನ್ನೂ, ಇತರ ದೇವತೆಗಳು ತಮ್ಮ ತಮ್ಮ ಸ್ಥಾನವನ್ನೂ, ಹಿಂದೆ ಯಾವ ದೇವನನ್ನು ಪೂಜೆಮಾಡಿ ಪಡೆದರೋ ಆ ಮಹಾದೇವನನ್ನು ನಿಯಮದಿಂದ ಪೂಜೆಮಾಡುವವನಿಗೆ ಎಂದಿಗೂ ಮರಣವಿಲ್ಲ. ॥೩೬೭॥

ಯಾವ ದೇವನ ಪೂಜೆಯಿಂದ ಉತ್ಕೃಷ್ಟವಾದ ಮೋಕ್ಷವೂ ಸುಲಭವಾಗಿ ದೊರೆಯುವುದೋ, ಯಾರ ಸ್ಮರಣಮಾತ್ರದಿಂದಲೇ ಸಕಲ ಕಷ್ಟಗಳೂ ಕ್ಷಣಮಾತ್ರದಲ್ಲಿ ನಾಶಹೊಂದುವುವೋ, ಅಂತಹ ಮಹಾದೇವನ ಪೂಜೆಯಲ್ಲಿ ನಿರತರಾಗಿರುವ ಯಾರೂ ಮರಣಹೊಂದುವುದಿಲ್ಲ. ॥೩೬೮-೩೬೯॥

ಸಾವಿರಾರುಸಲ ಪ್ರಯತ್ನಪಟ್ಟರೂ ವೇದಗಳು ಯಾರ ಮಹಿಮೆಯನ್ನು ತಿಳಿಯಲಾರವೋ, ಯಾರು ಸತ್, ಚಿತ್ ಮತ್ತು ಆನಂದಗಳ ಗಟ್ಟಿಯಂತಿರು

ಯಃ ಸಚ್ಚಿದಾನಂದಘನಃ ಸರ್ವಜ್ಞಶ್ಚಿನ್ಮಯಃ ಪ್ರಭುಃ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೭೧॥

ಯಃ ಸರ್ವಾತ್ಮಾ ಸರ್ವರೂಪಃ ಸಾಕ್ಷೀ ಸರ್ವತ್ರ ಕರ್ಮಣಾಂ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೭೨॥

ಯಃ ಕಾಲಕಾಲಃ ಕಾಲಾತ್ಮಾ ಕಾಲರೂಪೀ ಸದಾಶಿವಃ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೭೩॥

ಯಸ್ತ್ರಿನೇತ್ರೋ ವಿಶ್ವಕರ್ತಾ ವಿಶ್ವಾಶಾಪರಿಪೂರಕಃ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೭೪॥

ಯಮರ್ಚಯಂತಿ ಯೋಗೀಂದ್ರಾಃ ಸರ್ವದಾ ಸಾಂಬಮೀಶ್ವರಂ ।
ತದರ್ಚನಪರಃ ಕೋಽಪಿ ನ ಮೃತ್ಯುವಶಮೇಷ್ಯತಿ ॥೩೭೫॥

---

ವನೋ, (ಅಥವ ಇವುಗಳಿಂದ ಸಾಂದ್ರನಾಗಿರುವನೋ) ಸರ್ವಜ್ಞನೆನಿಸಿ, ಚಿತ್ಸ್ವರೂಪನೂ, ಪ್ರಭುವೂ ಎನಿಸಿರುವ ಆ ಮಹಾದೇವನ ಪೂಜಾತತ್ಪರನಾಗಿರುವನೆಂದಿಗೂ ಮೃತ್ಯುವಿಗೆ ಅಧೀನನಾಗಲಾರನು. ॥೩೭೦-೩೭೧॥

ಸಕಲ ಪ್ರಪಂಚಸ್ವರೂಪನೂ, ಎಲ್ಲರಲ್ಲಿಯೂ ಅಡಗಿರುವವನೂ, ನಾವು ಮಾಡುವ ಕರ್ಮಗಳನ್ನೆಲ್ಲಾ ನೋಡುವವನೂ, ಕಾಲಸ್ವರೂಪನಾದ ಯಮನಿಗೂ ಮೃತ್ಯುಪ್ರದನೂ, ಕಾಲಸ್ವರೂಪಿಯೂ, ಕಾಲಾಂತರ್ಯಾಮಿಯೂ, ನಿತ್ಯಮಂಗಳಸ್ವರೂಪನೂ ಆದ ಆ ಮಹಾದೇವನ ಪೂಜೆಯಲ್ಲಿ ನಿರತನಾಗಿರುವವನು ಎಂದಿಗೂ ಮೃತ್ಯುವಿಗೆ ಅಧೀನನಾಗಲಾರನು. ॥೩೭೨-೩೭೩॥

ಮುಕ್ಕಣ್ಣನೂ, ಜಗನ್ನಿಯಾಮಕನೂ, ಈ ಪ್ರಪಂಚದ ಪ್ರಾಣಿಗಳ ಅಪೇಕ್ಷೆಯನ್ನೆಲ್ಲಾ ಪೂರ್ತಿಗೊಳಿಸುವವನೂ, ಅನವರತವೂ ಯೋಗಿಶ್ರೇಷ್ಠರಿಂದ ಪೂಜೆ ಮಾಡಲ್ಪಡುವವನೂ, ಅಂಬಿಕಾರಮಣನೂ, ಐಶ್ವರ್ಯಶಾಲಿಯೂ ಆದ ಶಂಕರನನ್ನು ಪೂಜೆಮಾಡುವವನು ಎಂದಿಗೂ ಮೃತ್ಯುವಿಗೆ ಅಧೀನನಾಗಲಾರನು. ॥೩೭೪-೩೭೫॥

ಸ ಏವ ಸುಖಮಾಪ್ನೋತಿ ಸ ಏವಾಖಿಲಸಂಪದಃ ।
ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೭೬॥

ತಸ್ಯೈವ ಜನ್ಮ ಸಫಲಂ ಜೀವಿತಂ ಚ ಸುಜೀವಿತಂ ।
ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೭೭॥

ತಸ್ಯೈವ ಜನನೀ ಧನ್ಯಾ ತಸ್ಯೈವ ಕುಲಮುನ್ನತಂ ।
ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೭೮॥

ತಸ್ಯೈವ ಜನಕೋ ಧನ್ಯಃ ಧನ್ಯಾಸ್ತಸ್ಯ ಪಿತಾಮಹಾಃ ।
ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ॥೩೭೯॥

ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತಸ್ಯೈವಾರೋಗ್ಯಮನಿಶಂ ಆಯುರ್ವೃದ್ಧಿಃ ಕ್ಷಣೇ ಕ್ಷಣೇ ॥೩೮೦॥

ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತಸ್ಯೈವ ಭಾಗ್ಯಮುತ್ಕೃಷ್ಟಂ ತಸ್ಯೈವ ಸಕಲೋತ್ಸವಾಃ ॥೩೮೧॥

---

ನಿತ್ಯವೂ ಆ ಮಹಾದೇವನಲ್ಲಿ ತಪ್ಪದೇ ಭಕ್ತಿಯನ್ನಿಟ್ಟುಕೊಂಡಿರುವವನೇ ಎಲ್ಲಾ ಸುಖಗಳನ್ನೂ, ಸಮಸ್ತ ಸಂಪತ್ತುಗಳನ್ನೂ ಹೊಂದುತ್ತಾನೆ. ಆತನ ಜನ್ಮವು ಸಫಲವೆನಿಸುವುದು. ಆತನ ಜೀವಿತವು ಒಳ್ಳೆಯ ಬಾಳೆನಿಸುವುದು. ||೩೭೬-೩೭೭||

ಮತ್ತಾವ ದೇವತೆಗಳಲ್ಲಿಯೂ ನಿರತವಾಗದೇ ಆ ಮಹಾದೇವನಲ್ಲಿಯೇ ಅನವರತವೂ ಸ್ಥಿರಭಕ್ತಿಯನ್ನಿಟ್ಟಿರುವವನ ತಾಯಿತಂದೆಗಳೂ, ಅಜ್ಜಂದಿರೂ ಧನ್ಯರೆನಿಸುವರು. ಅಲ್ಲದೇ ಆತನ ವಂಶವೇ ತುಂಬಾ ಉತ್ತಮವೆನಿಸುವುದು. ||೩೭೮-೩೭೯||

ಅನ್ಯಾಸಕ್ತವಾಗದೇ ಆ ಮಹಾದೇವನಲ್ಲಿಯೇ ಅನವರತವೂ ಭಕ್ತಿಯಿಟ್ಟಿರುವನಿಗೆ ಯಾವಾಗಲೂ ಆರೋಗ್ಯವೂ, ಕ್ಷಣಕ್ಷಣಕ್ಕೂ ಆಯುಸ್ಸಿನ ಅಭಿವೃದ್ಧಿಯೂ, ಉತ್ತಮವಾದ ಐಶ್ವರ್ಯವೂ ಮತ್ತು ಸಂತೋಷಪ್ರದವಾದ ಸಮಸ್ತ ಉತ್ಸವಗಳೂ ಉಂಟಾಗುವುವು. ||೩೮೦-೩೮೧||

ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತಸ್ಯೈವ ವಿಮಲಂ ಜ್ಞಾನಂ ತಸ್ಯೈವ ವಿಮಲಂ ಮನಃ ॥೩೮೨॥

ಯಸ್ಯ ನಿತ್ಯಂ ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತಸ್ಯೈವ ಪರಮಂ ಮೋಕ್ಷಂ ತಸ್ಯ ಭಾಗ್ಯಮನುತ್ತಮಂ ॥೩೮೩॥

ಅತ್ಯಾಸ್ತಿಕೋ ಬಾಲಕೋಽಪಿ ಮೃತ್ಯುಂಜಯಮನಾಮಯಂ ।
ಜಪತ್ಯಯಂ ಮಹಾಮಂತ್ರಂ ಪೂಜಯಿತ್ವಾ ಸದಾಶಿವಂ ॥೩೮೪॥

ಮೃತ್ಯುಂಜಯೇನ ಮಂತ್ರೇಣ ಮೃನ್ಮಯಂ ಲಿಂಗಮುತ್ತಮಂ ।
ಸಮ್ಯಗ್ಬಿಲ್ವತರೋರ್ಮೂಲೇ ಪೂಜಯತ್ಯವಲೋಕಯ ॥೩೮೫॥

ಯಸ್ತು ಬಿಲ್ವತರೋರ್ಮೂಲೇ ಶುದ್ಧೋ ಮೃತ್ಯುಂಜಯಂ ಜಪೇತ್ ।
ತಸ್ಯ ಮೃತ್ಯುಭಯಂ ನಾಸ್ತಿ ಸತ್ಯಂ ಸತ್ಯಂ ಮಯೋಚ್ಯತೇ ॥೩೮೬॥

---

ಅನ್ಯಾಸಕ್ತವಾಗದೇ ಆ ಮಹಾದೇವನಲ್ಲಿಯೇ ನಿಶ್ಚಲವಾದ ಭಕ್ತಿಯನ್ನು ಯಾವಾಗಲೂ ಇಟ್ಟಿರುವವನ ಜ್ಞಾನವು ನಿರ್ಮಲವಾದದ್ದು. ಮನಸ್ಸೂ ನಿಷ್ಕಲ್ಮಷವಾದುದು. ಆತನಿಗೇ ಉತ್ಕೃಷ್ಟವಾದ ಮೋಕ್ಷವೂ, ಸರ್ವೋತ್ತಮವಾದ ಇತರ ಭಾಗ್ಯಗಳೂ ಸಿದ್ಧಿಸುವುವು. ॥೩೮೨-೩೮೩॥

ಹುಡುಗನೇ ಆದರೂ ಈ ಬ್ರಾಹ್ಮಣಕುಮಾರನು ನಿತ್ಯಮಂಗಳಸ್ವರೂಪನಾದ ಆ ಮಹಾದೇವನನ್ನು ಪೂಜೆಮಾಡಿ, ರೋಗರುಜಿನಾದಿಗಳನ್ನು ಹೊಡೆದೋಡಿಸಿ, ಮಹಾ ಮೃತ್ಯುವನ್ನೇ ಜಯಿಸುವ, ಮೃತ್ಯುಂಜಯ ಮಹಾಮಂತ್ರವನ್ನು ಜಪಮಾಡುತ್ತಿರುವನು. ॥೩೮೪॥

ಯಮಧರ್ಮರಾಜ! ಈ ಬಾಲಕನು ಆ ಮೃತ್ಯುಂಜಯಮಂತ್ರದಿಂದಲೇ ಉತ್ತಮವಾದ ಮಣ್ಣಿನ ಶಿವಲಿಂಗವನ್ನು ಮಾಡಿಕೊಂಡು ಬಿಲ್ವಪತ್ರೇ ಮರದ ಬುಡದಲ್ಲಿ ಎಷ್ಟು ಚೆನ್ನಾಗಿ ಪೂಜಿಸುತ್ತಿರುವನು ನೋಡು. ॥೩೮೫॥

ಬಿಲ್ವವೃಕ್ಷದ ಬುಡದಲ್ಲಿ ಪರಿಶುದ್ಧಾಂತಃಕರಣದಿಂದ ಆ ಮೃತ್ಯುಂಜಯನನ್ನು ಜಪಮಾಡುತ್ತಿರುವನಿಗೆ ಸತ್ಯವಾಗಿಯೂ ಎಂದಿಗೂ ಮೃತ್ಯುವಿನ ಭಯವಿಲ್ಲವೆಂದು ನಾನು ಹೇಳುತ್ತಿರುವೆನು. ॥೩೮೬॥

ಬಿಲ್ವಮೂಲೇ ಮಹಾದೇವಂ ಲಿಂಗರೂಪಿಣಮಾಸ್ತಿಕಃ ।
ಪೂಜಯತ್ಯತಿಯತ್ನೇನ ಮೃತ್ಯುಪಾಶವಿಮುಕ್ತಯೇ ॥೩೮೭॥

ಸಿಧ್ಯಂತಿ ಸಂಪದಸ್ತಸ್ಯ ಬಿಲ್ವಮೂಲೇ ಶಿವಾರ್ಚನಾತ್ ।
ಯಸ್ಯಾಸ್ತ್ಯನನ್ಯಗಾ ಭಕ್ತಿರ್ಮಹಾದೇವೇ ಸುರೋತ್ತಮೇ ॥೩೮೮॥

ತ್ವರಿತಾಖ್ಯೇನ ರುದ್ರೇಣ ಶಿವೈಕಶರಣೋ ಯದಿ ।
ಪೂಜಯಿಷ್ಯತಿ ಗೌರೀಶಂ ಸ ಮೋಕ್ಷಮಧಿಗಚ್ಛತಿ ॥೩೮೯॥

ಬಿಲ್ವಮೂಲೇ ಬಿಲ್ವಪತ್ರೈಃ ಕ್ಷೀರಾಪ್ಲುಷ್ಟೈರಖಂಡಿತಃ ।
ಹುತ್ವಾ ಶೈವೇನ ಮನುನಾ ಗೋಲಕ್ಷಾಧಿಪತಿರ್ಭವೇತ್ ॥೩೯೦॥

ಬಿಲ್ವಮೂಲೇ ಬಿಲ್ವಪತ್ರೈರ್ಘೃತಾಪ್ಲುಷ್ಟೈರಖಂಡಿತೈಃ ।
ಹುತ್ವಾ ಶೈವೇನ ಮನುನಾ ಲಭಂತೇ ಸಂಪದೋಽಖಿಲಾಃ ॥೩೯೧॥

---

ಆಸ್ತಿಕನಾದ ಈ ಬ್ರಾಹ್ಮಣಕುಮಾರನು, ಲಿಂಗಸ್ವರೂಪಿಯಾಗಿರುವ ಆ ಮಹಾದೇವನನ್ನು ಬಿಲ್ವವೃಕ್ಷದ ಬುಡದಲ್ಲಿ ವಿಧಿನಿಯಮದಿಂದ ಮೃತ್ಯುದೇವತೆಯ ಪಾಶಾಯುಧದಿಂದ ಬಿಡಿಸಿಕೊಳ್ಳುವುದಕ್ಕೋಸ್ಕರ ಪೂಜೆಮಾಡುತ್ತಿರುವನು. ॥೩೮೭॥

ಬಿಲ್ವವೃಕ್ಷದ ಬುಡದಲ್ಲಿ ಆ ಶಿವನನ್ನು ಪೂಜೆಮಾಡುತ್ತಿರುವುದರಿಂದ ಈತನಿಗೆ ಸಕಲ ಸಂಪತ್ತುಗಳೂ ಸಿದ್ಧಿಸುವುವು. ದೇವೋತ್ತಮನಾದ ಆ ಮಹಾದೇವನನ್ನು ಭಕ್ತಿಯಿಂದ ಅನ್ಯಾಸಕ್ತವಾಗದೇ ಮನಸ್ಸಿಟ್ಟು ಪೂಜೆಮಾಡುವವನಿಗೆ ಎಲ್ಲವೂ ಸಿದ್ಧಿಸುವುವು. ॥೩೮೮॥

ಜಾಗ್ರತೆಯಾಗಿ ಫಲಕೊಡುವ ರುದ್ರಮಂತ್ರಪೂರ್ವಕವಾಗಿ, ಗೌರೀರಮಣನಾದ ಆ ಮಹಾದೇವನನ್ನು ಪರಶಿವಮಂತ್ರದಲ್ಲಿಯೇ ತತ್ಪರನಾಗಿ ಪೂಜೆಮಾಡುವವನು ತಪ್ಪದೇ ಮೋಕ್ಷವನ್ನು ಹೊಂದುವನು. ॥೩೮೯॥

ಬಿಲ್ವವೃಕ್ಷದ ಬುಡದಲ್ಲಿ, ಮೊನೆಮುರಿಯದ ಬಿಲ್ವಪತ್ರೆಗಳನ್ನು ತೆಗೆದುಕೊಂಡು ಹಾಲಿನಲ್ಲಿ ನೆನಸಿ, ಆ ಶಿವಮಂತ್ರಪೂರ್ವಕವಾಗಿ ಹೋಮಮಾಡುವವನು ಲಕ್ಷ ಗೋವುಗಳಿಗೆ ಸ್ವಾಮಿಯಾಗುವನು. ॥೩೯೦॥

ಹಾಗೆಯೇ ಬಿಲ್ವಮರದ ಅಡಿಯಲ್ಲಿ ತುಪ್ಪದಲ್ಲಿ ನೆನಸಿದ ತುಂಡಾಗದೇ ಇರುವ ಬಿಲ್ವಪತ್ರೆಗಳನ್ನು ಶಿವಮಂತ್ರಪೂರ್ವಕವಾಗಿ ಹೋಮಮಾಡುವವರು ಸಕಲ ಸಂಪತ್ತುಗಳನ್ನೂ ಪಡೆಯುತ್ತಾರೆ. ॥೩೯೧॥

ಪೂತೋ ಬಿಲ್ವತರೋರ್ಮೂಲೇ ಶೈವಂ ಯದಿ ಮನುಂ ಜಪೇತ್ ।
ತದಾ ಸದ್ಗುರುಸಂದಿಷ್ಟೋ ಮಂತ್ರಃ ಸಿದ್ಧಿಂ ಪ್ರಯಚ್ಛತಿ ॥೩೯೨॥

ಏತಸ್ಯ ಹಿ ಪಿತಾ ಶುದ್ಧೋ ಮಹಾಶೈವೋತ್ತಮೋ ಯತಃ ।
ತತಸ್ತದುಪದಿಷ್ಟೋಽಸ್ಯ ಮಂತ್ರಃ ಸಫಲಿತೋ ಧ್ರುವಂ ॥೩೯೩॥

ಜ್ವಲಜ್ಜ್ವಲನಸಂಕಾಶಂ ಪಶ್ಯ ಶೈವೋತ್ತಮಾರ್ಭಕಂ ।
ಉದ್ಧೂಲನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈರಪಿ ಭೂಷಿತಂ ॥೩೯೪॥

ರುದ್ರಾಕ್ಷಕಂಕಣಃ ಸಾಂಬಂ ಲಿಂಗರೂಪಿಣಮದ್ವಯಂ ।
ಅಭ್ಯರ್ಚಯತಿ ಪಶ್ಯಾಯಂ ಬಿಲ್ವಪತ್ರೈರಖಂಡಿತೈಃ ॥೩೯೫॥

ಆ ಬ್ರಹ್ಮಕಲ್ಪಮೇತಸ್ಯ ಮರಣಂ ನ ಭವಿಷ್ಯತಿ ।
ಸಿದ್ಧಮೃತ್ಯುಂಜಯಮನೋರಸ್ಯ ಸ್ಯಾನ್ಮರಣಂ ಕಥಂ ॥೩೯೬॥

---

ಬಿಲ್ವವೃಕ್ಷಗಳ ಬುಡದಲ್ಲಿ ಪರಿಶುದ್ಧನಾಗಿ ಕುಳಿತು ಶಿವಮಂತ್ರವನ್ನು ಜಪ ಮಾಡಿದರೆ ಆಗ ಸದ್ಗುರುವು ತನಗೆ ಉಪದೇಶಮಾಡಿರುವ ಮಂತ್ರವು ಸಿದ್ಧಿಹೊಂದುವುದು. ॥೩೯೨॥

ಈತನ ತಂದೆಯು ಶುದ್ಧನಾಗಿ, ಪರಶಿವಭಕ್ತರಲ್ಲೆಲ್ಲಾ ಅತ್ಯುತ್ತಮನೆನಿಸಿರುವನು. ಆತನಿಂದ ಈ ಬಾಲಕನಿಗೆ ಮಂತ್ರೋಪದೇಶವಾಗಿರುವುದು. ಆದ್ದರಿಂದ ತಂದೆಯು ಉಪದೇಶಮಾಡಿರುವ ಮಂತ್ರವು ಈಗ ನಿಶ್ಚಯವಾಗಿ ಈತನಿಗೆ ಸಫಲವಾಗುವುದು. ॥೩೯೩॥

ಉರಿಯುತ್ತಿರುವ ಯಜ್ಞೇಶ್ವರನಂತೆ ಹೊಳೆಯುತ್ತಿರುವ ಈ ಶಿವಭಕ್ತಾಗ್ರೇಸರನ ಕುಮಾರನನ್ನು ನೋಡು! ಈತನು ಭಸ್ಮೋದ್ಧೂಳನ ಮತ್ತು ಭಸ್ಮತ್ರಿಪುಂಡ್ರ ಧಾರಣೆಗಳಿಂದ ಯುಕ್ತನಾಗಿ ರುದ್ರಾಕ್ಷಗಳಿಂದ ಅಲಂಕೃತನಾಗಿರುವನು. ॥೩೯೪॥

ರುದ್ರಾಕ್ಷಗಳನ್ನು ಕಂಕಣವಾಗಿ ಮಾಡಿಕೊಂಡು, ಲಿಂಗಸ್ವರೂಪಿಯೂ ಅದ್ವಿತೀಯನೂ, ಆದ ಅಂಬಿಕಾರಮಣನನ್ನು ತುಂಡಾಗದ ಬಿಲ್ವಪತ್ರೆಗಳಿಂದ ಪೂಜೆ ಮಾಡುತ್ತಿರುವುದನ್ನು ನೋಡು. ॥೩೯೫॥

ಬ್ರಹ್ಮಕಲ್ಪವಿರುವವರೆಗೂ ಈತನಿಗೆ ಮರಣವು ಸಂಭವಿಸುವುದಿಲ್ಲ. ಮೃತ್ಯುಂಜಯ ಮಹಾಮಂತ್ರವು ಸಿದ್ಧವಾಗಿರುವನಿಗೆ ಮರಣವು ತಾನೇ ಹೇಗೆ ಸಂಭವಿಸೀತು? ॥೩೯೬॥

ಯಸ್ಯ ಮೃತ್ಯುಂಜಯೋ ದೇವೋ ಯಸ್ಯ ಮೃತ್ಯುಂಜಯೋ ಮನುಃ ।
ತಸ್ಯ ದೂರತರೋ ಮೃತ್ಯುರ್ವ್ಯಾಧಯಃ ಕಿಮುತಾಽಪರೇ ॥೩೯೭॥

ಮೃತ್ಯುಂ ಜಯತಿ ಯೋ ದೇವಃ ಸ ತು ಮೃತ್ಯುಂಜಯಃ ಸ್ಮೃತಃ ।
ಸ ತು ಶಂಕರ ಏವೋಽನ್ಯಸ್ತಾದೃಶೋ ನಾಸ್ತಿ ಸರ್ವಥಾ ॥೩೯೮॥

ಯೇ ತು ಮೃತ್ಯುಂಜಯಂ ನಿತ್ಯಂ ಪೂಜಯಂತಿ ಪ್ರಯತ್ನತಃ ।
ತೇಷಾಂ ಸ್ವಪ್ನೇಽಪಿ ಮರಣಂ ನ ಭವಿಷ್ಯತಿ ಸರ್ವಥಾ ॥೩೯೯॥

ಅಯಂ ಶಿವೈಕಶರಣಃ ಶ್ರೀಮೃತ್ಯುಂಜಯಜಾಪಕಃ ।
ಕಥಂ ಮೃತ್ಯುವಶಂ ಗಚ್ಛೇನ್ಮೃತ್ಯುಧಿಕ್ಕರಣಕ್ಷಮಃ ॥೪೦೦॥

ಬಾಲೋಽಪಿ ಬಲವಾನೇಷ ಯತೋ ಮೃತ್ಯುಂಜಯಾರ್ಚಕಃ ।
ಅತೋ ಧಿಕ್ಕರಣಂ ತಸ್ಯ ಕರ್ತುಮತ್ರ ನ ಶಕ್ಯತೇ ॥೪೦೧॥

---

ಮೃತ್ಯುಂಜಯದೇವನ ಪೂಜೆಯೂ, ಮೃತ್ಯುಂಜಯ ಮಹಾಮಂತ್ರವೂ ಇರುವವನಿಗೆ ಆ ಮೃತ್ಯುವೇ ಹೆದರಿ ದೂರಸಾರುವನು. ಹೀಗಿರುವಾಗ ರೋಗರುಜಿನಾದಿಗಳು ಹೇಗೆ ತಾನೇ ಅವನ ಹತ್ತಿರ ಸೇರಿಯಾವು ? ॥೩೯೭॥

ಸಾಕ್ಷಾನ್ಮೃತ್ಯುವನ್ನು ಜಯಿಸಿದವನು ಮೃತ್ಯುಂಜಯನೆನಿಸುವನು. ಆರೀತಿಯಾದ ಸಾಮರ್ಥ್ಯವುಳ್ಳವನು ಆ ಶಂಕರನೇ ಹೊರತು ಬೇರೆ ಯಾರೂ ಅಲ್ಲ. ॥೩೯೮॥

ಪ್ರತಿನಿತ್ಯವೂ ಪ್ರಯತ್ನಪೂರ್ವಕವಾಗಿ ಆ ಮೃತ್ಯುಂಜಯನನ್ನು ಪೂಜೆ ಮಾಡುವವನಿಗೆ ಕನಸ್ಸಿನಲ್ಲಿಯೂ ಮರಣವು ಸಂಭವಿಸಲಾರದು. ॥೩೯೯॥

ಆ ಪರಶಿವನಲ್ಲಿ ಮಾತ್ರ ಪೂಜಾತತ್ಪರನಾಗಿ, ಸಂಪತ್ಕರವಾದ ಮೃತ್ಯುಂಜಯ ಮಂತ್ರವನ್ನು ಜಪಮಾಡುವವನು, ಸ್ವತಃ ಮೃತ್ಯುವನ್ನೇ ತಿರಸ್ಕರಿಸುವ ಸಾಮರ್ಥ್ಯವುಳ್ಳವನಾಗಿರುವಾಗ ಹೇಗೆ ತಾನೇ ಮೃತ್ಯುವಿಗೆ ಅಧೀನನಾದಾನು ? ॥೪೦೦॥

ಮೃತ್ಯುಂಜಯನೆನಿಸಿದ ಆ ಮಹಾದೇವನನ್ನು ಪೂಜೆಮಾಡುತ್ತಿರುವ ಈತನು ಹುಡುಗನಾದರೂ ಬಲವಂತನೇ ಆಗಿರುವನಾದ್ದರಿಂದ ಆತನನ್ನು ಧಿಕ್ಕರಿಸಲು ಸಾಧ್ಯವೇ ಇಲ್ಲ. ॥೪೦೧॥

ಸ ಕಿಂ ಶಾಸಯಿತುಂ ಶಕ್ಯೋ ಮೃತ್ಯುಂಜಯಪರಾಯಣಃ ।
ಯಂ ಮೃತ್ಯುಂಜಯಮಾಶ್ರಿತ್ಯ ಸ್ಥಿತೋಽನ್ಯೈಃ ಪೂಜ್ಯತೇ ಸದಾ ॥೪೦೨॥

ಸ ಕಿಂ ಸ್ಪ್ರಷ್ಟುಂ ತ್ವಯಾ ಶಕ್ಯೋ ಮೃತ್ಯುಂಜಯವಶಂ ಗತಃ ।
ಸರ್ವಥಾ ನ ವಶಂ ಯಾಸ್ಯತ್ಯಯಂ ತವ ತಥಾ ಸತಿ ॥೪೦೩॥

ಆಯಾಹಿ ಯಾಮೋ ನಿಲಯಂ ಯಾಮಂ ನಾತ್ರ ಪ್ರಯೋಜನಂ ॥೪೦೪॥

॥ ವಿಷ್ಣುರುವಾಚ ॥

ಇತ್ಯುದೀರಿತಮಾಕರ್ಣ್ಯ ಮೃತ್ಯುಸ್ತದ್ವಚನಂ ತದಾ ।
ಸತ್ಯಮುಕ್ತಮಿತಿ ಜ್ಞಾತ್ವಾ ಖಿನ್ನಃ ಸ್ವನಿಲಯಂ ಯಯೌ ॥೪೦೫॥

ತತಸ್ತಜ್ಜನನೀ ಮೃತ್ಯುಂ ಪರಾವೃತ್ತಂ ವಿಲೋಕ್ಯ ಸಾ ।
ಆನಂದಂ ಪರಮಂ ಪ್ರಾಪ ವಿಲೋಕ್ಯ ಚ ತಮರ್ಭಕಂ ॥೪೦೬॥

---

ಮೃತ್ಯುಂಜಯ ದೇವತಾಮಂತ್ರಪರಾಯಣನಾಗಿ ಆ ದೇವದೇವನನ್ನೇ ಅನವರತವೂ ಪೂಜಿಸುತ್ತಾ, ಇತರ ಎಲ್ಲಾ ದೇವತೆಗಳಿಂದಲೂ ಪೂಜಾರ್ಹನಾಗಿರುವ ಈತನನ್ನು ನಿಗ್ರಹಿಸಲು ಸಾಧ್ಯವಾದೀತೇ! ॥೪೦೨॥

ಆ ಮೃತ್ಯುಂಜಯನೆನಿಸಿದ ಮಹಾದೇವನಿಗೆ ಅಧೀನನಾಗಿರುವ ಈತನನ್ನು ಮುಟ್ಟಲು ನಿನಗೆ ಸಾಧ್ಯವೇ.? ಹೀಗಿರುವಾಗ ಈ ಬಾಲಕನು ಎಂದಿಗೂ ನಿನ್ನ ಅಧೀನನಾಗಲಾರನು. ॥೪೦೩॥

ಅಯ್ಯ ಯಮನೇ! ಹೊರಡು, ಇನ್ನು ಮನೆಗೆ ಹೋಗೋಣ. ಇನ್ನು ಇಲ್ಲಿ ನಮಗೆ ಯಮನ ಸ್ವಾಭಾವಿಕವಾದ ಶಕ್ತಿಗೆ ಪ್ರಯೋಜನವಿಲ್ಲವೆಂದು ಚಿತ್ರಗುಪ್ತನು ಮೃತ್ಯುವಿಗೆ ಹೇಳಿದನು. ॥೪೦೪॥

ಚಿತ್ರಗುಪ್ತನು ಹೀಗೆ ನುಡಿದುದನ್ನು ಕೇಳಿ ಮೃತ್ಯುವು, ನೀನು ಹೇಳಿದುದು ಸರಿಯೆಂದು ಹೇಳಿ ಖಿನ್ನನಾಗಿ ತನ್ನ ವಾಸಸ್ಥಳಕ್ಕೆ ಹಿಂದಿರುಗಿದನು. ॥೪೦೫॥

ಆಗ ಈರೀತಿ ಮೃತ್ಯುದೇವತೆಯು ಹಿಂತಿರುಗಿ ಹೋದುದನ್ನು ನೋಡಿ, ಆ ಮೇಧಾವಿಯ ತಾಯಿಯಾದ ವಿಮಲಾಂಬಿಕೆಯು, ತನ್ನ ಮಗನನ್ನು ನೋಡಿ ಅಪಾರವಾದ ಆನಂದವನ್ನು ಹೊಂದಿದಳು. ॥೪೦೬॥

ತತಃ ಸಾ ಹರ್ಷಸಂಪನ್ನಾ ಆನಂದಾಶ್ರೂಣ್ಯಮುಂಚತ ।
ಮೃತ ಏವಾಯಮಧುನಾ ಪುನರ್ಜೀವಿತವಾನಿತಿ ॥೪೦೭॥

ತದಾ ಪುತ್ರೋಽಪಿ ಸಂತುಷ್ಟೋ ಬಿಲ್ವಪತ್ರೈರ್ಮಹೇಶ್ವರಂ ।
ಸಂಪೂಜ್ಯ ಸ ಪುನಃ ಸ್ತೋತ್ರಂ ಚಕಾರಾಘವಿನಾಶಕಂ ॥೪೦೮॥

॥ ಮೇಧಾವ್ಯುವಾಚ ॥

ಜಯ ವಿಶ್ವೋತ್ತಮ ಶ್ರೀಮನ್ಜಯ ಭಕ್ತಜನಪ್ರಿಯ ।
ಜಯ ಮೃತ್ಯುಂಜಯಾನಂತ ಜಯ ಮೃತ್ಯುಂಜಯಾವ್ಯಯ ॥೪೦೯॥

ಜಯ ಗೌರೀಪತೇ ಬ್ರಹ್ಮನ್ಜಯ ಶಂಕರ ಶಾಶ್ವತ ।
ಜಯ ವಿಶ್ವೈಕವಂದ್ಯಾಂಘ್ರೇ ಜಯ ವಿಷ್ಣುವರಪ್ರದ ॥೪೧೦॥

ಜಯ ಮನ್ಮಥಕಾಲಾಗ್ನೇ ಜಯ ಕಾಲಹರಾನಘ ।
ಜಯ ಪಿಂಗಜಟಾಜೂಟ ಜಯ ಭಸ್ಮವಿಭೂಷಣ ॥೪೧೧॥

---

ಅನಂತರ, ತಾಯಿಯು ತನ್ನ ಕುಮಾರನು ಮರಣಹೊಂದಿದ್ದವನು ಪುನಃ ಬದುಕಿದನೆಂದು ಸಂತೋಷದಿಂದ ಆನಂದಬಾಷ್ಪಗಳನ್ನು ಸುರಿಸಿದಳು. ಆಗ ಆ ಬಾಲಕನೂ ಸಂತೋಷಭರಿತನಾಗಿ ಪುನಃ ಮಹೇಶ್ವರನನ್ನು ಬಿಲ್ವಪತ್ರೆಗಳಿಂದ ಪೂಜೆಮಾಡಿ, ಅನಂತರ, ಪಾಪನಾಶಕವಾದ ಆ ಮಹಾದೇವನ ಸ್ತೋತ್ರವನ್ನು ಈ ರೀತಿ ಮಾಡಿದನು. ॥೪೦೭-೪೦೮॥

ಪ್ರಪಂಚದಲ್ಲಿ ಉತ್ತಮನೂ, ಸಂಪದ್ಭರಿತನೂ, ಭಕ್ತಜನರಲ್ಲಿ ಪ್ರೀತಿಯುಳ್ಳವನೂ, ಮೃತ್ಯುವನ್ನು ಜಯಿಸಿದವನೂ, ಕೊನೆಯಿಲ್ಲದವನೂ, ನಾಶರಹಿತನೂ ಆದ ಮೃತ್ಯುಂಜಯ ಸ್ವಾಮಿಯೇ, ನಿನಗೆ ಜಯವಾಗಲಿ. ಗೌರೀರಮಣನೇ, ನೀನು ಬ್ರಹ್ಮಸ್ವರೂಪನು. ಮಂಗಳಕರನು, ಶಾಶ್ವತವಾಗಿರುವವನು. ಸಕಲ ಲೋಕಗಳಿಂದಲೂ ನಮಸ್ಕರಿಸಲ್ಪಡುವ ಪಾದವುಳ್ಳವನು. ವಿಷ್ಣುವಿಗೆ ವರವನ್ನು ಕೊಡುವ ದೇವನೇ! ನಿನಗೆ ಜಯವಾಗಲಿ. ॥೪೦೯-೪೧೦॥

ಮನ್ಮಥನಿಗೆ ಕಾಲಾಗ್ನಿಸ್ವರೂಪನೂ, ಕಾಲಸ್ವರೂಪನಾದ ಯಮನನ್ನು ನಿಗ್ರಹಿಸಿದವನೂ, ಪಾಪರಹಿತನೂ, ಹೊಂಬಣ್ಣದ ಜಡೆಗಳ ಸಮೂಹವುಳ್ಳವನೂ, ಭಸ್ಮವನ್ನಲಂಕರಿಸಿಕೊಂಡಿರುವವನೂ ಆದ ಮಹಾದೇವನೇ! ನಿನಗೆ ಜಯವಾಗಲಿ.

ಜಯತ್ರಿಲೋಚನಾಮೇಯ ಜಯ ಶೂಲವರಪ್ರಿಯ ।
ಜಯ ಕಲ್ಯಾಣವಿಜಯ ಜಯ ಕಲ್ಯಾಣದಾಯಕ ॥೪೧೨॥

ಜಯ ಶೈವಜನಾಧಾರ ಜಯ ಶೈವಜನಪ್ರಿಯ ।
ಜಯ ಶೈವೋತ್ತಮಾರಾಧ್ಯ ಜಯ ಪಂಚಮುಖಾನಘ ॥೪೧೩॥

ಜಯ ನಿಷ್ಕಲ ಕಾಮಾರೇ ಜಯ ನಿರ್ಮಲ ನಿರ್ಗುಣ ।
ಜಯ ಶಾಂತ ಮಹಾದೇವ ಜಯ ಶಂಕರ ಶಾಶ್ವತ ॥೪೧೪॥

ಜಯ ಭಸ್ಮೋದ್ಧೂಳಿತಾಂಗ ಜಯ ರುದ್ರಾಕ್ಷಭೂಷಣ ।
ಜಯ ಶಂಭೋ ಸುರಾಧೀಶ ಜಯ ಸರ್ವಾಮರಾರ್ಚಿತ ॥೪೧೫॥

ಜಯ ಭಾನುಗುಣಾಕಾರ ಜಯ ಚಂದ್ರಕಲಾಧರ ।
ಜಯಾನೇಕಗುಣಾಕಾರ ಜಯಾನೇಕಗುಣಾಶ್ರಯ ॥೪೧೬॥

---

ಮುಕ್ಕಣ್ಣನೆನಿಸಿದ ಸ್ವಾಮಿಯೇ ! ಪ್ರಮಾಣರಹಿತನೂ, ಉತ್ಕೃಷ್ಟವಾದ ತ್ರಿಶೂಲಾಯುಧವನ್ನು ಧರಿಸುವುದರಲ್ಲಿ ಪ್ರೀತಿಯುಳ್ಳವನೂ, ಮಂಗಳಸ್ವರೂಪವಾದ ವಿಜಯವುಳ್ಳವನೂ, ಮತ್ತು ಮಂಗಳವನ್ನುಂಟುಮಾಡುವವನೂ ನೀನೇ ಆಗಿರುವೆ. ದೇವ, ನಿನಗೆ ವಿಜಯವಾಗಲಿ. ॥೪೧೧-೪೧೨॥

ನಿನ್ನ ಭಕ್ತರಾದ ಜನಗಳಿಗೆ ಆಧಾರಭೂತನೂ, ಶೈವರಲ್ಲಿ ಪ್ರೀತಿಯುಳ್ಳವನೂ, ಶೈವಶ್ರೇಷ್ಠರಿಂದ ಪೂಜ್ಯನೂ, ಐದು ಮುಖಗಳುಳ್ಳವನೂ, ನಿರ್ದುಷ್ಟನೂ, ಆದ ಮಹಾದೇವನನೇ, ನಿನಗೆ ಜಯವಾಗಲಿ. ಕಲ್ಮಷರಹಿತನಾದ ಸ್ವಾಮಿಯೇ ! ಮನ್ಮಥಶತ್ರುವೂ, ನಿರ್ಮಲನೂ, ಗುಣರಹಿತನೂ, ಶಾಂತಿಯುಳ್ಳವನೂ, ಮಂಗಳಕರನೂ, ಶಾಶ್ವತಸ್ವರೂಪನೂ ಆದ ನಿನಗೆ ವಿಜಯವಾಗಲಿ. ॥೪೧೩-೪೧೪॥

ಭಸ್ಮವನ್ನು ಅವಯವಗಳಿಗೆಲ್ಲಾ ಉದ್ಧೂಳನಮಾಡಿಕೊಂಡಿರುವವನೂ, ರುದ್ರಾಕ್ಷಮಾಲೆಯನ್ನು ಅಲಂಕರಿಸಿಕೊಂಡಿರುವವನೂ, ದೇವತಾಧಿಪತಿಯೂ, ಸಕಲ ದೇವತೆಗಳಿಂದಲೂ ಪೂಜಿಸಲ್ಪಟ್ಟವನೂ, ಸೂರ್ಯನಂತೆ ಸ್ವಚ್ಛವಾದ ಗುಣಸ್ವರೂಪನೂ, ಚಂದ್ರನ ಕಲೆಗಳನ್ನು ಧರಿಸಿರುವವನೂ, ಅನೇಕ ಗುಣಗಳ ಆಕಾರವುಳ್ಳವನೂ, ಮತ್ತು ಅನೇಕ ಗುಣಗಳಿಗೆ ಆಶ್ರಯನೂ ಆದ ಮಹಾದೇವನೇ ! ನಿನಗೆ ಜಯವಾಗಲಿ. ॥೪೧೫-೪೧೬॥

ಜಯ ಪುಣ್ಯೈಕನಿಲಯ ಜಯ ಲಿಂಗಾರ್ಚನಪ್ರಿಯ ।
ಜಯ ಯಜ್ಞಫಲಾಕಾರ ಜಯ ಯಜ್ಞಫಲಪ್ರದ ॥೪೧೭॥

ಜಯ ಶ್ರೀಮಂಗಳಾಕಾರ ಜಯಶ್ರೀಮಂಗಳಪ್ರದ ।
ಜಯೋಗ್ರ ಜಯ ಪಾಪಾರೇ ಜಯ ಭೂತೇಶ್ವರ ಪ್ರಭೋ ॥೪೧೮॥

ಜಯ ಭೀಮ ಭವಾವೇದ್ಯ ಭವವೈದ್ಯಾಭಯಪ್ರದ ।
ಜಯ ಶ್ರೀಕಂಠ ಸರ್ವಜ್ಞ ಜಯ ಸರ್ಪವಿಭೂಷಣ ॥೪೧೯॥

ಜಯ ಮಂಡಿತಸರ್ವಾಂಗ ಜಯ ಭಕ್ತಾರ್ತಿಭಂಜನ ।
ಜಯ ಭರ್ಗ ಮಹೇಶಾನ ಜಯ ಸರ್ವಶಿವಪ್ರಿಯ ॥೪೨೦॥

ಜಯ ಬ್ರಹ್ಮಾದಿವಂದ್ಯಾಂಘ್ರೇ ಜಯ ಬ್ರಹ್ಮಾದಿಪೂಜಿತ ।
ಜಯ ಶ್ರೀವಿಷ್ಣುನೇತ್ರಾಬ್ಜಪೂಜಿತಾಂಘ್ರಿಸರೋರುಹ ॥೪೨೧॥

---

ಪುಣ್ಯರಾಶಿಗೆಲ್ಲಾ ಮುಖ್ಯವಾಗಿ ಆಶ್ರಯನೂ, ಲಿಂಗಪೂಜೆಮಾಡುವುದರಿಂದ ಪ್ರೀತಿಹೊಂದುವವನೂ, ಯಾಗಗಳ ಫಲಸ್ವರೂಪನೂ, ಯಜ್ಞಗಳ ಫಲಗಳನ್ನು ಕೊಡುವವನೂ, ಮಂಗಳವಿಗ್ರಹನೂ, ಸಂಪದ್ಭರಿತವಾದ ಮಂಗಳವನ್ನುಂಟುಮಾಡುವವನೂ, ಉಗ್ರವಾಗಿ ಶತ್ರುಗಳಿಗೆ ತೋರುವವನೂ, ಪಾಪಗಳಿಗೆಲ್ಲಾ ಶತ್ರುವೂ, ಸಕಲ ಭೂತಗಳಿಗೂ ಒಡೆಯನೂ ಸರ್ವಸಮರ್ಥನೂ ಆದ ಮಹಾದೇವನಿಗೆ ಜಯವಾಗಲಿ. ॥೪೧೭-೪೧೮॥

ವಿರೋಧಿಗಳಿಗೆ ಭಯಂಕರನಾಗಿ ತೋರುವವನೂ, ಸಕಲ ಜಗದುತ್ಪತ್ತಿಸ್ಥಿತಿ ಸಂಹಾರಕರ್ತನೂ, ಗೋಚರನಾಗದವನೂ, ಸಂಸಾರವೆಂಬ ರೋಗವನ್ನು ನಿವಾರಣೆ ಮಾಡಬಲ್ಲ ವೈದ್ಯನೂ, ಭಕ್ತರಿಗೆ ಅಭಯಪ್ರದಾನಮಾಡುವವನೂ, ಕಾಂತಿಯುಕ್ತವಾದ ಕೊರಳುಳ್ಳವನೂ, ಎಲ್ಲವನ್ನೂ ತಿಳಿದವನೂ, ಹಾವನ್ನೇ ಅಲಂಕರಿಸಿಕೊಂಡಿರುವವನೂ, ಸಕಲ ಅವಯವಗಳಿಗೂ ಅಲಂಕಾರಮಾಡಿಕೊಂಡಿರುವನೂ, ಭಕ್ತರ ದುಃಖಗಳನ್ನು ಹೋಗಲಾಡಿಸುವವನೂ, ಪ್ರಪಂಚಸೃಷ್ಟಿಕರ್ತನೂ, ಅಪಾರವಾದ ಐಶ್ವರ್ಯವುಳ್ಳವನೂ, ಮತ್ತು ಸಕಲ ಮಂಗಳಕಾರ್ಯಗಳಲ್ಲಿಯೂ ಪ್ರೀತಿಯುಳ್ಳವನೂ, ಆದ ಮಹಾದೇವನೇ ! ನಿನಗೆ ಜಯವಾಗಲಿ. ॥೪೧೯-೪೨೦॥

ಬ್ರಹ್ಮಾದಿಸಕಲದೇವತೆಗಳಿಂದಲೂ ಪೂಜಿಸಲ್ಪಟ್ಟ ಪಾದವುಳ್ಳವನೂ, ಬ್ರಹ್ಮನೇ ಮೊದಲಾದ ದೇವತೆಗಳಿಂದ ಪೂಜೆಮಾಡಲ್ಪಟ್ಟವನೂ, ವಿಷ್ಣುವಿನ ಕಮಲದಂತಿರುವ

ಜಯೋಜ್ಜ್ವಲಲಲಾಟಾಕ್ಷ ಜಯಕಾರಣ ಸರ್ವದ ।
ಜಯ ಚಿದ್ಘನ ಚಿದ್ರೂಪ ಜಯ ದೇವಶಿಖಾಮಣೇ ॥೪೨೨॥

ಜಯ ಕರ್ಪೂರಗೌರಾಂಗ ಜಯ ಶಾಶ್ವತ ಸರ್ವಗ ।
ಜಯ ಸರ್ಗಕರಾಶಾಸ್ಯ ಜಯ ಸ್ಥಿತಿಕರಾಶ್ರಯ ॥೪೨೩॥

ಜಯ ಮಾಯಾಗುಣಾತೀತ ಬ್ರಹ್ಮಾಂಡಕ್ಷಯಕಾರಕ ।
ಜಯಾಪ್ರಧೃಷ್ಯ ನಿರ್ಲಿಪ್ತ ನಿರಂಜನ ನಿರಾಮಯ ॥೪೨೪॥

ಜಯಾಖಂಡಮಯಾಕಾರ ಜಯ ಶ್ರೀ ಚಂದ್ರಶೇಖರ ।
ಜಯ ವೇದಾಂತವೇದ್ಯೇಶ ಜಯ ಮಂಗಳವಿಗ್ರಹ ॥೪೨೫॥

ಜಯಾಮಿತಪ್ರಭಾವಾಢ್ಯ ಜಯಾಚಾರ್ಯಗುಣಾಶ್ರಯ ।
ಜಯಾಶ್ರಿತಾಮರತರೋ ಜಯ ಬಿಲ್ವದಲಾರ್ಚಿತ ॥೪೨೬॥

---

ಕಣ್ಣಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ, ಪ್ರಜ್ವಲಿಸುತ್ತಿರುವ ಹಣೆಗಣ್ಣುಳ್ಳವನೂ, ಎಲ್ಲಕ್ಕೂ ಕಾರಣನೂ, ಸಕಲ ಫಲಗಳನ್ನೂ ಕೊಡುವವನೂ, ಮೇಘದಂತೆ ಗಂಭೀರವಾದ ಜ್ಞಾನಸ್ವರೂಪನೂ, ಚಿದ್ರೂಪಿಯೂ, ದೇವತೆಗಳಿಗೆಲ್ಲಾ ಚೂಡಾಮಣಿಯಂತೆ ಶ್ರೇಷ್ಠನೂ ಆದ ಮಹಾದೇವನಿಗೆ ಜಯವಾಗಲಿ. ॥೪೨೧-೪೨೨॥

ಕರ್ಪೂರದಂತೆ ಶುಭ್ರವಾದ ಅವಯವವುಳ್ಳವನೂ, ನಿತ್ಯನೂ, ಸರ್ವವ್ಯಾಪಿಯೂ, ಸೃಷ್ಟಿಕಾರ್ಯನಿರತನೂ, ಎಲ್ಲರಿಂದಲೂ ಸ್ತುತ್ಯನಾದವನೂ, ಪ್ರಪಂಚವನ್ನು ರಕ್ಷಣೆಮಾಡುವವನೂ, ಎಲ್ಲಕ್ಕೂ ಆಶ್ರಯನೂ, ಅಜ್ಞಾನಸ್ವರೂಪವಾದ ಮಾಯಾಗುಣಗಳಿಂದ ಬಿಡಲ್ಪಟ್ಟವನೂ, ಸಕಲ ಬ್ರಹ್ಮಾಂಡವನ್ನೂ ನಾಶಮಾಡುವವನೂ, ಶತ್ರುಗಳಿಂದ ಪ್ರತಿಭಟಿಸಲು ಅಸಾಧ್ಯನೂ, ನಿರ್ಲಿಪ್ತನೂ (ಸ್ವಲ್ಪವೂ ಪ್ರಾಪಂಚಿಕ ವ್ಯವಹಾರ ಸಂಬಂಧವಿಲ್ಲದವನೂ) ದೋಷರಹಿತನೂ, ರೋಗರುಜಿನಾದಿಗಳಿಗೆ ಆಶ್ರಯನಾಗದಿರುವವನೂ ಆದ ಮಹಾದೇವನಿಗೆ ವಿಜಯವಾಗಲಿ. ॥೪೨೩-೪೨೪॥

ಪರಿಪೂರ್ಣಸ್ವರೂಪನೂ, ಕಾಂತಿಯುಕ್ತನಾದ ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ವೇದಾಂತಗಳಿಂದ ತಿಳಿಯಲು ಯೋಗ್ಯನೂ, ಐಶ್ವರ್ಯಶಾಲಿಯೂ, ಮಂಗಳಸ್ವರೂಪನೂ, ಅಪರಿಮಿತವಾದ ಮಹಿಮೆಯುಳ್ಳವನೂ, ಯೋಚಿಸಲು ಅಸಾಧ್ಯವಾದ ಗುಣಗಳಿಗೆ ಆಶ್ರಯನೂ, ಆಶ್ರಿತರಾದ ತನ್ನ ಭಕ್ತರಿಗೆ ಕಲ್ಪವೃಕ್ಷ

ಜಯ ಸರ್ವಾಗಮಸ್ತುತ್ಯ ಜಯ ಸರ್ವಾಗಮಪ್ರಿಯ ।
ಜಯ ರುದ್ರ ಜಯೋಮೇಶ ಜಯೋತ್ಕೃಷ್ಟ ಜಯೇಶ್ವರ ॥೪೨೭॥

ಜಯ ಶಂಗ ಜಯಾರಾಧ್ಯ ಜಯ ಸರ್ವೋತ್ತಮೋತ್ತಮ ।
ಜಯಾನಾಥೈಕಶರಣ ಶರಣ್ಯಪದಪಂಕಜ ॥೪೨೮॥

ಜಯ ಪಂಚಾಕ್ಷರಾಕಾರ ಜಯ ಪಂಚಾಕ್ಷರಪ್ರಿಯ ।
ಜಯ ಗೌರೀಪ್ರಿಯಾನಂತ ಜಯ ಪೂರ್ಣಮನೋರಥ ॥೪೨೯॥

ಜಯೋಂಕಾರಮಯಾಕಲ್ಪ ಜಯ ಸರ್ವಾತ್ಮಕಪ್ರಭೋ ।
ಜಯ ಕುಂದೇಂದುಧವಲ ಜಯ ಬ್ರಹ್ಮಪಿತಾಮಹ ॥೪೩೦॥

ಜಯ ಷಣ್ಮುಖನಂದೀಶಗಣನಾಥಾದಿಸೇವಿತ ।
ಜಯ ಚಿನ್ಮಯ ಚಿನ್ಮೂರ್ತೇ ಜಯಾನಂದಮನೋನ್ಮಯ ॥೪೩೧॥

---

ದಂತಿರುವವನೂ, ಬಿಲ್ವದಳಗಳಿಂದ ಪೂಜಿಸಲ್ಪಟ್ಟವನೂ, ಆದ ಮಹಾದೇವನಿಗೆ ವಿಜಯವಾಗಲಿ. ॥೪೨೫-೪೨೬॥

ಸಕಲ ಆಗಮಗಳಿಂದಲೂ ಸ್ತೋತ್ರಾರ್ಹನೂ, ಎಲ್ಲಾ ಆಗಮಗಳಿಗೂ ಪ್ರಿಯನಾಗಿರುವವನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ಉಮಾರಮಣನೂ, ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನೂ, ಐಶ್ವರ್ಯಭರಿತನೂ, ಸುಖಸ್ವರೂಪನೂ, ಪೂಜಾರ್ಹನೂ, ಉತ್ತಮರೆನಿಸಿದ ಎಲ್ಲರಿಗಿಂತಲೂ ಉತ್ತಮೋತ್ತಮನೂ, ಅನಾಥರಾದ ಭಕ್ತರನ್ನೆಲ್ಲಾ ಮುಖ್ಯವಾಗಿ ಕಾಪಾಡುವವನೂ, ಮರೆಹೊಕ್ಕವರನ್ನು ಕಾಪಾಡುವ ಅಡಿದಾವರೆಗಳುಳ್ಳವನೂ ಆದ ಮಹಾದೇವನಿಗೆ ವಿಜಯವಾಗಲಿ. ॥೪೨೭-೪೨೮॥

'ನಮಃ ಶಿವಾಯ' ಎಂಬ ಪಂಚಾಕ್ಷರಮಂತ್ರಸ್ವರೂಪನೂ, ಪಂಚಾಕ್ಷರ ಮಹಾಮಂತ್ರದಲ್ಲಿ ಪ್ರೀತಿಯುಳ್ಳವನೂ, ಗೌರೀದೇವಿಯರಮಣನೂ, ನಾಶರಹಿತನೂ, ಪೂರ್ಣವಾದ ಮನೋರಥವುಳ್ಳವನೂ, ಓಂಕಾರಸ್ವರೂಪನೂ, ಸಕಲ ಚರಾಚರಾತ್ಮಕವಾದ ಪ್ರಪಂಚಸ್ವರೂಪನೂ, ಸರ್ವಸಮರ್ಥನೂ, ಕುಂದಪುಷ್ಪ, ಚಂದ್ರ ಇವರಂತೆ ಶುಭ್ರವರ್ಣವುಳ್ಳವನೂ, ಬ್ರಹ್ಮದೇವನ ಅಜ್ಜನೂ ಆದ ಮಹಾದೇವನಿಗೆ ವಿಜಯವಾಗಲಿ. ॥೪೨೯-೪೩೦॥

ಷಣ್ಮುಖ, ನಂದಿಕೇಶ್ವರ, ವಿಘ್ನರಾಜ ಇವರೇ ಮೊದಲಾದವರಿಂದ ಸೇವಿಸ

ಜಯಾನ್ನಮಯ ನಿರ್ದ್ವಂದ್ವ ನಿರೀಹ ನಿರುಪಾಧಿಕ ।
ಜಯಾನ್ನಪೂರ್ಣಾವಾಮಾಂಗ ಜಯ ವಿಶ್ವೇಶ್ವರ ಪ್ರಭೋ ॥೪೩೨॥

ಪ್ರಸೀದ ಪ್ರಸೀದ ಪ್ರಭೋ ಚಂದ್ರಮೌಳೇ
ಪ್ರಸೀದ ಪ್ರಸೀದ ಪ್ರಭೋ ಮನ್ಮಥಾರೇ ।
ಪ್ರಸೀದ ಪ್ರಸೀದ ಪ್ರಭೋ ಶೂಲಪಾಣೇ
ಪ್ರಸೀದ ಪ್ರಸೀದ ಪ್ರಭೋ ಮೃತ್ಯುಮೃತ್ಯೋ ॥೪೩೩॥

ಪ್ರಸೀದ ಪ್ರಸೀದ ಪ್ರಭೋಽನಾಥಬಂಧೋ
ಪ್ರಸೀದ ಪ್ರಸೀದ ಪ್ರಭೋ ಪುಣ್ಯಸಿಂಧೋ ।
ಪ್ರಸೀದ ಪ್ರಸೀದ ಪ್ರಭೋ ದೇವಬಂಧೋ
ಪ್ರಸೀದ ಪ್ರಸೀದ ಪ್ರಭೋ ಮೃತ್ಯುಬಂಧೋ ॥೪೩೪॥

॥ ವಿಷ್ಣುರುವಾಚ ॥

ಇತಿ ಸ್ತುತ್ವಾ ಮಹಾದೇವಂ ಪುನಃ ಸಂಪೂಜ್ಯ ಸಾದರಂ ।
ಪ್ರಣಮ್ಯ ಭಕ್ತಿಭಾವೇನ ನನರ್ತಾಸ್ಯೇಪಮಾದರಾತ್ ॥೪೩೫॥

---

ಲ್ಪಡುತ್ತಿರುವವನೂ, ಚಿನ್ಮಯನೂ, ಜ್ಞಾನಸ್ವರೂಪನೂ, ಆನಂದಸ್ವರೂಪನೂ, ಮನಃಸ್ವರೂಪನೂ, ಅನ್ನಮಯನೂ, ಅದ್ವಿತೀಯನೂ, ಇಚ್ಛೆಯಿಲ್ಲದವನೂ ಕಾರಣರಹಿತನೂ, ಅನ್ನಪೂರ್ಣಾದೇವಿಯನ್ನೇ ತನ್ನ ಶರೀರದ ಎಡಭಾಗವನ್ನಾಗಿ ಮಾಡಿರುವವನೂ, ಜಗದೊಡೆಯನೂ, ಸರ್ವಸಮರ್ಥನೂ ಆದ ಮಹಾದೇವನಿಗೆ ವಿಜಯವಾಗಲಿ. ॥೪೩೧-೪೩೨॥

ಚಂದ್ರಚೂಡನಾದ ಪ್ರಭುವೇ, ಮನ್ಮಥನ ಶತ್ರುವೂ, ತ್ರಿಶೂಲಾಯುಧವನ್ನು ಕೈಯಲ್ಲಿ ಹಿಡಿದಿರುವವನೂ, ಮೃತ್ಯುವಿಗೂ ಮೃತ್ಯುಸ್ವರೂಪನೂ ಆದ ಸರ್ವಸಮರ್ಥ ನೆನಿಸಿರುವ ಮಹಾದೇವನೇ, ನನ್ನಲ್ಲಿ ಅನುಗ್ರಹಮಾಡು. ॥೪೩೩॥

ದೀನರನ್ನು ಬಂಧುವಿನಂತೆ ರಕ್ಷಣೆಮಾಡುವವನೂ, ಪುಣ್ಯಗಳಿಗೆಲ್ಲಾ ಸಮುದ್ರ ದಂತೆ ಆಶ್ರಯನೂ, ದೇವತೆಗಳಿಗೆಲ್ಲಾ ಬಂಧುವೂ, ಮೃತ್ಯುಸ್ವರೂಪನಾದ ಯಮ ನಿಗೂ ರಕ್ಷಕನೂ, ಸರ್ವಸಮರ್ಥನೂ ಆದ ಪ್ರಭುವೇ ನನ್ನಲ್ಲಿ ಪ್ರಸನ್ನನಾಗು." ॥೪೩೪॥

ಹೀಗೆ ಮೇಧಾವಿಯು ಮಹಾದೇವನನ್ನು ಸ್ತೋತ್ರಮಾಡಿ ಆದರದಿಂದ ಪೂಜಿ

ತತಃ ಶಿವಮಭಿಸ್ಪೃಶ್ಯ ಸಮಾಲಿಂಗ್ಯ ಮನುಂ ಜಪನ್ ।
ಮತ್ವಾ ಕೃತಾರ್ಥಮಾತ್ಮಾನಂ ಪರಮಂ ಪರ್ಯಪಶ್ಯತ ॥೪೩೬॥

ತತೋ ಮಾಧ್ಯಾಹ್ನಿಕೀಂ ಪೂಜಾಂ ಕೃತ್ವಾ ಬಿಲ್ವದಲಾದಿಭಿಃ ।
ಸ್ತುತ್ವಾ ಪ್ರಣಮ್ಯ ಬಹುಧಾ ಪುನಃ ಸಂಪೂಜ್ಯ ಶಂಕರಂ ॥೪೩೭॥

ಪೂಜಾಂ ಸಮಾಪ್ಯ ಪೂತಾತ್ಮಾ ಲಿಂಗಮಾದಾಯ ಮೃನ್ಮಯಂ ।
ಜಲೇ ಸಂಕ್ಷೇಪಯಾಮಾಸ ಸ ಬಿಲ್ವದಲಮರ್ಭಕಃ ॥೪೩೮॥

ತತೋ ಮಾತರಮಾಲೋಕ್ಯ ಪ್ರಣಮ್ಯ ಚರಣೌ ಸ್ಪೃಶನ್ ।
ಮಾತ್ರಾ ಸಹ ಗೃಹಂ ಪ್ರಾಪ ದುಂದುಭಿಧ್ವನಿಪೂರ್ವಕಂ ॥೪೩೯॥

ತತೋ ದದರ್ಶ ಜನಕಂ ಶಿವಪೂಜಾಪರಾಯಣಂ ।
ತ್ರಿಪುಂಡ್ರಲೇಖಾವಿಲಸತ್ಫಾಲಭಾಗಮಕಲ್ಮಷಂ ॥೪೪೦॥

---

ಮಾಡಿದ ನಂತರ ಭಕ್ತಿಪುರಸ್ಸರವಾಗಿ ನಮಸ್ಕಾರಮಾಡಿ, ಬೆವರುಬರುವವರೆಗೂ ಆದರದಿಂದ ನರ್ತನಮಾಡಿದನು. ॥೪೩೫॥

ಶಿವಲಿಂಗಸ್ವರೂಪಿಯಾದ ಆ ಪರಶಿವನನ್ನು ಮುಟ್ಟಿ ಆಲಿಂಗನಮಾಡಿಕೊಂಡು, ಶಿವಮಂತ್ರವನ್ನೇ ಜಪಿಸುತ್ತಾ ತಾನೇ ಕೃತಕೃತ್ಯನೂ, ಸರ್ವಶ್ರೇಷ್ಠನೂ ಎಂದು ತಿಳಿದನು. ॥೪೩೬॥

ಆ ಮಹಾದೇವನನ್ನು ನಾನಾವಿಧವಾಗಿ ಪೂಜೆಮಾಡಿ, ಸ್ತೋತ್ರಮಾಡಿದ ನಂತರ ನಮಸ್ಕಾರಮಾಡಿದನು. ಆಮೇಲೂ ಶಂಕರನನ್ನು ಪುನಃ ಪುನಃ ಪೂಜೆ ಮಾಡುತ್ತಾ ಪೂಜೆ ಮುಗಿದ ನಂತರ ಪರಿಶುದ್ಧಾಂತಃಕರಣನಾದ ಆ ಬ್ರಾಹ್ಮಣ ಬಾಲಕನು, ತಾನು ಪೂಜಿಸುತ್ತಿದ್ದ ಮಣ್ಣಿನ ಶಿವಲಿಂಗವನ್ನು, ಅದಕ್ಕೆ ಪೂಜೆಮಾಡಿದ್ದ ಬಿಲ್ವದಳಗಳೊಡನೆ ನೀರಿನಲ್ಲಿ ಬಿಟ್ಟುಬಿಟ್ಟನು. ॥೪೩೭-೪೩೮॥

ಹಾಗೆಯೇ ಸಮೀಪದಲ್ಲಿದ್ದ ತನ್ನ ತಾಯಿಯನ್ನು ನೋಡಿ, ಅವಳ ಪಾದಗಳನ್ನು ಮುಟ್ಟಿ ನಮಸ್ಕಾರಮಾಡಿ, ಮಂಗಳಕರವಾದ ದುಂದುಭಿವಾದ್ಯಗಳೊಡನೆ ತನ್ನ ತಾಯಿಯ ಜೊತೆ ಮನೆಗೆ ಹೋದನು. ॥೪೩೯॥

ಮನೆಯ ಒಳಭಾಗದಲ್ಲಿ ಶಿವಪೂಜಾತತ್ಪರನಾಗಿ ಭಸ್ಮತ್ರಿಪುಂಡ್ರರೇಖೆಗಳಿಂದ ಶೋಭಿಸುತ್ತಿರುವ ಹಣೆಯುಳ್ಳವನೂ, ಕಲ್ಮಷರಹಿತನೂ, ಭಸ್ಮವನ್ನು ಸಕಲ

ಭಸ್ಮೋದ್ಧೂಲಿತಸರ್ವಾಂಗಂ ರುದ್ರಾಕ್ಷಾಲಂಕೃತಂ ಮುದಾ ।
ಶಿವಪಾದಾಂಬುಜಧ್ಯಾನಸಂಸಕ್ತಂ ಶುಚಿಮಾನಸಂ ॥೪೪೧॥

ಮಂತ್ರಾಧಿರಾಜಮಮಲಂ ಸರ್ವವೇದಾಂತಸಂಸ್ತುತಂ ।
ವೇದಾವತಂಸಮಾರಾಧ್ಯಂ ಜಪಂತಂ ಶಿವಸಂಮತಂ ॥೪೪೨॥

ಮಂತ್ರಾಣಾಮಾಶ್ರಯಂ ನಿತ್ಯಂ ಶಿವಮಂತ್ರಜಪೋತ್ಸುಕಂ ।
ಶಿವನಾಮಾಮೃತಂ ಭೂಯಃ ಪಿಬಂತಂ ಮುಹುರಾದರಾತ್ ॥೪೪೩॥

ತತಃ ಪ್ರಣಮ್ಯ ಬಹುಧಾ ಕೃತಾಂಜಲಿಪುಟೋಽರ್ಭಕಃ ।
ತಾದೃಶಂ ಪಿತರಂ ದೃಷ್ಟ್ವಾ ಸ್ವಂ ಕೃತಾರ್ಥಮಮನ್ಯತ ॥೪೪೪॥

ಶೈವೋತ್ತಮಸ್ತತ್ಪಿತಾಽಪಿ ಸಮಾಪ್ಯ ಶಿವಪೂಜನಂ ।
ದದರ್ಶ ವಿನಯಾನ್ನಮ್ರಂ ಸುತಂ ಮೇಧಾವಿನಂ ತದಾ ॥೪೪೫॥

---

ಅವಯವಗಳಿಗೂ ಬಳಿದುಕೊಂಡಿರುವವನೂ, ರುದ್ರಾಕ್ಷಮಾಲೆಯನ್ನು ಅಲಂಕರಿಸಿಕೊಂಡು ಶುದ್ಧವಾದ ಮನಸ್ಸಿನಿಂದ ಆ ಪರಶಿವನ ಪಾದಕಮಲಧ್ಯಾನದಲ್ಲಿ ನಿರತನಾಗಿರುವವನೂ ಆದ ತನ್ನ ತಂದೆಯನ್ನು ದರ್ಶನಮಾಡಿದನು. ॥೪೪೦-೪೪೧॥

ಸಕಲ ವೇದಾಂತಗಳಿಂದಲೂ ಸ್ತೋತ್ರಮಾಡಲ್ಪಡುವ, ಮತ್ತು ನಿರ್ಮಲವಾದ ವೇದಗಳಿಗೆಲ್ಲಾ ಶಿರೋಭೂಷಣವೆನಿಸಿ ಪೂಜಾರ್ಹವೂ ಶಿವನಿಗೆ ಸಂಮತವೂ ಆಗಿರುವ ಮಂತ್ರರಾಜನೆನಿಸಿದ ಶಿವಪಂಚಾಕ್ಷರ ಮಂತ್ರವನ್ನು ಜಪಮಾಡುತ್ತಾ, ಸಕಲ ಮಂತ್ರಗಳಿಗೂ ಆಶ್ರಯವಾಗಿರುವ ಆ ಶಿವಮಂತ್ರದಲ್ಲಿಯೇ ನಿತ್ಯವೂ ಉತ್ಸಾಹಭರಿತನಾಗಿ, ಪದೇಪದೇ ಆದರರಿಂದ ಶಿವನಾಮಾಮೃತವನ್ನು ಪಾನಮಾಡುತ್ತಿರುವ ತನ್ನ ತಂದೆಯನ್ನು ಭಕ್ತಿಯಿಂದ ನೋಡಿದನು. ॥೪೪೨-೪೪೩॥

ಆ ಬಾಲಕನು ತಂದೆಗೆ ಕೈಮುಗಿದು ಬಹುವಿಧವಾಗಿ ನಮಸ್ಕಾರ ಮಾಡಿ, ಆ ರೀತಿಯಾಗಿ ಶಿವಪೂಜಾನಿರತನಾಗಿರುವ ತಂದೆಯನ್ನು ನೋಡಿ ತಾನೇ ಕೃತಾರ್ಥನೆಂದು ತಿಳಿದನು. ॥೪೪೪॥

ಶಿವಭಕ್ತಾಗ್ರೇಸರನಾದ ಅವನ ತಂದೆಯೂ ಕೂಡ, ತಾನು ಶಿವಪೂಜೆಯನ್ನು ಪೂರ್ಣವಾಗಿ ಮಾಡಿದನಂತರ, ವಿನಯದಿಂದ ನಮ್ರನಾಗಿ ಬಂದು ನಿಂತಿರುವ ತನ್ನ ಮಗನಾದ ಮೇಧಾವಿಯನ್ನು ನೋಡಿದನು. ॥೪೪೫॥

ತತಸ್ತಮಂಕಮಾರೋಪ್ಯ ಶಿರೋ ಜಿಘ್ರಾಯ ಸಾದರಂ ।
ಸಮಾಲಿಂಗ್ಯಾತಿಸಂತುಷ್ಟೋ ಬಭೂವ ಸುತವೀಕ್ಷಣಾತ್ ॥೪೪೬॥

॥ ವಿಷ್ಣುರುವಾಚ ॥

ಇದಮುಕ್ತಂ ಮಯಾ ಬ್ರಹ್ಮನ್ ಕೌತುಕಾರ್ಥಮಿಹಾಧುನಾ ।
ಕೇನ ವಾ ಜ್ಞಾಯತೇ ಪೂರ್ಣಂ ಶಿವಪೂಜಾವಿಧೇಃ ಫಲಂ ॥೪೪೭॥

ಸಮಭ್ಯರ್ಚ್ಯ ಮಹಾದೇವಂ ಮಾನವೋಽಪಿ ಸಕೃನ್ಮುದಾ ।
ತೃಣೀಕರೋತಿ ಸಹಸಾ ಸುರಾನಸ್ಮಾನಪಿ ಧ್ರುವಂ ॥೪೪೮॥

ನ ಪಶ್ಯತ್ಯೇವ ದುಃಖಾನಿ ಶಿವಪೂಜಾಪರಾಯಣಃ ।
ಸ್ವಪ್ನೇಽಪಿ ಸರ್ವಥಾ ಬ್ರಹ್ಮನ್ಸತ್ಯಂ ಸತ್ಯಂ ನ ಸಂಶಯಃ ॥೪೪೯॥

ತತೋ ಯತ್ನೇನ ಮಹತಾ ಶ್ರೀಮಹಾದೇವಪೂಜನಂ ।
ಕರ್ತವ್ಯಮನ್ಯದೇವಾನಾಂ ತ್ಯಕ್ತ್ವಾ ಪೂಜನಮಾದರಾತ್ ॥೪೫೦॥

---

ತಂದೆಯು ಕುಮಾರನನ್ನು ತೊಡೆಯಮೇಲೆ ಕೂರಿಸಿಕೊಂಡು, ಅವನ ತಲೆಯನ್ನು ಮೂಸಿನೋಡಿ, ಆಲಿಂಗನಮಾಡಿಕೊಂಡು ಮೃತ್ಯುವನ್ನು ಜಯಿಸಿಬಂದಿರುವ ಮಗನ ದರ್ಶನದಿಂದ ಅತ್ಯಂತ ಸಂತೋಷಭರಿತನಾದನು. ॥೪೪೬॥

ಅಯ್ಯ ಬ್ರಹ್ಮನೇ, ನಿನಗೆ ಶಿವಪೂಜಾಮಹಿಮೆಯನ್ನು ತಿಳಿಸಲುನಾನು ಈಗ ಇದನ್ನು ಹೇಳಿದೆನು. ನಿಜವಾಗಿ ಶಿವಪೂಜೆಯಿಂದ ಬರುವ ಪರಿಪೂರ್ಣವಾದ ಫಲವು ಇಷ್ಟೇ ಎಂದು ಯಾರು ತಾನೇ ಹೇಳಬಲ್ಲರು ? ॥೪೪೭॥

ಆ ಮಹಾದೇವನನ್ನು ಸಂತೋಷದಿಂದ ಒಂದೇಬಾರಿ ಪೂಜೆಮಾಡಿದ ಮನುಜನೂ ಕೂಡ, ದೇವತೆಗಳಾದ ನಮ್ಮನ್ನು ಸತ್ಯವಾಗಿ ಹುಲ್ಲಿಗಿಂತ ಕಡೆಯಾಗಿ ಕಾಣುವನು. ॥೪೪೮॥

ಎಲೈ ಬ್ರಹ್ಮನೇ, ಶಿವಪೂಜಾತತ್ಪರನಾದವನು ಕನಸಿನಲ್ಲಿಯೂ ಸಹ ಸತ್ಯವಾಗಿಯೂ ದುಃಖಗಳನ್ನು ಹೊಂದಲಾರನೆಂಬುದರಲ್ಲಿ ಸಂದೇಹವೇ ಇಲ್ಲ. ॥೪೪೯॥

ಇತರ ದೇವತೆಗಳನ್ನು ಪೂಜೆಮಾಡುವುದನ್ನು ಬಿಟ್ಟು ವಿಶೇಷ ನಿಯಮದಿಂದ ಸಂಪತ್ಪ್ರದನಾದ ಆ ಮಹಾದೇವನನ್ನು ಆದರದಿಂದ ಪೂಜೆಮಾಡಬೇಕು. ॥೪೫೦॥

ಶಿವಪೂಜಾಕಲ್ಪವೃಕ್ಷೋ ಯಥಾ ಕಾಮಾನ್ಪ್ರಯಚ್ಛತಿ ।
ತಥಾಽಸ್ಮದಾದಿಪೂಜಾ ತು ನ ಭವಿಷ್ಯತಿ ಕಾಮದಾ ॥೪೫೧॥

ಸರ್ವಕಾಮಾಶ್ರಯೋ ಯಸ್ಮಾನ್ಮಹಾದೇವಸ್ತತಃ ಶಿವಃ ।
ಕಾಮಿತಾರ್ಥಪ್ರದಃ ಸಮ್ಯಗ್ಭವಿಷ್ಯತ್ಯೇವ ಪೂಜಿತಃ ॥೪೫೨॥

ಯದಿ ಕಾಮೇಶ್ವರಃ ಕಾಮಾನ್ಪೂಜಿತೋ ನ ಪ್ರಯಚ್ಛತಿ ।
ತದಾ ಕಾಮಪ್ರದೋಽನ್ಯಃ ಕಿಂ ಭವಿಷ್ಯತಿ ಮೇ ವದ ॥೪೫೩॥

ಅತಃ ಸರ್ವಾತ್ಮನಾ ಸರ್ವಂ ಪರಿತ್ಯಜ್ಯ ಪ್ರಯತ್ನತಃ ।
ಪೂಜಯಧ್ವಂ ಮಹಾದೇವಂ ಸರ್ವಾಭೀಷ್ಟಪ್ರದಾಯಕಂ ॥೪೫೪॥

ವಿಧೇ ವಿನಾ ಪ್ರಯಾಸೇನ ಪತ್ರೇಣಾಭ್ಯರ್ಚಿತಃ ಶಿವಃ ।
ದದಾತಿ ಪರಮಾಂ ವೃದ್ಧಿಂ ಸ ಕೇನೇಹ ನ ಪೂಜ್ಯತೇ ॥೪೫೫॥

---

ಶಿವಪೂಜೆಯೆಂಬ ಕಲ್ಪವೃಕ್ಷವು ಭಕ್ತರಿಗೆ ಬೇಕಾದ ಇಷ್ಟಾರ್ಥಗಳನ್ನು ಕೊಡುವಹಾಗೆ ನಮ್ಮಗಳ ಪೂಜೆಯು ಎಂದಿಗೂ ಮನೋರಥಗಳನ್ನು ಈಡೇರಿಸಲಾರದು. ಮಹಾದೇವನು ಸಕಲ ದೇವತೆಗಳಿಗೂ ಆಶ್ರಯನಾಗಿರುವುದರಿಂದ ಆ ದೇವದೇವನು ತನ್ನನ್ನು ಪೂಜಿಸಿದವರಿಗೆ ಸಂಪೂರ್ಣವಾದ ಇಷ್ಟಾರ್ಥಗಳನ್ನು ಕೊಟ್ಟೇ ಕೊಡುವನು. ॥೪೫೧-೪೫೨॥

ಇಷ್ಟಾರ್ಥಗಳಿಗೆ ಒಡೆಯನಾದ ಮಹಾದೇವನು ತನ್ನನ್ನು ಪೂಜೆಮಾಡಿದವರಿಗೆ ಅಭೀಷ್ಟವನ್ನು ಕೊಡದೇ ಹೋದರೆ, ಬೇರೆ ಯಾರು ತಾನೇ ಕೊಡಬಲ್ಲರು! ಆದ್ದರಿಂದ ಎಲ್ಲಾ ರೀತಿಯಿಂದಲೂ, ಇತರ ಕಾರ್ಯಗಳೆಲ್ಲವನ್ನೂ ಬಿಟ್ಟು ನಿಯಮದಿಂದ ಸಕಲ ಅಭೀಷ್ಟಗಳನ್ನೂ ಕೊಡಬಲ್ಲ ಆ ಮಹಾದೇವನನ್ನು ಪೂಜೆಮಾಡಲೇಬೇಕು. ॥೪೫೩-೪೫೪॥

ಅಯ್ಯ ಬ್ರಹ್ಮನೇ, ವಿಶೇಷ ಪ್ರಯತ್ನಗಳಿಲ್ಲದೇ ಕೇವಲ ಪತ್ರೆಗಳಿಂದ ಪೂಜೆಮಾಡಲ್ಪಟ್ಟ ಶಿವನು ಉತ್ಕೃಷ್ಟವಾದ ಅಭಿವೃದ್ಧಿಯನ್ನುಂಟುಮಾಡುವನಾದ್ದರಿಂದ ಆ ದೇವದೇವನನ್ನು ಯಾರುತಾನೇ ಪೂಜೆಮಾಡಲಾರರು ? ॥೪೫೫॥

ಮಹೇಶಪೂಜಯಾ ಬ್ರಹ್ಮನ್ಪಾಪಂ ತಾಪಂ ಚ ನಶ್ಯತಿ ।
ತತಃ ಶಿವಾರ್ಚನಸಮಂ ಪುಣ್ಯಂ ಕ್ವಾಪಿ ನ ವಿದ್ಯತೇ ॥೪೫೬॥

ಯದಿ ನಾರಾಧ್ಯತೇ ಶಂಭುರಸ್ಮಾಭಿರತಿಯತ್ನತಃ ।
ತದಾಧಿಕಾರಾದಸ್ಮಾಕಂ ಶಿವೋ ದೂರೀಕರಿಷ್ಯತಿ ॥೪೫೭॥

ದೇವತಾಸಾರ್ವಭೌಮಸ್ತು ಮಹಾದೇವಃ ಶ್ರುತಿಶ್ರುತಃ ।
ತತೋ ವಯಂ ತು ಸರ್ವೇಽಪಿ ಮಹಾದೇವಸ್ಯ ಸೇವಕಾಃ ॥೪೫೮॥

ಸೇವಕೈರ್ಯದಿ ಸೇವ್ಯಸ್ಯ ಪೂಜಾ ನ ಕ್ರಿಯತೇ ತದಾ ।
ಸೇವ್ಯಾತ್ಸುಖಂ ಕಥಂ ಪ್ರಾಪ್ಯಮಸ್ಮಾಭಿಃ ಶಿವಸೇವಕೈಃ ॥೪೫೯॥

ಶಿವಪೂಜಾಪರಂ ಬ್ರಹ್ಮನ್ನಾಪದೋ ನ ಸ್ಪೃಶಂತಿ ಹಿ ।
ತತಃ ಸರ್ವಂ ಪರಿತ್ಯಜ್ಯ ಪೂಜಯಾಮಃ ಸದಾಶಿವಂ ॥೪೬೦॥

---

ಬ್ರಹ್ಮನೇ, ಆ ಮಹೇಶ್ವರನ ಪೂಜೆಯಿಂದ ಸಕಲ ಪಾಪಗಳೂ ಮತ್ತು ದುಃಖಗಳೂ ನಾಶವಾಗುವುದರಿಂದ ಆ ಶಿವಪೂಜೆಗೆ ಸಮಾನವಾದ ಪುಣ್ಯವು ಮತ್ತೆಲ್ಲಿಯೂ ಇಲ್ಲ. ॥೪೫೬॥

ನಾವೆಲ್ಲರೂ ಆ ಶಂಭುವನ್ನು ವಿಶೇಷ ನಿಯಮದಿಂದ ಪೂಜೆಮಾಡದೇ ಹೋದರೆ, ಆಗ ಆ ಪರಶಿವನು ನಮ್ಮಗಳನ್ನು ಅಧಿಕಾರದಿಂದ ನಿವೃತ್ತಿಮಾಡುತ್ತಾನೆ. ॥೪೫೭॥

ಮಹಾದೇವನಾದರೋ ಸಕಲ ವೇದಗಳಲ್ಲಿಯೂ ದೇವತೆಗಳಿಗೆಲ್ಲಾ ಸಾರ್ವಭೌಮನೆಂದು ಪ್ರಸಿದ್ಧನಾಗಿರುವನು. ಆದ್ದರಿಂದ ನಾವೆಲ್ಲರೂ ಆತನ ಸೇವಕರು. ಯಜಮಾನನನ್ನು ಸೇವಕರು ಪೂಜೆಮಾಡದೇ ಹೋದರೆ ಆಗ ಶಿವನ ಸೇವಕರಾದ ನಮಗೆ ಆ ದೇವೋತ್ತಮನ ಸೇವೆಯಿಂದ ಸುಖವುಂಟಾಗುವ ಬಗೆ ಹೇಗೆ? ॥೪೫೮-೪೫೯॥

ಅಯ್ಯ ಬ್ರಹ್ಮನೇ, ಶಿವಪೂಜಾತತ್ಪರನಾಗಿರುವನನ್ನು ಯಾವ ವಿಧವಾದ ವಿಪತ್ತುಗಳೂ ಮುಟ್ಟಲಾರವಾದ್ದರಿಂದ ಎಲ್ಲವನ್ನೂ ಬಿಟ್ಟು ನಾವು ಆ ಸದಾಶಿವನನ್ನು ಪೂಜೆಮಾಡೋಣ. ॥೪೬೦॥

ಶಂಕರಂ ಶರಣಂ ಯಾಮೋ ಭಕ್ತಾಭೀಷ್ಟಪ್ರದಾಯಕಂ ।
ಶರಣಂ ಶಂಕರಾದನ್ಯೋ ನಾಸ್ಮಾಕಂ ಸತ್ಯಮುಚ್ಯತೇ ॥೪೬೧॥

ಯಃ ಶಂಕರಂ ವಿಹಾಯಾನ್ಯಂ ಶರಣಂ ಯಾತಿ ಮೋಹತಃ ।
ಸ ದುರ್ಭಗ ಇತಿ ಜ್ಞೇಯೋ ಮೋಹಮಾತ್ರವಿವರ್ಜಿತಃ ॥೪೬೨॥

ಕಿಮತ್ರ ಬಹುನೋಕ್ತೇನ ಸಾರಮೇತದ್ವಚಃ ಶೃಣು ।
ಭಜಸ್ವ ಶಿವಮೇವೈಕಮಸ್ಮಾಕಂ ಶರಣಂ ಶಿವಃ ॥೪೬೩॥

ಭವದಾಗಮನಸ್ಯಾಽಪಿ ಜ್ಞಾತಮೇವ ಪ್ರಯೋಜನಂ ।
ತ್ವಯಾ ಕಿಮರ್ಥಮಿಂದ್ರಸ್ಯ ಮೋಹಃ ಸ ನ ನಿವಾರಿತಃ ॥೪೬೪॥

ಕಶ್ಚಿನ್ಮಾಮೀಶ್ವರಂ ಮತ್ವಾ ಭ್ರಮೇಣ ಋಷಿಬಾಲಕಃ ।
ತಪಃ ಕರೋತಿ ಮೂಢಾತ್ಮಾ ಶಾಲಗ್ರಾಮಶಿಲಾಸ್ಥಲೇ ॥೪೬೫॥

---

ಭಕ್ತರಿಗೆ ಸಕಲ ಅಭೀಷ್ಟಗಳನ್ನೂ ಕೊಡುವ ಆ ಶಂಕರನನ್ನೇ ನಾವು ಮರೆಹೋಗೋಣ. ನಮಗೆ ಆ ಶಂಕರನಿಗಿಂತಲೂ ಬೇರೆ ರಕ್ಷಕರಾರೂ ಸತ್ಯವಾಗಿಯೂ ಇಲ್ಲ. ॥೪೬೧॥

ಆ ಶಂಕರನನ್ನು ಬಿಟ್ಟು ಅಜ್ಞಾನದಿಂದ ಬೇರೆದೇವರನ್ನು ಶರಣುಹೊಂದುವವನು ಕೇವಲ ದೌರ್ಭಾಗ್ಯಶಾಲಿಯೆನಿಸುವನು. ॥೪೬೨॥

ಹೆಚ್ಚು ಹೇಳುವುದರಿಂದೇನು ಪ್ರಯೋಜನ! ಒಟ್ಟಿನಲ್ಲಿ ಸಾರಭೂತವಾದ ಮಾತುಗಳನ್ನು ಹೇಳುವೆನು ಕೇಳು. ನೀನು ಶಿವನೊಬ್ಬನನ್ನೇ ಮರೆಹೊಗುವನಾಗು. ನಮಗೆಲ್ಲಾ ಆತನೇ ರಕ್ಷಕನು. ಅಯ್ಯ ಬ್ರಹ್ಮನೇ, ನೀವುಗಳು ಇಲ್ಲಿಗೆ ಬಂದ ಕಾರಣವೂ ನನಗೆ ತಿಳಿದೇ ಇದೆ. ಹೀಗಿದ್ದರೂ ನೀನು ಆ ಇಂದ್ರನಿಗೆ ಉಂಟಾಗಿರುವ ಅಜ್ಞಾನವನ್ನು ಏಕೆ ಹೋಗಲಾಡಿಸಲಿಲ್ಲ? ॥೪೬೩-೪೬೪॥

ಒಬ್ಬ ಋಷಿಕುಮಾರನು ನನ್ನನ್ನೇ ಜಗದೀಶ್ವರನೆಂದು ಭ್ರಾಂತಿಯಿಂದ ತಿಳಿದು ಮೂಢನೆನಿಸಿ ಸಾಲಗ್ರಾಮಶಿಲೆಗಳುಳ್ಳ ಜಾಗದಲ್ಲಿ ಕುಳಿತು ತಪಸ್ಸುಮಾಡುತ್ತಿರುವನು. ॥೪೬೫॥

ತತ್ರ ಯಾಸ್ಯಾಮ್ಯಹಂ ಬ್ರಹ್ಮನ್ ತ್ವಮುಪ್ಯಾಯಾಹಿ ಸಾನುಗಃ ।
ನಿವರ್ತನೀಯಸ್ತಪಸೋ ಮಾಮುದ್ದಿಶ್ಯ ಜಡಾಕರಃ ॥೪೬೬॥

॥ ಶ್ರೀಶಿವ ಉವಾಚ ॥

ಇತ್ಯುಕ್ತ್ವೇಂದ್ರಾದಿಭಿಃ ಸಾಕಂ ಶಾಲಿಗ್ರಾಮಶಿಲಾಸ್ಥಲಂ ।
ಪ್ರಾಪ ವಿಷ್ಣುಃ ಸಲಕ್ಷ್ಮೀಕೋ ಗರುಡಾದ್ಯೈಶ್ಚ ಸಂಯುತಃ ॥೪೬೭॥

ದದರ್ಶ ಸ ಮಹಾವಿಷ್ಣುಂ ಬ್ರಹ್ಮೇಂದ್ರಾದಿಸಮನ್ವಿತಂ ।
ತತಃ ಪ್ರಣಮ್ಯ ಬಹುಧಾ ಸ್ತುತ್ವಾ ಸ್ತೋತ್ರೈರುಪಸ್ಥಿತಃ ॥೪೬೮॥

ಸ ಯಯಾಚೇ ವರಂ ದೇವ ಮೋಕ್ಷಂ ದೇಹೀತಿ ಸಾದರಂ ।
ತತೋ ವಿಷ್ಣುರುವಾಚೇದಂ ವಚನಂ ಸ್ವಾನುಸಾರತಃ ॥೪೬೯॥

॥ ವಿಷ್ಣುರುವಾಚ ॥

ಅತ್ರ ಘೋರಂ ತಪಸ್ತಪ್ತಂ ಮಾಮುದ್ದಿಶ್ಯ ಜಟಾಕರ ।
ಮೋಕ್ಷದಾನೇ ನ ಶಕ್ತೋಽಹಂ ಸತ್ಯಂ ಸತ್ಯಂ ನ ಸಂಶಯಃ ॥೪೭೦॥

---

ಅಯ್ಯ ಬ್ರಹ್ಮನೇ, ಆ ಸ್ಥಳಕ್ಕೆ ನಾನು ಈಗ ಹೋಗುವೆನು. ನೀನೂ ನನ್ನ ಜತೆಯಲ್ಲಿ ಬಾ. ನನ್ನನ್ನುದ್ದೇಶಿಸಿ ತಪಸ್ಸುಮಾಡುತ್ತಿರುವ ಆ ಮೂಢಾತ್ಮನನ್ನು ಹೇಗಾದರೂ ತಡೆಯಬೇಕು. ॥೪೬೬॥

ಹೀಗೆ ಹೇಳಿ ಆ ವಿಷ್ಣುವು ಇಂದ್ರಾದಿದೇವತೆಗಳೊಡನೆಯೂ, ಲಕ್ಷ್ಮೀದೇವಿಯೊಡನೆಯೂ, ಗರುಡನೇ ಮೊದಲಾದವರೊಡನೆಯೂ ಆ ಋಷಿಕುಮಾರನು ತಪಸ್ಸುಮಾಡುತ್ತಿದ್ದ ಸಾಲಿಗ್ರಾಮಶಿಲಾಸ್ಥಳಕ್ಕೆ ಬಂದನು. ॥೪೬೭॥

ಆಗ ಆ ಬಾಲಕನು ಬ್ರಹ್ಮ, ಇಂದ್ರ ಇವರೇ ಮೊದಲಾದವರೊಡಗೂಡಿ ಮಹಾವಿಷ್ಣುವು ಪ್ರತ್ಯಕ್ಷನಾಗಿರುವುದನ್ನು ನೋಡಿ ವಿಷ್ಣುವಿಗೆ ನಮಸ್ಕಾರಮಾಡಿ ನಾನಾವಿಧವಾದ ಸ್ತೋತ್ರಗಳಿಂದ ಆತನನ್ನು ಸ್ತೋತ್ರಮಾಡಿದನು. ಅನಂತರ ಆ ಮುನಿಕುಮಾರನು ವಿಷ್ಣುವನ್ನು ಕುರಿತು—ದೇವ, ನನಗೆ ಮೋಕ್ಷವನ್ನು ಕೊಟ್ಟು ಸಲಹೆಂದು ಆದರದಿಂದ ಪ್ರಾರ್ಥಿಸಲು, ಆಗ ಮಹಾವಿಷ್ಣುವು ತನ್ನ ಯೋಗ್ಯತಾನುಸಾರವಾಗಿ ಹೀಗೆ ಉತ್ತರಕೊಟ್ಟನು. ॥೪೬೮-೪೬೯॥

"ಅಯ್ಯ ಋಷಿಕುಮಾರನೇ, ನೀನು ಇಲ್ಲಿ ಜಡೆಗಳನ್ನು ಧರಿಸಿ ಘೋರವಾಗಿ

ಮೋಕ್ಷಪ್ರದಾತಾ ಭಗವಾನ್ ದೇವದೇವೋತ್ತಮಃ ಶಿವಃ ।
ನ ಶಿವಾನ್ಯೋ ಮೋಕ್ಷದಾತಾ ಸತ್ಯಂ ಸತ್ಯಂ ನ ಸಂಶಯಃ ॥೪೭೧॥

ಸ್ವರ್ಗಾಪವರ್ಗದಾತಾರಂ ಸೃಷ್ಟಿಸ್ಥಿತ್ಯಂತಕಾರಣಂ ।
ಮೋಕ್ಷಾರ್ಥಮತಿಯತ್ನೇನ ಶರಣಂ ವ್ರಜ ಶಂಕರಂ ॥೪೭೨॥

ಈಶ್ವರತ್ವಭ್ರಮೇಣೈವ ಮಹಾದೇವೇನ ವಂಚಿತಾಃ ।
ಮಾಮರ್ಚಯಂತಿ ಬಹವಃ ಶಿವಮಾಯಾವಿಮೋಹಿತಾಃ ॥೪೭೩॥

ಶುಕ್ತಿಸ್ತು ರಜತತ್ವೇನ ಜ್ಞಾತಾ ಕಿಂ ಕಾರಣಾಯತೇ ।
ತಥಾಽಹಮೀಶ್ವರತ್ವೇನ ಜ್ಞಾತಶ್ಚೇದೀಶ್ವರೋಽಸ್ಮಿ ಕಿಂ ॥೪೭೪॥

---

ನನ್ನನ್ನುದ್ದೇಶಿಸಿ ತಪಸ್ಸುಮಾಡಿರುವೆ. ಆದರೆ ನಾನು ನಿನಗೆ ಮೋಕ್ಷವನ್ನು ಕೊಡಲು ಸಮರ್ಥನಾಗಿಲ್ಲವೆಂಬುದು ಸತ್ಯ. ಇದರಲ್ಲಿ ಸಂಶಯವಿಲ್ಲ. ॥೪೭೧॥

ದೇವದೇವೋತ್ತಮನೂ ಷಡ್ಗುಣೈಶ್ವರ್ಯಸಂಪನ್ನನೂ ಆದ ಆ ಶಿವನೇ ಮೋಕ್ಷವನ್ನು ಕೊಡುವ ಸಾಮರ್ಥ್ಯವುಳ್ಳವನು. ಆ ಶಿವನನ್ನು ಬಿಟ್ಟು ಬೇರೆ ಯಾರೂ ಮೋಕ್ಷವನ್ನು ಸತ್ಯವಾಗಿಯೂ ಕೊಡಲಾರರೆಂಬುದರಲ್ಲಿ ಸಂದೇಹವೇ ಇಲ್ಲ. ॥೪೭೧॥

ಸ್ವರ್ಗ ಮತ್ತು ಮೋಕ್ಷಗಳನ್ನು ಕೊಡುವವನೂ, ಸೃಷ್ಟಿ, ಸ್ಥಿತಿ ಮತ್ತು ಪ್ರಲಯಗಳನ್ನು ಪ್ರಪಂಚಕ್ಕೆ ಉಂಟುಮಾಡುವವನೂ ಆಗಿರುವ ಆ ಶಂಕರನನ್ನು ತುಂಬಾ ನಿಯಮದಿಂದ ಮರೆಹೊಗುವನಾಗು. ॥೪೭೨॥

ಈಶ್ವರನೆಂಬ ಭ್ರಾಂತಿಯಿಂದಲೇ ಆ ಮಹಾದೇವನಿಂದ ವಂಚಿಸಲ್ಪಟ್ಟು ಅನೇಕ ಮಂದಿ ಆ ಪರಶಿವನ ಮಾಯೆಗೆ ಸಿಕ್ಕಿ ನನ್ನನ್ನು ಪೂಜೆಮಾಡುತ್ತಿರುವರು. ॥೪೭೩॥

ಕಪ್ಪೆಯ ಚಿಪ್ಪನ್ನು ಬೆಳ್ಳಿಯೆಂದು ತಿಳಿದಮಾತ್ರದಿಂದಲೇ ಅದು ಬೆಳ್ಳಿಯಾಗಲು ಕಾರಣವಾದೀತೆ? ಹಾಗೆಯೇ ನನ್ನನ್ನು ಅನೇಕರು ಈಶ್ವರನೆಂದು ತಿಳಿದ ಮಾತ್ರಕ್ಕೇ ನಾನು ಈಶ್ವರನಾಗಬಲ್ಲೆನೇ! ॥೪೭೪॥

ಈಶ್ವರಃ ಸರ್ವವಿದ್ಯಾನಾಮಿತ್ಯಾದ್ಯೈರೀಶ್ವರಃ ಶಿವಃ ।
ವಿಜ್ಞಾತೋ ನ ತದನ್ಯಸ್ತು ವಸ್ತುತಸ್ತ್ವೀಶ್ವರೋ ಧ್ರುವಂ ॥೪೭೫॥

॥ ಮಹಾದೇವ ಉವಾಚ ॥

ಇತಿ ವಿಷ್ಣುವಚಃ ಶ್ರುತ್ವಾ ಬಭಾಷೇ ವಚನಂ ದ್ವಿಜಃ ।
ಮಮ ವೈಕುಂಠವಾಸೋ ವಾ ದೇವ ಇತ್ಯಭಿಗಮ್ಯತಾಂ ॥೪೭೬॥

ತತೋ ವಿಷ್ಣುರುವಾಚೇದಂ ವಚನಂ ಸುರಸನ್ನಿಧೌ ।
ವಿಪ್ರ ವೈಕುಂಠವಾಸೋಽಪಿ ಮಯಾ ದಾತುಂ ನ ಶಕ್ಯತೇ ॥೪೭೭॥

ಅಧಿಕಾರೋ ಮಯಾ ಪ್ರಾಪ್ತೋ ವೈಕುಂಠಸ್ಯ ಶಿವಾರ್ಚನಾತ್ ।
ಯಥೇಚ್ಛಮಧಿಕಾರೋಽಪಿ ಮಮ ನಾಸ್ತ್ಯಧುನಾ ಧ್ರುವಂ ॥೪೭೮॥

ತುಭ್ಯಂ ವೈಕುಂಠವಾಸೋಽಪಿ ಮಯಾ ದಾತುಂ ನ ಶಕ್ಯತೇ ।
ಶಿವಪೂಜಾಂ ವಿನಾ ತತ್ರ ವಾಸಸ್ತ್ವತ್ಯಂತದುರ್ಲಭಃ ॥೪೭೯॥

---

ಸಕಲವಿದ್ಯೆಗಳಿಗೂ ಸ್ವಾಮಿಯೆಂದು ಆ ಪರಶಿವನನ್ನು 'ಈಶಾನಃ ಸರ್ವ ವಿದ್ಯಾನಾಂ ಈಶ್ವರಃ ಸರ್ವಭೂತಾನಾಂ' ಮೊದಲಾದ ಶ್ರುತಿಗಳು ಸಾರುತ್ತಿರುವುದ ರಿಂದ ಆ ಪರಮೇಶ್ವರನನ್ನು ಬಿಟ್ಟು ಉಳಿದವರು ವಸ್ತುತಃ ಈಶ್ವರರೆನಿಸಲಾರರೆಂದು ತಿಳಿಯುವುದು." ॥೪೭೫॥

ಈರೀತಿಯಾಗಿ ವಿಷ್ಣುವು ಹೇಳಿದುದನ್ನು ಕೇಳಿ, ಆ ಬ್ರಾಹ್ಮಣಕುಮಾರನು, ದೇವ, ನನಗೆ ವೈಕುಂಠಲೋಕದಲ್ಲಿಯಾದರೂ ವಾಸಮಾಡುವಂತೆ ವರಕೊಡ ಬೇಕೆಂದು ವಿನಯದಿಂದ ನಮಸ್ಕಾರಮಾಡಿ ಕೇಳಿಕೊಂಡನು. ॥೪೭೬॥

ಆದನ್ನು ಕೇಳಿ ಮಹಾವಿಷ್ಣುವು, ತನ್ನ ಜೊತೆಯಲ್ಲಿ ನೆರೆದಿದ್ದ ದೇವತೆಗಳ ಸಮಕ್ಷಮದಲ್ಲಿಯೇ, ಎಲೈ ಬ್ರಾಹ್ಮಣನೇ! ನಿನಗೆ ವೈಕುಂಠದಲ್ಲಿ ವಾಸಮಾಡುವಂತೆ ವರಕೊಡುವ ಸಾಮರ್ಥ್ಯವೂ ನನಗಿಲ್ಲ. ಆ ಪರಶಿವನ ಪೂಜೆಯಿಂದ ನನಗೆ ಆ ವೈಕುಂಠಲೋಕದ ಅಧಿಕಾರ ಪ್ರಾಪ್ತವಾಗಿದೆ. ಆದರೆ ನನ್ನ ಮನಸ್ಸಿಗೆ ತೋರಿದಂತೆ ಅಲ್ಲಿ ಅಧಿಕಾರಮಾಡುವ ಶಕ್ತಿಯು ಈಗ ನನಗೆ ನಿಶ್ಚಯವಾಗಿಯೂ ಇಲ್ಲ. ॥೪೭೭-೪೭೮॥

ಆದ್ದರಿಂದ ನಿನಗೆ ಆ ವೈಕುಂಠವಾಸವನ್ನು ಅನುಗ್ರಹಮಾಡಲು ಸಾಧ್ಯವಿಲ್ಲ.

ಕ್ಷಣಾರ್ಧಮಪಿ ಯದ್ವಾಸಾನ್ಮಹತ್ಸುಖಮವಾಪ್ಯತೇ ।
ತತ್ಸುಖಂ ದುರ್ಲಭಂ ವಿಪ್ರ ವಿನಾ ಶಂಕರಪೂಜಯಾ ॥೪೮೦॥

ಸ್ವತಂತ್ರಃ ಪಾರ್ವತೀನಾಥಃ ಸರ್ವದೇವಶಿಖಾಮಣಿಃ ।
ಸ ಸಮಾರಾಧಿತೋಽಭೀಷ್ಟಂ ಪ್ರಯಚ್ಛತಿ ನ ಸಂಶಯಃ ॥೪೮೧॥

ಅಸ್ವತಂತ್ರಾ ವಯಂ ಸರ್ವೇ ಬ್ರಹ್ಮಾದ್ಯಾ ನಾತ್ರ ಸಂಶಯಃ ।
ಅತೋಽಸ್ಮಾಕಮಭೀಷ್ಟಾರ್ಥದಾನೇ ಸಾಮರ್ಥ್ಯಮೇವ ನ ॥೪೮೨॥

ಮಾಮುದ್ದಿಶ್ಯ ತಪಶ್ಚರ್ಯಾ ಯಾ ಕೃತಾಸ್ತಿ ತ್ವಯಾ ದ್ವಿಜ ।
ಮತ್ಕೃತೋಪದ್ರವಃ ಕೋಽಪಿ ನ ಭವಿಷ್ಯತಿ ತೇ ಧ್ರುವಂ ॥೪೮೩॥

ತುಭ್ಯಂ ಮಯಾಽಪಿ ಸಾಹಾಯ್ಯಂ ಕಾರ್ಯಂ ಶಕ್ತ್ಯನುರೋಧತಃ ।
ಯಜಸ್ವಾಭೀಷ್ಟಸಿದ್ಧ್ಯರ್ಥಂ ದೇವದೇವೋತ್ತಮಂ ಶಿವಂ ॥೪೮೪॥

---

ಆ ವೈಕುಂಠಲೋಕದಲ್ಲಿಯಾದರೋ ಶಿವನನ್ನು ಪೂಜೆಮಾಡದೇ ವಾಸಮಾಡುವುದು ಅಸಾಧ್ಯವು. ॥೪೭೯॥

ವೈಕುಂಠಲೋಕದಲ್ಲಿ ಅರ್ಧಕ್ಷಣಕಾಲವಾಸಮಾಡುವುದರಿಂದಲೇ ಅಪಾರವಾದ ಸುಖವುಂಟಾಗುವುದು ನಿಜ. ಅಯ್ಯ ಬ್ರಾಹ್ಮಣನೇ! ಆ ರೀತಿಯಾದ ಸುಖವು ಶಂಕರನನ್ನು ಪೂಜೆಮಾಡದೆ ಎಂದಿಗೂ ದೊರೆಯುವುದಿಲ್ಲ. ॥೪೮೦॥

ಸಕಲ ದೇವತೆಗಳಲ್ಲಿಯೂ ಉತ್ತಮನೆನಿಸಿದ ಶ್ರೀಪಾರ್ವತೀರಮಣನು ಸ್ವತಂತ್ರನಾದ್ದರಿಂದ ಆ ದೇವನನ್ನು ಪೂಜೆಮಾಡಿದರೆ ಸಕಲ ಇಷ್ಟಾರ್ಥಗಳನ್ನೂ ಸಂದೇಹವೇ ಇಲ್ಲದೇ ಕೊಡಬಲ್ಲನು. ಬ್ರಹ್ಮನೇ ಮೊದಲಾದ ನಾವೆಲ್ಲರೂ ಸ್ವತಂತ್ರರಲ್ಲ. ಆತನ ಅಧೀನರಾಗಿರುವೆವು. ಆದ್ದರಿಂದ ನಮಗೆ ಇಷ್ಟಾರ್ಥಗಳನ್ನು ಕೊಡುವ ಸಾಮರ್ಥ್ಯವೇ ಇಲ್ಲವಾಗಿದೆ. ॥೪೮೧-೪೮೨॥ .

ದ್ವಿಜವರ್ಯನೇ! ನನ್ನನ್ನುದ್ದೇಶಿಸಿ ನೀನು ತಪಸ್ಸುಮಾಡಿರುವುದರಿಂದ ನನ್ನಿಂದುಂಟಾಗಬಹುದಾದ ಯಾವವಿಧವಾದ ತೊಂದರೆಗಳೂ ನಿನಗೆ ನಿಶ್ಚಯವಾಗಿಯೂ ಉಂಟಾಗಲಾರವು. ॥೪೮೩॥

ಮತ್ತು ನನ್ನ ಯೋಗ್ಯತಾನುಸಾರವಾದ ಸಹಾಯವನ್ನು ನಿನಗೆ ನಾನು ತಪ್ಪದೇ ಮಾಡುವೆನು. ಆದರೆ ನೀನು ಮಾತ್ರ ನಿನ್ನ ಇಷ್ಟಾರ್ಥಪ್ರಾಪ್ತಿಗೋಸ್ಕರ ದೇವದೇವೋತ್ತಮನಾದ ಆ ಪರಶಿವನನ್ನು ತಪ್ಪದೇ ಪೂಜೆಮಾಡು ॥೪೮೪॥

ಶಿವಂ ಯಜಸ್ವ ಯತ್ನೇನ ತ್ಯಕ್ತ್ವಾಲಸ್ಯಮಹರ್ನಿಶಂ ।
ಪ್ರಯಚ್ಛತಿ ಮಹಾದೇವಃ ಪೂಜಿತೋಽಭೀಷ್ಟಮನ್ವಹಂ ॥೩೮೫॥

ಸಂತುಷ್ಟಶ್ಚೇನ್ಮಹಾದೇವಸ್ತಸ್ಯಾದೇಯಂ ನ ದೃಶ್ಯತೇ ।
ದದಾತಿ ಮೋಕ್ಷಪರ್ಯಂತಂ ಪೂಜಿತಃ ಪಾರ್ವತೀಪತಿಃ ॥೩೮೬॥

ಅನಭ್ಯರ್ಚ್ಯ ಮಹಾದೇವಂ ಯಃ ಸುಖಂ ಪ್ರಾಪ್ತುಮಿಚ್ಛತಿ ।
ಸ ಮೂರ್ಖ ಇತಿ ವಿಜ್ಞೇಯಸ್ತತ್ತ್ವಜ್ಞೈಃ ಸತ್ಯಮುಚ್ಯತೇ ॥೩೮೭॥

ಮಯಾ ವಿಚಾರ್ಯ ವೇದೇಭ್ಯಃ ಸರ್ವೇಭ್ಯಸ್ತತ್ತ್ವಮಾದರಾತ್ ।
ಶಿವಃ ಸಂಪೂಜ್ಯತೇ ನಿತ್ಯಂ ಸತ್ಯಂ ಸತ್ಯಂ ನ ಸಂಶಯಃ ॥೩೮೮॥

ಪಶ್ಯ ಮಾಂ ಭಸ್ಮಲಿಪ್ತಾಂಗಂ ರುದ್ರಾಕ್ಷಾಭರಣಾನ್ವಿತಂ ।
ಲಿಂಗಪೂಜಾಪರಂ ನಿತ್ಯಂ ಶಿವಮಂತ್ರಜಪೋತ್ಸುಕಂ ॥೩೮೯॥

---

ಸೋಮಾರಿತನವನ್ನು ಬಿಟ್ಟು ಹಗಲೂ ರಾತ್ರಿ ಎಡಬಿಡದೇ ನಿಯಮದಿಂದ ಆ ಶಿವನನ್ನು ಪೂಜೆಮಾಡು. ಹಾಗೆ ಪೂಜಿಸಲ್ಪಟ್ಟ ಮಹಾದೇವನು ಪ್ರತಿದಿವಸದಲ್ಲಿಯೂ ಸಕಲ ಅಭೀಷ್ಟಗಳನ್ನೂ ಸಲ್ಲಿಸುವನು. ॥೩೮೫॥

ಆ ಮಹಾದೇವನು ಸಂತುಷ್ಟನಾದರೆ ಆತನಿಂದ ಕೊಡಲಸಾಧ್ಯವಾದ ವರಗಳೇ ಇರುವುದಿಲ್ಲ. ಆ ಪಾರ್ವತೀರಮಣನು ತನ್ನನ್ನು ಪೂಜೆಮಾಡಿದವರಿಗೆ ಮೋಕ್ಷದವರೆಗಿರುವ ಸಕಲ ವರಗಳನ್ನು ಬೇಕಾದರೂ ಕೊಡಬಲ್ಲನು. ॥೩೮೬॥

ಆ ಮಹಾದೇವನನ್ನು ಪೂಜೆಮಾಡದೇ ಸುಖವನ್ನು ಬಯಸುವನನ್ನು ಮೂರ್ಖನೆಂದು ತತ್ವಜ್ಞರು ಹೇಳುತ್ತಾರೆ. ಇದು ಸತ್ಯವಾದ ಮಾತು, ಸುಳ್ಳಲ್ಲ. ॥೩೮೭॥

ಸಕಲ ವೇದಗಳಿಂದಲೂ ತತ್ವಗಳನ್ನು ಆರಿಸಿಕೊಂಡು ಅದರಂತೆ ಪರಶಿವನನ್ನು ನಿತ್ಯವೂ ಆದರದಿಂದ ಪೂಜೆಮಾಡುತ್ತಿರುವೆನು. ಇದೇ ಸತ್ಯವಾದ ಮಾರ್ಗವು. ಇದರಲ್ಲಿ ಸಂದೇಹವೇ ಇಲ್ಲ. ॥೩೮೮॥

ಭಸ್ಮವನ್ನು ಅಂಗಾಂಗಗಳಿಗೆಲ್ಲಾ ಬಳಿದುಕೊಂಡು ರುದ್ರಾಕ್ಷಾಭರಣದಿಂದ ಅಲಂಕೃತನಾಗಿ ಪರಶಿವನ ಪೂಜಾಕಾರ್ಯದಲ್ಲಿ ನಿರತನೂ, ಶಿವಮಂತ್ರಜಪದಲ್ಲಿ ಉತ್ಸಾಹಶಾಲಿಯೂ ಆಗಿರುವ ನನ್ನನ್ನು ನೋಡು. ॥೩೮೯॥

ಪಶ್ಯ ಬ್ರಹ್ಮಾದಿಕಾನ್ ದೇವಾನ್ ಭವನಾಮಜಪೋತ್ಸುಕಾನ್ ।
ಭಸ್ಮೋದ್ಧೂಲಿತಸರ್ವಾಂಗಾನ್ ಲಿಂಗಪೂಜಾಪರಾಯಣಾನ್॥೪೯೦॥

ದೇವರ್ಷಿಯಕ್ಷಗಂಧರ್ವಕಿಂನರೈರುರಗೈರಪಿ ।
ಪೂಜನೀಯಃ ಪ್ರಯತ್ನೇನ ಶಿವ ಇವೇಷ್ಟಸಿದ್ಧಯೇ ॥೪೯೧॥

ಶಿವಪೂಜೈವ ಸರ್ವೇಷಾಮಭೀಷ್ಟಫಲದಾಯಿನೀ ।
ತತಸ್ತ್ವಮಪಿ ಯತ್ನೇನ ಕುರು ಶಂಕರಪೂಜನಂ ॥೪೯೨॥

ಶಿವಪೂಜನಮಾತ್ರೇಣ ತ್ವಯಾ ಮೋಕ್ಷಶ್ಚ ಲಭ್ಯತೇ ।
ಕಿಮರ್ಥಮನ್ಯಪೂಜಾರ್ಥಂ ಪ್ರಯತ್ನೋಽಪಿ ವದಸ್ವ ಮೇ ॥೪೯೩॥

ತ್ರಿಪುಂಡ್ರಧಾರಣಂ ಕೃತ್ವಾ ಭಸ್ಮೋದ್ಧೂಲನಪೂರ್ವಕಂ ।
ರುದ್ರಾಕ್ಷಧಾರಣಂ ಕೃತ್ವಾ ಯಜ ದೇವೋತ್ತಮಂ ಶಿವಂ ॥೪೯೪॥

---

ಸಕಲ ಅವಯವಗಳಿಗೂ ಭಸ್ಮವನ್ನು ಬಳಿದುಕೊಂಡು ಪರಶಿವನ ಪೂಜೆಯಲ್ಲಿಯೂ ಶಿವನಾಮಜಪದಲ್ಲಿಯೂ ಉತ್ಸಾಹದಿಂದ ನಿರತರಾಗಿರುವ ಈ ಬ್ರಹ್ಮಾದಿ ದೇವತೆಗಳನ್ನೂ ನೋಡುವವನಾಗು. ॥೪೯೦॥

ದೇವತೆಗಳು, ಋಷಿಗಳು, ಯಕ್ಷರು, ಗಂಧರ್ವರು, ಕಿಂನರರು, ಸರ್ಪಗಳು ಇವರೇ ಮೊದಲಾದ ಎಲ್ಲರಿಂದಲೂ ಆ ಪರಶಿವನು ತಮ್ಮ ಇಷ್ಟಾರ್ಥಪ್ರಾಪ್ತಿಗೋಸ್ಕರ ಪೂಜಿತನಾಗುತ್ತಿರುವನು. ॥೪೯೧॥

ಎಲ್ಲರಿಗೂ ಆ ಶಿವಪೂಜೆಯೊಂದೇ ಸಕಲ ಇಷ್ಟಾರ್ಥಗಳನ್ನೂ ಕೊಡಬಲ್ಲುದಾದುದರಿಂದ ನೀನೂ ಪ್ರಯತ್ನಪೂರ್ವಕವಾಗಿ ಆ ಶಂಕರನನ್ನು ಪೂಜೆಮಾಡುವನಾಗು. ॥೪೯೨॥

ಶಿವನನ್ನು ಪೂಜೆಮಾಡಿದ ಮಾತ್ರದಿಂದಲೇ ನಿನಗೆ ಮೋಕ್ಷವು ದೊರೆಯುವುದಾದುದರಿಂದ ಏತಕ್ಕೋಸ್ಕರ ಬೇರೆ ದೇವತೆಗಳನ್ನು ಪೂಜೆಮಾಡಲು ಪ್ರಯತ್ನಪಡುವೆ? ಅದನ್ನು ನನಗೆ ತಿಳಿಸು. ॥೪೯೩॥

ಮೊದಲು ಭಸ್ಮೋದ್ಧೂಳನಮಾಡಿಕೊಂಡು ಅನಂತರ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷ ಇವುಗಳನ್ನು ಧಾರಣೆಮಾಡಿ ಆ ದೇವೋತ್ತಮನಾದ ಶಿವನನ್ನು ಪೂಜೆಮಾಡು. ॥೪೯೪॥

ವಿಭೂತಿಧಾರಣಂ ತ್ಯಕ್ತ್ವಾ ವಿನಾ ರುದ್ರಾಕ್ಷಧಾರಣಂ ।
ಮಾ ಮಾ ಪೂಜಯ ವಿಶ್ವೇಶಂ ಶಿವಲಿಂಗಸ್ವರೂಪಿಣಂ ॥೪೯೫॥

॥ ಶಿವ ಉವಾಚ ॥

ಇತ್ಯುಕ್ತ್ವೇಂದ್ರಾದಿಭಿಃ ಸಾಕಂ ವಿಷ್ಣುರ್ವಿಧಿಸಮನ್ವಿತಃ ।
ವೈಕುಂಠಂ ಪ್ರಾಪ್ಯ ವಿಮಲಂ ಆರುಹ್ಯ ಗರುಡಂ ಮುದಾ ॥೪೯೬॥

ಅತೋ ಮದರ್ಚನಾದೇವ ಮೋಕ್ಷಃ ಸಂಪ್ರಾಪ್ಯತೇ ಶಿವೇ ।
ವಿನಾ ಮದರ್ಚನಂ ದೇವಿ ಮೋಕ್ಷೋ ನ ಭವತಿ ಧ್ರುವಂ ॥೪೯೭॥

ಪೂಜಿತೋಽಹಂ ಮಹಾದೇವೋ ಯಸ್ಯ ಯದ್ಯದಭೀಪ್ಸಿತಂ ।
ತತ್ತದ್ದಾಸ್ಯಾಮಿ ಸುಭಗೇ ಸತ್ಯಂ ಸತ್ಯಂ ನ ಸಂಶಯಃ ॥೪೯೮॥

ದೇವತಾಸಾರ್ವಭೌಮೋಽಹಂ ಭುಕ್ತಿಮುಕ್ತಿಪ್ರದಾಯಕಃ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೪೯೯॥

---

ವಿಭೂತಿಯನ್ನೂ ರುದ್ರಾಕ್ಷಗಳನ್ನೂ ಧರಿಸಿಕೊಳ್ಳದೇ ಎಂದಿಗೂ ಶಿವಲಿಂಗ ರೂಪಿಯಾದ ಆ ಜಗದೊಡೆಯನನ್ನು ಪೂಜೆಮಾಡಬೇಡ.” ॥೪೯೫॥

ವಿಷ್ಣುವು ಆ ಋಷಿಕುಮಾರನಿಗೆ ಈ ರೀತಿಯಾಗಿ ಹೇಳಿ, ಇಂದ್ರ, ಬ್ರಹ್ಮ ಮೊದಲಾದವರೊಡನೆ ಅಲ್ಲಿಂದ ಹೊರಟು, ತನ್ನ ವಾಹನವಾದ ಗರುಡನನ್ನೇರಿ ಪವಿತ್ರವಾದ ವೈಕುಂಠಲೋಕಕ್ಕೆ ಸಂತೋಷದಿಂದ ಹಿಂತಿರುಗಿದನು. ॥೪೯೬॥

ದೇವಿ! ಸರ್ವಮಂಗಳೇ, ನನ್ನನ್ನು ಪೂಜೆಮಾಡದೇ ಎಂದೆಂದಿಗೂ ನಿಶ್ಚಯವಾಗಿಯೂ ಮೋಕ್ಷವು ದೊರೆಯಲಾರದು. ನನ್ನ ಪೂಜೆಯಿಂದಲೇ ಮೋಕ್ಷವು ದೊರೆಯಬೇಕು. ॥೪೯೭॥

ಸೌಭಾಗ್ಯವತಿಯೇ, ಮಹಾದೇವನೆನಿಸಿದ ನನ್ನನ್ನು ಪೂಜೆಮಾಡಿದವನಿಗೆ ಬೇಕಾದ ಇಷ್ಟಾರ್ಥಗಳನ್ನೆಲ್ಲಾ ತಪ್ಪದೇ ಸತ್ಯವಾಗಿಯೂ ನಾನು ಕೊಡುವೆನು. ಇದರಲ್ಲಿ ಸಂದೇಹವೇ ಇಲ್ಲವೆಂದು ತಿಳಿ. ॥೪೯೮॥

ದೇವತೆಗಳಲ್ಲೆಲ್ಲಾ ಸಾರ್ವಭೌಮನೆನಿಸಿದ ನಾನೇ ಎಲ್ಲರಿಗೂ ಭುಕ್ತಿಯನ್ನೂ (ಭೋಜನಸೌಕರ್ಯವನ್ನೂ)ಮೋಕ್ಷವನ್ನೂ ಕೊಡುವೆನು. ಈ ವಿಷಯವು ಸತ್ಯವೆಂದು ತೋಳನ್ನು ಮೇಲಕ್ಕೆ ಎತ್ತಿ ಹೇಳುತ್ತಿರುವೆನು. ॥೪೯೯॥

ಸರ್ವಾಧಾರಂ ಸರ್ವಲೋಕೈಕಬಂಧುಂ
ಸರ್ವಾಶಾಸ್ಯಂ ಸರ್ವವೇದಾಂತವೇದ್ಯಂ ।
ಸರ್ವಾತೀತಂ ಸರ್ವಮೋಕ್ಷೈಕಹೇತುಂ
ವಿಜ್ಞಾಯೇಶಂ ಮಾಮನನ್ಯಾ ಭಜಂತಿ ॥೫೦॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಷೋಡಶೋಽಧ್ಯಾಯಃ

---

ಸಕಲ ಪ್ರಪಂಚಕ್ಕೂ ಆಧಾರನೂ, ಸಕಲ ಜನಗಳಿಗೂ ಮುಖ್ಯವಾಗಿ ಬಂಧುವಿನಂತಿರುವವನೂ, ಎಲ್ಲರಿಂದಲೂ ಪೂಜಿಸಲ್ಪಡುವವನೂ, ಸಕಲ ವೇದಾಂತ ಶಾಸ್ತ್ರಗಳಿಂದ ತಿಳಿಯಲ್ಪಡುವವನೂ, ಎಲ್ಲಾ ಕರ್ಮಗಳನ್ನೂ ಮಿಾರಿದವನೂ, ಎಲ್ಲರಿಗೂ ಮೋಕ್ಷವನ್ನು ಕೊಡುವುದರಲ್ಲಿ ಮುಖ್ಯಕಾರಣನೂ, ಐಶ್ವರ್ಯಭರಿತನೂ, ಆದ ನನ್ನನ್ನು ತಿಳಿದು ಪ್ರಾಜ್ಞರಾದವರು, ಅನ್ಯಾಸಕ್ತರಾಗದೇ ಸೇವೆಮಾಡುತ್ತಿರುವ ರೆಂದು ಶಿವನು ಪಾರ್ವತಿಗೆ ಹೇಳಿದನು. ॥೫೦॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

### ಸಪ್ತದಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ಪೂಜೋಪಕರಣಂ ಶಿವೇ ।
ಅಧಿಕಾರ್ಯಪಿ ಪೂಜಾಯಾ ಉಚ್ಯತೇ ಶೃಣು ಸಾದರಂ ॥೧॥

ಬ್ರಹ್ಮಕ್ಷತ್ರಿಯವಿಟ್ಶೂದ್ರದೇವಗಂಧರ್ವಮಾನವಾಃ ।
ಯಕ್ಷಾದಯೋಽಪೀಷ್ಟಸಿದ್ಧ್ಯೈ ಮಾಮೀಶಂ ಪೂಜಯಂತಿ ಹಿ ॥೨॥

ಬ್ರಾಹ್ಮಣೈರ್ದೇವಮುನಿಭಿರ್ದೇವೈಶ್ಚಾಹರಹಃ ಶಿವೇ ।
ವೇದಮಂತ್ರೈರಹಂ ಪೂಜ್ಯಸ್ತದನ್ಯೈಸ್ತಂತ್ರಮಾರ್ಗತಃ ॥೩॥

---

### ಹದಿನೇಳನೆಯ ಅಧ್ಯಾಯ

ಮಂಗಳಾಂಗಿಯೇ! ಇನ್ನು ಮುಂದೆ ನನ್ನನ್ನು ಪೂಜೆಮಾಡಲು ಬೇಕಾದ ಪೂಜಾಸಾಧನಗಳನ್ನೂ, ಪೂಜೆಮಾಡಲು ಯೋಗ್ಯನಾದ ಅಧಿಕಾರಿಯನ್ನೂ ತಿಳಿಸುವೆನು, ಕೇಳೆಂದು ಶಿವನು ಪಾರ್ವತೀದೇವಿಯನ್ನು ಕುರಿತು ಹೀಗೆಂದನು. ॥೧॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ದೇವತೆಗಳು, ಗಂಧರ್ವರು, ಮನುಜರು, ಯಕ್ಷರೇ ಮೊದಲಾದವರೂ ಸಹ ತಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ಈಶ್ವರನೆನಿಸಿದ ನನ್ನನ್ನು ಪೂಜೆಮಾಡುತ್ತಿರುವರು. ॥೨॥

ಮಂಗಳಪ್ರದಳಾದ ದೇವಿಯೇ! ಬ್ರಾಹ್ಮಣರೂ, ದೇವಶ್ರೇಷ್ಠರೂ, ಮುನಿಗಳೂ, ಇತರ ದೇವತೆಗಳೂ, ಸರ್ವಕಾಲದಲ್ಲಿಯೂ ನನ್ನನ್ನು ವೇದಮಂತ್ರಪೂರ್ವಕ

ಆದೌ ಮತ್ಪೂಜನಾತ್ಪೂರ್ವಂ ಯತ್ಕರ್ತವ್ಯಂ ತದುಚ್ಯತೇ ।
ಕರ್ತವ್ಯಕರಣಾಭಾವೇ ನಾಧಿಕಾರೀ ಭವಿಷ್ಯತಿ ॥೪॥

ಪ್ರಾತಃ ಶೌಚಾದಿಕಂ ಕೃತ್ವಾ ಸ್ನಾನಂ ಕಾರ್ಯಂ ಪ್ರಯತ್ನತಃ ।
ರುದ್ರಸೂಕ್ತೈರ್ಮಾರ್ಜನಂ ಚ ಕರ್ತವ್ಯಂ ಸ್ನಾನತತ್ಪರೈಃ ॥೫॥

ಜಲೇ ನಿಮಜ್ಯ ಮಾಮೀಶಂ ಧ್ಯಾತ್ವಾ ಸಾಂಬಂ ಮಹೇಶ್ವರಂ ।
ಮಹಾದೇವೇತಿ ಮಂತ್ರೋಽಯಂ ಜಪನೀಯೋಽಷ್ಟಧಾ ಶಿವೇ ॥೬॥

ತತಃ ಪ್ರಯತ್ನತೋ ದೇವಿ ಕರ್ತವ್ಯಂ ಜಲತರ್ಪಣಂ ।
ಪರಿಧಾನಂ ತತಃ ಕಾರ್ಯಂ ವಸ್ತ್ರಚೀರಾದಿಭಿಃ ಶಿವೇ ॥೭॥

ತದನಂತರಮಾಚಮ್ಯ ಭಸ್ಮ ಗ್ರಾಹ್ಯಂ ಪ್ರಯತ್ನತಃ ।
ಸದ್ಯೋಜಾತಾದಿಭಿರ್ಭಸ್ಮ ತತಃ ಸಮಭಿಮಂತ್ರಯೇತ್ ॥೮॥

---

ವಾಗಿ ಪೂಜೆಮಾಡಬೇಕು. ಇತರರು ತಂತ್ರಮಾರ್ಗವನ್ನನುಸರಿಸಿ ನನ್ನನ್ನು ಪೂಜೆ ಮಾಡಿದರೆ ಸಾಕು. ॥೩॥

ನನ್ನನ್ನು ಪೂಜೆಮಾಡುವುದಕ್ಕೆ ಮೊದಲು ಮಾಡಬೇಕಾದ ಕರ್ತವ್ಯವನ್ನು ಹೇಳುವೆನು ಕೇಳು. ಅದನ್ನು ಮಾಡದೇ ಹೋದರೆ ಆತನು ನನ್ನನ್ನು ಪೂಜಿಸಲು ಅಧಿಕಾರಿಯೇ ಆಗಲಾರನು. ॥೪॥

ಬೆಳಗ್ಗೆ ಶೌಚವೇ ಮೊದಲಾದ ಕರ್ಮಗಳನ್ನು ಮುಗಿಸಿಕೊಂಡು ಅನಂತರ ವಿಧಿಪೂರ್ವಕವಾಗಿ ಸ್ನಾನಮಾಡಬೇಕು. ಸ್ನಾನದಲ್ಲಿ ನಿರತರಾಗಿರುವವರು ರುದ್ರ ಸೂಕ್ತಮಂತ್ರಗಳನ್ನುಚ್ಚರಿಸುತ್ತಾ ಮೊದಲು ಮಾರ್ಜನೆಮಾಡಿಕೊಳ್ಳಬೇಕು. ॥೫॥

ದೇವಿ, ಸ್ನಾನಮಾಡುವುದಕ್ಕೆ ಮೊದಲು ನೀರಿನಲ್ಲಿ ಮುಳುಗಿದಾಗ ಅಂಬಿಕಾ ರಮಣನೂ, ಐಶ್ವರ್ಯಭರಿತನೂ, ಈಶ್ವರನೂ ಎನಿಸಿದ ನನ್ನನ್ನು ಧ್ಯಾನಮಾಡಿ, ಮಹಾದೇವನೆಂಬ ಈ ನನ್ನ ನಾಮಮಂತ್ರವನ್ನು ಎಂಟುಸಲ ಜಪಮಾಡಬೇಕು. ಆಮೇಲೆ ನಿಯಮದಿಂದ ನೀರಿನಲ್ಲಿ ನನಗೆ ತರ್ಪಣಮಾಡಿ, ತರುವಾಯ ನಾರು ಮಡಿಯೇ ಮೊದಲಾದ ಬಟ್ಟೆಗಳನ್ನು ಧರಿಸಬೇಕು. ॥೬-೭॥

ಆಮೇಲೆ ಆಚಮನಮಾಡಿ, ನಿಯಮಪೂರ್ವಕವಾಗಿ ವಿಭೂತಿಯನ್ನು ತೆಗೆದುಕೊಳ್ಳಬೇಕು. ಹಾಗೆ ತೆಗೆದುಕೊಂಡ ಭಸ್ಮವನ್ನು "ಸದ್ಯೋಜಾತಂ ಪ್ರಪದ್ಯಾಮಿ" ಇವೇ ಮುಂತಾದ ಮಂತ್ರಗಳಿಂದ ಅಭಿಮಂತ್ರಿಸಬೇಕು. ॥೮॥

ತತಃ ಶರೀರಂ ಸರ್ವಾಂಗಂ ಭಸ್ಮನೋದ್ಧೂಲಯೇತ್ತತಃ ।
ತ್ರಿಪುಂಡ್ರಧಾರಣಂ ಕೃತ್ವಾ ಜಾಬಾಲೋಪನಿಷತ್ಕ್ರಮಾತ್ ॥೯॥

ರುದ್ರಾಕ್ಷಧಾರಣಂ ಕಾರ್ಯಂ ತತೋಽಂಗೇಷು ಯಥಾಕ್ರಮಂ ।
ತತಃ ಸಂಧ್ಯಾ ಪ್ರಯತ್ನೇನ ಕರ್ತವ್ಯಾ ಸಕುಶಾ ತತಃ ॥೧೦॥

ಗೋಮಯೇನ ಭುವಂ ಸಮ್ಯಗನುಲಿಪ್ಯೋತ್ಕ್ಷಿಪೇಜ್ಜಲಂ ।
ತತೋಪವಿಶ್ಯ ಸಕುಶೇಷ್ವಾಸನೇ ಜಲಶೋಧಿತೇ ॥೧೧॥

ಪೂಜೋಪಕರಣಂ ದ್ರವ್ಯಂ ಸರ್ವಂ ಸ್ವೀಕಾರ್ಯಮಾದರಾತ್ ।
ಅಷ್ಟೌ ಪಾತ್ರಾಣಿ ಸಂಗ್ರಾಹ್ಯಾಣ್ಯರ್ಘ್ಯಾರ್ಥಮತಿಶೋಭನೇ ॥೧೨॥

ತಾನಿ ಸಂಪ್ರೋಕ್ಷ್ಯ ಸಕುಶಂ ಜಲಂ ತೇಷು ಪ್ರಪೂರಯೇತ್ ।
ಪೂರಯಿತ್ವಾ ತತೋ ಮಂತ್ರಂ ಶುದ್ಧಃ ಶೈವಂ ಜಪೇತ್ತತಃ ॥೧೩॥

---

ಆದಾದ ಮೇಲೆ ತನ್ನ ಸಕಲ ಅವಯವಗಳಿಗೂ ವಿಭೂತಿಯನ್ನು ಲೇಪ ಮಾಡಿಕೊಂಡು, ಹಣೆ, ತೋಳು, ಮೊದಲಾದ ಕಡೆಗೆ ಭಸ್ಮದಿಂದ ತ್ರಿಪುಂಡ್ರವನ್ನು ಧಾರಣೆಮಾಡಿಕೊಳ್ಳಬೇಕು. ಆ ಮೇಲೆ ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಕ್ರಮವನ್ನನುಸರಿಸಿ, ಆಯಾ ಅಂಗಗಳಲ್ಲಿ ರುದ್ರಾಕ್ಷಗಳನ್ನು ಧರಿಸಿಕೊಂಡು, ಅನಂತರ ದರ್ಭಾಸನದಲ್ಲಿ ಕುಳಿತು, ದರ್ಭೆಯನ್ನು ಕೈಯಲ್ಲಿ ಪವಿತ್ರವಾಗಿಟ್ಟುಕೊಂಡು ನಿಯಮ ಪೂರ್ವಕವಾಗಿ ಸಂಧ್ಯಾವಂದನೆಯನ್ನು ಮಾಡಬೇಕು. ॥೯-೧೦॥

ಸಗಣಿಯಿಂದ ನೆಲವನ್ನು ಚೆನ್ನಾಗಿ ಸಾರಿಸಿ, ಅನಂತರ ನೀರನ್ನು ಚುಮುಕಿಸ ಬೇಕು. ಆಮೇಲೆ ನೀರಿನಿಂದ ಶುದ್ಧವಾಗಿರುವ ಆ ಸ್ಥಳದಲ್ಲಿ ದರ್ಭೆಯೊಡಗೂಡಿದ ಆಸನದಲ್ಲಿ ಕುಳಿತುಕೊಂಡು, ಪೂಜೆಗೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಆದರದಿಂದ ತೆಗೆದುಕೊಳ್ಳಬೇಕು. ಎಲೌ ಶೋಭನಾಂಗಿಯೇ! ಅರ್ಘ್ಯವನ್ನು ಕೊಡುವುದಕ್ಕೆ ಮೊದಲು ಎಂಟು ಪಾತ್ರೆಗಳನ್ನು ಸಿದ್ಧಪಡಿಸಿಕೊಳ್ಳಬೇಕು. ॥೧೧-೧೨॥

ಆ ಎಂಟು ಕಲಶಗಳನ್ನೂ ನೀರಿನಿಂದ ಚೆನ್ನಾಗಿ ಪ್ರೋಕ್ಷಣೆಮಾಡಿ, ಅನಂತರ ಅವುಗಳಲ್ಲಿ ದರ್ಭೆಗಳೊಡನೆ ಶುದ್ಧವಾದ ನೀರನ್ನು ತುಂಬಬೇಕು. ಆ ನೀರನ್ನು ಪವಿತ್ರೀಕರಿಸುವುದಕ್ಕಾಗಿ ಪರಿಶುದ್ಧನಾಗಿ ಶಿವಮಂತ್ರವನ್ನು ಜಪಮಾಡಬೇಕು.

ಸೌವರ್ಣಂ ರಾಜತಂ ತಾಮ್ರಂ ಅಥವಾ ಮೃನ್ಮಯಂ ಶಿವೇ ।
ಶಿವಲಿಂಗಾಭಿಷೇಕಾರ್ಥಂ ಪಾತ್ರಂ ಗ್ರಾಹ್ಯಂ ಪ್ರಯತ್ನತಃ ॥೧೪॥

ಬಿಲ್ವಪತ್ರಾಣಿ ತತ್ಪಾತ್ರೇ ಸ್ಥಾಪನೀಯಾನಿ ಯತ್ನತಃ ।
ತದುಪರ್ಯೇವ ಸಂಸ್ಥಾಪ್ಯಂ ಶಿವಲಿಂಗಂ ಪ್ರಯತ್ನತಃ ॥೧೫॥

ತತೋ ರೌದ್ರೇಣ ಮಂತ್ರೇಣ ಸಂಪ್ರೋಕ್ಷ್ಯಾರ್ಚನಸಾಧನಂ ।
ಭಸ್ಮನಾಂಗಾನಿ ಸಂಮೃಜ್ಯ ಸಂಕಲ್ಪಂ ಚ ಸಮಾಚರೇತ್ ॥೧೬॥

ತತಃ ಕುಂದೇಂದುಧವಲಂ ಮಾಮುಮಾರಮಣಂ ಶಿವಂ ।
ಧ್ಯಾತ್ವಾ ನಮಃ ಶಿವಾಯೇತಿ ಮಂತ್ರೇಣ ಸಮುಪಸ್ಪೃಶೇತ್ ॥೧೭॥

ಜಲಕುಂಭಂ ಭಸ್ಮಪೂತಂ ಸ್ಪೃಷ್ಟ್ವಾ ಮೂಲಮನುಂ ಪಠೇತ್ ।
ಮೂಲಮಂತ್ರಸ್ತು ಸರ್ವತ್ರ ಶಿವಪಂಚಾಕ್ಷರಃ ಸ್ಮೃತಃ ॥೧೮॥

---

ಆ ಪರಶಿವನ ಲಿಂಗಕ್ಕೆ ಅಭಿಷೇಕಮಾಡಲು, ಚಿನ್ನ, ಬೆಳ್ಳಿ, ತಾಮ್ರ ಅಥವ ಮಣ್ಣು ಇವುಗಳಲ್ಲಿ ಆವನವನ ಯೋಗ್ಯತಾನುಸಾರವಾದ ಪಾತ್ರೆಗಳನ್ನು ತೆಗೆದುಕೊಳ್ಳ ಬಹುದು. ॥೧೩-೧೪॥

ಆ ಕಲಶಗಳಲ್ಲಿ ನಿಯಮದಿಂದ ಶುದ್ಧವಾದ ಬಿಲ್ವಪತ್ರಗಳನ್ನು ಹಾಕಬೇಕು. ಆ ಪಾತ್ರೆಗಳಮೇಲೆ ಶಿವಲಿಂಗವನ್ನು ಪ್ರಯತ್ನಪೂರ್ವಕವಾಗಿ ಸ್ಥಾಪಿಸಿ, ಪೂಜಾ ಸಾಮಗ್ರಿಗಳನ್ನೆಲ್ಲಾ ರುದ್ರಸಂಬಂಧವಾದ ಮಂತ್ರಗಳಿಂದಲೇ ಪ್ರೋಕ್ಷಣೆಮಾಡಿ, ವಿಭೂತಿಯಿಂದ ತನ್ನ ಅವಯವಗಳನ್ನೆಲ್ಲಾ ಲೇಪನಮಾಡಿಕೊಂಡು ತರುವಾಯ ಸಂಕಲ್ಪಮಾಡಬೇಕು. ॥೧೫-೧೬॥

ಮನಸ್ಸಿನಲ್ಲಿ ಕೋಲುಮಲ್ಲಿಗೆ ಮತ್ತು ಚಂದ್ರ ಇವರಂತೆ ಶುಭ್ರವರ್ಣವುಳ್ಳ ಉಮಾರಮಣನೂ ಶಿವನೂ ಎನಿಸಿದ ನನ್ನನ್ನು ಧ್ಯಾನಮಾಡಿ, ' ನಮಃ ಶಿವಾಯ ' ಎಂಬ ಶಿವಪಂಚಾಕ್ಷರಮಂತ್ರಪೂರ್ವಕವಾಗಿ ನನ್ನನ್ನು ಸ್ಪರ್ಶಮಾಡಬೇಕು.॥೧೭॥

ವಿಭೂತಿಯಿಂದ ಪರಿಶುದ್ಧವಾದ ನೀರಿನ ಕಲಶವನ್ನು ಮುಟ್ಟಿಕೊಂಡು ಮೂಲಮಂತ್ರವಾದ ಶಿವಪಂಚಾಕ್ಷರಮಂತ್ರವನ್ನು ಹೇಳಬೇಕು. ಎಲ್ಲಾ ಕಡೆಗ ಳಲ್ಲಿಯೂ ಆ ಶಿವಪಂಚಾಕ್ಷರವೇ ಮೂಲಮಂತ್ರವೆನಿಸುವುದು. ಇತರ ಎಲ್ಲಾ

ಪಠನೀಯೋಽನ್ಯಮಂತ್ರಾಂತೇ ಮೂಲಮಂತ್ರಸ್ತು ಸರ್ವತಃ ।
ಮೂಲಮಂತ್ರೋಪಮಂತ್ರಾಸ್ತು ಸರ್ವಮಂತ್ರಾ ಯತಃ ಸ್ಮೃತಾಃ॥೧೯॥

ಸುಗಂಧಜಲಮೀಶಾನ ಪವಿತ್ರಕಲಶಾಪೃತಂ ।
ಅಭಿಷೇಕಾರ್ಥಮಮಲಮರ್ಘ್ಯಾರ್ಥಂ ಚ ಮಹೇಶ್ವರ ॥೨೦॥

ಇತ್ಯುಕ್ತ್ವಾ ಶಂಕರಂ ಧ್ಯಾತ್ವಾ ಸರ್ವದೇವಶಿಖಾಮಣಿಂ ।
ಪಂಚಾಕ್ಷರಜಪಃ ಕಾರ್ಯೋ ದಶವಾರಂ ಪ್ರಯತ್ನತಃ ॥೨೧॥

ತತೋಽಷ್ಟಮೂರ್ತಯೇ ಮಹ್ಯಮರ್ಘ್ಯಾಣ್ಯಪಿ ನಿವೇದಯೇತ್ ।
ಅರ್ಘ್ಯಮಂತ್ರಾಶ್ಚ ವಿವಿಧಾಸ್ತೇಪ್ಯುಚ್ಯಂತೇ ಮಯಾಽಧುನಾ ॥೨೨॥

ಪೃಥಿವೀರೂಪ ವಿಶ್ವೇಶ ಪೃಥಿವೀಜನಕ ಪ್ರಭೋ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೨೩॥

---

ಮಂತ್ರಗಳನ್ನೂ ಹೇಳಿದ ನಂತರವೂ ಈ ಶಿವಪಂಚಾಕ್ಷರಮಂತ್ರವನ್ನು ಪಠಿಸಬೇಕು. ಇತರ ಮಂತ್ರಗಳೆಲ್ಲವೂ ಆ ಶಿವಪಂಚಾಕ್ಷರದ ಉಪಮಂತ್ರಗಳೇ ಆಗಿರುವುವು. ॥೧೮-೧೯॥

'ಸಕಲೈಶ್ವರ್ಯಗಳಿಗೂ ಅಧಿಪತಿಯಾದ ಈಶ್ವರನೇ! ಪವಿತ್ರವಾದ ಕಲಶದಲ್ಲಿ ತಂದಿರುವ ಸುಗಂಧಭರಿತವಾದ ನೀರನ್ನು, ನಿನ್ನ ಅಭಿಷೇಕಕ್ಕೋಸ್ಕರವೂ ಮತ್ತು ಅರ್ಘ್ಯಕ್ಕೋಸ್ಕರವೂ ಸ್ವೀಕರಿಸು ಸ್ವಾಮಿ.' ಎಂದು ಹೇಳಿ, ಆಮೇಲೆ, ಸಕಲದೇವತೆಗಳಿಗೂ ಚೂಡಾಮಣಿಯಂತೆ ಅಲಂಕಾರಪ್ರಾಯನಾಗಿರುವ ಶಂಕರನನ್ನು ಧ್ಯಾನ ಮಾಡಿ, ಹತ್ತುಸಲ ನಿಯಮದಿಂದ ಶಿವಪಂಚಾಕ್ಷರಜಪವನ್ನು ಮಾಡಬೇಕು. ॥೨೦-೨೧॥

ಆಮೇಲೆ, ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನ ಈ ಎಂಟುಮೂರ್ತಿಗಳುಳ್ಳ ನನಗೆ ಅರ್ಘ್ಯವನ್ನು ಸಮರ್ಪಿಸಬೇಕು. ಅರ್ಘ್ಯಕೊಡುವ ಮಂತ್ರಗಳು ನಾನಾವಿಧವಾಗಿರುವುವು. ಅವುಗಳನ್ನು ನಾನು ಈಗ ತಿಳಿಸುವೆನು ಕೇಳು. ॥೨೨॥

ಭೂಸ್ವರೂಪನಾದ ಜಗದೊಡೆಯನೇ! ನೀನು ಈ ಭೂಮಿಯನ್ನು ಸೃಷ್ಟಿ ಮಾಡಿದ ಪ್ರಭುವು. ದೇವೋತ್ತಮನಾದ ಶಂಭುವೇ, ಈ ಅರ್ಘ್ಯವನ್ನು ಸ್ವೀಕರಿಸಿ ನನ್ನನ್ನನುಗ್ರಹಿಸುವನಾಗು. ॥೨೩॥

ಜಲರೂಪ ಮಹಾದೇವ ಜಲಪ್ರಭವಕಾರಣ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೨೪॥

ತೇಜೋರೂಪ ಮಹೇಶಾನ ತೇಜೋಜನಕ ಶಂಕರ ।
ಗೃಹಾಣಾರ್ಘ್ಯಂ ಮಯಾ ದತ್ತಂ ಪ್ರಸೀದ ಸುರಸತ್ತಮ ॥೨೫॥

ವಾಯುಸ್ವರೂಪ ಸೋಮಾತ್ಮನ್ವಾಯುಪ್ರಭವಕಾರಣ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೨೬॥

ಆಕಾಶರೂಪ ಸರ್ವೇಶ ಆಕಾಶಜನಕ ಪ್ರಭೋ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೨೭॥

ಸೂರ್ಯಸ್ವರೂಪ ಸೂರ್ಯೇಶ ಶಿವ ಸೂರ್ಯೈಕಕಾರಣ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೨೮॥

---

ಜಲಸ್ವರೂಪನಾದ ಮಹಾದೇವನೇ, ನೀನು ಈ ನೀರು ಹುಟ್ಟಲು ಕಾರಣ ಭೂತನಾಗಿರುವೆ. ಎಲೈ ದೇವೋತ್ತಮನಾದ ಶಂಭುವೇ, ಈ ಅರ್ಘ್ಯವನ್ನು ಸ್ವೀಕರಿಸಿ ಅನುಗ್ರಹಿಸು ಸ್ವಾಮಿ. ॥೨೪॥

ತೇಜಃಸ್ವರೂಪನಾದ ಮಹೇಶ್ವರನೇ, ಈ ತೇಜಸ್ಸನ್ನು ನಿರ್ಮಿಸಿದವನೂ ಜಗನ್ಮಂಗಳಕರನೂ ನೀನೇ ಆಗಿರುವೆ. ದೇವೋತ್ತಮನಾದ ಮಹಾದೇವನೇ, ನಾನು ಕೊಡುವ ಅರ್ಘ್ಯವನ್ನು ಸ್ವೀಕರಿಸಿ ಅನುಗ್ರಹಮಾಡುವನಾಗು. ॥೨೫॥

ವಾಯುಸ್ವರೂಪನಾದ ಉಮಾರಮಣನೇ, ನೀನೇ ಈ ವಾಯುವಿನ ಉತ್ಪತ್ತಿಗೆ ಕಾರಣನು. ದೇವೋತ್ತಮನಾದ ಶಂಭುವೇ, ಈ ಅರ್ಘ್ಯವನ್ನು ಸ್ವೀಕರಿಸಿ ನನ್ನಲ್ಲಿ ಅನುಗ್ರಹವಿಡು. ॥೨೬॥

ಆಕಾಶಸ್ವರೂಪನೂ, ಸಕಲ ಚರಾಚರವಾದ ಜಗತ್ತಿಗೆ ಒಡೆಯನೂ ಆದ ಪ್ರಭುವೇ, ಈ ಆಕಾಶಕ್ಕೂ ನೀನೇ ಜನಕನಾಗಿರುವೆ. ದೇವಶ್ರೇಷ್ಠನಾದ ಶಂಭುವೇ, ಈ ಅರ್ಘ್ಯವನ್ನು ಸ್ವೀಕರಿಸಿ ನನ್ನಲ್ಲನುಗ್ರಹಮಾಡು. ॥೨೭॥

ಸೂರ್ಯಸ್ವರೂಪನೂ ಸೂರ್ಯನಿಗೆ ಅಧಿಪತಿಯೂ ಆದ ಶಿವನೇ, ಸೂರ್ಯದೇವ ನಿಗೂ ಮುಖ್ಯಕಾರಣನು ನೀನೇ ಅಲ್ಲವೆ! ದೇವೋತ್ತಮನಾದ ಶಂಭುವೇ, ಈ ಅರ್ಘ್ಯವನ್ನು ಸ್ವೀಕರಿಸಿ ನನ್ನಲ್ಲಿ ಅನುಗ್ರಹಮಾಡುವನಾಗು. ॥೨೮॥

ಚಂದ್ರಸ್ವರೂಪ ಚಂದ್ರಾತ್ಮನ್ಚಂದ್ರಶೇಖರ ಸರ್ವಗ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೨೯॥

ಯಜ್ವಮೂರ್ತೇ ಜಗನ್ಮೂರ್ತೇ ಯಜ್ಞಕರ್ಮಫಲಪ್ರದ ।
ಗೃಹಾಣಾರ್ಘ್ಯಮಿದಂ ಶಂಭೋ ಪ್ರಸೀದ ಸುರಸತ್ತಮ ॥೩೦॥

ಅಷ್ಟಾವರ್ಘ್ಯಾಣಿ ದೇಯಾನಿ ಮಂತ್ರೈರೇತೈರ್ಯಥಾಕ್ರಮಂ ।
ಶ್ವೇತಶಾಲ್ಯಕ್ಷತಾಪುಷ್ಪಬಿಲ್ವಪತ್ರಯುತೈರ್ಜಲೈಃ ॥೩೧॥

ತತಃ ಪಂಚಾಮೃತೈಃ ಶುದ್ಧೈರಭಿಷೇಕಂ ಸಮಾಚರೇತ್ ।
ಪಂಚಾಮೃತಸ್ನಾನಮಧ್ಯೇ ಜಲಸ್ನಾನಂ ಸಮಾಚರೇತ್ ॥೩೨॥

---

ಚಂದ್ರನಂತೆ ಆಕಾರವುಳ್ಳವನೂ, ಸಾಕ್ಷಾಚ್ಚಂದ್ರನೇ ತಾನಾಗಿರುವವನೂ ಆದ ಶಂಕರನೇ, ಸರ್ವವ್ಯಾಪಿಯಾದ ನೀನು ಆ ಚಂದ್ರನನ್ನೇ ಶಿರೋಭೂಷಣವನ್ನಾಗಿ ಮಾಡಿಕೊಂಡಿರುವೆ. ದೇವೋತ್ತಮನಾದ ಶಂಭುವೇ, ಈ ಅರ್ಘ್ಯವನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸುವವನಾಗು. ॥೨೯॥

ಯಜಮಾನಸ್ವರೂಪನೂ (ಯಾಗಮಾಡುವ ಸ್ವಾಮಿಯ ಆಕಾರವುಳ್ಳವನೂ) ಸ್ಥಾವರಜಂಗಮಾತ್ಮಕವಾದ ಈ ಸಕಲ ಜಗದ್ರೂಪಿಯೂ ಆಗಿರುವ ಶಂಭುವೇ! ಸಕಲ ಯಾಗಕರ್ಮಗಳಿಗೂ ಫಲವನ್ನು ಕೊಡುವವನು ನೀನೇ ಆಗಿರುವೆ. ದೇವೋತ್ತಮನೇ! ಈ ಅರ್ಘ್ಯವನ್ನು ಸ್ವೀಕರಿಸಿ ನನ್ನನ್ನನುಗ್ರಹಮಾಡು. ॥೩೦॥

ಈ ರೀತಿಯಾಗಿ ಬಿಳಿಯ ಬತ್ತದ ಮಂತ್ರಾಕ್ಷತೆ ಮತ್ತು ಬಿಲ್ವಪತ್ರ ಇವುಗಳಿಂದ ಮಿಶ್ರವಾದ ನೀರಿನಿಂದ ಹಿಂದೆ ಹೇಳಿದ ಮಂತ್ರಪೂರ್ವಕವಾಗಿ ಕ್ರಮವನ್ನನುಸರಿಸಿ ನನಗೆ ಎಂಟು ಅರ್ಘ್ಯಗಳನ್ನು ಕೊಡಬೇಕು. ॥೩೧॥

ಅನಂತರ ಪರಿಶುದ್ಧವಾದ "ಹಾಲು, ಮೊಸರು, ತುಪ್ಪ, ಸಕ್ಕರೆ ಮತ್ತು ಜೇನುತುಪ್ಪ" ಈ ಪಂಚಾಮೃತದ್ರವ್ಯಗಳಿಂದ ಅಭಿಷೇಕಮಾಡಬೇಕು. ಪಂಚಾಮೃತದಿಂದ ಸ್ನಾನಮಾಡುವಾಗ ಮಧ್ಯ ಮಧ್ಯದಲ್ಲಿ ಶುದ್ಧವಾದ ನೀರಿನಿಂದ ಅಭಿಷೇಕಮಾಡುತ್ತಿರಬೇಕು. ॥೩೨॥

ಕ್ಷೀರಂ ಗವ್ಯಮಿದಂ ಶುದ್ಧಂ ಜಲಸಂಯುತಮೀಶ್ವರ ।
ಅಭಿಷೇಕಾರ್ಥಮಾನೀತಂ ಗೃಹಾಣೋಮಾಮಹೇಶ್ವರ ॥೩೩॥

ದಧಿ ಗವ್ಯಮಿದಂ ಶುದ್ಧಂ ಪರಿಷ್ಕೃತಮುಮಾಪತೇ ।
ಅಭಿಷೇಕಾರ್ಥಮಾನೀತಂ ಗೃಹಾಣೋಮಾಮಹೇಶ್ವರ ॥೩೪॥

ಘೃತಮೇತನ್ಮಹಾದೇವ ಸುಗಂಧಂ ಗವ್ಯಮುತ್ತಮಂ ।
ಅಭಿಷೇಕಾರ್ಥಮಾನೀತಂ ಗೃಹಾಣೋಮಾಮಹೇಶ್ವರ ॥೩೫॥

ನವಂ ಮಧುಸಮಾನೀತಮಿದಂ ಕೀಟಾದ್ಯದೂಷಿತಂ ।
ಅಭಿಷೇಕಾರ್ಥಮಧುನಾ ಗೃಹಾಣೋಮಾಮಹೇಶ್ವರ ॥೩೬॥

ಶರ್ಕರೇಯಂ ಸಮಾನೀತಾ ಸಿತಾ ಕೀಟಾದ್ಯದೂಷಿತಾ ।
ಅಭಿಷೇಕಾರ್ಥಮಧುನಾ ಗೃಹಾಣೋಮಾಮಹೇಶ್ವರ ॥೩೭॥

---

ಐಶ್ವರ್ಯಸಂಪನ್ನನಾದ ಸ್ವಾಮಿಯೇ, ನೀರಿನಿಂದ ಯುಕ್ತವಾಗಿ ಪರಿಶುದ್ಧವಾಗಿರುವ ಈ ಹಸುವಿನ ಹಾಲನ್ನು ಅಭಿಷೇಕಕ್ಕೋಸ್ಕರ ತಂದಿರುವೆನು. ಎಲೈ ಉಮಾಮಹೇಶ್ವರನಾದ ಸ್ವಾಮಿಯೇ, ಇದನ್ನು ಸ್ವೀಕರಿಸಬೇಕು ಸ್ವಾಮಿ. ॥೩೩॥

ಉಮಾರಮಣನಾದ ಸ್ವಾಮಿಯೇ, ನಿನಗೆ ಅಭಿಷೇಕಮಾಡುವುದಕ್ಕೋಸ್ಕರ ಚೆನ್ನಾಗಿ ಸಂಸ್ಕೃತವಾಗಿ ಪರಿಶುದ್ಧವಾಗಿರುವ ಈ ಹಸುವಿನ ಮೊಸರನ್ನು ಸಂಗ್ರಹಿಸಿರುವೆನು. ಉಮಾಮಹೇಶ್ವರನೆನಿಸಿದ ಪ್ರಭುವೇ, ಈ ಮೊಸರನ್ನು ಸ್ವೀಕರಿಸು.॥೩೪॥

ಉಮಾಮಹೇಶ್ವರನೆನಿಸಿದ ಮಹಾದೇವನೇ, ಸುಗಂಧಭರಿತವಾಗಿರುವ ಈ ಉತ್ತಮವಾದ ಹಸುವಿನ ತುಪ್ಪವನ್ನು ನಿನ್ನ ಅಭಿಷೇಕಕ್ಕೋಸ್ಕರ ತಂದಿರುವೆನು. ಸ್ವಾಮಿ, ದಯವಿಟ್ಟು ಇದನ್ನು ಸ್ವೀಕರಿಸಬೇಕು. ॥೩೫॥

ಉಮಾಮಹೇಶ್ವರನಾದ ಸ್ವಾಮಿಯೇ, ಹುಳುಹುಬಟೆಗಳಿಂದ ಕೆಡಿಸಲ್ಪಡದಿರುವ ಹೊಸದಾದ ಈ ಜೇನುತುಪ್ಪವನ್ನು ನಿನಗೆ ಅಭಿಷೇಕಮಾಡಲು ಈಗತಾನೇ ತಂದಿರುವೆನು. ದೇವ, ಇದನ್ನು ಸ್ವೀಕರಿಸುವನಾಗು. ॥೩೬॥

ಉಮಾರಮಣನಾದ ಮಹೇಶ್ವರನೇ, ಕ್ರಿಮಿಕೀಟಾದಿಗಳಿಂದ ಅಪವಿತ್ರವಾಗದೇ ಇರುವ ಈ ಕಲ್ಲುಸಕ್ಕರೆಯನ್ನು ನಿನ್ನ ಅಭಿಷೇಕಕ್ಕೋಸ್ಕರ ಈಗ ತಂದಿರುವೆನು. ದೇವ ಇದನ್ನು ಸ್ವೀಕರಿಸಬೇಕು. ॥೩೭॥

ಏವಂ ಪಂಚಾಮೃತೈರೀಶಮಭಿಷಿಚ್ಯ ತತಃ ಪರಂ ।
ಸಾಂಗೇನ ನಮಕೇನೇಶಂ ಸಾಂಬಂ ಮಾಮಭಿಷಿಂಚಯೇತ್ ॥೩೮॥

ಜಲಧಾರಾತ್ವವಿಚ್ಛಿನ್ನಾ ಸಂಪಾದ್ಯಾ ಮಯಿ ಭಕ್ತಿತಃ ।
ಯಾ ಧಾರಾಽಮೃತಧಾರಾ ಸಾ ಮುಕ್ತಿಧಾರಾ ಮಮಪ್ರಿಯಾ ॥೩೯॥

ತತಃ ಪರಂ ಕಲ್ಪನೀಯಂ ಬಿಲ್ವಪತ್ರೋತ್ತರಾಸನಂ ।
ಹೇಮಾದಿನಿರ್ಮಿತಂ ಮಹ್ಯಂ ಮೂಲಮಂತ್ರೇಣ ಭಕ್ತಿತಃ ॥೪೦॥

ತತೋ ನವೇನ ಶುದ್ಧೇನ ವಸ್ತ್ರೇಣ ಪರಿವೃತ್ಯ ಮಾಂ ।
ಸಿತೇನ ಭಸ್ಮನಾ ಸಮ್ಯಗರ್ಚಯೇನ್ಮೂಲಮಂತ್ರತಃ ॥೪೧॥

---

ಈರೀತಿಯಾಗಿ ಈಶ್ವರನೆನಿಸಿದ ನನ್ನನ್ನು ಪಂಚಾಮೃತದ್ರವ್ಯಗಳಿಂದ ಅಭಿಷೇಕಮಾಡಿ, ಅನಂತರ ಅಂಗನ್ಯಾಸಸಮೇತವಾದ ನಮಕಮಂತ್ರದಿಂದ ಅಂಬಿಕಾ ರಮಣನೂ, ಸರ್ವೇಶ್ವರನೂ ಆದ ನನ್ನನ್ನು ಅಭಿಷೇಕಮಾಡಬೇಕು. ॥೩೮॥

ಭಕ್ತಿಪೂರ್ವಕವಾಗಿ ಮಧ್ಯೆ ವಿಚ್ಛಿತ್ತಿ ಬರದಂತೆ ನನ್ನ ಮೇಲೆ ಜಲಧಾರೆ ಯನ್ನು ಬಿಡಬೇಕು. ಪರಿಶುದ್ಧವಾದ ಆ ನೀರಿನ ಧಾರೆಯೇ ಅಮೃತಧಾರೆಗೆ ಸಮಾನವಾದುದೆನಿಸಿ, ಅದು ನನಗೆ ಪ್ರೀತಿಕರವಾಗುವುದು. ಅದೇ ಕೊನೆಗೆ ನನ್ನನ್ನು ಅಭಿಷೇಕಮಾಡುವವನಿಗೆ ಮುಕ್ತಿಯನ್ನುಂಟುಮಾಡುವ ಧಾರೆಯಾಗು ವುದು. ॥೩೯॥

ಹೀಗೆ ಶುದ್ಧೋದಕದಿಂದ ಅಭಿಷೇಕಮಾಡಿದನಂತರ ಬಿಲ್ವಪತ್ರೆಗಳಿಂದ ಯುಕ್ತವಾಗಿರುವ ಚಿನ್ನವೇ ಮೊದಲಾದ ಲೋಹಗಳಿಂದ ನಿರ್ಮಿಸಲ್ಪಟ್ಟ ಆಸನ ವನ್ನು ನನಗೆ ಮೂಲಮಂತ್ರವಾದ ಶಿವಪಂಚಾಕ್ಷರವನ್ನು ಜಪಿಸುತ್ತಾ ಸಮರ್ಪಿಸ ಬೇಕು. ॥೪೦॥

ಅನಂತರ ಪರಿಶುದ್ಧವಾದ ಹೊಸವಸ್ತ್ರದಿಂದ ನನ್ನನ್ನು ಅಲಂಕರಿಸಿ, ಶುಭ್ರವಾದ ವಿಭೂತಿಯಿಂದ ಶಿವಪಂಚಾಕ್ಷರಮಂತ್ರಪೂರ್ವಕವಾಗಿ ಶಿವಲಿಂಗವನ್ನು ಚೆನ್ನಾಗಿ ಅಲಂಕರಿಸಬೇಕು. ॥೪೧॥

ಚಂದನೇನ ಸುಗಂಧೇನ ಮೂಲಮಂತ್ರೇಣ ಪೂಜಯೇತ್ ।
ಮಧ್ಯೇತ್ವೇಕೈಕಪೂಜಾಂತೇ ದೇಯಮಾಚಮನಂ ಮಮ ॥೪೨॥

ತತಃ ಶಾಲ್ಯಕ್ಷತೈಃ ಶ್ವೇತೈರರ್ಚಯೇನ್ಮಾಂ ತಿಲಾನ್ವಿತೈಃ ।
ತತೋ ಬಿಲ್ವದಲೈಃ ಶುದ್ಧೈರರ್ಚಯೇದಘನಾಶಕೈಃ ॥೪೩॥

ಬಿಲ್ವಪತ್ರಂ ಗೃಹಾಣೇಶ ಬಿಲ್ವಪತ್ರಪ್ರಿಯ ಪ್ರಭೋ ।
ಪ್ರಸೀದ ಭಗವಂಛಂಭೋ ಪಾತಕಾನಿ ಹರಸ್ವ ಮೇ ॥೪೪॥

ಅಮುಂ ಮಂತ್ರಂ ಸಮುಚ್ಚಾರ್ಯ ಮೂಲಮಂತ್ರಮಪಿ ಪ್ರಿಯೇ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಪುಷ್ಪೈರಪಿ ಸಮರ್ಚಯೇತ್ ॥೪೫॥

ಸಾಜ್ಯೇನಾಗರುಸಾರೇಣ ಸುಗಂಧೇನ ಮನೋಹರಃ ।
ಧೂಪಸ್ತತಃ ಕಲ್ಪನೀಯೋ ಮಹ್ಯಂ ಯತ್ನಪುರಸ್ಸರಂ ॥೪೬॥

---

ಮತ್ತು ಸುಗಂಧಭರಿತವಾದ ಚಂದನವನ್ನು ತೆಗೆದುಕೊಂಡು ಶಿವಪಂಚಾಕ್ಷರ ಮಂತ್ರವನ್ನುಚ್ಚರಿಸುತ್ತಾ ಶ್ರದ್ಧೆಯಿಂದ ಪೂಜೆಮಾಡಬೇಕು. ಪೂಜಾಮಧ್ಯದಲ್ಲಿಯೂ ಒಂದೊಂದು ಪೂಜೆಯ ಕೊನೆಯಲ್ಲಿಯೂ ನನಗೆ ಆಚಮನವನ್ನು ಕೊಡಬೇಕು. ॥೪೨॥

ಆನಂತರ ಎಳ್ಳಿನಿಂದ ಬೆರೆದ ಶುಭ್ರವಾದ ಬತ್ತದ ಅಕ್ಷತೆಗಳಿಂದಲೂ, ಪಾಪವನ್ನು ನಾಶಮಾಡುವ ಶುದ್ಧವಾದ ಬಿಲ್ವಪತ್ರೆಗಳಿಂದಲೂ ನನ್ನನ್ನು ಭಕ್ತಿಯಿಂದ ಪೂಜಿಸಬೇಕು. ॥೪೩॥

"ಬಿಲ್ವಪತ್ರೆಗಳಲ್ಲಿ ತುಂಬಾ ಪ್ರೀತಿಯುಳ್ಳ ಪ್ರಭುವಾದ ಈಶ್ವರನೇ, ಈ ಬಿಲ್ವಪತ್ರೆಗಳನ್ನು ಸ್ವೀಕರಿಸುವನಾಗು. ಸುಖಕರನಾದ ಭಗವಂತನೇ, ನನ್ನಲ್ಲಿ ಅನುಗ್ರಹಮಾಡಿ, ನನ್ನ ಸಕಲ ಪಾಪಗಳನ್ನೂ ನಾಶಮಾಡು; ದೇವ." ॥೪೪॥

ಪ್ರೇಯಸಿಯೇ, ಈ ಮಂತ್ರವನ್ನೂ, ಮೂಲಮಂತ್ರವಾದ ಶಿವಪಂಚಾಕ್ಷರವನ್ನೂ ಉಚ್ಚಾರಮಾಡಿ, ಬಿಲ್ವಪತ್ರೆಗಳಿಂದಲೂ, ಹೂವುಗಳಿಂದಲೂ ನನ್ನನ್ನು ಪೂಜೆಮಾಡಬೇಕು. ॥೪೫॥

ಸುಗಂಧಭರಿತವಾದ ಅಗರುವಿನ ಸಾರವನ್ನೂ ತುಪ್ಪದೊಡನೆ ಬೆರೆಸಿ ಮನೋಹರವಾದ ಧೂಪವನ್ನು ನನಗೆ ಪ್ರಯತ್ನಪೂರ್ವಕವಾಗಿ ಸಮರ್ಪಿಸಬೇಕು. ಆಗ 'ದೇವತೆಗಳಿಗೊಡೆಯನಾದ ಶಿವನೇ, ಸುಗಂಧವೂ, ತುಪ್ಪದಿಂದ ಯುಕ್ತವಾ

ಧೂಪಂ ಗೃಹಾಣ ದೇವೇಶ ಸುಗಂಧಂ ಸಪ್ಪುತಂ ಶಿವ ।
ಪಾತಕಾನಿ ಹರಸ್ವೇಶ ಧೂಪದಾನೇನ ಸಾದರಂ ॥೪೭॥

ದೀಪಂ ಗೃಹಾಣ ದೇವೇಶ ಪಾತಕಧ್ವಾಂತನಾಶಕ ।
ಪ್ರಸೀದ ಪಾರ್ವತೀನಾಥ ದೀನಬಂಧೋ ದಯಾನಿಧೇ ॥೪೮॥

ಇತಿ ದತ್ವಾ ಧೂಪದೀಪೌ ನೈವೇದ್ಯಂ ಪರಿಕಲ್ಪಯೇತ್ ।
ಭಕ್ಷ್ಯಂ ಭೋಜ್ಯಂ ಚ ಲೇಹ್ಯಂ ಚ ಚೋಷ್ಯಂ ಪೇಯಂ ಮಹೇಶ್ವರ ॥೪೯॥

ಅನ್ನಂ ಪಂಚವಿಧಂ ಶಂಭೋ ನೂನಂ ಸ್ವಾದುಕರಂ ಶಿವ ।
ನೈವೇದ್ಯಂ ಷಡ್ರಸೋಪೇತಂ ಗೃಹಾಣೋಮಾಮಹೇಶ್ವರ ॥೫೦॥

ಪಾನೀಯಂ ಶೀತಲಂ ವಸ್ತ್ರಶೋಧಿತಂ ಚ ಸುವಾಸಿತಂ ।
ಗೃಹಾಣೋಮಾಮಹೇಶೇದಂ ನಾನಾವಿಧಫಲಾನಿ ಚ ॥೫೧॥

---

ಗಿರುವುದೂ ಆದ ಈ ಧೂಪವನ್ನು ಸ್ವೀಕರಿಸಿ, ಈ ಧೂಪವನ್ನು ಸಮರ್ಪಿಸಿರುವ ನನ್ನ ಸಕಲ ಪಾಪಗಳನ್ನೂ (ನನ್ನಲ್ಲಿ) ಆದರದಿಂದ ಪರಿಹರಿಸುವನಾಗು' ಎಂದು ಹೇಳಬೇಕು. ॥೪೬-೪೭॥

ಪಾಪಗಳೆಂಬ ಅಂಧಕಾರವನ್ನು ನಾಶಮಾಡುವ ದೇವದೇವನೇ! ನಾನು ಸಮರ್ಪಿಸುವ ಈ ದೀಪವನ್ನು ಸ್ವೀಕರಿಸು. ದೀನಬಂಧುವೂ ದಯಾಸಮುದ್ರನೂ ಆದ ಪಾರ್ವತೀರಮಣನೇ, ನನ್ನನ್ನನುಗ್ರಹಿಸೆಂದು ಹೇಳಿ, ಧೂಪ ಮತ್ತು ದೀಪಗಳನ್ನು ನನಗೆ ಅರ್ಪಿಸಿ, ಅನಂತರ ನೈವೇದ್ಯವನ್ನು ಸಮರ್ಪಿಸಬೇಕು. ಮಹೇಶ್ವರ! ಲಾಡು, ಚಿರೋಟಿ ಮೊದಲಾದ ಭಕ್ಷ್ಯಗಳೂ, ಅನ್ನವೇ ಮೊದಲಾದ ಭೋಜ್ಯಗಳೂ ಉಪ್ಪಿನ ಕಾಯಿಯೇ ಮೊದಲಾದ ನಂಚಿಕೊಳ್ಳುವ ಪದಾರ್ಥಗಳೂ (ಲೇಹ್ಯಗಳೂ) ವ್ಯಂಜಕಪದಾರ್ಥಗಳೆನಿಸಿದ ಕೋಸುಂಬರಿ, ಪಲ್ಯ ಮೊದಲಾದವುಗಳೂ (ಚೋಷ್ಯವೂ) ಪಾನಾರ್ಹವಾದ ಪಾಯಸ ಮೊದಲಾದವುಗಳೂ ಐದು ಬಗೆಯ ಅನ್ನಗಳೂ, ಇವೇ ಮೊದಲಾದ (ಮಧುರ, ಆಮ್ಲ, ಲವಣ, ಕಟು, ಕಷಾಯ ತಿಕ್ತಗಳೆಂಬ) ಷಡ್ರಸೋಪೇತವೂ ರುಚಿಕರವೂ ಆದ ನೈವೇದ್ಯವನ್ನೂ ಸ್ವೀಕರಿಸು ಸ್ವಾಮಿ! ॥೪೮-೪೯-೫೦॥

ಸುಗಂಧಪೂರಿತವೂ, ಶುಭ್ರವಾದ ವಸ್ತ್ರದಿಂದ ಶೋಧಿಸಲ್ಪಟ್ಟಿರುವುದೂ,

ತತಃ ಪರಂ ಕಲ್ಪನೀಯಂ ಕರೋದ್ವರ್ತನಮಾದರಾತ್ ॥೫೨॥

ತತಃ ಪರಂ ಧೂಪದೀಪೌ ತಾಂಬೂಲಂ ಚ ತತಃ ಪರಂ ।
ತತಃ ಪುನರ್ಧೂಪದೀಪೌ ದೇಯಾವತ್ಯಂತಭಕ್ತಿತಃ ॥೫೩॥

ಗೃಹಾಣ ಪರಮೇಶಾನ ತಾಂಬೂಲಮಿದಮುತ್ತಮಂ ।
ಏಲಾಲವಂಗಕರ್ಪೂರಪರಿಷ್ಕೃತಮುಮಾಪತೇ ॥೫೪॥

ತತಃ ಪ್ರದಕ್ಷಿಣಾಃ ಕಾರ್ಯಾಃ ದ್ವಾದಶೈಕಾದಶಾಽಥವಾ ।
ತತಃ ಪ್ರಣಾಮಾಃ ಕರ್ತವ್ಯಾ ಏಕವಿಂಶತಿಸಂಖ್ಯಯಾ ॥೫೫॥

ನರ್ತನಂ ಚ ತತಃ ಕಾರ್ಯಂ ಸಾಂಬಧ್ಯಾನಪುರಃಸರಂ ।
ಶಿವಪಂಚಾಕ್ಷರಃ ಶುದ್ಧೋ ಜಪನೀಯಃ ಪ್ರಯತ್ನತಃ ॥೫೬॥

ಅಷ್ಟೋತ್ತರಸಹಸ್ರಂ ತು ನ್ಯಾಸಧ್ಯಾನಪುರಃಸರಂ ।
ಶಿವಪಂಚಾಕ್ಷರಂ ಜಪ್ಯೋ ಯದ್ವಾ ನ್ಯಾಸಾದಿಕಂ ವಿನಾ ॥೫೭॥

---

ಆದ ತಂಪಾದ ಪಾನೀಯವನ್ನೂ, ನಾನಾವಿಧವಾದ ಹಣ್ಣುಗಳನ್ನೂ ಉಮಾಮಹೇಶ್ವರನಾದ ಸ್ವಾಮಿಯೇ, ಸ್ವೀಕರಿಸಿ ನನ್ನನ್ನು ಅನುಗ್ರಹಿಸು ॥೫೧॥

ಎಂದು ಹೇಳಿ ಆದರದಿಂದ ನನಗೆ ಕರೋದ್ವರ್ತನಮಾಡಬೇಕು. ಆಮೇಲೆ ಧೂಪ, ದೀಪಗಳನ್ನೂ ಮತ್ತು ತಾಂಬೂಲವನ್ನೂ ಆದಾದ ಮೇಲೆ ಪುನಃ ಧೂಪ, ದೀಪಗಳನ್ನೂ ಭಕ್ತಿಯಿಂದ ಸಮರ್ಪಿಸಬೇಕು. ॥೫೨-೫೩॥

ಸಕಲೈಶ್ವರ್ಯಭರಿತನಾದ ಉಮಾರಮಣನೇ, ಏಲಕ್ಕಿ, ಲವಂಗ, ಪಚ್ಚ ಕರ್ಪೂರ ಮೊದಲಾದುವುಗಳಿಂದ ಪರಿಷ್ಕೃತವಾದ ಈ ಉತ್ತಮ ತಾಂಬೂಲವನ್ನು ಸ್ವೀಕರಿಸೆಂದು ಪ್ರಾರ್ಥಿಸಿ, ಹನ್ನೆರಡು ಅಥವಾ ಹನ್ನೊಂದು ಪ್ರದಕ್ಷಿಣೆಗಳನ್ನೂ ಇಪ್ಪತ್ತೊಂದು ನಮಸ್ಕಾರಗಳನ್ನೂ ಮಾಡಬೇಕು. ॥೫೪॥

ಅನಂತರ ಅಂಬಾಸಮೇತನಾದ ಪರಮೇಶ್ವರನನ್ನು ಮನಸಾ ಧ್ಯಾನಮಾಡುತ್ತಾ ನಾಟ್ಯವಾಡಬೇಕು. ಆಮೇಲೆ ಪರಿಶುದ್ಧವಾದ ಶಿವಪಂಚಾಕ್ಷರಮಂತ್ರವನ್ನು ಸಾವಿರ ದೆಂಟುಸಲ ನ್ಯಾಸ ಮತ್ತು ಧ್ಯಾನಗಳೊಡನೆ ಜಪಿಸಬೇಕು ಒಂದುವೇಳೆ ನ್ಯಾಸ ಧ್ಯಾನಗಳಿಲ್ಲದೆಯೂ ಜಪಮಾಡಬಹುದು. ॥೫೬-೫೭॥

ತತಃ ಪರಂ ಬಿಲ್ವಪತ್ರೈಃ ಪುಷ್ಪೈರ್ನಾನಾವಿಧೈರಪಿ ।
ಪುನಃ ಪೂಜಾ ಪ್ರಯತ್ನೇನ ಕರ್ತವ್ಯಾ ಮಹ್ಯಮಾದರಾತ್ ॥೫೮॥

ತತೋ ನಾನಾವಿಧೈಃ ಸ್ತೋತ್ರೈಃ ಸ್ತೋತವ್ಯೋಽಹಂ ಪ್ರಯತ್ನತಃ ।
ತತಶ್ಛತ್ರಂ ಚಾಮರಂ ಚ ದರ್ಪಣಂ ಚ ನಿವೇದಯೇತ್ ॥೫೯॥

ಪುನರ್ನತ್ವಾ ಕ್ಷಮಸ್ವೇತಿ ಸಂಸ್ಪೃಶೇದ್ಧ್ಯಾನಪೂರ್ವಕಂ ।
ಸ್ಪರ್ಶಂ ಕೃತ್ವಾ ಪುನರ್ಮಂತ್ರಮುಮಾಮೇವ ಪಠೇಚ್ಛಿವೇ ॥೬೦॥

ಅಯಂ ಮೇ ಇತಿ ಮಂತ್ರೇಣ ಸ್ಪೃಷ್ಟ್ವಾ ಹಸ್ತತಲೇನ ಮಾಂ ।
ಅಷ್ಟೋತ್ತರಶತಂ ಮಂತ್ರೋ ಜಪನೀಯಃ ಷಡಕ್ಷರಃ ॥೬೧॥

ಏವಂ ಪೂಜಾಽನ್ವಹಂ ಕಾರ್ಯಾ ತ್ರಿಷು ಕಾಲೇಷು ಸಾದರಂ ।
ನಿತ್ಯಾ ಪೂಜೇಯಮಮಲೇ ಭುಕ್ತಿಮುಕ್ತಿಫಲಪ್ರದಾ ॥೬೨॥

---

ಆಮೇಲೆ ಬಗೆಬಗೆಯ ಬಿಲ್ವಪತ್ರೆ ಮತ್ತು ಹೂವುಗಳಿಂದ ಪುನಃ ನನ್ನನ್ನು ಆದರಪೂರ್ವಕವಾಗಿ ಪೂಜೆಮಾಡಬೇಕು. ॥೫೮॥

ಅನಂತರ ಸ್ತೋತ್ರಾರ್ಹನಾದ ನನ್ನನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸಬೇಕು. ಆಮೇಲೆ ನಿಯಮದಿಂದ ಛತ್ರಿ, ಚಾಮರ, ಕನ್ನಡಿ ಮೊದಲಾದವುಗಳನ್ನು ನನಗೆ ಸಮರ್ಪಿಸಿ, ಪುನಃ ನಮಸ್ಕಾರಮಾಡಿ, ನನ್ನನ್ನು ಕ್ಷಮಿಸು ಎಂದು ಧ್ಯಾನಮಾಡುತ್ತಾ ಮುಟ್ಟಬೇಕು. ಮಂಗಳಾಂಗಿಯೇ, ಸ್ಪರ್ಶಮಾಡಿದ ನಂತರ ಪುನಃ ಈ ಶಿವಪಂಚಾಕ್ಷರಿಯನ್ನೇ ಪಠಿಸಬೇಕು. ॥೫೯-೬೦॥

"ಅಯಂ ಮೇ ಹಸ್ತ" ಎಂಬ ಮಂತ್ರಪೂರ್ವಕವಾಗಿ ಅಂಗೈಯಿಂದ ನನ್ನನ್ನು ಮುಟ್ಟಿ, ಅನಂತರ "ಓಂ ನಮಃ ಶಿವಾಯ" ಎಂಬ ಷಡಕ್ಷರಮಂತ್ರವನು ನೂರೆಂಟು ಸಲ ಜಪಮಾಡಬೇಕು. ॥೬೧॥

ಹೀಗೆ ಪ್ರತಿದಿನವೂ ಮೂರು ಕಾಲಗಳಲ್ಲಿಯೂ (ಪ್ರಾತಃ ಮಧ್ಯಾಹ್ನ ಸಾಯಂ ಕಾಲಗಳಲ್ಲಿಯೂ) ಆದರಪೂರ್ವಕವಾಗಿ ನನ್ನ ಪೂಜೆಯನ್ನು ಮಾಡಬೇಕು. ಎಲೌ ಪರಿಶುದ್ಧಳಾದ ದೇವಿಯೇ, ಇದು ನಿತ್ಯವಾದ ಪೂಜೆಯು. ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಮೋಕ್ಷವನ್ನೂ ಕೊಡಬಲ್ಲುದು. ॥೬೨॥

ಪ್ರಾತಃ ಸಂಧ್ಯಾಂ ವಿಧಾಯಾದೌ ಪೂಜನೀಯೋಽಸ್ಮಹಂ ಶಿವಃ ।
ಕಾರ್ಯಮನ್ಯನ್ನ ಕರ್ತವ್ಯಂ ಮಾಮನಭ್ಯರ್ಚ್ಯ ಸರ್ವಥಾ ॥೬೩॥

ಏವಂ ಪ್ರಯತ್ನತಃ ಕಾರ್ಯಂ ಶಕ್ತೇನ ಮಮ ಪೂಜನಂ ।
ಯಥಾಕಥಂಚಿತ್ಕರ್ತವ್ಯಂ ಅಶಕ್ತೇನಾಪಿ ಸರ್ವದಾ ॥೬೪॥

ನ ಪೇಯಂ ಜಲಮಪ್ಯಾದೌ ಮಾಮನಭ್ಯರ್ಚ್ಯ ಸರ್ವಥಾ ।
ಪಿಬೇದ್ಯದಿ ಪ್ರಮಾದೇನ ರೇತಃ ಪಾಯೀ ಭವಿಷ್ಯತಿ ॥೬೫॥

ಅಸತ್ಕುಲಪ್ರಸೂತಾನಾಮಭಾಗ್ಯಾನಾಂ ದುರಾತ್ಮನಾಂ ।
ನಿತ್ಯಂ ಮದರ್ಚನೇ ಶ್ರದ್ಧಾ ಕಲೌ ತು ನ ಭವಿಷ್ಯತಿ ॥೬೬॥

ಅನ್ಯಕರ್ಮರತಾ ದುಷ್ಟಾ ವೇದಮಾರ್ಗವಿವರ್ಜಿತಾಃ ।
ದ್ವಿಜಾಃ ಕಲೌ ಭವಿಷ್ಯಂತಿ ಶಿವಪೂಜಾಪರಾಙ್ಮುಖಾಃ ॥೬೭॥

---

ಮೊದಲು ಬೆಳಗಿನ ಸಂಧ್ಯಾವಂದನ ಕರ್ಮವನ್ನು ಮುಗಿಸಿ, ಅನಂತರ ಪ್ರತಿದಿನವೂ ಪರಶಿವನೆನಿಸಿದ ನನ್ನನ್ನು ಪೂಜೆಮಾಡಬೇಕು. ನನ್ನ ಪೂಜೆಮಾಡದೇ ಎಂದಿಗೂ ಬೇರೆ ಕೆಲಸ ಮಾಡಬಾರದು. ॥೬೩॥

ಶಕ್ತಿಯಿದ್ದವನು ಈರೀತಿ ನಿಯಮಕ್ಕೊಳಪಟ್ಟು ಪ್ರಯತ್ನಪೂರ್ವಕವಾಗಿ ನನ್ನನ್ನು ಪೂಜಿಸಬೇಕು. ಒಂದುವೇಳೆ ಶಕ್ತಿಯಿಲ್ಲದಿದ್ದರೆ ಅವನವನ ಯೋಗ್ಯತಾನುಸಾರವಾಗಿಯಾದರೂ ಆಗಾಗ ಪೂಜೆಮಾಡಬೇಕು. ॥೬೪॥

ನನ್ನನ್ನು ಪೂಜೆಮಾಡದೇ ಮೊದಲು ಎಂದಿಗೂ ನೀರನ್ನೂ ಸಹ ಕುಡಿಯಬಾರದು. ಅಜ್ಞಾನದಿಂದ ಒಂದುವೇಳೆ ಕುಡಿದದ್ದಾದರೆ ಆತನು ರೇತಸ್ಸನ್ನು ಪಾನಮಾಡಿದಂತೆಯೇ ಸರಿ. ॥೬೫॥

ಹೀನವಂಶದಲ್ಲಿ ಜನಿಸಿದ ನಿರ್ಭಾಗ್ಯರಾದ ದುಷ್ಟಜನರಿಗೆ ಈ ಕಲಿಯುಗದಲ್ಲಿ ನನ್ನನ್ನು ಪೂಜೆಮಾಡುವ ವಿಷಯದಲ್ಲಿ ನಂಬಿಕೆಯುಂಟಾಗುವುದಿಲ್ಲ. ॥೬೬॥

ಈ ಕಲಿಯುಗದಲ್ಲಿ ವೇದಮಾರ್ಗವನ್ನು ಬಿಟ್ಟು ಇತರ ದುಷ್ಟಮಾರ್ಗಗಳಲ್ಲಿ ಕಾಲಿಟ್ಟು ಬೇರೆ ಕರ್ಮಾನುಷ್ಠಾನತತ್ಪರರಾಗಿ ಮಾನವರು ಆ ಪರಶಿವನ ಪೂಜೆಯಲ್ಲಿ ಅನುರಕ್ತರಾಗದೇ ಹಿಂದೆಗೆಯುತ್ತಿರುವರು. ಅಲ್ಲದೇ ಬ್ರಾಹ್ಮಣೋತ್ತಮರು

ಅರ್ಚ್ಯಂ ಶಿವಮನರ್ಚ್ಯಾನಾಮನರ್ಚ್ಯಾರ್ಚನತತ್ಪರಾಃ ।
ದ್ವಿಜಾಃ ಕಲೌ ಭವಿಷ್ಯಂತಿ ಶಿವಪೂಜಾ ಪರಾಙ್ಮುಖಾಃ ॥೬೮॥

ಶಿವಮರ್ಚ್ಯಮನರ್ಚ್ಯಾನ್ಯಮನರ್ಚ್ಯಂ ಯೋಽರ್ಚಯಿಷ್ಯತಿ ।
ಸ ಜಾರಜ ಇತಿ ಜ್ಞೇಯೋ ವೇದಮಾರ್ಗಬಹಿಷ್ಕೃತಃ ॥೬೯॥

ಅರ್ಚ್ಯೋಽಹಮೇವ ಸರ್ವೇಷು ವೇದೇಷ್ವಹರಹೋಽಗ್ರತಃ ।
ತತೋಽರ್ಚ್ಯಸ್ಯ ಮಹೇಶಸ್ಯ ಪೂಜಾಕಾರ್ಯಾ ಮಮೈವ ಹಿ ॥೭೦॥

ಮದರ್ಚನಪರೋ ನಿತ್ಯಂ ಯಸ್ತ್ರಿಕಾಲಂ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೧॥

ಭಸ್ಮೋದ್ಧೂಲನಸಕ್ತೋಯಸ್ತ್ರಿಕಾಲಂ ಚ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೨॥

---

ಪೂಜಾರ್ಹನಾದ ಆ ಶಿವನನ್ನು ಪೂಜೆಮಾಡದೇ ಪೂಜಾರ್ಹರಲ್ಲದ ಇತರ ದೇವತೆಗಳನ್ನೇ ಪೂಜಿಸುವುದರಲ್ಲಿ ನಿರತರಾಗಿ ಆ ಪರಶಿವನ ಪೂಜೆಯಲ್ಲಿಯೇ ಹಿಂದೆಗೆಯುತ್ತಿರುವರು. ॥೬೭-೬೮॥

ಪೂಜಾರ್ಹನಾದ ಶಿವನನ್ನು ಪೂಜೆಮಾಡದೇ ಪೂಜಾಽನರ್ಹರಾದ ಇತರ ದೇವತೆಗಳನ್ನು ಪೂಜೆಮಾಡುವವನು- ವ್ಯಭಿಚಾರದಿಂದ ಹುಟ್ಟಿದವನೆನಿಸಿ, ವೇದಮಾರ್ಗಗಳಿಂದ ಬಹಿಷ್ಕೃತನಾಗುವನು. ॥೬೯॥

ಸಕಲ ವೇದಗಳೂ ಹಗಲೂ ರಾತ್ರಿ ಎಡಬಿಡದೇ, ಪೂಜಾರ್ಹನಾಗಿರುವವನು ನಾನೇ ಎಂದು ಹೇಳಿರುವುದರಿಂದ, ಮಹೇಶ್ವರನೆನಿಸಿದ ನನ್ನ ಪೂಜೆಯನ್ನೇ ಎಲ್ಲರೂ ಮಾಡಬೇಕು. ॥೭೦॥

ಎಲೌ ಪ್ರೀತಿಪಾತ್ರಳೇ, ಮೂರು ಕಾಲಗಳಲ್ಲಿಯೂ ತಪ್ಪದೇ ನಿತ್ಯವೂ ನನ್ನ ಪೂಜೆಯಲ್ಲಿ ನಿರತನಾಗಿರುವವನನ್ನು ನಾನು ಉದ್ಧಾರಮಾಡುವೆನೆಂದು ಪ್ರತಿಜ್ಞೆ ಮಾಡಿರುವೆನು. ॥೭೧॥

ಪ್ರಿಯೇ, ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿಕೊಳ್ಳುವವನನ್ನೂ, ಮತ್ತು ಹಣೆ ತೋಳು ಮೊದಲಾದ ಪ್ರದೇಶಗಳಲ್ಲಿ ಭಸ್ಮತ್ರಿಪುಂಡ್ರಧಾರಣೆಮಾಡಿಕೊಳ್ಳುವುದರಲ್ಲಿ ನಿರತನಾಗಿರುವವನನ್ನೂ,

ತ್ರಿಪುಂಡ್ರಧಾರಣಾಸಕ್ತೋ ಯಸ್ತ್ರಿಕಾಲಂ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೩॥

ಪಂಚಾಕ್ಷರಜಪಾಸಕ್ತೋ ಯಸ್ತ್ರಿಕಾಲಂ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೪॥

ಮದೇಕಶರಣೋ ನಿತ್ಯಂ ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೫॥

ಮತ್ಕಥಾಶ್ರವಣಾಸಕ್ತೋ ಮನ್ಮನಾ ಯೋ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೬॥

ಮದ್ಭಕ್ತ್ಯಾ ಸತತಂ ಯುಕ್ತೋ ಯೋ ಮದ್ಯಾಜೀವಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೭॥

ಮಾಮೇವ ಸತತಂ ಧ್ಯಾತ್ವಾ ಯಸ್ತು ಹೃಷ್ಟೋ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೮॥

---

ನಾನು ಉನ್ನತವಾದ ಪದವಿಗೆ ಒಯ್ಯಲು ಅಪೇಕ್ಷೆಪಡುವೆನು. ಇದು ನನ್ನ ಪ್ರತಿಜ್ಞೆಯು. ॥೭೨-೭೩॥

ಪ್ರೇಯಸಿಯೇ, ಮೂರು ಕಾಲಗಳಲ್ಲಿಯೂ ಶಿವಪಂಚಾಕ್ಷರ ಮಹಾಮಂತ್ರ ಜಪಮಾಡುವುದರಲ್ಲಿ ತತ್ಪರನಾಗಿರುವವನನ್ನೂ, ಅನವರತವೂ ನನ್ನನ್ನೇ ರಕ್ಷಕನೆಂದು ತಿಳಿದು ನನ್ನನ್ನೇ ಪೂಜೆಮಾಡುವವನನ್ನೂ ನಾನು ಉದ್ಧಾರಮಾಡಲು ಅಪೇಕ್ಷಿಸುವೆನು. ಇದು ನನ್ನ ಪ್ರತಿಜ್ಞೆಯು. ॥೭೪-೭೫॥

ಪ್ರಿಯೇ, ಯಾವಾಗಲೂ ನನ್ನಲ್ಲೇ ಮನಸ್ಸಿಟ್ಟು ನನ್ನ ಕಥೆಯನ್ನು ಕೇಳುವುದರಲ್ಲಿಯೇ ಆಸಕ್ತನಾಗಿರುವವನನ್ನೂ ಯಾವಾಗಲೂ ನನ್ನಲ್ಲಿಯೇ ಭಕ್ತಿಯಿಟ್ಟು ನನ್ನಿಂದಲೇ ಜೀವಿಸುವವನನ್ನೂ ನಾನು ಉದ್ಧಾರಮಾಡಲು ಇಚ್ಛಿಸುವೆನು. ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೭೬-೭೭॥

ಪ್ರಿಯೆ, ನನ್ನನ್ನೇ ಯಾವಾಗಲೂ ಧ್ಯಾನಿಸುತ್ತಾ ಸಂತೋಷಹೊಂದುವವನನ್ನೂ ರುದ್ರಾಧ್ಯಾಯವನ್ನುಚ್ಚಾರಮಾಡುತ್ತಾ ಶಿವಲಿಂಗಕ್ಕೇ ಅಭಿಷೇಕಮಾಡು

ರುದ್ರಾಧ್ಯಾಯೇನ ಸತತಂ ಯೋ ಮಾಂ ಸಂಸ್ನಾಪಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೭೯॥

ಬಿಲ್ವಪತ್ರೈಸ್ತ್ರಿಶಾಖೈರ್ಮಾಂ ಯೋ ನಿತ್ಯಂ ಪೂಜಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೦॥

ಅರ್ಚಯಿಷ್ಯತಿ ಯೋ ನಿತ್ಯಮಖಂಡೈಃ ಶಾಲಿತಂಡುಲೈಃ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೧॥

ಯಸ್ತು ನಿತ್ಯಂ ತಿಲೈಃ ಕೃಷ್ಣೈಃ ಶ್ವೇತೈರ್ವಾ ಪೂಜಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೨॥

ಯವೈರ್ಯಃ ಸತತಂ ಭಕ್ತ್ಯಾ ಪೂಜಯಿಷ್ಯತಿ ಮಾಮಜಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೩॥

ಗೋಧೂಮೈಶ್ಚಣಕೈರ್ಮಾಷೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೪॥

ಅಸಿತೈರ್ವಾ ಸಿತೈರ್ವಾಪಿ ಮಾಂ ಸಿದ್ಧಾರ್ಥೈರ್ಯೋಽರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೫॥

---

ವವನನ್ನೂ ನಾನು ಉದ್ಧಾರಮಾಡುವುದಕ್ಕೆ ಅಪೇಕ್ಷಿಸುತ್ತೇನೆ. ಇದು ನನ್ನ ಪ್ರತಿಜ್ಞೆಯೆಂದು ತಿಳಿ. ||೭೮-೭೯||

ಮೂರು ದಳಗಳುಳ್ಳ ಬಿಲ್ವಪತ್ರೆಗಳಿಂದಲೂ, ತುಂಡಾಗದ ಅಕ್ಕಿಯಿಂದ ಮಾಡಿದ ಮಂತ್ರಾಕ್ಷತೆಗಳಿಂದಲೂ ನನಗೆ ನಿತ್ಯವೂ ಪೂಜೆ ಸಲ್ಲಿಸುವವರನ್ನು ನಾನು ಉದ್ಧಾರಮಾಡುವುದೇ ನನ್ನ ಇಚ್ಛೆ. ಅದು ನನ್ನ ಪ್ರತಿಜ್ಞೆ. ||೮೦-೮೧||

ಪ್ರಿಯೇ, ಕಪ್ಪು ಎಳ್ಳು ಅಥವ ಬಿಳಿಯ ಎಳ್ಳು, ಯವಧಾನ್ಯ ಇವುಗಳಿಂದ ಭಕ್ತಿಪೂರ್ವಕವಾಗಿ ಉತ್ಪತ್ತಿರಹಿತನಾದ ನನ್ನನ್ನು ನಿತ್ಯವೂ ಪೂಜಿಮಾಡುವವನನ್ನು ನಾನು ಉನ್ನತಪದವಿಗೆ ಏರಿಸಲು ಅಪೇಕ್ಷೆಪಡುವೆನು. ಇದು ನನ್ನ ಪ್ರತಿಜ್ಞೆ. ||೮೨-೮೩||

ನಿತ್ಯವೂ ಗೋಧಿ, ಕಡಲೆ, ಉದ್ದು, ಕಪ್ಪು ಅಥವಾ ಬಿಳಿಯ ಸಾಸುವೆ

ನೀವಾರತಂಡುಲೈಃ ಸಾಗ್ರ್ಯೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೬॥

ಶ್ಯಾಮಾಕತಂಡುಲೈರ್ನಿತ್ಯಂ ಯೋಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೭॥

ಪ್ರಿಯಂಗುತಂಡುಲೈರ್ನಿತ್ಯಂ ಯೋಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೮

ರತ್ನೈರ್ಮುಕ್ತಾಫಲೈರ್ಯೋ ಮಾಂ ಶಿವಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೮೯॥

ನಿತ್ಯಂ ಸುವರ್ಣಪುಷ್ಪೈರ್ಮಾಂ ಯೋಽರ್ಚಯಿಷ್ಯತಿ ಭಕ್ತಿತಃ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೦॥

ನಿತ್ಯಂ ಚಂಪಕಪುಷ್ಪೈರ್ಮಾಂ ಯೋಽರ್ಚಯಿಷ್ಯತಿ ಸಾದರಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೧॥

---

ಇವುಗಳಿಂದ ನನ್ನನ್ನು ಪೂಜೆಮಾಡುವ ಮಾನವನನ್ನು ನಾನು ಶ್ರೇಷ್ಠಪದವಿಗೆ ಹೊಂದಿಸಲು ಅಪೇಕ್ಷಿಸುವೆನು. ಇದು ನನ್ನ ಪ್ರತಿಜ್ಞೆ. ॥೮೪-೮೫॥

ತುದಿಮುರಿಯದ ನವಣೆ ಅಕ್ಕಿಯಿಂದಲೂ ಹಾರಕಧಾನ್ಯದ ಅಕ್ಕಿಗಳಿಂದಲೂ ನಿತ್ಯವೂ ನನ್ನನ್ನು ಪೂಜೆಮಾಡುವವನನ್ನು ನಾನು ಉದ್ಧಾರಮಾಡಲು ಅಪೇಕ್ಷಿಸುತ್ತೇನೆ. ಇದು ನನ್ನ ಪ್ರತಿಜ್ಞೆಯಾಗಿರುವುದು. ॥೮೬-೮೭॥

ಪ್ರಿಯಂಗುವೆಂಬ ನವಣೆ ಅಕ್ಕಿಗಳಿಂದಲೂ, ರತ್ನ, ಮುತ್ತುಗಳಿಂದಲೂ ಶಿವನೆನಿಸಿದ ನನ್ನನ್ನು ನಿತ್ಯವೂ ಭಕ್ತಿಯಿಂದ ಪೂಜೆಮಾಡುವವನನ್ನು ನಾನು ಉದ್ಧಾರಮಾಡಲು ಬಯಸುವೆನು. ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೮೮-೮೯॥

ಪ್ರಿಯೇ, ನಿತ್ಯವೂ ಚಿನ್ನದ ಹೂಗಳಿಂದಲೂ ಸಂಪಿಗೆ ಹೂಗಳಿಂದಲೂ ಭಕ್ತಿ ಮತ್ತು ಆದರಪೂರ್ವಕವಾಗಿ ನನ್ನನ್ನು ಪೂಜೆಮಾಡುವವನನ್ನು ನಾನು ಉದ್ಧಾರಮಾಡಲು ಅಪೇಕ್ಷಿಸುವೆನು. ಇದು ನನ್ನ ಪ್ರತಿಜ್ಞೆ. ॥೯೦-೯೧॥

ನಿತ್ಯಂ ಕುಶೇಶಯೈರ್ಯೋ ಮಾಂ ಶಿವಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೨॥

ಕಮಲೈರಮಲೈರ್ಭಕ್ತ್ಯಾ ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೩॥

ನೀಲೋತ್ಪಲೈಃ ಪುಂಡರೀಕೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೪॥

ಕಲ್ಹಾರೈಃ ಪರಯಾ ಭಕ್ತ್ಯಾ ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೫॥

ಪುನ್ನಾಗೈಃ ಸತತಂ ಭಕ್ತ್ಯಾ ಯೋಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೬॥

ಶತಪತ್ರೈರನರ್ಘ್ಯೈರ್ಮಾಂ ಯೋಽರ್ಚಯಿಷ್ಯತಿ ಸಾದರಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೭॥

ಕದಂಬಪುಷ್ಪೈರಮಲೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮಪ್ರಿಯೇ ॥೯೮॥

---

ಪ್ರಿಯೇ, ನೂರು ದಳಗಳುಳ್ಳ ಕಮಲಗಳಿಂದಲೂ ಪರಿಶುದ್ಧವಾದ ತಾವರೆ ಹೂಗಳಿಂದಲೂ ಶಿವನೆನಿಸಿದ ನನ್ನನ್ನು ಭಕ್ತಿಯಿಂದ ಪೂಜೆಮಾಡುವವನನ್ನು ನಾನು ಉದ್ಧಾರಮಾಡಲು ಅಪೇಕ್ಷಿಸುತ್ತೇನೆ. ಇದು ನನ್ನ ಪ್ರತಿಜ್ಞೆ. ॥೯೨-೯೩॥

ಪ್ರಿಯೇ, ಕನ್ನೈದಿಲೆ ಹೂಗಳಿಂದಲೂ, ಕಮಲಪುಷ್ಪಗಳಿಂದಲೂ ಮತ್ತು ಕಲ್ಹಾರಪುಷ್ಪಗಳಿಂದಲೂ ಸಹ ನನ್ನನ್ನು ವಿಶೇಷ ಭಕ್ತಿಯಿಂದ ಪೂಜೆಮಾಡು ವವನನ್ನು ನಾನು ಉದ್ಧಾರಮಾಡುತ್ತೇನೆ. ಇದು ನನ್ನ ಪ್ರತಿಜ್ಞೆ. ॥೯೪-೯೫॥

ಪ್ರಿಯೇ, ಪುಂನಾಗ ಮತ್ತು ನಾಗಸಂಪಿಗೆ ಹೂಗಳಿಂದಲೂ, ಅಮೂಲ್ಯವಾದ ನೂರುದಳಗಳ ಕಮಲಗಳಿಂದಲೂ ಅನವರತವೂ ಭಕ್ತಿಯಿಂದಲೂ ಆದರದಿಂದಲೂ ನನ್ನನ್ನು ಪೂಜೆಮಾಡುವವನನ್ನು ನಾನು ಉದ್ಧಾರಮಾಡುತ್ತೇನೆ. ಇದು ನನ್ನ ಪ್ರತಿಜ್ಞೆ. ॥೯೬-೯೭॥

ಪ್ರಿಯೆ, ನಿರ್ಮಲವಾದ ಕದಂಬಕುಸುಮಗಳಿಂದಲೂ, ನಾಗಸಂಪಿಗೆ ಹೂಗ

ನಾಗಚಂಪಕಪುಷ್ಪೈರ್ಮಾಂ ಯೋಽರ್ಚಯಿಷ್ಯತಿ ಸಾದರಂ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೯೯॥

ಸಿತಾಽಸಿತೈಃ ಪಾರಿಜಾತೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ॥೧೦೦॥

ಅರ್ಚಯಿಷ್ಯತಿ ಮಾಂ ಯಸ್ತು ಕರವೀರೈಃ ಸಿತಾಸಿತೈಃ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ॥೧೦೧॥

ವಿವಿಧೈರ್ಮಲ್ಲಿಕಾಪುಷ್ಪೈರ್ಯೋಽರ್ಚಯಿಷ್ಯತಿ ಸಾದರಂ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೨॥

ಧತ್ತೂರಕುಸುಮೈಃ ಶುದ್ಧೈರ್ಯೋಽರ್ಚಯಿಷ್ಯತಿ ಸಾದರಂ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೩॥

ವಿವಿಧೈರರ್ಕಪುಷ್ಪೈರ್ಮಾಂ ಯೋಽರ್ಚಯಿಷ್ಯತಿ ಭಕ್ತಿತಃ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ॥೧೦೪॥

ದ್ರೋಣಪುಷ್ಪೈಃ ಶಮೀಪುಷ್ಪೈರ್ಯೋಽರ್ಚಯಿಷ್ಯತಿ ಸಾದರಂ ।
ತಮುದ್ಧರ್ತುಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೫॥

---

ಳಿಂದಲೂ ನಿತ್ಯವೂ ಆದರದಿಂದ ನನ್ನನ್ನು ಪೂಜೆಮಾಡುವವನನ್ನು ನಾನು ಉದ್ಧಾರ ಮಾಡುತ್ತೇನೆ. ಇದು ನನ್ನ ಪ್ರತಿಜ್ಞೆ. ॥೯೮-೯೯॥

ಬಿಳುಪು ಮತ್ತು ಮಾಸಲುಬಣ್ಣದ ಪಾರಿಜಾತ ಮತ್ತು ಕರವೀರ (ಕಣಿಗಲೆ) ಈ ಹೂಗಳಿಂದ ನನ್ನನ್ನು ನಿತ್ಯವೂ ಪೂಜೆಮಾಡುವವರನ್ನು ನಾನು ಉದ್ಧಾರಮಾಡು ತ್ತೇನೆ. ಇದು ನನ್ನ ಪ್ರತಿಜ್ಞೆಯಾಗಿರುವುದು. ॥೧೦೦-೧೦೧॥

ಪ್ರಿಯೇ, ನಾನಾವಿಧವಾದ ಮಲ್ಲಿಗೆ ಹೂಗಳಿಂದಲೂ, ಶುದ್ಧವಾದ ಧತ್ತೂರೀ ಹೂಗಳಿಂದಲೂ ಆದರಪೂರ್ವಕವಾಗಿ ನನ್ನನ್ನು ಯಾವಾಗಲೂ ಪೂಜಿಸುವವನನ್ನು ನಾನು ಉದ್ಧಾರಮಾಡಲು ಅಪೇಕ್ಷಿಸುತ್ತೇನೆ. ಇದು ನನ್ನ ಪ್ರತಿಜ್ಞೆ. ॥೧೦೨-೧೦೩॥

ಬಗೆಬಗೆಯ ಎಕ್ಕದ ಹೂಗಳಿಂದಲೂ, ಕಂಚುವಾಳ, ಬನ್ನೀ ಈ ಹೂವು ಗಳಿಂದಲೂ ಆದರದಿಂದ ನನ್ನನ್ನು ಪೂಜೆಮಾಡುವವನನ್ನು ನಾನು ಉದ್ಧಾರ ಮಾಡುವೆನು. ಇದು ನನ್ನ ಪ್ರತಿಜ್ಞೆ. ॥೧೦೪-೧೦೫॥

ಯಸ್ತು ದಾಡಿಮಪುಷ್ಪೈರ್ಮಾಂ ಸಾಂಬಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೬॥

ನಿತ್ಯಮರ್ಜುನಪುಷ್ಪೈರ್ಮಾಂ ಯೋಽರ್ಚಯಿಷ್ಯತಿ ಸಾದರಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೭॥

ಯಸ್ತು ಕಂದಲಪುಷ್ಪೈರ್ಮಾಂ ನಿತ್ಯಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೮॥

ಯೋ ವಿಷ್ಣುಕ್ರಾಂತಕುಸುಮೈರ್ನಿತ್ಯಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೦೯॥

ಯೋ ನಿತ್ಯಂ ಬೃಹತೀಪುಷ್ಪೈರ್ಮಾಮೀಶಂ ಪೂಜಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೦॥

ಜಂಬೂಪುಷ್ಪೈರಾಮ್ರಪುಷ್ಪೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೧॥

ಯಸ್ತು ವೇಶಸಪುಷ್ಪೈರ್ಮಾಂ ಸಾದರಂ ಪೂಜಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೨॥

---

ಪ್ರೇಯಸಿಯೇ, ದಾಳಿಂಬಹೂಗಳಿಂದಲೂ ಅರ್ಜುನಪುಷ್ಪಗಳಿಂದಲೂ ಅಂಬಿಕಾರಮಣನಾದ ನನ್ನನ್ನು ಆದರದಿಂದ ಪೂಜೆಮಾಡುವವನನ್ನು ನಾನು ಉದ್ಧಾರಮಾಡುತ್ತೇನೆ. ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೦೬-೧೦೭॥

ಕಂದಲಪುಷ್ಪಗಳಿಂದಲೂ, ವಿಷ್ಣುಕ್ರಾಂತಿಪುಷ್ಪಗಳಿಂದಲೂ ನನ್ನನ್ನು ಆದರವಿಟ್ಟು ನಿತ್ಯವೂ ಪೂಜೆಮಾಡುವವನನ್ನು ನಾನು ಅವಶ್ಯವಾಗಿ ಉದ್ಧಾರಮಾಡುವೆನು. ಇದು ನನ್ನ ಪ್ರತಿಜ್ಞೆಯಾಗಿರುವುದು. ॥೧೦೮-೧೦೯॥

ಬೃಹತೀಪುಷ್ಪಗಳಿಂದಲೂ, ನೇರಲೆಹೂವು, ಮಾವಿನಹೂವು ಇವುಗಳಿಂದಲೂ ನನ್ನನ್ನು ನಿತ್ಯವೂ ಭಕ್ತಿಯಿಂದ ಪೂಜೆಮಾಡುವವನನ್ನು ನಾನು ಅವಶ್ಯವಾಗಿ ಉದ್ಧಾರಮಾಡುವೆನು. ಇದೇ ನನ್ನ ಪ್ರತಿಜ್ಞೆಯು. ॥೧೧೦-೧೧೧॥

ನಿತ್ಯವೂ ಜೊಂಡಿನ ಹೂಗಳಿಂದಲೂ ಕುಶ, ಕಾಶಗಳೆಂಬ ತೃಣಪುಷ್ಪಗಳಿಂ

ಕುಶಪುಷ್ಪೈಃ ಕಾಶಪುಷ್ಪೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೩॥

ಬಂಧೂಕಪುಷ್ಪೈರಮಲೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೪॥

ಪಲಾಶಪುಷ್ಪೈರಮಲೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೫॥

ಯೋ ಲೋಧ್ರಪುಷ್ಪೈರಮಲೈರರ್ಚಯಿಷ್ಯತಿ ಮಾಮಜಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೬॥

ಜಪಾಮ್ರತುಲಸೀಪತ್ರೈರ್ಯೋಽರ್ಚಯಿಷ್ಯತಿ ಮಾಮಜಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೭॥

ನಾರೀಕೇಲಫಲೈರ್ಯಸ್ತು ಮಾಮರ್ಚಯತಿ ಸಾದರಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೮॥

---

ದಲೂ ನನ್ನನ್ನು ಆದರದಿಂದ ಪೂಜೆಮಾಡುವ ಭಕ್ತನನ್ನು ನಾನು ಅವಶ್ಯವಾಗಿ ಉದ್ಧಾರಮಾಡುತ್ತೇನೆ. ಇದು ನನ್ನ ಪ್ರತಿಜ್ಞೆ. ॥೧೧೨-೧೧೩॥

ನಿರ್ಮಲವಾದ ಬಿಂದಿಗೆಹೂಗಳಿಂದಲೂ, ಪರಿಶುದ್ಧವಾದ ಮುತ್ತುಗದ ಹೂಗಳಿಂದಲೂ ನಿತ್ಯವೂ ನನ್ನನ್ನು ಪೂಜೆಮಾಡುವವನನ್ನು ನಾನು ಉದ್ಧಾರ ಮಾಡಲು ಅಪೇಕ್ಷಿಸುವೆನು. ಪ್ರಿಯೆ, ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೧೪-೧೧೫॥

ನಿರ್ಮಲವಾದ ಕೆಂಪುಗೋರಂಟೆ ಹೂಗಳಿಂದಲೂ, ದಾಸವಾಳದ ಹೂವು, ಮಾವಿನಹೂವು, ತುಲಸೀಪತ್ರೆ ಇವುಗಳಿಂದಲೂ ಉತ್ಪತ್ತಿರಹಿತನಾದ ನನ್ನನ್ನು ನಿತ್ಯವೂ ಪೂಜೆಮಾಡುವವನನ್ನು ನಾನು ಉತ್ತಮವಾದ ಸದ್ಗತಿಗೆ ಕಳುಹಿಸಲು ಅಪೇಕ್ಷಿಸುವೆನು. ಪ್ರಿಯೇ! ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೧೬-೧೧೭॥

ತೆಂಗಿನಕಾಯಿಗಳಿಂದಲೂ, ದಮನಕಫಲಗಳಿಂದಲೂ ಆದರಪೂರ್ವಕವಾಗಿ ನನ್ನನ್ನು ನಿತ್ಯವೂ ಪೂಜೆಮಾಡುವವನನ್ನು ನಾನು ಊರ್ಧ್ವಲೋಕಕ್ಕೆ ಕರೆ

ಪೂಜಯಿಷ್ಯತಿ ಯೋ ಭಕ್ತ್ಯಾ ನಿತ್ಯಂ ದಮನಕೇನ ಮಾಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೧೯॥

ಪೂಜಯಿಷ್ಯತಿ ಮಾಂ ಯಸ್ತು ಜಂಬ್ವಾಮ್ರಬದರೀಫಲೈಃ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೦॥

ಪಕ್ವದಾಡಿಮಬೀಜೈರ್ಮಾಂ ಶುದ್ಧೈರ್ಯೋಽಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೧॥

ಯೋ ಮಾಂ ದ್ರಾಕ್ಷಾಫಲೈರೀಶಮಭ್ಯರ್ಚಯತಿ ಸಾದರಂ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೨॥

ಪೂಜಯಿಷ್ಯತಿ ಮಾಂ ಭಕ್ತ್ಯಾ ಯಃ ಪಕ್ವೈಃ ಕದಲೀಫಲೈಃ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೩॥

ದೂರ್ವಾಪಾಮಾರ್ಗದರ್ಭೈರ್ಮಾಂ ಭಕ್ತ್ಯಾ ಯೋಽಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೪॥

---

ದೊಯ್ಯಲು ಅಪೇಕ್ಷಿಸುವೆನು. ಪ್ರಿಯೆ! ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೧೮-೦೧೯॥

ನೇರಳೆ, ಮಾವು, ಬದರೀ (ಯಗಚೀ) ಹಣ್ಣುಗಳಿಂದಲೂ, ಪಕ್ವವಾದ ಶುದ್ಧ ದಾಳಿಂಬೇ ಹಣ್ಣಿನ ಬೀಜಗಳಿಂದಲೂ ನನ್ನನ್ನು ನಿತ್ಯವೂ ಪೂಜೆಮಾಡುವವನನ್ನು ನಾನು ಅವಶ್ಯವಾಗಿ ಉತ್ತಮವಾದ ಸದ್ಗತಿಯನ್ನು ಹೊಂದಿಸಲು ಅಪೇಕ್ಷಿಸುವೆನು. ಪ್ರೇಯಸಿಯೇ! ಇದು ನನ್ನ ಪ್ರತಿಜ್ಞೆಯೆಂದು ತಿಳಿಯುವಳಾಗು. ॥೧೨೦-೧೨೧॥

ದ್ರಾಕ್ಷಿಯ ಹಣ್ಣುಗಳಿಂದಲೂ, ಪಕ್ವವಾದ ಬಾಳೆಯ ಹಣ್ಣುಗಳಿಂದಲೂ ಈಶ್ವರನಾದ ನನ್ನನ್ನು ಭಕ್ತಿಯಿಂದ ಪೂಜೆಮಾಡುವವನನ್ನು ನಾನು ಊರ್ಧ್ವಲೋಕಕ್ಕೆ ಕರೆದೊಯ್ಯಲು ಅಪೇಕ್ಷಿಸುವೆನು. ಪ್ರಿಯೆ! ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೨೨-೧೨೩॥

ನಿತ್ಯವೂ ಗರಿಕೆ, ಅಪಾಮಾರ್ಗ, ದರ್ಭೆ, ಭೃಂಗರಾಜ, ಬನ್ನೀ ಈ ಪತ್ರೆಗಳಿಂದ ನನ್ನನ್ನು ಪೂಜೆಮಾಡುವವನನ್ನು ನಾನು ಊರ್ಧ್ವಲೋಕಕ್ಕೆ ಕರೆ

ಭೃಂಗರಾಜಶಮೀಪತ್ರ್ಯೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೫॥

ಪಥ್ಯನ್ನೇನಾಜ್ಯಯುಕ್ತೇನ ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೬॥

ಕ್ಷೀರಾನ್ನೇನಾಜ್ಯಯುಕ್ತೇನ ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೭॥

ಶರ್ಕರಾಘೃತಮಧ್ವನ್ನೈರ್ಯೋ ಮಾಮಭ್ಯರ್ಚಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೮॥

ಮದಾಲಯೇ ದೀಪಮಾಲಾಂ ಯಸ್ತು ನಿತ್ಯಂ ಕರಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೨೯॥

ಕರ್ಪೂರದೀಪದೋ ಯಸ್ತು ಮಹ್ಯಂ ಭಕ್ತ್ಯಾ ಭವಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೩೦॥

---

ದೊಯ್ಯಲು ಅಪೇಕ್ಷೆಪಡುವೆನು. ಪ್ರಿಯೆ, ಇದು ನನ್ನ ಪ್ರತಿಜ್ಞೆಯಾಗಿರುವುದು. ॥೧೨೪-೧೨೫॥

ತುಪ್ಪದಿಂದ ಮಿಶ್ರವಾದ ಮೊಸರನ್ನವನ್ನೂ, ಹಾಲನ್ನವನ್ನೂ ನಿವೇದನ ಮಾಡಿ ನನ್ನನ್ನು ಭಕ್ತಿಯಿಂದ ನಿತ್ಯವೂ ಪೂಜೆಮಾಡುವವನನ್ನು ನಾನು ಊರ್ಧ್ವ ಲೋಕಕ್ಕೆ ಒಯ್ಯಲು ಅಪೇಕ್ಷಿಸುತ್ತೇನೆ. ಪ್ರೇಯಸಿಯಾದ ದೇವಿಯೇ! ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೨೬-೧೨೭॥

ಸಕ್ಕರೆ, ತುಪ್ಪ ಮತ್ತು ಜೇನು ಇವುಗಳಿಂದ ಮಿಶ್ರಿತವಾದ ಅನ್ನಗಳನ್ನು ನಿವೇದನಮಾಡಿ, ನನ್ನನ್ನು ಭಕ್ತಿಯಿಂದ ಪೂಜೆಮಾಡುವವನನ್ನೂ ನನ್ನ ದೇವಾಲಯದಲ್ಲಿ ನಿತ್ಯವೂ ದೀಪಸಮೂಹಗಳನ್ನಿಡುವವನನ್ನೂ ನಾನು ಊರ್ಧ್ವಲೋಕಕ್ಕೆ ಒಯ್ಯಲು ಅಪೇಕ್ಷಿಸುವೆನು. ಪ್ರಿಯೇ! ಇದು ನನ್ನ ಪ್ರತಿಜ್ಞೆಯೆಂದು ತಿಳಿ. ॥೧೨೮-೧೨೯॥

ನಿತ್ಯವೂ ಭಕ್ತಿಯಿಂದ ನನಗೆ ಕರ್ಪೂರದ ದೀಪಗಳನ್ನು ಸಮರ್ಪಿಸುವವನನ್ನೂ, ತುಪ್ಪದೊಡನೆ ಮಿಶ್ರವಾದ ಗುಗ್ಗಲು ಧೂಪವನ್ನು ಹಾಕುವವನನ್ನೂ, ನಾನು

ಸಾಜ್ಯಗುಗ್ಗುಲುಧೂಪೇನ ಯೋ ಮಾಂ ಸಂಧೂಪಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೧೩೧॥

ಯಃ ಸಾಜ್ಯಾಗರುಧೂಪೇನ ನಿತ್ಯಂ ಮಾಂ ಧೂಪಯಿಷ್ಯತಿ ।
ತಮೂರ್ಧ್ವಂ ನೇತುಮಿಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ॥೧೩೨॥

ಆರ್ಯಾವರ್ತೇ ಪುರಾ ಕಶ್ಚಿದ್ಬ್ರಾಹ್ಮಣೋ ವೇದಪಾರಗಃ ।
ಭಸಿತೋದ್ಧೂಲಿತವಪುಸ್ತ್ರಿಪುಂಡ್ರಾಂಕಿತಮಸ್ತಕಃ ॥೧೩೩॥

ರುದ್ರಾಕ್ಷಮಾಲಾಭರಣಃ ಸಾಂಬಂ ಮಾಮಜಮೀಶ್ವರಂ ।
ಸಂಪೂಜ್ಯ ಬಿಲ್ವಪತ್ರಾದ್ಯೈರಾಲೋಕ್ಯ ಮುದಿತಃ ಸ್ಥಿತಃ ॥೧೩೪॥

ತದಾನೀಮಾಗತಃ ಕಶ್ಚಿನ್ಮದನ್ಯಸುರಪೂಜಕಃ ।
ಮೃದ್ಭೂಷಿತಲಲಾಟಾಂಗೋ ಭ್ರಾಂತೋ ಬ್ರಾಹ್ಮಣವಂಶಜಃ ॥೧೩೫॥

---

ಉತ್ತಮವಾದ ಊರ್ಧ್ವಲೋಕಕ್ಕೆ ಕರೆದೊಯ್ಯಲು ಅಪೇಕ್ಷಿಸುವೆನು. ಪ್ರಿಯೇ, ಇದು ನನ್ನ ಪ್ರತಿಜ್ಞೆ. ॥೧೩೦-೧೩೧॥

ತುಪ್ಪದಿಂದ ಯುಕ್ತವಾದ ಅಗರುವಿನ ಧೂಪದಿಂದ ನಿತ್ಯವೂ ನನಗೆ ಧೂಪ ಹಾಕುವವನನ್ನು ನಾನು ಊರ್ಧ್ವಲೋಕಕ್ಕೆ ಒಯ್ಯಲು ಅಪೇಕ್ಷೆಪಡುವೆನು. ಪ್ರಿಯೇ, ಇದು ನನ್ನ ಪ್ರತಿಜ್ಞೆಯಾಗಿರುವುದು. ॥೧೩೨॥

ಈ ಆರ್ಯಾವರ್ತದಲ್ಲಿ ಹಿಂದೆ ವೇದಪಾರಂಗತನಾದ ಒಬ್ಬ ಬ್ರಾಹ್ಮಣನಿದ್ದನು. ಆತನು ಭಸ್ಮವನ್ನು ಶರೀರಕ್ಕೆಲ್ಲಾ ಲೇಪನಮಾಡಿಕೊಂಡು, ಹಣೆಯಲ್ಲಿ ಭಸ್ಮ ತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಮಾಲೆಯನ್ನೇ ಆಭರಣವನ್ನಾಗಿ ಮಾಡಿಕೊಂಡು ಉತ್ಪತ್ತಿರಹಿತನೂ, ಐಶ್ವರ್ಯಭರಿತನೂ ಅಂಬಿಕಾಸಮೇತನೂ ಆದ ನನ್ನನ್ನು ಬಿಲ್ವಪತ್ರೆ ಮೊದಲಾದ ಸಾಧನಗಳಿಂದ ಪೂಜೆಮಾಡಿ, ಅನಂತರ ನನ್ನ ದರ್ಶನ ಮಾಡುತ್ತಾ ಸಂತೋಷದಿಂದ ಕಾಲಕಳೆಯುತ್ತಿದ್ದನು. ॥೧೩೩-೧೩೪॥

ಆಗ ನನ್ನನ್ನು ಬಿಟ್ಟು ಭ್ರಾಂತಿಯಿಂದ ಇತರ ವಿಷ್ಣ್ವಾದಿದೇವತೆಗಳನ್ನು ಪೂಜೆಮಾಡುವವನೂ, ಹಣೆ ಮತ್ತು ಇತರ ಅವಯವಗಳಿಗೆಲ್ಲಾ ಮಣ್ಣನ್ನು (ನಾಮ ಅಥವ ಗೋಪೀಚಂದನರೂಪವಾದ) ಧರಿಸಿರುವವನೂ ಆದ ಒಬ್ಬ ಬ್ರಾಹ್ಮಣವಂಶೋತ್ಪನ್ನನು ಅಲ್ಲಿಗೆ ಬಂದನು. ॥೧೩೫॥

ಸ ವೇದವಿತ್ತಮೋ ವಿಪ್ರಸ್ತಂ ದೃಷ್ಟ್ವಾ ಮೂಢಚೇತಸಂ ।
ಧೈರ್ಯಂ ಕೃತ್ವಾ ಕಿಯತ್ಕಾಲಂ ತೃಣಪಾಣಿರುವಾಚ ತಂ ॥೧೩೬॥

॥ ವಿಪ್ರ ಉವಾಚ ॥

ಮೃನ್ಮರ್ದಿತಲಲಾಟಾಂಗ ಗಚ್ಛ ದುರ್ಮುಖ ದೂರತಃ ।
ಮಾದರ್ಶಯ ಮುಖಂ ಮಹ್ಯಂ ಶಿವವಂಚಿತ ದುರ್ಭಗ ॥೧೩೭॥

ಭಸ್ಮಾಲಯಮಿತಿ ಪ್ರೋಕ್ತಂ ಲಲಾಟಂ ವೇದವಿತ್ತಮೈಃ ।
ತದ್ಭಸ್ಮಲೇಪನಾಯಾರ್ಹಂ ತತ್ಕಥಂ ನಿಂದಿತಂ ಮೃದಾ ॥೧೩೮॥

ತ್ರಿಪುಂಡ್ರಭಸ್ಮನೇತ್ಯಾದಿ ಶ್ರುತಿಭಿರ್ಭಸ್ಮಧಾರಣಂ ।
ಅವಶ್ಯಕಮಿತಿ ಪ್ರೋಕ್ತಂ ತತ್ಕಥಂ ನ ತ್ವಯಾ ಕೃತಂ ॥೧೩೯॥

ತ್ವಯಾ ವೇದಮನೂಚ್ಯೇತಿ ಶ್ರುತಿರ್ನ ಸ್ಮರ್ಯತೇ ಕಥಂ ।
ಸತ್ಯಂ ವದೇತ್ಯಾದಿಧರ್ಮಾನ್ಸಾವಧಾನೇನ ಸಂಸ್ಮರ ॥೧೪೦॥

---

ಆಗ ವೇದವನ್ನರಿತವರಲ್ಲಿ ಪ್ರಾಜ್ಞನಾದ ಆ ಶೈವಬ್ರಾಹ್ಮಣನು ಅಜ್ಞಾನಭರಿತವಾದ ಮನಸ್ಸುಳ್ಳ ಮತ್ತೊಬ್ಬ ಬ್ರಾಹ್ಮಣನನ್ನು ನೋಡಿ, ಮನಸ್ಸಿನಲ್ಲಿ ಮೊದಲು ಅವನನ್ನು ಮಾತನಾಡಿಸಲು ಹಿಂಜರಿದರೂ, ಆಮೇಲೆ ಧೈರ್ಯಹೊಂದಿ ಸ್ವಲ್ಪ ಹೊತ್ತು ಕೈಯ್ಯಲ್ಲಿ ಒಂದು ಹುಲ್ಲನ್ನು ಹಿಡಿದು ಆದರೊಡನೆ ಹೀಗೆ ಸಂಭಾಷಣೆ ಮಾಡಿದನು. ॥೧೩೬॥

ಮಣ್ಣನ್ನು ಹಣೆ ಮತ್ತು ಇತರ ಅಂಗಗಳಿಗೆಲ್ಲಾ ಬಳಿದುಕೊಂಡಿರುವ ಹೀನ ಮುಖವುಳ್ಳವನೇ, ದೂರ ಹೋಗು? ಎಲೈ ಶಿವವಂಚಕನೂ ನಿರ್ಭಾಗ್ಯನೂ ಆದ ಮೂರ್ಖನೇ, ನಿನ್ನ ಈ ಕೆಟ್ಟಮುಖವನ್ನು ನನಗೆ ತೋರಿಸಬೇಡ. ॥೧೩೭॥

ವೇದವನ್ನರಿತವರಲ್ಲಿ ನಿಪುಣರಾದವರು ಈ ಹಣೆಯನ್ನು ಭಸ್ಮಧಾರಣೆಗೆ ಆಶ್ರಯವೆಂದು ಹೇಳಿರುವರು. ಭಸ್ಮವನ್ನು ಲೇಪನಮಾಡಿಕೊಳ್ಳಲು ಅರ್ಹವಾದ ಇಂತಹ ಹಣೆಯನ್ನು ಈ ಮಣ್ಣಿನಿಂದ ಹೇಗೆ ಅಪವಿತ್ರಗೊಳಿಸಿದೆ? ॥೧೩೮॥

'ತ್ರಿಪುಂಡ್ರಭಸ್ಮನಾ' ಎಂಬಿವೇ ಮೊದಲಾದ ಶ್ರುತಿಗಳು ಭಸ್ಮಧಾರಣೆಯು ಅವಶ್ಯಕವೆಂದು ಹೇಳುತ್ತಿದ್ದರೂ ನೀನು ಏತಕ್ಕೆ ಅದನ್ನು ಧಾರಣೆಮಾಡಲಿಲ್ಲ?

ಅನುಲಿಪ್ಯ ಮೃದಂ ಫಾಲೇ ದೃಢಂ ಪಾಪಮುಪಾರ್ಜಿತಂ ।
ಭ್ರಮೇಣಾಪಿ ಕೃತಂ ಕರ್ಮ ಪಾಪಸಂಪಾದಕಂ ಧ್ರುವಂ ॥೧೪೧॥

ಉದ್ಧೂಲನಂ ತ್ರಿಪುಂಡ್ರಂ ಚ ಕ್ಷಣಮಾತ್ರಮಪಿ ದ್ವಿಜೈಃ ।
ನ ತ್ಯಾಜ್ಯಮೇವ ನ ತ್ಯಾಜ್ಯಂ ನ ತ್ಯಾಜ್ಯಂ ಸತ್ಯಮುಚ್ಯತೇ ॥೧೪೨॥

ಉದ್ಧೂಲನಂ ತ್ರಿಪುಂಡ್ರಂ ಚ ಬ್ರಾಹ್ಮಣೋ ಯದಿ ಸಂತ್ಯಜೇತ್ ।
ಪ್ರಮಾದಾದಥ ವಾ ಮೋಹಾತ್ಸ ಯಾತಿ ನರಕಂ ಧ್ರುವಂ ॥೧೪೩॥

ಸಂಧ್ಯಾತ್ಯಾಗೇನ ವಿಪ್ರಾಣಾಂ ಬ್ರಾಹ್ಮಣ್ಯಪ್ರಚ್ಯವೋ ಧ್ರುವಂ ।
ಯಜ್ಞೋಪವೀತತ್ಯಾಗೇನ ಬ್ರಾಹ್ಮಣ್ಯಪ್ರಚ್ಯವೋ ಧ್ರುವಂ ॥೧೪೪॥

ತಥೈವ ಭಸ್ಮತ್ಯಾಗೇನ ಬ್ರಾಹ್ಮಣ್ಯಪ್ರಚ್ಯವೋ ಧ್ರುವಂ ।
ಸ್ವಾಧ್ಯಾಯಾಧ್ಯಯನಾಭಾವೇ ಬ್ರಾಹ್ಮಣ್ಯಪ್ರಚ್ಯವೋ ಯಥಾ॥೧೪೫॥

---

'ವೇದಮನೂಚ್ಯಾಚಾರ್ಯೋಽಂತೇ ವಾಸಿನಮನುಶಾಸ್ತಿ' ಎಂಬ ಶ್ರುತಿಯು ನಿನಗೆ ಜ್ಞಾಪಕಬರಲಿಲ್ಲವೇ! 'ಸತ್ಯಂ ವದ' ಎಂಬಿವೇ ಮೊದಲಾದ ಶ್ರುತಿವಾಕ್ಯಗಳಲ್ಲಿ ಹೇಳುವ ಧರ್ಮಗಳನ್ನು ಸಾವಧಾನವಾಗಿ ಸ್ಮರಣೆಮಾಡಿಕೋ. ||೧೩೯-೧೪೦||

ಹಣೆಯಲ್ಲಿ ಮಣ್ಣನ್ನು ಲೇಪನಮಾಡಿಕೊಂಡು ನೀನು ದೃಢವಾದ ಪಾಪಗಳನ್ನು ಸಂಪಾದಿಸಿರುವೆ. ಒಂದುವೇಳೆ ಭ್ರಾಂತಿಯಿಂದ ಈ ಕೆಲಸವನ್ನು ನೀನು ಮಾಡಿದ್ದರೂ, ಈಗ ಪಾಪವನ್ನು ನಿಶ್ಚಯವಾಗಿಯೂ ಸಂಪಾದಿಸಿದಂತೆಯೇ ಸರಿ. ||೧೪೧||

ಭಸ್ಮೋದ್ಧೂಳನವನ್ನೂ ಭಸ್ಮತ್ರಿಪುಂಡ್ರಧಾರಣೆಯನ್ನೂ ಬ್ರಾಹ್ಮಣನಾದವನು ಪ್ರಮಾದದಿಂದಲಾಗಲೀ ಅಥವ ಮೋಹ (ಅಜ್ಞಾನ) ದಿಂದಲಾಗಲೀ ಬಿಟ್ಟದ್ದೇ ಆದರೆ, ಆತನು ನಿಶ್ಚಯವಾಗಿ ನರಕವನ್ನೈದುವನು. ಸಂಧ್ಯಾವಂದನೆ ಮತ್ತು ಯಜ್ಞೋಪವೀತ ಇವುಗಳನ್ನು ತ್ಯಾಗಮಾಡುವುದರಿಂದ ನಿಶ್ಚಯವಾಗಿ ಬ್ರಾಹ್ಮಣ್ಯವು ನಾಶವಾಗುವುದು. ||೧೪೩-೧೪೪||

ಹಾಗೆಯೇ ಭಸ್ಮಧಾರಣೆಯನ್ನು ಬಿಟ್ಟರೆ ನಿಜವಾಗಿ ಬ್ರಾಹ್ಮಣ್ಯವು ಹಾಳಾಗುವುದು. ವೇದಾಧ್ಯಯನಮಾಡದೇ ಇದ್ದರೆ ಹೇಗೋ ಹಾಗೆ ಭಸ್ಮಧಾರಣೆ ಮಾಡದಿದ್ದರೂ ನಿಶ್ಚಯವಾಗಿ ಬ್ರಾಹ್ಮಣ್ಯಕ್ಕೆ ಚ್ಯುತಿಬರುವುದು. ಎಲೈ

ತಥೈವ ಭಸ್ಮತ್ಯಾಗೇನ ಬ್ರಾಹ್ಮಣ್ಯಪ್ರಚ್ಯವೋ ಧ್ರುವಂ ।
ಮಾ ದರ್ಶಯ ಮುಖಂ ಮಹ್ಯಮೂರ್ಧ್ವಪುಂಡ್ರವಿನಿರ್ಮಿತಂ॥೧೪೬॥

ಸ್ವಯಂ ನಷ್ಟೋಽನ್ಯನಾಶಾರ್ಥಮುದ್ಯೋಗಂ ಕುರುಷೇ ಕಥಂ ।
ತ್ರಿಪುಂಡ್ರಧಾರಣಂ ಕೃತ್ವಾ ಪ್ರಾತಃಕಾರ್ಯಂ ಶಿವಾರ್ಚನಂ ॥೧೪೭॥

ತದ್ವಿಹಾಯ ಕಥಂ ಭ್ರಾಂತ್ಯಾ ಸಂಚಾರಃ ಕ್ರಿಯತೇ ತ್ವಯಾ ।
ಪ್ರಾತಃ ಶಿವಾರ್ಚನಂ ಕಾರ್ಯಂ ಭಸ್ಮಧಾರಣಪೂರ್ವಕಂ ॥೧೪೮॥

ತಸ್ಮಾನ್ನ ಪ್ರಮದೋ ಭೂಯಾದಿತಿ ವೇದಃ ಸ್ಮೃತೋ ನ ಕಿಂ॥೧೪೯॥

ತ್ರಿಸಂಧ್ಯಮಪಿ ಸಂಪೂಜ್ಯಂ ಶಿವಲಿಂಗಮಿತಿ ಶ್ರುತಿಃ ।
ಕಥಂ ನ ಸ್ಮರ್ಯತೇ ಮೂರ್ಖ ಭ್ರಾಂತೋ ಜಾತಃ ಕಥಂ ವದ ॥೧೫೦॥

---

ಮೂರ್ಖನೇ, ಊರ್ಧ್ವಪುಂಡ್ರವನ್ನು ಧರಿಸಿಕೊಂಡಿರುವ ಈ ನಿನ್ನ ಮುಖವನ್ನು ನನಗೆ ತೋರಿಸಬೇಡ. ॥೧೪೫-೧೪೬॥

ತಾನು ನಾಶವಾದದ್ದೂ ಸಾಲದೇ ಬೇರೆಯವರನ್ನೂ ನಾಶಪಡಿಸುವ ಕಾರ್ಯದಲ್ಲಿ ಪ್ರಯತ್ನಿಸುತ್ತಿರುವೆಯೇನು? ಪ್ರಾತಃಕಾಲದಲ್ಲಿ ಬ್ರಾಹ್ಮಣನಾದವನು ಭಸ್ಮದಿಂದ ತ್ರಿಪುಂಡ್ರವನ್ನು ಧಾರಣೆಮಾಡಿ ಆ ಪರಶಿವನನ್ನು ಪೂಜೆಮಾಡಲೇ ಬೇಕಾಗಿದ್ದರೂ, ಹಾಗೆ ಮಾಡದೇ ಭ್ರಾಂತನಾಗಿ ನೀನು ಏಕೆ ಹೀಗೆ ಸಂಚಾರ ಮಾಡುತ್ತಿರುವೆ? ಎಲೈ ಮೂರ್ಖನೇ, ಬೆಳಗ್ಗೆ ಹೊತ್ತು ವಿಭೂತಿಯಿಂದ ತ್ರಿಪುಂಡ್ರ ವನ್ನು ಧಾರಣೆಮಾಡಿ ಆ ಪರಶಿವನನ್ನು ಅವಶ್ಯವಾಗಿ ಪೂಜೆಮಾಡಬೇಕು. ॥೧೪೭-೧೪೮॥

ಆ ಶಿವಪೂಜಾಕಾರ್ಯವನ್ನು ಎಂದಿಗೂ ಪ್ರಮಾದದಿಂದಲಾದರೂ ಬಿಡಬಾರದೆಂಬ ವೇದವಾಕ್ಯವು ನಿನ್ನ ಸ್ಮೃತಿಗೆ ಬರಲಿಲ್ಲವೆ? ಏ ಮೂರ್ಖನೇ, ಮೂರು ಸಂಧ್ಯಾಕಾಲಗಳಲ್ಲಿಯೂ ಆ ಶಿವಲಿಂಗಗಳನ್ನು ಪೂಜೆಮಾಡಬೇಕೆಂದು ಸಾರುತ್ತಿರುವ ಶ್ರುತಿವಾಕ್ಯವನ್ನು ನೀನೇಕೆ ಸ್ಮರಿಸುತ್ತಿಲ್ಲ? ಇದೇಕೆ ಹೀಗೆ ಭ್ರಾಂತನಾಗಿರುವೆ? ತಿಳಿಸೆಂದು ಆ ಶೈವಬ್ರಾಹ್ಮಣನು ಆಗಂತುಕ ಬ್ರಾಹ್ಮಣನನ್ನು ಕೇಳಿದನು. ॥೧೪೯-೧೫೦॥

॥ ಶಿವ ಉವಾಚ ॥

ಇತ್ಯುಕ್ತಮಾದೌ ವಚನಂ ವಿಪ್ರಃ ಶ್ರುತ್ವಾ ತತಃ ಪರಂ ।
ತಂ ಪ್ರಣಮ್ಯ ಜಗಾದೈವಂ ಕೃತಾಂಜಲಿಪುಟಃ ಶಿವೇ ॥೧೫೧॥

॥ ವಿಪ್ರ ಉವಾಚ ॥

ದ್ವಿಜೋತ್ತಮ ಮಯಾ ಫಾಲಂ ಮೃದಾ ಭ್ರಾಂತ್ಯಾದ್ಯದೂಷಿತಂ ।
ಪ್ರಾಯಶ್ಚಿತ್ತಂ ಕರಿಷ್ಯಾಮಿ ಬೃಹಜ್ಜಾಬಾಲಚೋದಿತಂ ॥೧೫೨॥

॥ ಶಿವ ಉವಾಚ ॥

ಇತ್ಯುಕ್ತ್ವಾ ತಂ ದ್ವಿಜಂ ಸಮ್ಯಕ್ಪ್ರಣಮ್ಯ ಚ ಪುನಃ ಪುನಃ ।
ಸ್ನಾತ್ವಾ ಚಕಾರ ವಿಧಿವತ್ಪ್ರಾಯಶ್ಚಿತ್ತಮತಂದ್ರಿತಃ ॥೧೫೩॥

ತತೋ ಭಸ್ಮೋದ್ಧೂಲನಾದಿ ಸರ್ವಂ ಕೃತ್ವಾ ಯಥಾವಿಧಿ ।
ಶಿವಲಿಂಗಾರ್ಚನಂ ಚಕ್ರೇ ಯಥಾವಿಧಿ ಯಥಾಕ್ರಮಂ ॥೧೫೪॥

---

ಮೊದಲು ಹೀಗೆ ಹೇಳಿದ ಆ ಶಿವಭಕ್ತಾಗ್ರೇಸರನ ಮಾತುಗಳನ್ನು ಕೇಳಿ ಮತ್ತೊಬ್ಬ ಬ್ರಾಹ್ಮಣನು ಆತನಿಗೆ ನಮಸ್ಕಾರಮಾಡಿ ಕೈಜೋಡಿಸಿ ಅವನೊಡನೆ ಹೀಗೆ ಹೇಳಿದನೆಂದು ಶಿವನು ಪಾರ್ವತಿಗೆ ತಿಳಿಸಿದನು. ॥೧೫೧॥

ಎಲೈ ಬ್ರಾಹ್ಮಣೋತ್ತಮನೇ, ನನ್ನ ಹಣೆಯು ಈ ಮಣ್ಣನ್ನು ಧಾರಣೆ ಮಾಡಿರುವುದರಿಂದ ಈಗ ದೂಷಿತವಾಗಿದೆ. ನಿಜ. ಇದಕ್ಕೋಸ್ಕರ ಬೃಹಜ್ಜಾಬಾಲರು ಹೇಳಿರುವ ರೀತಿಯನ್ನನುಸರಿಸಿ ನಾನು ಪ್ರಾಯಶ್ಚಿತ್ತಮಾಡಿಕೊಳ್ಳುತ್ತೇನೆಂದು ಆ ಬ್ರಾಹ್ಮಣನು ಒಪ್ಪಿದನು. ॥೧೫೨॥

ಹೀಗೆ ಹೇಳಿದನಂತರ ಆ ವಿಪ್ರನು ಈಶ್ವರಭಕ್ತನಾದ ಬ್ರಾಹ್ಮಣನನ್ನು ಪುನಃ ಪುನಃ ಭಕ್ತಿಯಿಂದ ನಮಸ್ಕರಿಸಿ ಅನಂತರ ತಾನು ಶುದ್ಧಸ್ನಾನಮಾಡಿ, ನಿಯಮದಿಂದ ವಿಧಿಪೂರ್ವಕವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು. ॥೧೫೩॥

ಆ ಮೇಲೆ ಭಸ್ಮೋದ್ಧೂಲನ ಮತ್ತು ಭಸ್ಮತ್ರಿಪುಂಡ್ರಧಾರಣೆ ಮೊದಲಾದವುಗಳನ್ನೆಲ್ಲಾ ಮಾಡಿದನಂತರ ವಿಧಿಪೂರ್ವಕವಾಗಿ ಶಿವಲಿಂಗಪೂಜೆಯನ್ನೂ ಮಾಡಿದನು. ॥೧೫೪॥

ತದಾ ಪ್ರಭೃತಿ ವೇದೋಕ್ತಕರ್ಮಾಚರಣತತ್ಪರಃ ।
ಉಪಾಸೋದ್ಧೂಳನಾದೀನಿ ನಿತ್ಯಂ ಕುರ್ವನ್ನತಂದ್ರಿತಃ ॥೧೫೫॥

ತತಃ ಪ್ರಯತ್ನತಃ ಕಾರ್ಯಂ ವಿಪ್ರೈರುದ್ಧೂಲನಾದಿಕಂ ।
ತತ್ತ್ಯಾಗೇ ಸರ್ವಥಾ ವಿಪ್ರಾಃ ಭ್ರಷ್ಟಾ ಬ್ರಾಹ್ಮಣ್ಯತಃ ಶಿವೇ ॥೧೫೬॥

ಧರ್ಮಾರ್ಥಕಾಮಮೋಕ್ಷೇಚ್ಛಾ ಯೇಷಾಂ ತೇಷಾಂ ತು ಸರ್ವಥಾ ।
ಮದರ್ಚನಂ ಪ್ರಯತ್ನೇನ ಕರ್ತವ್ಯಂ ವಿಧಿಪೂರ್ವಕಂ ॥೧೫೭॥

ಮದಾರಾಧನಸಂಸಕ್ತಾ ಯೇ ಮದೇಕಪರಾಯಣಾಃ ।
ತೇಷಾಂ ತು ನರಕಾವಾಸೋ ನ ಭವಿಷ್ಯತಿ ಸರ್ವಥಾ ॥೧೫೮॥

ಪುರಾ ಯಮಭಟಾಃ ಕ್ರೂರಾ ಯಮಶಾಸನಕಾರಿಣಃ ।
ಸಂಚರಂತೋಽವನೀಪೃಷ್ಠೇ ಸೋತ್ಸಾಹಂ ಸಂಸ್ಥಿತಾಃ ಶಿವೇ ॥೧೫೯॥

---

ಅದು ಮೊದಲು ಆ ಬ್ರಾಹ್ಮಣನು ವೇದಪ್ರತಿಪಾದಿತಗಳಾದ ಕರ್ಮಗಳನ್ನು ಅನುಷ್ಠಾನಮಾಡುವುದರಲ್ಲಿ ತತ್ಪರನಾಗಿ ನಿತ್ಯವೂ ಭಸ್ಮಲೇಪನ ಭಸ್ಮತ್ರಿಪುಂಡ್ರ ಧಾರಣಾದಿಗಳನ್ನು ಮಾಡುತ್ತಾ ನಿಯಮದಿಂದಿದ್ದನು. ॥೧೫೫॥

ಮಂಗಳಾಂಗಿಯೇ, ಆದ್ದರಿಂದ ಬ್ರಾಹ್ಮಣರು ಅವಶ್ಯವಾಗಿ ನಿಯಮದಿಂದ ಭಸ್ಮೋದ್ಧೂಳನಾದಿಕರ್ಮಗಳನ್ನು ಮಾಡಲೇಬೇಕು. ಅದನ್ನು ಬಿಟ್ಟರೆ ಅವರು ಖಂಡಿತ ತಮ್ಮ ಬ್ರಾಹ್ಮಣ್ಯವನ್ನೇ ಕಳೆದುಕೊಳ್ಳುವರು. ॥೧೫೬॥

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳನ್ನು ಅಪೇಕ್ಷಿಸುವವರು ಮಾತ್ರ ಅವಶ್ಯವಾಗಿ ವಿಧಿಯನ್ನು ಅನುಸರಿಸಿ ನನ್ನ ಪೂಜೆಯನ್ನು ಮಾಡಲೇಬೇಕು. ॥೧೫೭॥

ನನ್ನೊಬ್ಬನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ ನನ್ನ ಪೂಜೆಯಲ್ಲಿಯೇ ತತ್ಪರರಾಗಿರುವವರಿಗೆ ಎಂದೆಂದಿಗೂ ನರಕವಾಸವುಂಟಾಗುವುದಿಲ್ಲವೆಂಬುದು ನಿಶ್ಚಯವೆಂದು ತಿಳಿ. ॥೧೫೮॥

ಶಿವನ ಅರ್ಧಾಂಗಿಯೇ, ಹಿಂದೆ ಯಮನ ಆಜ್ಞೆಯನ್ನು ನೆರವೇರಿಸುವ ಕ್ರೂರರಾದ ಯಮಕಿಂಕರರು ಭೂಮಿಯಮೇಲೆ ಅತಿಯಾದ ಉತ್ಸಾಹದಿಂದ ಸಂಚರಿಸುತ್ತಾ ಬರುತ್ತಿದ್ದರು. ॥೧೫೯॥

ತದಾ ಕಶ್ಚಿದ್ದ್ವಿಜವರೋ ಮದರ್ಚನಪರಾಯಣಃ ।
ಉದ್ಧೂಲನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಸ್ತು ವಿಭೂಷಿತಃ ॥೧೬೦॥

ಪಂಚಾಕ್ಷರಜಪಾಸಕ್ತೋ ಮತ್ಪೂಜಾನಿರತಃ ಸದಾ ।
ಉವಾಸ ಬಿಲ್ವಛಾಯಾಯಾಂ ಬಿಲ್ವಪತ್ರಾರ್ಚನಪ್ರಿಯಃ ॥೧೬೧॥

ತದಾ ತಂ ದ್ವಿಜಮಾಲೋಕ್ಯ ಬ್ರಾಹ್ಮಣಃ ಕಶ್ಚಿದಾಗತಃ ।
ತತಸ್ತಮಭಿವಾದ್ಯೇದಂ ಬಭಾಷೇ ವಚನಂ ದ್ವಿಜಃ ॥೧೬೨॥

ದ್ವಿಜೋತ್ತಮ ಮಯಾ ಪೂರ್ವಂ ಪಾತಕಂ ಬಹುಧಾ ಕೃತಂ ।
ಇದಾನೀಮಪಿ ಪಾಪೇಭ್ಯೋ ನ ನಿವೃತ್ತಂ ಮನೋ ಮಮ ॥೧೬೩॥

ಕಿಂಚಿದೂನಂ ಶತಂ ಜಾತಂ ವತ್ಸರಾಣಾಮಪಿ ದ್ವಿಜ ।
ಸರ್ವಥಾ ಶ್ವಃ ಪರಶ್ವೋ ವಾ ಮರಣಂ ಮೇ ಭವಿಷ್ಯತಿ ॥೧೬೪॥

---

ಆ ಸಮಯದಲ್ಲಿ ನನ್ನ ಪೂಜಾತತ್ಪರನಾದ ಒಬ್ಬ ಬ್ರಾಹ್ಮಣೋತ್ತಮನು, ಭಸ್ಮೋದ್ಧೂಳನ, ಭಸ್ಮತ್ರಿಪುಂಡ್ರಧಾರಣ, ರುದ್ರಾಕ್ಷಮಾಲೆ ಇವುಗಳಿಂದಲಂಕೃತನಾಗಿ ಯಾವಾಗಲೂ ಶಿವಪಂಚಾಕ್ಷರ ಮಹಾಮಂತ್ರಜಪದಲ್ಲಿ ನಿರತನಾಗಿ ನನ್ನ ಪೂಜೆಯಲ್ಲಿಯೇ ತತ್ಪರನೂ, ಇದಕ್ಕೋಸ್ಕರ ಬಿಲ್ವಪತ್ರೆಗಳನ್ನು ಸಂಪಾದಿಸುವುದರಲ್ಲಿ ತುಂಬಾ ಪ್ರೀತಿಯುಳ್ಳವನೂ ಆಗಿ ಆ ಬಿಲ್ವವೃಕ್ಷದ ಬುಡದಲ್ಲಿಯೇ ವಾಸಮಾಡುತ್ತಿದ್ದನು. ॥೧೬೦-೧೬೧॥

ಅದೇ ಸಮಯದಲ್ಲಿ ಬೇರೊಬ್ಬ ಬ್ರಾಹ್ಮಣನು ಆ ಬ್ರಾಹ್ಮಣೋತ್ತಮನ ಸಮೀಪಕ್ಕೆ ಬಂದು ಆತನನ್ನು ನೋಡಿ ನಮಸ್ಕಾರಮಾಡಿದನಂತರ ಆತನೊಡನೆ ಹೀಗೆ ನುಡಿದನು. ॥೧೬೨॥

ಅಯ್ಯ ಬ್ರಾಹ್ಮಣೋತ್ತಮನೇ, ಹಿಂದಿನ ಜನ್ಮದಲ್ಲಿ ನಾನು ನಾನಾವಿಧವಾದ ಪಾಪಕೃತ್ಯಗಳನ್ನು ಮಾಡಿದ್ದೆನು. ಈಗಲೂ ನನ್ನ ಮನಸ್ಸು ಆ ಪಾಪಕರ್ಮಗಳಿಂದ ನಿವೃತ್ತವಾಗಿಲ್ಲ. ನನಗಾದರೋ ಸ್ವಲ್ಪಕಡಿಮೆಯಾಗಿ ನೂರುವರ್ಷ ವಯಸ್ಸಾಗಿರುವುದು. ನಾಳೆಯೋ ತಪ್ಪಿದರೆ ನಾಡಿದ್ದೋ ನನಗೆ ಮರಣವು ಸಂಭವಿಸುವ ಹಾಗಿರುವುದು. ॥೧೬೩-೧೬೪॥

ಕಿಂಚಿತ್ಸ್ವಪ್ನೋಽಪಿ ಜಾತೋಽಸ್ತಿ ಕ್ವಚಿತ್ಪೂರ್ವದಿನೇ ದ್ವಿಜ ।
ತದ್ವಕ್ಷ್ಯೇ ಸ್ವಪ್ನವೃತ್ತಾಂತಂ ಶೃಣು ಸಮ್ಯಗ್ದ್ವಿಜೋತ್ತಮ ॥೧೬೫॥

ನೀಲಾದ್ರಿಸಂನಿಭಾ ದೃಷ್ಟ್ವಾ ಯಮದೂತಾ ಭಯಾನಕಾಃ ।
ಅತಃ ಪರಂ ದ್ವಿಜಾಧೀಶ ಕಿಂ ಕರ್ತವ್ಯಂ ವದಸ್ವ ಮೇ ॥೧೬೬॥

ತದುಕ್ತಂ ತದ್ವಚಃ ಶ್ರುತ್ವಾ ತಮುವಾಚ ದ್ವಿಜೋತ್ತಮಃ ।
ಪರದುಃಖಪ್ರಹಾಣೇಚ್ಛುಸ್ತತ್ವಜ್ಞಃ ಶಿವಚಿಂತಕಃ ॥೧೬೭॥

॥ ಶೈವದ್ವಿಜ ಉವಾಚ ॥

ದ್ವಿಜ ತೇ ಯದಿ ಮೋಕ್ಷೇಚ್ಛಾ ತದಾಯತ್ನೇನ ಸಾದರಂ ।
ಕುರು ದೇವಾಧಿದೇವಸ್ಯ ಪೂಜನಂ ಭಕ್ತಿಪೂರ್ವಕಂ ॥೧೬೮॥

ಮಹಾದೇವಾರ್ಚನಾತ್ಪುಂಸಾಂ ವಿನಶ್ಯಂತ್ಯಘಕೋಟಯಃ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೧೬೯॥

---

ಅಯ್ಯ ಬ್ರಾಹ್ಮಣಶ್ರೇಷ್ಠನೇ, ಹಿಂದಿನ ದಿನ ನನಗೆ ಒಂದು ಕನಸಾಯಿತು. ಆ ಕನಸಿನ ಸಮಾಚಾರವನ್ನು ತಿಳಿಸುವೆನು ಲಾಲಿಸು. ನೀಲಪರ್ವತಕ್ಕೆ ಸಮಾನವಾದ ಆಕಾರವುಳ್ಳ (ಬಣ್ಣದಿಂದಲೂ ಮತ್ತೂ ಔನ್ನತ್ಯದಿಂದಲೂ) ಭಯಂಕರರಾದ ಯಮದೂತರನ್ನು ನಾನು ಕಂಡೆನು. ಬ್ರಾಹ್ಮಣೋತ್ತಮ, ಇನ್ನು ಮುಂದೆ ನಾನು ಏನು ಮಾಡಬೇಕೆಂಬುದನ್ನು ನನಗೆ ತಿಳಿಸಿ ನನ್ನನ್ನು ಉದ್ಧಾರ ಮಾಡೆಂದು ಆ ಬ್ರಾಹ್ಮಣನು ಶಿವಭಕ್ತಶ್ರೇಷ್ಠನಲ್ಲಿ ಪ್ರಾರ್ಥಿಸಿಕೊಂಡನು. ॥೧೬೫-೧೬೬॥

ಆ ವೃದ್ಧಬ್ರಾಹ್ಮಣನ ಮಾತುಗಳನ್ನು ಕೇಳಿ ಮತ್ತೊಬ್ಬರ ದುಃಖವನ್ನು ಹೋಗಲಾಡಿಸಲು ಅಪೇಕ್ಷೆಯುಳ್ಳವನೂ ಶಿವಧ್ಯಾನತತ್ಪರನೂ ಶಿವನ ತತ್ವವನ್ನರಿತವನೂ ಆದ ಆ ಬ್ರಾಹ್ಮಣೋತ್ತಮನು ಹೀಗೆ ನುಡಿದನು. ॥೧೬೭॥

ಎಲೈ ಬ್ರಾಹ್ಮಣನೇ, ನಿನಗೆ ಮೋಕ್ಷಾಪೇಕ್ಷೆಯಿದ್ದರೆ ದೇವಾಧಿದೇವನೆನಿಸಿದ (ಇತರ ವಿಷ್ಣ್ವಾದಿ ದೇವತೆಗಳನ್ನೆಲ್ಲಾ ತನ್ನ ಆಶ್ರಿತರನ್ನಾಗಿ ಮಾಡಿಕೊಂಡಿರುವ) ಆ ಮಹಾದೇವನನ್ನು ಆದರದಿಂದಲೂ ಭಕ್ತಿಯಿಂದಲೂ ನಿಯಮವನ್ನುಲ್ಲಂಘನೆ ಮಾಡದೆ ಪೂಜೆಮಾಡು. ಆ ಮಹಾದೇವನ ಪೂಜೆಯಿಂದ ಕೋಟ್ಯಂತರ

ಶಂಕರಸ್ಮರಣಾದೇವ ವಿನಶ್ಯಂತ್ಯಘಕೋಟಯಃ ।
ಯತ್ಪೂಜನಾದ್ವಿನಶ್ಯಂತಿ ಪಾಪಾನೀತ್ಯತ್ರ ನಾದ್ಭುತಂ ॥೧೭೦॥

ಶಿವಪೂಜನಮಾತ್ರೇಣ ಮುಚ್ಯತೇ ದುಃಖಸಾಗರಾತ್ ।
ಸತ್ಯಮಿತ್ಯಾದಿವಾಕ್ಯಾನಿ ಸಂತಿ ವೇದೇಷು ಭೂರಿಶಃ ॥೧೭೧॥

ವೇದಾಃ ಪ್ರಮಾಣಮಸ್ಮಾಕಂ ಬ್ರಾಹ್ಮಣಾನಾಂ ತಥಾ ಸತಿ ।
ಮೋಕ್ಷಃ ಶಿವಾರ್ಚನಾದೇವ ಭವಿಷ್ಯತಿ ನ ಸಂಶಯಃ ॥೧೭೨॥

ಶಿವಪೂಜಾಂ ವಿನಾ ಮೋಕ್ಷೋ ನ ಭವಿಷ್ಯತಿ ಸರ್ವಥಾ ।
ಸತ್ಯಮಿತ್ಯಾದಿವಾಕ್ಯಾನಿ ಸಂತಿ ವೇದೇಷು ಭೂರಿಶಃ ॥೧೭೩॥

ನ ಸತ್ಯಾಚರಣಾನ್ಮೋಕ್ಷೋ ನ ತ್ಯಾಗೈರ್ವಿವಿಧೈರಪಿ ।
ಕಿಂ ತು ಮೋಕ್ಷೋ ಮಹಾದೇವಪೂಜಯೈವೇತಿ ಹಿ ಶ್ರುತಃ ॥೧೭೪॥

---

ಪಾಪಸಮೂಹಗಳೆಲ್ಲವೂ ಸತ್ಯವಾಗಿಯೂ ನಾಶವಾಗುವುವೆಂದು ನಾನು ಭುಜವನ್ನೆತ್ತಿ ಹೇಳುವೆನು. ॥೧೬೮-೧೬೯॥

ಆ ಶಂಕರನ (ಐಹಿಕಾಮುಷ್ಮಿಕ ಸುಖಗಳನ್ನುಂಟುಮಾಡುವವನ) ಸ್ಮರಣಮಾತ್ರದಿಂದಲೇ ಪಾಪರಾಶಿಗಳೆಲ್ಲಾ ಧ್ವಂಸವಾಗುವಾಗ ಆ ದೇವನನ್ನು ಪೂಜೆ ಮಾಡುವುದರಿಂದ ಪಾಪಗಳು ನಾಶವಾಗುವುವೆಂಬುದರಲ್ಲಿ ಆಶ್ಚರ್ಯವೇನು ?॥೧೭೦॥

ಆ ಶಿವನನ್ನು ಪೂಜೆಮಾಡಿದ ಮಾತ್ರದಿಂದಲೇ ಮಾನವನು ದುಃಖವೆಂಬ ಸಾಗರದಿಂದ ಸತ್ಯವಾಗಿಯೂ ಬಿಡುಗಡೆ ಹೊಂದುವನೆಂದು ಹೇಳುವ ವಾಕ್ಯಗಳು ವೇದಗಳಲ್ಲಿ ಅನೇಕವಿರುವುವು. ॥೧೭೧॥

ಬ್ರಾಹ್ಮಣರಾದ ನಮಗೆ ವೇದಗಳು ಪ್ರಮಾಣಗಳಾಗಿರುವುದರಿಂದ ಆ ಶಿವಪೂಜೆಯಿಂದಲೇ ಮೋಕ್ಷವುಂಟಾಗುವುದೆಂಬುದರಲ್ಲಿ ಸಂದೇಹವೇ ಇಲ್ಲ. ಶಿವನನ್ನು ಪೂಜೆಮಾಡದೇ ಎಂದೆಂದಿಗೂ ಸತ್ಯವಾಗಿಯೂ ಮೋಕ್ಷವಿಲ್ಲವೆಂದು ಅನೇಕ ವಾಕ್ಯಗಳು ವೇದಗಳಲ್ಲಿ ಹೇಳಲ್ಪಟ್ಟಿರುವುವು. ॥೧೭೨-೧೭೩॥

ಸತ್ಯವನ್ನು ಹೇಳುವುದರಿಂದಲೂ, ನಾನಾವಿಧವಾದ ದಾನಗಳಿಂದಲೂ ಮೋಕ್ಷವಿಲ್ಲ. ಆ ಮಹಾದೇವನ ಪೂಜೆಯಿಂದ ಮಾತ್ರ ಮೋಕ್ಷವುಂಟಾಗುವುದೆಂದು ಶ್ರುತಿಯು ಹೇಳುತ್ತಿರುವುದು. ಧರ್ಮ, ಅರ್ಥ, ಕಾಮ, ಮೋಕ್ಷ ಈ

ಧರ್ಮಾರ್ಥಕಾಮಮೋಕ್ಷಾಸ್ತು ಶಿವಪೂಜಾವಿಧೇಃ ಫಲಂ ।
ಸತ್ಯಮಿತ್ಯಾದಿವಾಕ್ಯಾನಿ ಸಂತಿ ವೇದೇಷು ಭೂರಿಶಃ ॥೧೭೫॥

ತತಃ ಪೂಜಯ ದೇವೇಶಂ ಮಹಾದೇವಮುಮಾಪತಿಂ ।
ಉದ್ಧೂಲನಾದಿಕಂ ಕೃತ್ವಾ ಜಾಬಾಲೋಕ್ತವಿಧಾನತಃ ॥೧೭೬॥

ಇತಿ ತದ್ವಚನಂ ಶ್ರುತ್ವಾ ವಿಶ್ವಸ್ಯ ದ್ವಿಜಪುಂಗವಃ ।
ಸ್ನಾತ್ವಾ ಕೃತ್ವೋದ್ಧೂಲನಾದಿ ಚಕಾರ ಶಿವಪೂಜನಂ ॥೧೭೭॥

ತತೋ ನತ್ವಾ ಮಹಾದೇವಂ ಸಮ್ಯಕ್ಕೃತ್ವಾ ಚ ನರ್ತನಂ ।
ತತಃ ಪ್ರಾಣಾನ್ಜಹೌ ಮರ್ತ್ಯಃ ಕುರ್ವನ್ನೇವ ಮದರ್ಚನಂ ॥೧೭೮॥

ತತಃ ಸ ದುಃಖಾನ್ಯಖಿಲಾನ್ಯಪಾಸ್ಯ ಮದನುಗ್ರಹಾತ್ ।
ಮದ್ರೂಪಮಗಮದ್ವಿಪ್ರಸ್ತನ್ಮತ್ಪೂಜಾವಿಧೇಃ ಫಲಂ ॥೧೭೯॥

---

ನಾಲ್ಕು ಪುರುಷಾರ್ಥಗಳೂ ಆ ಶಿವಪೂಜೆಯಿಂದುಂಟಾಗುವ ಫಲಗಳು ಇದು ಸತ್ಯವು— ಎಂದು ವೇದಗಳಲ್ಲಿ ಅನೇಕ ವಾಕ್ಯಗಳಿರುವುವು. ॥೧೭೪ ೧೭೫॥

ಎಲೈ ಬ್ರಾಹ್ಮಣನೇ, ಆದ್ದರಿಂದ ನೀನು ಜಾಬಾಲಮಹರ್ಷಿಯು ಹೇಳಿರುವ ವಿಧಿಯನ್ನನುಸರಿಸಿ, ಭಸ್ಮವನ್ನು ಉದ್ಧೂಳನಮಾಡಿಕೊಂಡು, ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲಾ ಇವುಗಳನ್ನು ಧರಿಸಿ, ಉಮಾರಮಣನಾದ ಆ ಮಹಾದೇವನನ್ನು ಪೂಜೆಮಾಡೆಂದು ಹೇಳಿದ ಆ ಬ್ರಾಹ್ಮಣೋತ್ತಮನ ಮಾತುಗಳನ್ನು ಕೇಳಿ, ಅದರಲ್ಲಿ ನಂಬಿಕೆಯಿಟ್ಟು, ತಾನು ಮೊದಲು ಸ್ನಾನಮಾಡಿ, ವಿಧಿಪ್ರಕಾರ ಭಸ್ಮೋದ್ಧೂಳನ, ಭಸ್ಮತ್ರಿಪುಂಡ್ರಾದಿಗಳಿಂದ ಅಲಂಕೃತನಾಗಿ ಆ ಪರಶಿವನನ್ನು ಭಕ್ತಿಯಿಂದ ಪೂಜೆಮಾಡಿದನು. ॥೧೭೬-೧೭೭॥

ಪೂಜೆಮಾಡಿದ ನಂತರ ಮಹಾದೇವನಿಗೆ ನಮಸ್ಕಾರಮಾಡಿ, ಆಮೇಲೆ ದೇವದೇವನ ಮುಂದೆ ಚೆನ್ನಾಗಿ ನರ್ತನಮಾಡಿದ ನಂತರ ಆ ಮನುಷ್ಯನು ನನ್ನ ಪೂಜೆಯನ್ನು ಮಾಡುತ್ತಲೇ ಪ್ರಾಣವನ್ನು ಬಿಟ್ಟನು. ॥೧೭೮॥

ಅನಂತರ ಆ ಮಾನವನು ನನ್ನ ಅನುಗ್ರಹದಿಂದ ಸಕಲ ದುಃಖಗಳನ್ನೂ ಬಿಟ್ಟು ಕೊನೆಗೆ ನನ್ನ ಸ್ವರೂಪವನ್ನೇ ಹೊಂದಿದನು. ದೇವಿ! ಇವೆಲ್ಲವೂ ಆ ಬ್ರಾಹ್ಮಣನು ನನ್ನನ್ನು ಪೂಜೆಮಾಡಿದ ಫಲವೆಂದು ತಿಳಿಯುವವನಾಗು. ॥೧೭೯॥

ತದಾನೀಂ ದ್ವಿಜಸಂವಾದಂ ಶ್ರುತ್ವಾ ತು ಯಮಕಿಂಕರಾಃ ।
ತನ್ಮೃದ್ಗಲಂ ಚ ಪತಿತಂ ವಿಲೋಕ್ಯ ತಮುಪಾಯಯುಃ ॥೧೮೦॥

ತತಸ್ತಂ ದೂರತೋ ನತ್ವಾ ಬಿಲ್ವಾರ್ಚನಪರಂ ದ್ವಿಜಂ ।
ಕಿಮಯಂ ಪುರುಷೋ ಮುಕ್ತ ಇತಿ ಪಪ್ರಚ್ಛುರಾದರಾತ್ ॥೧೮೧॥

ಮುಕ್ತ ಏವೇತಿ ತದ್ವಾಕ್ಯಂ ಶ್ರುತ್ವಾ ತಮಭಿಪೂಜ್ಯ ತೇ ।
ಯಯುರತ್ಯಂತವೇಗೇನ ಯಮಸ್ಯೈವ ನಿಕೇತನಂ ॥೧೮೨॥

ತತಸ್ತೇ ಯಮಮಾಲೋಕ್ಯ ಸಭಾಸದ್ಭಿರುಪಾಸಿತಂ ।
ದಂಡಂ ನಿವೇದ್ಯ ಕಾಲಾಯ ತಸ್ಥುಃ ಖಿನ್ನಮುಖಾಭಟಾಃ ॥೧೮೩॥

ಯಮಃ ಖಿನ್ನಮುಖಾನ್ದೂತಾನ್ವಿಲೋಕ್ಯಾತ್ಯಂತದುಃಖಿತಃ ।
ಕಿಮಾಸೀದಿತಿ ಪಪ್ರಚ್ಛ ವೃತ್ತಾಂತಂ ತಂ ನ್ಯವೇದಯನ್ ॥೧೮೪॥

---

ಆಗ ಆ ಬ್ರಾಹ್ಮಣರಿಬ್ಬರ ಸಂಭಾಷಣೆಯನ್ನು ಕೇಳಿ ಯಮಭಟರು ಬಿದ್ದಿದ್ದ ಆ ಬ್ರಾಹ್ಮಣನ ಶವವನ್ನು ನೋಡಿ, ಅದರ ಸಮೀಪಕ್ಕೆ ಹೋದರು. ॥೧೮೦॥

ಆಗ ಆತನ ಸಮೀಪದಲ್ಲಿಯೇ ಬಿಲ್ವಪತ್ರೆಗಳಿಂದ ಪರಶಿವನನ್ನು ಪೂಜೆಮಾಡುವುದರಲ್ಲಿ ತತ್ಪರನಾಗಿದ್ದ ಬ್ರಾಹ್ಮಣನನ್ನು ನೋಡಿ, ಈ ನಿಮ್ಮ ಸಮೀಪದಲ್ಲಿ ಮೃತನಾಗಿರುವ ಈ ಪುರುಷನು ಮೋಕ್ಷಹೊಂದಿದನೇ ಎಂದು ಆದರದಿಂದ ಪ್ರಶ್ನೆಮಾಡಿದರು. ॥೧೮೧॥

ಆಗ ಆ ಬ್ರಾಹ್ಮಣನು ಮುಕ್ತನೇ ಆಗಿರುವನೆಂದು ಹೇಳಿದ ವಾಕ್ಯವನ್ನು ಕೇಳಿ ಯಮಭಟರು ಆತನನ್ನು ಪೂಜೆಮಾಡಿ ಅಲ್ಲಿಂದ ವೇಗವಾಗಿ ಹೊರಟು ಯಮಪಟ್ಟಣಕ್ಕೆ ತೆರಳಿದರು. ॥೧೮೨॥

ಅನಂತರ ಅವರು ಸಭಾಸದರೊಡನೆ ಸೇವಿಸಲ್ಪಡುತ್ತಿರುವ ಯಮಧರ್ಮರಾಜನನ್ನು ನೋಡಿ ತಮ್ಮ ದಂಡಾಯುಧವನ್ನು ಸಮರ್ಪಿಸಿ ಖಿನ್ನಮನಸ್ಕರಾಗಿ ಹಿಂತಿರುಗಿದರು. ॥೧೮೩॥

ಹೀಗೆ ಮುಖಬಾಡಿ ನಿಂತಿರುವ ತನ್ನ ದೂತರನ್ನು ನೋಡಿ ಯಮನು ಅತ್ಯಂತ ದುಃಖಿತನಾಗಿ ನಡೆದ ವಿಷಯವೇನೆಂದು ಪ್ರಶ್ನೆಮಾಡಲು ಆಗ ಆ ಯಮಭಟರು ಎಲ್ಲವನ್ನೂ ಅರಿಕೆಮಾಡಿದರು. ॥೧೮೪॥

ತತಸ್ತದ್ವಚನಂ ಶ್ರುತ್ವಾ ಪ್ರಹಸ್ಯ ಮುದಿತಾನನಃ ।
ಬಭಾಷೇ ವಚನಂ ಚಾರು ಯಮೋ ದೂತಹಿತಾವಹಂ ॥೧೮೫॥

॥ ಯಮ ಉವಾಚ ॥

ಮಹಾದೇವಾರ್ಚನೇ ಪ್ರೀತಿರ್ಯಸ್ಯ ತಿಷ್ಠತ್ಯಚಂಚಲಾ ।
ತಸ್ಯಾಪಿ ಮುಕ್ತಿಃ ಫಾಲಾಕ್ಷಪೂಜಕಸ್ಯ ತು ಕಿಂ ಪುನಃ ॥೧೮೬॥

ಪ್ರಾಪ್ಯತೇ ಸರ್ವಥಾ ಮುಕ್ತಿಃ ಶಿವಪೂಜಕಪೂಜಕೈಃ ।
ಮುಕ್ತಿರ್ನ ಲಭ್ಯತೇ ಕಿಂ ತೈಃ ಸಾಕ್ಷಾಚ್ಛಂಕರಪೂಜಕೈಃ ॥೧೮೭॥

ಶಿವಲಿಂಗಾರ್ಚನಂ ಕೃತ್ವಾ ಶಿವಲಿಂಗಸ್ಯ ಸಂನಿಧೌ ।
ಯೇನ ತ್ಯಕ್ತಾ ತನುಸ್ತೇನ ಮುಕ್ತಿಃ ಪ್ರಾಪ್ತೈವ ಸರ್ವಥಾ ॥೧೮೮॥

ಭಸ್ಮಧಾರಣಮಾತ್ರೇಣ ಮುಕ್ತಿಃ ಸಂಪ್ರಾಪ್ಯತೇ ನರೈಃ ।
ತತಃ ಕಥಂ ನ ಸಂಪ್ರಾಪ್ಯಾ ಮುಕ್ತಿಃ ಶಂಕರಪೂಜಯಾ ॥೧೮೯॥

---

ಆ ಭಟರು ನುಡಿದುದನ್ನು ಕೇಳಿ ಯಮನು ಮೊದಲು ಕೊಂಚ ನಕ್ಕು ಹಸನ್ಮುಖನಾಗಿ ತನ್ನ ದೂತರಿಗೆ ಹಿತವಾಗುವಂತೆ ಮನೋಹರವಾಗಿ ಅವರನ್ನು ಕುರಿತು ಇಂತೆಂದನು. ॥೧೮೫॥

ಆ ಮಹಾದೇವನ ಪೂಜೆಯಲ್ಲಿ ಶಾಶ್ವತವಾದ (ಸ್ಥಿರವಾದ) ಪ್ರೀತಿಯುಳ್ಳವನಿಗೇ ಮೋಕ್ಷಪ್ರಾಪ್ತಿಯಿರುವಾಗ ಹಣೆಗಣ್ಣನಾದ ಆ ಮಹಾದೇವನನ್ನು ಸಾಕ್ಷಾತ್ಪೂಜೆ ಮಾಡುವವನ ವಿಷಯದಲ್ಲಿ ಹೇಳಬೇಕಾದ್ದೇನು ? ॥೧೮೬॥

ಶಿವಪೂಜಕನನ್ನು ಪೂಜೆಮಾಡುವವರಿಗೇ ಸರ್ವಥಾ ತಪ್ಪದೇ ಮೋಕ್ಷವುಂಟಾಗುವಾಗ ಸಾಕ್ಷಾತ್ ಆ ಶಂಕರನನ್ನು ಸ್ವತಃ ಪೂಜೆಮಾಡುವರಿಗೆ ಹೇಗೆ ತಾನೇ ಉಂಟಾಗಲಾರದು. ॥೧೮೭॥

ಶಿವಲಿಂಗವನ್ನು ಪೂಜೆಮಾಡಿ ಆ ಶಿವಲಿಂಗದ ಸಮೀಪದಲ್ಲಿಯೇ ಶರೀರ ತ್ಯಾಗಮಾಡುವವನಿಗೆ ಅವಶ್ಯವಾಗಿ ಮೋಕ್ಷಪ್ರಾಪ್ತಿಯಾಗುವುದು. ಕೇವಲ ಭಸ್ಮಧಾರಣೆಮಾಡಿಕೊಂಡಮಾತ್ರದಿಂದಲೇ ಮಾನವರಿಗೆ ಮೋಕ್ಷವು ದೊರೆಯುತ್ತಿರುವಾಗ ಸಾಕ್ಷಾಚ್ಛಂಕರನನ್ನೇ ಪೂಜೆಮಾಡುವುದರಿಂದ ಮೋಕ್ಷವುಂಟಾಗುವುದು ಹೆಚ್ಚೇನು ? ॥೧೮೮-೧೮೯॥

ಶಿವಪೂಜನಸರುದ್ರಾಕ್ಷಭಸ್ಮಧಾರಣತತ್ಪರಃ ।
ಕೀಕಟೇಽಪಿ ತನುಂ ತ್ಯಕ್ತ್ವಾ ಶಿವರೂಪಂ ಪ್ರಯಾತಿ ಹಿ ॥೯೦॥

ಶಿವಪೂಜನಮಾಹಾತ್ಮ್ಯಂ ಶಿವೇನ ಜ್ಞಾಯತೇ ಧ್ರುವಂ ।
ತದನ್ಯೈಸ್ತತ್ಕಥಂ ಜ್ಞೇಯಂ ತತ್ತ್ವತೋಽಸ್ಮಾಭಿರೀದೃಶೈಃ ॥೯೧॥

ರತ್ನಸ್ವರೂಪಂ ಜಾನಾತಿ ಸಮ್ಯಗ್ರತ್ನಪರೀಕ್ಷಕಃ ।
ತಥಾ ಶಿವಾರ್ಚನಸ್ಯಾಪಿ ಮಾಹಾತ್ಮ್ಯಂ ವೇದ ಶಂಕರಃ ॥೯೨॥

ಅತಃ ಪರಂ ಹಿತಂ ವಕ್ಷ್ಯೇ ಶೃಣುತಾತ್ಯಂತಯತ್ನತಃ ।
ಕರ್ತವ್ಯಮಪಿ ವಕ್ಷ್ಯೇಽಹಮಪ್ರಮಾದೇನ ಸಾದರಂ ॥೯೩॥

ತ್ರಿಪುಂಡ್ರಮಾತ್ರಂ ಯತ್ಫಾಲೇ ಭಾಸತೇ ಭಸ್ಮನಾಕೃತಂ ।
ತಾನ್ದೃಷ್ಟ್ವಾ ಪ್ರಿಯಮೇಧಾಸಃ ಪ್ರಾರ್ಚತಾರ್ಘ್ಯಾದಿಸಾಧನೈಃ॥೯೪॥

---

ಶಿವಪೂಜೆ, ರುದ್ರಾಕ್ಷ ಮತ್ತು ಭಸ್ಮ ಇವುಗಳನ್ನು ಧಾರಣೆಮಾಡುವುದರಲ್ಲಿ ತತ್ಪರನಾಗಿರುವವನು ಒಂದು ನೀಚವಾದ ಸ್ಥಳದಲ್ಲಿ ಪ್ರಾಣತ್ಯಾಗಮಾಡಿದರೂ ಆತನು ಶಿವಸ್ವರೂಪವನ್ನು ಹೊಂದುವನು. ॥೯೦॥

ಆ ಶಿವಪೂಜಾಮಹಿಮೆಯು ಶಿವನೊಬ್ಬನಿಗೆ ನಿಶ್ಚಯವಾಗಿ ಇಷ್ಟೆಂದು ಗೊತ್ತಿರುವುದೇ ಹೊರತು ಅಲ್ಪಜ್ಞರಾದ ನಮ್ಮಂಥವರಿಗೆ ಅದರ ಸ್ವರೂಪವು ಹೇಗೆ ಗೊತ್ತಾದೀತು ? ॥೯೧॥

ರತ್ನಪರೀಕ್ಷೆಮಾಡುವವರು ಮಾತ್ರ ರತ್ನಸ್ವರೂಪವನ್ನು ಚೆನ್ನಾಗಿ ತಿಳಿಯು ವಂತೆ ಶಿವಪೂಜಾಮಹಿಮೆಯನ್ನು ಶಂಕರನು ಮಾತ್ರ ಸರಿಯಾಗಿ ತಿಳಿದಿರುವನು. ॥೯೨॥

ಎಲೈ ದೂತರೇ, ಇನ್ನು ಮುಂದೆ ನಿಮಗೆ ಹಿತವಾಗುವಂತೆ ಹೇಳುವೆನು. ಅದನ್ನು ಪ್ರಯತ್ನ ಪೂರ್ವಕವಾಗಿ ಕೇಳಿರಿ. ಇನ್ನು ಮುಂದೆ ನೀವು ಮಾಡ ಬೇಕಾದದ್ದನ್ನೂ ತಿಳಿಸುವೆನು. ಅದನ್ನು ಪ್ರಮಾದವಿಲ್ಲದೇ ಆದರದಿಂದ ಲಾಲಿಸಿರಿ. ॥೯೩॥

ಭಸ್ಮದಿಂದ ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿ ಪ್ರಕಾಶಿಸುತ್ತಿರುವವನನ್ನು ನೋಡಿ, ಪ್ರೀತಿಯುಳ್ಳ ನೀವು ಪೂಜಾರ್ಹವಾದ ಸಲಕರಣೆಗಳಿಂದ ಆ ಮಹಾತ್ಮನನ್ನು ಚೆನ್ನಾಗಿ ಪೂಜೆಮಾಡಿರಿ. ॥೯೪॥

ತ್ರಿಪುಂಡ್ರರುದ್ರಾಕ್ಷಧರಃ ಶಿವಪೂಜಾಪರಾಯಣಃ ।
ಶಿವ ಏವೇತಿ ವಿಜ್ಞೇಯೋ ಭವದ್ಭಿಃ ಸರ್ವಥಾ ಭಟಾಃ ॥೧೯೫॥

ಭಾಸತೇ ಫಾಲಮನಿಶಂ ಯಸ್ಯ ಕೇವಲ ಭಸ್ಮನಾ ।
ತಸ್ಯ ಫಾಲಾಕ್ಷತಾ ಫಾಲೇ ಲಿಖಿತೈವ ನ ಸಂಶಯಃ ॥೧೯೬॥

ಭಸ್ಮರೇಖಾತ್ರಯಂ ಶುದ್ಧಂ ತತ್ಫಾಲಾಕ್ಷಾಕ್ಷರತ್ರಯಂ ।
ಫಾಲಾಕ್ಷ ಇತಿ ಸಂಜ್ಞಾಪಿ ತದಾಕಾರೇಣ ತಿಷ್ಠತಿ ॥೧೯೭॥

ಫಾಲಪಟ್ಟೇ ಭಸ್ಮರೇಖಾಸ್ವರೂಪೈಸ್ತ್ರಿಭಿರಕ್ಷರೈಃ ।
ಫಾಲಾಕ್ಷತಾ ಭಾವಿನೀತಿ ಫಾಲಾಕ್ಷಾಕ್ಷರಲೇಖನಂ ॥೧೯೮॥

ಅತಃ ಕೇವಲ ಭಸ್ಮಾಂಕಾಃ ಶಿವಪೂಜಾಪರಾಯಣಾಃ ।
ಶಿವಾಕಾರಾ ಇತಿ ಜ್ಞೇಯಾ ಸತ್ಯಂ ಸತ್ಯಂ ನ ಸಂಶಯಃ ॥೧೯೯॥

---

ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಧರಿಸಿ ಆ ಶಿವನನ್ನು ಪೂಜಿಸುವುದರಲ್ಲಿ ನಿರತನಾಗಿರುವವನನ್ನು ಸಾಕ್ಷಾತ್ಪರಶಿವನೆಂದೇ ನೀವು ನಿಶ್ಚಯವಾಗಿ ತಿಳಿಯಿರಿ. ॥೧೯೫॥

ಕೇವಲ ವಿಭೂತಿಯನ್ನು ಧರಿಸಿ ಯಾರ ಹಣೆಯು ಅನವರತವೂ ಪ್ರಕಾಶಿಸುತ್ತಿರುವುದೋ, ಅಂತಹ ಮಹಾತ್ಮನ ಹಣೆಯಲ್ಲಿ ಹಣೆಗಣ್ಣನಾದ ಆ ಪರಮೇಶ್ವರನ ಸ್ವರೂಪವೂ ಬರೆದೇ ಇದೆಯೆಂಬುದರಲ್ಲಿ ಸಂದೇಹವೇ ಇಲ್ಲ. ॥೧೯೬॥

ಹಣೆಯಲ್ಲಿ ಧರಿಸುವ ಭಸ್ಮದ ಮೂರು ರೇಖೆಗಳು ಪರಿಶುದ್ಧವಾದ ಫಾಲಾಕ್ಷನೆಂಬ ಹೆಸರಿನ ಮೂರು ಅಕ್ಷರಗಳಾಗಿರುವುವು. ಫಾಲಾಕ್ಷನೆಂಬ ಸಂಜ್ಞೆಯೂ ಆ ರೂಪದಿಂದಲೇ ಇರುವುದು. ॥೧೯೭॥

ಹಣೆಯೆಂಬ ಪತ್ರದಲ್ಲಿ ವಿಭೂತಿರೇಖಾಸ್ವರೂಪವಾದ ಮೂರು ಅಕ್ಷರಗಳಂತಿರುವ ಭಸ್ಮತ್ರಿಪುಂಡ್ರಗಳು, ಮುಂದೆ ನಿನಗೆ ಫಾಲಾಕ್ಷಪದವಿಯು ಬರುತ್ತದೆಂದು ತೋರಿಸುವುದಕ್ಕೋಸ್ಕರ ಫಾಲಾಕ್ಷನೆಂಬ ಹೆಸರಿನ ಮೂರಕ್ಷರಗಳನ್ನು ಬರೆದಿರುವಂತಿರುವುದು. ॥೧೯೮॥

ಆದ್ದರಿಂದ ಕೇವಲ ಭಸ್ಮತ್ರಿಪುಂಡ್ರಗಳನ್ನು ಧರಿಸಿ ಆ ಪರಶಿವನ ಪೂಜೆಯಲ್ಲಿ ತತ್ಪರರಾಗಿರುವವರು ಸಾಕ್ಷಾತ್ಪರಶಿವನ ಸ್ವರೂಪರೇ ಆಗಿರುವರೆಂಬುದು ಸತ್ಯವು. ಇದರಲ್ಲಿ ಸಂದೇಹವೇ ಇಲ್ಲ. ॥೧೯೯॥

ಭಸ್ಮೋದ್ಧೂಲಿತಸರ್ವಾಂಗಾನ್ದೃಷ್ಟ್ವಾ ಸೋತ್ಸಾಹಮನ್ವಹಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೦॥

ರುದ್ರಾಕ್ಷಮಾಲಾಭರಣಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೧॥

ಶಿವಲಿಂಗಾರ್ಚನಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೨॥

ಶಿವನಾಮಜಪಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೩॥

ಶಿವಪ್ರದಕ್ಷಿಣಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೪॥

ಶಿವಾಭಿವಾದನಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೫॥

---

ಸಕಲ ಅವಯವಗಳಿಗೂ ಭಸ್ಮವನ್ನು ಬಳಿದುಕೊಂಡಿರುವವರನ್ನೂ, ಭಸ್ಮಧಾರಣಪೂರ್ವಕವಾಗಿ ರುದ್ರಾಕ್ಷಮಾಲೆಗಳನ್ನು ಅಲಂಕರಿಸಿಕೊಂಡಿರುವವರನ್ನೂ ನೀವು ಪ್ರತಿನಿತ್ಯವೂ ಭ್ರಾಂತಿ ಮತ್ತು ಸೋಮಾರಿತನಗಳನ್ನು ಬಿಟ್ಟು ತುಂಬಾ ನಿಯಮದಿಂದ ಉತ್ಸಾಹಪೂರ್ವಕವಾಗಿ ಅವಶ್ಯವಾಗಿ ಪೂಜೆಮಾಡಿರಿ. ॥೨೦೦-೨೦೧॥

ವಿಭೂತಿಧಾರಣಮಾಡಿ ಶಿವಲಿಂಗವನ್ನು ಪೂಜಿಸುವುದರಲ್ಲಿ ನಿರತರಾಗಿರುವರನ್ನೂ, ಶಿವನಾಮಜಪದಲ್ಲಿ ಆಸಕ್ತರಾಗಿರುವರನ್ನೂ ನೀವು ಅಜ್ಞಾನ ಮತ್ತು ಸೋಮಾರಿತನಗಳಿಲ್ಲದೇ ತುಂಬಾ ನಿಯಮದಿಂದ ಪೂಜೆಮಾಡಿರಿ. ॥೨೦೨-೨೦೩॥

ಮೊದಲು ಭಸ್ಮತ್ರಿಪುಂಡ್ರಗಳನ್ನು ಧರಿಸಿ ಆ ಪರಶಿವನ ಪ್ರದಕ್ಷಿಣೆಯಲ್ಲಿ ಆಸಕ್ತನಾಗಿರುವವನನ್ನೂ ಮತ್ತು ಶಿವನಿಗೆ ನಮಸ್ಕಾರಮಾಡುವುದರಲ್ಲಿ ಉದ್ಯುಕ್ತನಾಗಿರುವವನನ್ನೂ ನೀವು ಸ್ವಲ್ಪವೂ ಭ್ರಾಂತಿ ಮತ್ತು ಆಲಸ್ಯಗಳನ್ನು ಹೊಂದದೇ ನಿಯಮದಿಂದ ಪೂಜೆಮಾಡಲೇಬೇಕು. ॥೨೦೪-೨೦೫॥

ಶಿವಾಗ್ರೇ ನರ್ತನಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೬॥

ಧೂಪದಾಂಛಂಕರಸ್ಥಾನೇ ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೭॥

ದೀಪದಾಂಛಂಕರಸ್ಥಾನೇ ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೮॥

ಸೋಮವಾರವ್ರತಪರಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೦೯॥

ಪ್ರದೋಷಪೂಜನಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೦॥

ನಿತ್ಯಂ ಶಿವಕಥಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೧॥

ಭೂತಾಷ್ಟಮೀವ್ರತಪರಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೨॥

---

ಭಸ್ಮವನ್ನು ಧರಿಸಿಕೊಂಡು, ಆ ಶಿವನ ಮುಂದೆ ನಾಟ್ಯವಾಡುವವರನ್ನೂ ಆ ದೇವನಿರುವ ಸ್ಥಳದಲ್ಲಿ ಧೂಪ ಮತ್ತು ದೀಪಗಳನ್ನಿಡುವವರನ್ನೂ ನೀವು ವಿಶೇಷ ನಿಯಮದಿಂದ ಅಜ್ಞಾನಾಲಸ್ಯಗಳಿಲ್ಲದೇ ಪೂಜೆಮಾಡಿರಿ. ॥೨೦೬-೨೦೭-೨೦೮॥

ಮೊದಲು ವಿಭೂತಿಯನ್ನು ಧರಿಸಿಕೊಂಡು, ಸೋಮವಾರದ ದಿವಸ ಮಾಡುವ ವ್ರತದಲ್ಲಿ ನಿರತರಾಗಿರುವವರನ್ನೂ ಮತ್ತು ಪ್ರದೋಷಕಾಲಗಳಲ್ಲಿ ಆ ಪರಶಿವನ ಪೂಜಾತತ್ಪರನಾಗಿರುವವರನ್ನೂ ನೀವು ಭ್ರಾಂತಿ ಮತ್ತು ಆಲಸ್ಯಗಳಿಲ್ಲದೇ ನಿಯಮದಿಂದ ಪೂಜೆಮಾಡಿರಿ. ॥೨೦೯-೨೧೦॥

ಭಸ್ಮಧಾರಣೆಮಾಡಿಕೊಂಡು ನಿತ್ಯವೂ ಶಿವಕಥಾಶ್ರವಣತತ್ಪರನಾಗಿರುವವನನ್ನೂ ಭೂತಾಷ್ಟಮೀ ಮತ್ತು ತ್ರಯೋದಶೀ ತಿಥಿಗಳಲ್ಲಿ ಮಾಡುವ

ತ್ರಯೋದಶೀವ್ರತಪರಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೩॥

ರುದ್ರಾಧ್ಯಾಯಜಪಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೪॥

ರುದ್ರಾಭಿಷೇಕಸಂಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೫॥

ಶಿವಧ್ಯಾನರತಾನ್ನಿತ್ಯಂ ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೬॥

ಶಿವಭಕ್ತಾರ್ಚನಪರಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೭॥

ಬಿಲ್ವಪತ್ರಾರ್ಚನರತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೮॥

ಬಿಲ್ವಪೋಷಣಸಂಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೧೯॥

---

ವ್ರತಾಚರಣೆಯಲ್ಲಿ ನಿರತನಾಗಿರುವವನನ್ನೂ ನೀವು ಅಜ್ಞಾನವನ್ನು ಬಿಟ್ಟು ಸೋಮಾರಿತನವಿಲ್ಲದೇ ನಿಯಮದಿಂದ ಪೂಜೆಮಾಡಿರಿ. ॥೨೧೧-೨೧೨-೨೧೩॥

ಭಸ್ಮಧಾರಣೆಮಾಡಿಕೊಂಡು, ರುದ್ರಾಧ್ಯಾಯಮಂತ್ರಜಪದಲ್ಲಿ ತತ್ಪರನಾಗಿರುವವನನ್ನೂ ಮತ್ತು ರುದ್ರಾಭಿಷೇಕಮಾಡುವುದರಲ್ಲಿ ತೊಡಗಿರುವವನನ್ನೂ ನೀವು ಅಜ್ಞಾನವನ್ನು ಬಿಟ್ಟು ಸೋಮಾರಿತನವಿಲ್ಲದೇ ವಿಶೇಷ ನಿಯಮದಿಂದ ಪೂಜೆ ಮಾಡಿರಿ. ॥೨೧೪-೨೧೫॥

ನಿತ್ಯವೂ ಭಸ್ಮಧಾರಣಪೂರ್ವಕವಾಗಿ ಶಿವಧ್ಯಾನತತ್ಪರರಾಗಿರುವವರನ್ನೂ ಮತ್ತು ಪರಶಿವಭಕ್ತರನ್ನು ಪೂಜೆಮಾಡುವುದರಲ್ಲಿ ಆಸಕ್ತರಾಗಿರುವವರನ್ನೂ ಅಜ್ಞಾನಾಲಸ್ಯಗಳಿಲ್ಲದೇ ನಿಯಮದಿಂದ ನೀವು ಪೂಜೆಮಾಡಿರಿ. ॥೨೧೬-೨೧೭॥

ಮೊದಲು ವಿಭೂತಿಯನ್ನು ಧರಿಸಿಕೊಂಡು ಅನಂತರ ಉತ್ತಮವಾದ ಬಿಲ್ವಪತ್ರೆಗಳಿಂದ ನನ್ನನ್ನು ಪೂಜೆಮಾಡುವುದರಲ್ಲಿ ತತ್ಪರರಾಗಿರುವವರನ್ನೂ, ಬಿಲ್ವವೃಕ್ಷ

ಬಿಲ್ವಾರೋಪಣಸಂಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೨೦॥

ಬಿಲ್ವಸ್ಪರ್ಶನಸಂಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೨೧॥

ಬಿಲ್ವದರ್ಶನಸಂಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೨೨॥

ಬಿಲ್ವಾಭಿವಾದನಾಸಕ್ತಾನ್ಭಸ್ಮಧಾರಣಪೂರ್ವಕಂ ।
ಪೂಜಯಂತ್ವತಿಯತ್ನೇನ ಭ್ರಮಾಲಸ್ಯಪರಾಙ್ಮುಖಾಃ ॥೨೨೩॥

ಶಿವ ಹರ ಭವ ಭರ್ಗ ಭೀಮ ಶಂಭೋ
ತ್ರಿನಯನ ಶಂಕರ ಶರ್ವ ಚಂದ್ರಮೌಲೇ ।
ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೨೪॥

---

ವನ್ನು ರಕ್ಷಣೆಮಾಡುವುದರಲ್ಲಿ ನಿರತರಾಗಿರುವವರನ್ನೂ ನೀವು ತುಂಬಾ ನಿಯಮ ದಿಂದ ಭ್ರಮಾಲಸ್ಯಗಳಿಲ್ಲದೇ ಪೂಜೆಮಾಡಿರಿ. ॥೨೧೮-೨೧೯॥

ಭಸ್ಮವನ್ನು ವಿಧಿಪೂರ್ವಕವಾಗಿ ಹಣೆ ಮೊದಲಾದ ಸ್ಥಳಗಳಲ್ಲಿ ಧರಿಸಿ, ಬಿಲ್ವವೃಕ್ಷಗಳನ್ನು ಹುಟ್ಟುಹಾಕುವುದರಲ್ಲಿ ತತ್ಪರರಾಗಿರುವವರನ್ನೂ, ಬಿಲ್ವವೃಕ್ಷ ಗಳನ್ನು ಮುಟ್ಟುವುದರಲ್ಲಿ ಆಸಕ್ತರಾಗಿರುವವರನ್ನೂ, ನೀವು ತುಂಬಾ ನಿಯಮದಿಂದ ಭ್ರಾಂತಿ ಮತ್ತು ಆಲಸ್ಯಗಳಿಲ್ಲದೇ ಪೂಜೆಮಾಡಿರಿ. ॥೨೨೦-೨೨೧॥

ಮೊದಲು ಭಸ್ಮವನ್ನು ಹಚ್ಚಿಕೊಂಡು ಬಿಲ್ವವೃಕ್ಷವನ್ನು ನೋಡುವುದರಲ್ಲಿ ತತ್ಪರರಾಗಿರುವವರನ್ನೂ, ಬಿಲ್ವವೃಕ್ಷಕ್ಕೆ ನಮಸ್ಕಾರಮಾಡುವುದರಲ್ಲಿ ಆಸಕ್ತರಾಗಿರು ವವರನ್ನೂ ನೀವು ತುಂಬಾ ನಿಯಮದಿಂದ ಅಜ್ಞಾನಾಲಸ್ಯಗಳಿಗೊಳಗಾಗದೇ ಪೂಜೆ ಮಾಡಿರಿ. ॥೨೨೨-೨೨೩॥

ಯೋಗಿಗಳ ಮನಸ್ಸಿನಲ್ಲಿ ಸದಾ ನೆಲಸಿರುವವನೂ, ತನ್ನ ಭಕ್ತರ ಪಾಪಗ ಳನ್ನೂ ನಾಶಮಾಡುವವನೂ, ಸಕಲ ಜಗತ್ತಿನ ಉತ್ಪತ್ತಿಗೆ ಕಾರಣನೂ, ಮನ್ಮಥ ಮತ್ತು ಯಮ ಮೊದಲಾದವರ ಅಹಂಕಾರವನ್ನು ಮುರಿದವನೂ, ವಿರೋಧಿಗಳಿಗೆ

ಪುರಹರ ಸುರನಾಥ ಮನ್ಮಥಾರೇ
ಹರಿನಯನಾಽಮಲಪೂಜಿತಾಂಘ್ರಿಪದ್ಮ ।
ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೨೫॥

ನಿರವಧಿಕರುಣಾಸುಧೈಕಸಿಂಧೋ
ಗಿರಿಶ ಗಿರೀಶ ಮಹೇಶ ಪಾರ್ವತೀಶ ।
ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೨೬॥

ಧೃತಭಸಿತ ಭುಜಂಗರಾಜರಾಜ
ಪ್ರಿಯ ಹರಿವಲ್ಲಭ ದಿವ್ಯನೀಲಕಂಠ ।

---

ಭಯಂಕರಸ್ವರೂಪನೂ, ಜಗತ್ತಿಗೆಲ್ಲಾ ಸುಖವನ್ನುಂಟುಮಾಡುವವನೂ, ಚಂದ್ರ, ಸೂರ್ಯ ಮತ್ತು ಅಗ್ನಿಸ್ವರೂಪವಾದ ಮೂರು ಕಣ್ಣುಗಳುಳ್ಳವನೂ, ಮಂಗಳಕರನೂ, ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ನಾಶಮಾಡುವವನೂ, ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಜಗತ್ಸೃಷ್ಟಿಕರ್ತನೂ, ಆದ ಶಂಕರನೇ, ನೀನೇ ನಮಗೆ ರಕ್ಷಕನೆಂದು ಹೇಳುವ ಈಶ್ವರಭಕ್ತರನ್ನು ನೀವು ವಿನಯದಿಂದ ಪದೇ ಪದೇ ಪೂಜೆ ಮಾಡಿರಿ. ॥೨೨೪॥

ತ್ರಿಪುರಾಸುರರನ್ನು ನಾಶಮಾಡಿದವನೂ, ದೇವತೆಗಳಿಗೆಲ್ಲಾ ಒಡೆಯನೂ, ಮನ್ಮಥಶತ್ರುವೂ, ವಿಷ್ಣುವಿನ ನಿರ್ಮಲವಾದ ಕಣ್ಣಿನಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ, ಆದ ಭವನೇ, (ಜಗತ್ಸೃಷ್ಟಿಕರ್ತನೇ) ನಮಗೆ ನೀನೇ ರಕ್ಷಕನೆಂದು ಹೇಳುವ ಭಕ್ತರನ್ನು ನೀವು ವಿನಯದಿಂದ ಸೇವಿಸಿ ಪೂಜೆಮಾಡಿರಿ. ॥೨೨೫॥

ಅತಿಶಯವಾಗಿ ತನ್ನ ಭಕ್ತರ ವಿಷಯದಲ್ಲಿ ಕರುಣಾಮೃತವನ್ನು ಬೀರುತ್ತಾ ಸಮುದ್ರದಂತೆ ಗಂಭೀರನೂ, ಕೈಲಾಸಪರ್ವತದಲ್ಲಿ ವಾಸಮಾಡುವವನೂ, ಬೆಟ್ಟಗಳಿಗೆಲ್ಲಾ ಒಡೆಯನೂ, ವಿಶೇಷ ಐಶ್ವರ್ಯವುಳ್ಳವನೂ, ಪಾರ್ವತೀರಮಣನೂ ಆದ ಭವನೇ, ನಮ್ಮನ್ನು ರಕ್ಷಿಸೆಂದು ಸ್ತೋತ್ರಮಾಡುವವರನ್ನು ನೀವು ಭಜಿಸುತ್ತಾ ವಿನಯದಿಂದ ಪೂಜೆಮಾಡಿರಿ. ॥೨೨೬॥

ವಿಭೂತಿಯನ್ನು ಧರಿಸಿರುವವನೂ, ಸರ್ಪರಾಜನಾದ ಆದಿಶೇಷನಲ್ಲಿ ಪ್ರೀತಿಯುಳ್ಳವನೂ, ವಿಷ್ಣುವಿನಲ್ಲಿ ವಾತ್ಸಲ್ಯವುಳ್ಳವನೂ, ದಿವ್ಯವಾದ ನೀಲವರ್ಣದ

ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೨೭॥

ವಿನಿಹತನರಸಿಂಹಚರ್ಮವಸ್ತ್ರ
ಸ್ಫುರದುರುಕಂಧರ ಕಂಧರಾಗ್ನಿಮೂರ್ತೇ ।
ಭವಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೨೮॥

ವಿನಿಹತವಿಧಿಮುಂಡರುಂಡಮಾಲಾ
ಕಲನಕರಾಲವಿಲೋಲ ಶೂಲಪಾಣೇ ।
ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೨೯॥

ವಿವಿಧವಿಭವ ವೇದಗೀತಕೀರ್ತೇ
ವಿಹಿತವಿನೋದಿತಭಾಸ್ವರಾಷ್ಟಮೂರ್ತೇ ।
ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೩೦॥

---

ಕುತ್ತಿಗೆಯಿಂದ ಶೋಭಿಸುತ್ತಿರುವವನೂ ಆದ ಭವನೇ, ನೀನೇ ಶರಣನೆಂದು ಹೇಳುತ್ತಿರುವವರನ್ನು ನೀವು ಪದೇ ಪದೇ ಭಜನೆಮಾಡುತ್ತಾ ವಿನಯದಿಂದ ಪೂಜೆಮಾಡಿರಿ. ॥೨೨೭॥

ನರಸಿಂಹಾವತಾರಮಾಡಿದ್ದ ಮಹಾವಿಷ್ಣುವಿನ ಅಹಂಕಾರವನ್ನು ಹೋಗಲಾಡಿಸುವುದಕ್ಕೋಸ್ಕರ ಶರಭರೂಪವನ್ನು ತಾಳಿ ಅವನನ್ನು ಸಂಹರಿಸಿ ಆ ಚರ್ಮವನ್ನು ಬಟ್ಟೆಯಂತೆ ಹೊದಿಯುತ್ತಾ ಪ್ರಕಾಶಿಸುತ್ತಿರುವ ದೊಡ್ಡಭುಜವುಳ್ಳವನೂ, ಆಕಾಶ, ಭೂಮಿ ಮತ್ತು ಅಗ್ನಿ ಇವರ ಸ್ವರೂಪನೂ ಆಗಿರುವ ಭವನೇ, ನೀನೇ ಶರಣು ಎಂದು ಅನವರತವೂ ಶಿವಧ್ಯಾನಮಾಡುತ್ತಿರುವವರನ್ನು ನೀವು ಸೇವಿಸುತ್ತಾ ವಿನಯದಿಂದ ಪದೇ ಪದೇ ಪೂಜೆಮಾಡಿರಿ. ॥೨೨೮॥

ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿ ಆ ರುಂಡಮಾಲೆಯಲ್ಲಿ ಹಾಕಿಕೊಂಡು ನೋಡಲು ಉಗ್ರವಾದ ರೂಪಿನಿಂದ ವಿಹರಿಸುತ್ತಿರುವವನೂ, ತ್ರಿಶೂಲಾಯುಧವನ್ನು ಕೈಯಲ್ಲಿ ಹಿಡಿದಿರುವವನೂ, ಆದ ಭವನೇ, ನನಗೆ ನೀನೇ ರಕ್ಷಕ

ಶರಣದ ಶಿಪಿವಿಷ್ಟ ಕಾಲಕಾಲ
ತ್ರಿದಶವರಾಮರಸೇವಿತಾಂಘ್ರಿಪೀಡ ।
ಭವ ಶರಣಮಿತೀರಯಂತಿ ಯೇ ತಾ
ನ್ಭಜತ ಮುಹುರ್ವಿನಯೇನ ಪೂಜಯಧ್ವಂ ॥೨೩೧॥

ಯೇ ಭಸ್ಮಧಾರಣಂ ತ್ಯಕ್ತ್ವಾ ಸಂಧ್ಯಾಂ ಕುರ್ವಂತಿ ಮಾನವಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೨॥

ಯೇ ಭಸ್ಮಧಾರಣಂ ತ್ಯಕ್ತ್ವಾ ಹೋಮಂ ಕುರ್ವಂತಿ ಮಾನವಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೩॥

---

ನೆಂದು ಹೇಳುವವರನ್ನು ನೀವು ಯಾವಾಗಲೂ ಸೇವೆಮಾಡುತ್ತಾ ಪದೇ ಪದೇ ಪೂಜೆ ಮಾಡಿರಿ. ॥೨೨೯॥

ನಾನಾವಿಧವಾದ ಐಶ್ವರ್ಯವುಳ್ಳವನೂ, ವೇದಗಳಿಂದ ಸ್ತೋತ್ರಮಾಡಲ್ಪಡುವ ಕೀರ್ತಿಯುಳ್ಳವನೂ, ಪ್ರಕಾಶಮಾನವಾದ ಎಂಟು ಮೂರ್ತಿಗಳನ್ನು (ಪೃಥಿವಿ, ನೀರು, ತೇಜಸ್ಸು, ವಾಯು, ಆಕಾಶ, ಸೂರ್ಯ ಚಂದ್ರ ಮತ್ತು ಯಜಮಾನ ಈ ಎಂಟೂ ಪರಮೇಶ್ವರನ ಅಷ್ಟಮೂರ್ತಿಗಳು) ಧರಿಸಿ ಅವುಗಳಿಂದ ಆನಂದಪಡುತ್ತಿರುವನೂ ಆದ ಭವದೇವನೇ, ನೀನೇ ನಮಗೆ ಶರಣನು ಎಂದು ಶಿವನನ್ನು ಪ್ರಾರ್ಥನೆಮಾಡು ವವರನ್ನು ನೀವು ಸೇವೆಮಾಡುತ್ತಾ ಪದೇ ಪದೇ ಅವರನ್ನು ವಿನಯದಿಂದ ಪೂಜೆ ಮಾಡಿರಿ. ॥೨೩೦॥

ಮರೆಹೊಕ್ಕವರಿಗೆ ಆಶ್ರಯಕೊಟ್ಟು ಕಾಪಾಡುವವನೂ, ಸಕಲ ಚರಾಚರಾ ತ್ಮಕವಾದ ಪ್ರಾಣಿಗಳ ಅಂತರಂಗದಲ್ಲಿಯೂ ನೆಲಸಿರುವವನೂ, ಯಮನನ್ನು ನಿಗ್ರಹಿ ಸಿದವನೂ, ದೇವತೋತ್ತಮರಿಂದಲೂ ಇತರ ದೇವತೆಗಳಿಂದಲೂ ಸೇವಿಸಲ್ಪಡುವ ಪಾದಪೀಠವುಳ್ಳವನೂ ಆದ ಭವನೇ, ನೀನೇ ರಕ್ಷಕನೆಂದು ಮೊರೆಯಿಡುತ್ತಿರುವ ಶಿವನ ಭಕ್ತರನ್ನು ನೀವು ಆದರದಿಂದ ಸೇವಿಸುತ್ತಾ, ವಿನಯಪೂರ್ವಕವಾಗಿ ಪದೇ ಪದೇ ಅವರನ್ನು ಪೂಜೆಮಾಡಿರಿ. ॥೨೩೧॥

ವಿಭೂತಿಯನ್ನು ಧರಿಸದೇ ಸಂಧ್ಯಾವಂದನೆ ಮತ್ತು ಹೋಮ ಇವುಗಳನ್ನು ಮಾಡುವವರನ್ನೂ ಹಾಗೆಯೇ ನೀರನ್ನು ಪಾನಮಾಡುವವರನ್ನೂ ಸಹ ನೀವು

ಯೇ ಭಸ್ಮಧಾರಣಂ ತ್ಯಕ್ತ್ವಾ ಪಿಬಂತಿ ಜಲಮಾದರಾತ್ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೪॥

ಯೇ ಭಸ್ಮಧಾರಣಂ ತ್ಯಕ್ತ್ವಾ ಪಿಬಂತಿ ಜಲಮಾದರಾತ್ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೫॥

ಯೇ ಭಸ್ಮಧಾರಣಂ ತ್ಯಕ್ತ್ವಾ ಸ್ವೇಚ್ಛಂ ಕುರ್ವಂತಿ ಭೋಜನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೬॥

ಯೇ ರುದ್ರಾಕ್ಷಾನ್ನ ಧೃತ್ವೈವ ಭಕ್ಷಯಂತಿ ಫಲಾದಿಕಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೭॥

ಯೇ ರುದ್ರಾಕ್ಷಾನ್ನ ಧೃತ್ವೈವ ಹೋಮಂ ಕುರ್ವಂತಿ ಮಾನವಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೮॥

ಯೇ ರುದ್ರಾಕ್ಷಾನ್ನ ಧೃತ್ವೈವ ಪಿಬಂತಿ ಜಲಮಾದರಾತ್ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೩೯॥

ಯೇ ರುದ್ರಾಕ್ಷಾನ್ನ ಧೃತ್ವೈವ ಸ್ವೇಚ್ಛಂ ಕುರ್ವಂತಿ ಭೋಜನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೦॥

---

ಅತಿ ಭಯಂಕರವಾದ ರೌರವಾದಿ ನರಕಗಳಲ್ಲಿ ಬಲವಂತದಿಂದ ತಳ್ಳಿ ಹಿಂಸಿಸಿರಿ. ||೨೩೨-೨೩೩-೨೩೪||

ವಿಧಿಪೂರ್ವಕವಾಗಿ ಭಸ್ಮವನ್ನು ಧರಿಸದೇ ಹಣ್ಣುಹಂಪಲುಗಳನ್ನು ತಿನ್ನುವವನನ್ನೂ, ತನ್ನ ಇಚ್ಛೆಯಂತೆ ಭೋಜನಾದಿಗಳನ್ನು ಮಾಡುವವನನ್ನೂ ನೀವು ಘೋರವಾದ ನರಕಗಳಲ್ಲಿ ಕೆಡವಿ ಬಲಾತ್ಕಾರದಿಂದ ಹಿಂಸೆಪಡಿಸಿರಿ. ||೨೩೫-೨೩೬||

ರುದ್ರಾಕ್ಷಗಳನ್ನು ಧರಿಸದೇ ಹಣ್ಣುಹಂಪಲುಗಳನ್ನು ತಿನ್ನುವವನನ್ನೂ, ಹೋಮ ಮಾಡುವವರನ್ನೂ, ನೀರು ಕುಡಿಯುವವನನ್ನೂ, ಯಥೇಚ್ಛವಾಗಿ ಊಟಮಾಡುವವನನ್ನೂ ಸಹ ನೀವು ದಯಾದಾಕ್ಷಿಣ್ಯಗಳಿಲ್ಲದೇ ಬಲಾತ್ಕಾರವಾಗಿ ಭಯಂಕರವಾದ ನರಕಗಳಲ್ಲಿ ತಳ್ಳಿ ಪೀಡಿಸಿರಿ. ||೨೩೭-೨೩೮-೨೩೯-೨೪೦||

ಯೇ ಶಿವಾರಾಧನಂ ತ್ಯಕ್ತ್ವಾ ಪಿಬಂತಿ ಜಲಮಾದರಾತ್ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೧॥

ಯೇ ಶಿವಾರಾಧನಂ ತ್ಯಕ್ತ್ವಾ ಭಕ್ಷಯಂತಿ ಫಲಾದಿಕಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೨॥

ಯೇ ಶಿವಾರಾಧನಂ ತ್ಯಕ್ತ್ವಾ ಸ್ವೇಚ್ಛಂ ಕುರ್ವಂತಿ ಭೋಜನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೩॥

ಯೇ ಚ ರುದ್ರಜಪಂ ತ್ಯಕ್ತ್ವಾ ಭಕ್ಷಯಂತಿ ಫಲಾದಿಕಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೪॥

ಪಂಚಾಕ್ಷರಜಪಂ ತ್ಯಕ್ತ್ವಾ ಯೇ ಪಿಬಂತಿ ಜಲಂ ಜನಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೫॥

ಪಂಚಾಕ್ಷರಜಪಂ ತ್ಯಕ್ತ್ವಾ ಯೈಃ ಫಲಾದಿ ಚ ಭಕ್ಷಿತಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೬॥

ಪಂಚಾಕ್ಷರಜಪಂ ತ್ಯಕ್ತ್ವಾ ಭುಕ್ತಂ ಯೈರಾದರಾಜ್ಜನೈಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೭॥

---

ಆ ಪರಶಿವನನ್ನು ಪೂಜೆಮಾಡದೇ ಆದರದಿಂದ ನೀರು ಕುಡಿಯುವವರನ್ನೂ, ಹಣ್ಣುಹಂಪಲು ಮೊದಲಾದವುಗಳನ್ನು ತಿನ್ನುವವರನ್ನೂ ನೀವು ಬಲಾತ್ಕಾರವಾಗಿ ಹಿಡಿದು ಭಯಂಕರವಾದ ನರಕಗಳಲ್ಲಿ ತಳ್ಳಿರಿ. ॥೨೪೧-೨೪೨॥

ಶಿವನನ್ನು ಪೂಜೆಮಾಡುವುದನ್ನು ಬಿಟ್ಟು ಯಥೇಚ್ಛವಾಗಿ ಊಟಮಾಡುವವನನ್ನೂ, ರುದ್ರಜಪವನ್ನು ಮಾಡದೇ ಹಣ್ಣುಹಂಪಲನ್ನು ತಿನ್ನುವವರನ್ನೂ ನೀವು ಭಯಂಕರವಾದ ನರಕಗಳಲ್ಲಿ ತಳ್ಳಿ ಪೀಡಿಸಿರಿ. ॥೨೪೩-೨೪೪॥ ,

ಶಿವಪಂಚಾಕ್ಷರಮಂತ್ರವನ್ನು ಜಪಮಾಡದೇ ನೀರನ್ನು ಕುಡಿಯುವವರನ್ನೂ ಹಣ್ಣುಹಂಪಲು ಮೊದಲಾದವುಗಳನ್ನು ತಿನ್ನುವವರನ್ನೂ ನೀವು ಬಲಾತ್ಕಾರವಾಗಿ ಘೋರ ನರಕಗಳಿಗೆ ತಳ್ಳಿ ಹಿಂಸಿಸಿರಿ. ॥೨೪೫-೨೪೬॥

ಶಿವಪಂಚಾಕ್ಷರಮಂತ್ರವನ್ನು ಜಪಮಾಡದೆ ಆದರದಿಂದ ಊಟಮಾಡುವವ

ರುದ್ರಾಭಿಷೇಕಪಾನೀಯಂ ನ ಪಿಬಂತ್ಯನ್ವಹಂ ಚ ಯೇ ।
ತಾನ್ಪಾತಯಂತು ಘೋರೇಷು ನರಕೇಷು ಪ್ರಯತ್ನತಃ ॥೨೪೮॥

ಯೇ ನ ಕುರ್ವಂತ್ಯಹರಹಃ ಪ್ರಣಾಮಾನ್ಶೂಲಪಾಣಯೇ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೪೯॥

ಯೇ ನ ಕುರ್ವಂತ್ಯಹರಹರ್ಬಿಲ್ವಪತ್ರೈಃ ಶಿವಾರ್ಚನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೦॥

ಯೇ ನ ಕುರ್ವಂತ್ಯಹರಹಸ್ತ್ರಿಕಾಲೇ ಶಂಕರಾರ್ಚನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೧॥

ಯೇ ನ ಕುರ್ವಂತ್ಯಹರಹರ್ಬಿಲ್ವಪತ್ರೈಃ ಶಿವಾರ್ಚನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೨॥

ಯೇ ನ ಕುರ್ವಂತ್ಯಹರಹಸ್ತ್ರಿಕಾಲಂ ಭಸ್ಮಧಾರಣಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೩॥

---

ರನ್ನೂ ರುದ್ರಾಭಿಷೇಕಮಾಡಿ ಆ ಅಭಿಷೇಕದ ನೀರನ್ನು ಕುಡಿಯುದೇ ಇರುವವನನ್ನೂ ನೀವು ಬಲಾತ್ಕಾರವಾಗಿ ಹಿಡಿದು ಭಯಂಕರವಾದ ನರಕಗಳಲ್ಲಿ ತಳ್ಳಿರಿ. ॥೨೪೭-೨೪೮॥

ತ್ರಿಶೂಲವನ್ನು ಕೈಯ್ಯಲ್ಲಿ ಹಿಡಿದಿರುವ ಆ ಪರಮೇಶ್ವರನಿಗೆ ಹಗಲೂ ರಾತ್ರಿ ಎಡಬಿಡದೇ ನಮುಸ್ಕಾರಮಾಡದಿರುವವರನ್ನೂ, ಆ ಶಿವನನ್ನು ಬಿಲ್ವಪತ್ರೆಗಳಿಂದ ಪೂಜೆಮಾಡದೇ ಇರುವವರನ್ನೂ ಸಹ ನೀವು ಬಲಾತ್ಕಾರವಾಗಿ ಭಯಂಕರವಾದ ನರಕಗಳಲ್ಲಿ ತಳ್ಳಿರಿ. ॥೨೪೯-೨೫೦॥

ಪ್ರತಿದಿನವೂ ಪ್ರಾತಃಕಾಲ ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳಲ್ಲಿಯೂ ಆ ಶಂಕರನನ್ನು ಪೂಜೆಮಾಡದವರನ್ನೂ, ಬಿಲ್ವಪತ್ರೆಗಳಿಂದ ಆ ದೇವನನ್ನು ಅರ್ಚನೆಮಾಡದವನನ್ನೂ, ನೀವು ಬಲಾತ್ಕಾರವಾಗಿ ಭಯಂಕರವಾದ ನರಕಗಳಲ್ಲಿ ತಳ್ಳಿರಿ. ॥೨೫೧-೨೫೨॥

ಪ್ರತಿದಿನವೂ ಮೂರುಕಾಲಗಳಲ್ಲಿಯೂ ವಿಭೂತಿಯನ್ನು ಧರಿಸದೆ ಇರುವವರನ್ನೂ ಮತ್ತು ಶಿವಪಂಚಾಕ್ಷರಜಪಮಾಡದೇ ಇರುವ ಬ್ರಾಹ್ಮಣರನ್ನೂ ನೀವು

ಯೇ ನ ಕುರ್ವಂತ್ಯಹರಹಃ ಪಂಚಾಕ್ಷರಜಪಂ ದ್ವಿಜಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೪॥

ಯೇ ನ ಕುರ್ವಂತ್ಯಹರಹಃ ಶ್ರೀಮದ್ರುದ್ರಜಪಂ ದ್ವಿಜಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೫॥

ಯೇ ಸೋಮವಾಸರೇ ಸ್ವೇಚ್ಛಂ ದಿವಾ ಕುರ್ವಂತಿ ಭೋಜನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೬॥

ಶಿವರಾತ್ರಿವ್ರತಂ ಪುಣ್ಯಂ ಯೇ ನ ಕುರ್ವಂತಿ ದುರ್ಧಿಯಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೭॥

ಯೇಷಾಂ ಶಿವಕಥಾಲಾಪೇಷ್ವಶ್ರದ್ಧಾ ದುಷ್ಟಮೇಧಸಾಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೮॥

ಯೇ ನ ಕುರ್ವಂತಿ ಸತತಂ ಶೈವೇಷು ಪ್ರೀತಿಮಾದರಾತ್ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೫೯॥

ಯೇ ನ ಕುರ್ವಂತಿ ಸತತಂ ಸ್ವಶಕ್ತ್ಯಾ ಶೈವಪೂಜನಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೬೦॥

---

ಅತ್ಯಂತ ಘೋರವಾದ ನರಕಗಳಿಗೆ ಬಲಾತ್ಕಾರವಾಗಿ ತಳ್ಳಿ ಹಿಂಸೆಮಾಡಿರಿ. ॥೨೫೩-೨೫೪॥

ಹಗಲು ರಾತ್ರಿಗಳೆನ್ನದೇ ಸಂಪತ್ಕರವಾದ ರುದ್ರಜಪವನ್ನು ಮಾಡದ ಬ್ರಾಹ್ಮಣರನ್ನೂ, ಸೋಮವಾರದ ದಿನ ಸ್ವೇಚ್ಛೆಯಾಗಿ ಹಗಲು ಊಟಮಾಡುವವನನ್ನೂ ನೀವು ಬಲಾತ್ಕಾರವಾಗಿ ಘೋರವಾದ ನರಕಗಳಲ್ಲಿ ತಳ್ಳಿಬಿಡಿ. ॥೨೫೫-೨೫೬॥

ಪುಣ್ಯಕರವಾದ ಶಿವರಾತ್ರಿವ್ರತವನ್ನು ಆಚರಿಸದ ಬುದ್ಧಿಹೀನರನ್ನೂ, ಶಿವಕಥಾಸಂಭಾಷಣೆಗಳಲ್ಲಿ ನಂಬಿಕೆಯಿಲ್ಲದ ದುಷ್ಟಬುದ್ಧಿಯುವರನ್ನೂ ನೀವು ಬಲಾತ್ಕಾರವಾಗಿ ಘೋರವಾದ ನರಕಗಳಲ್ಲಿ ತಳ್ಳಿರಿ. ॥೨೫೭-೨೫೮॥

ಯಾವಾಗಲೂ ಶಿವಭಕ್ತರಲ್ಲಿ ಆದರದಿಂದ ಪ್ರೀತಿಯನ್ನು ತೋರಿಸದವರನ್ನೂ, ಅನವರತವೂ ತನ್ನ ಯೋಗ್ಯತಾನುಸಾರವಾಗಿ ಶಿವಭಕ್ತರನ್ನು ಪೂಜಿಸದ

ಯೇ ಕುರ್ವಂತಿ ಭ್ರಮೇಣಾಽಪಿ ಶಿವನಿಂದಾಮಘಾಶ್ರಯಾಂ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೬೦॥

ಸುರಾಪಾನಾದಿಸಂಸಕ್ತಾ ಯೇ ಪಾಪಿಷ್ಠಾ ನರಾಧಮಾಃ ।
ತಾನ್ಪಾತಯಂತು ನರಕೇಷ್ವತಿಘೋರೇಷು ಯತ್ನತಃ ॥೨೬೨॥

ಯೇ ವಸಂತಿ ದ್ವಿಜಾ ಭೂಮೌ ಶಿವಪೂಜಾಪರಾಙ್ಮುಖಾಃ ।
ತೇಭ್ಯಃ ಸೃಷ್ಟಾನಿ ನರಕಾಣ್ಯೇತಾನ್ಯತ್ರ ಮಯಾ ಭಟಾಃ ॥೨೬೩॥

ಯೇ ಭಸ್ಮಧಾರಣಂ ತ್ಯಕ್ತ್ವಾ ತಿಷ್ಠಂತಿ ಬ್ರಾಹ್ಮಣಾ ಭುವಿ ।
ತೇಭ್ಯಃ ಸೃಷ್ಟಾನಿ ನರಕಾಣ್ಯೇತಾನ್ಯತ್ರ ಮಯಾ ಭಟಾಃ ॥೨೬೪॥

ಯೇ ಭಸ್ಮೋದ್ಧೂಲನಂ ತ್ಯಕ್ತ್ವಾ ಸಂಧ್ಯಾದ್ಯಾಚಾರತತ್ಪರಾಃ ।
ತೇಭ್ಯಃ ಸೃಷ್ಟಾನಿ ನರಕಾಣ್ಯೇತಾನ್ಯತ್ರ ಮಯಾ ಭಟಾಃ ॥೨೬೫॥

ಯೇ ಭಸ್ಮಧಾರಣಂ ತ್ಯಕ್ತ್ವಾ ಜಲಾದ್ಯಾಹಾರತತ್ಪರಾಃ ।
ತೇಭ್ಯಃ ಸೃಷ್ಟಾನಿ ನರಕಾಣ್ಯೇತಾನ್ಯತ್ರ ಮಯಾ ಭಟಾಃ ॥೨೬೬॥

---

ವರನ್ನೂ ನೀವು ಬಲಾತ್ಕಾರವಾಗಿ ಭಯಂಕರವಾದ ನರಕಗಳಲ್ಲಿ ತಳ್ಳಿರಿ.॥೨೫೯-೨೬೦॥

ಭ್ರಾಂತಿಯಿಂದಲಾದರೂ ಪಾಪರಾಶಿಗೆ ಆಶ್ರಯವಾಗಿರುವ ಶಿವನಿಂದೆಯನ್ನು ಮಾಡುವವರನ್ನೂ, ಸುರಾಪಾನ (ಹೆಂಡ ಕುಡಿಯುವುದು) ಮೊದಲಾದ ನೀಚ ಕರ್ಮಗಳಲ್ಲಿ ತತ್ಪರರಾಗಿರುವ ನರಾಧಮರನ್ನೂ, ನೀವು ಬಲವಂತದಿಂದ ಹಿಡಿದು ಘೋರವಾದ ನರಕಗಳಲ್ಲಿ ತಳ್ಳಿರಿ. ॥೨೬೧-೨೬೨॥

ಎಲೈ ಭಟರೇ, ಈ ಭೂಮಿಯಲ್ಲಿ ಶಿವಪೂಜೆಯನ್ನು ಮಾಡದೇ ಇರುವ ಬ್ರಾಹ್ಮಣರನ್ನೂ, ಭಸ್ಮವನ್ನು ಧರಿಸದೇ ಭೂಮಿಯಲ್ಲಿ ಸುಮ್ಮನೇ ಕಾಲಕಳೆಯುತ್ತಿರುವವರನ್ನೂ ಶಿಕ್ಷಿಸುವುದಕ್ಕೋಸ್ಕರವೇ ನಾನು ಈ ನರಕಗಳನ್ನು ಸೃಷ್ಟಿಮಾಡಿರುವೆನು. ॥೨೬೩-೨೬೪॥

ಅಂಗಾಂಗಗಳಿಗೆಲ್ಲಾ ಭಸ್ಮವನ್ನು ಬಳಿದುಕೊಳ್ಳದೇ ಸಂಧ್ಯಾವಂದನಾದಿ ಕರ್ಮಗಳನ್ನು ಆಚರಿಸುವುದರಲ್ಲಿ ತತ್ಪರರಾಗಿರುವವರಿಗೂ, ವಿಧಿಪೂರ್ವಕ ಭಸ್ಮವನ್ನು

ಚಕಾರ ಭೋಜನಂ ಮತ್ತಸ್ತ್ಯಕ್ತ್ವಾಯಂ ಭಸ್ಮಧಾರಣಂ ।
ತತೋಽಯಮಗ್ನಿಕುಂಡೇಽಸ್ಮಿನ್ಪತಿತಃ ಪರಿವರ್ತತೇ ॥೨೬೭॥

ಪ್ರಜ್ವಲಚ್ಛಸ್ತ್ರಕುಂಡೇಷು ಪತಿಷ್ಯತ್ಯಯಮೀದೃಶಃ ।
ತತಃ ಸಂತಪ್ತರುಧಿರೇ ಪತಿಷ್ಯತ್ಯಯಮೀದೃಶಃ ॥೨೬೮॥

ಸಾರ್ಧಾರ್ಬುದೇಷು ನರಕೇಷ್ವಯಂ ಸ್ಥಿತ್ವಾ ತತಃ ಪರಂ ।
ಚಾಂಡಾಲಯೋನಿಷ್ವೇವಾಯಂ ಮುಹುರುತ್ಪತ್ತಿಮೇಷ್ಯತಿ ॥೨೬೯॥

ಏಕೈಕನರಕಾವಾಸಃ ಕ್ಲೃಪ್ತಃ ಶತಯುಗಾವಧಿ ।
ತಾವತ್ಪರ್ಯಂತಮನಿಶಮತಿದುಃಖಂ ಭವಿಷ್ಯತಿ ॥೨೭೦॥

ಯೇ ಭಸ್ಮಧಾರಣಂ ತ್ಯಕ್ತ್ವಾ ಸ್ವೇಚ್ಛಂ ಕುರ್ವಂತಿ ಭೋಜನಂ ।
ತೇಷಾಮೇತಾದೃಶೀ ಘೋರಾ ಯಾತನಾತ್ರ ಹಿ ಜಾಯತೇ ॥೨೭೧॥

---

ಧರಿಸದೇ ನೀರು ಮೊದಲಾದವುಗಳನ್ನು ಸ್ವೀಕರಿಸುವ ನಾನು ಈ ನರಕಗಳನ್ನು ಇಲ್ಲಿ ಸೃಷ್ಟಿಮಾಡಿರುವೆನು. ॥೨೬೫-೨೬೬॥

ಅಜ್ಞಾನವಶದಿಂದ ಭಸ್ಮವನ್ನು ಹಚ್ಚಿಕೊಳ್ಳದೆ ಊಟಮಾಡಿದ್ದರಿಂದ ಈತನು ಕಾದ ಬೆಂಕಿಯ ಕುಂಡದಲ್ಲಿ ಬಿದ್ದು ಹೊರಳುತ್ತಿರುವನು. ಆಮೇಲೆ ಈತನು ಪ್ರಜ್ವಲಿಸುತ್ತಿರುವ ಆಯುಧಗಳ ಕುಂಡಗಳಲ್ಲಿ ಬೀಳುವನು. ಆದಾದನಂತರ ಚೆನ್ನಾಗಿ ಕಾದಿರುವ ರಕ್ತಕುಂಡಗಳಲ್ಲಿ ಬೀಳುತ್ತಾನೆ. ॥೨೬೭-೨೬೮॥

ಹೀಗೆಯೇ ಹತ್ತುಸಾವಿರದೈನೂರು ಕೋಟಿ ನರಕಗಳಲ್ಲಿ ಬಿದ್ದು ಅನಂತರ ಈತನು ಚಂಡಾಲಜಾತಿಗಳಲ್ಲಿ ಪದೇ ಪದೇ ಜನ್ಮತಾಳುತ್ತಾನೆ. ॥೨೬೯॥

ಒಂದೊಂದು ನರಕದಲ್ಲಿ ವಾಸವು ನೂರು ಯುಗಗಳೆಂದು ಅವಧಿಯಿಂದ ಕ್ಲೃಪ್ತವಾಗಿರುವುದು. ಅಲ್ಲಿಯವರೆಗೂ ಆತನಿಗೆ ಆ ನರಕದ ದುಃಖವುಂಟಾಗುತ್ತಿರುವುದು. ॥೨೭೦॥

ಭಸ್ಮವನ್ನು ಧರಿಸಿಕೊಳ್ಳದೇ ಸ್ವೇಚ್ಛೆಯಾಗಿ ಊಟಮಾಡುವವರಿಗೆ ಇಂತಹ ಘೋರವಾದ ನರಕಯಾತನೆಯುಂಟಾಗುವುದು ಸತ್ಯವು. ॥೨೭೧॥

ಯೇ ಶಿವಾರಾಧನಂ ತ್ಯಕ್ತ್ವಾ ಸ್ವೇಚ್ಛಂ ಕುರ್ವಂತಿ ಭೋಜನಂ ।
ತೇಷಾಮೇತಚ್ಛತಗುಣಂ ಯಾತನಾತ್ರ ಭವಿಷ್ಯತಿ ॥೨೭೨॥

ಮಹಾಪಾತಕಿನೋಽಪ್ಯಂತೇ ಶಿವಪೂಜಾಂ ವಿಧಾಯ ಯೇ ।
ಪ್ರಾಣಾಂಸ್ತ್ಯಜಂತಿ ತೇಷಾಂ ತು ಯಾತನಾ ನ ಭವಿಷ್ಯತಿ ॥೨೭೩॥

ಶಿವಾರ್ಚನಂ ಶಿವಧ್ಯಾನಮಂತಕಾಲೀನಮಸ್ತಿ ಯತ್ ।
ತದ್ದೂರೀಕೃತ್ಯ ದುರಿತಂ ಮೋಕ್ಷಂ ದಾಸ್ಯತ್ಯಸಂಶಯಂ ॥೨೭೪॥

ದುರ್ಲಭಂ ದುರ್ಲಭಂ ಪುಂಸಾಮಂತಕಾಲೇ ಶಿವಾರ್ಚನಂ ।
ಸತ್ಯಂ ಸತ್ಯಮಿದಂ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೭೫॥

ಶಂಕರಾನುಗ್ರಹೇ ಜಾತೇ ಕುರ್ವಂತ್ಯಂತೇ ಶಿವಾರ್ಚನಂ ।
ತೇನ ಸದ್ಯೋ ಭವಂತ್ಯೇವ ಜನಾ ನಿರ್ಧೂತಕಲ್ಮಷಾಃ ॥೨೭೬॥

---

ಆ ಪರಶಿವನನ್ನು ಪೂಜೆಮಾಡದೇ ತನ್ನ ಮನಸ್ಸಿಗೆ ಬಂದಂತೆ ಊಟ ಮಾಡುವವರಿಗಾದರೋ ಇದಕ್ಕೆ ನೂರುಪಾಲು ನರಕಯಾತನೆಗಳು ಸಂಭವಿಸುವುವು. ॥೨೭೨॥

ಮಾನವರು ಮಹಾಪಾಪಗಳನ್ನೇ ಮಾಡಿದ್ದರೂ ಆ ಪರಶಿವನನ್ನು ಪೂಜೆ ಮಾಡಿ ಪ್ರಾಣವನ್ನು ಬಿಟ್ಟದ್ದೇ ಆದರೆ, ಅವರಿಗೆ ಈ ನರಕಯಾತನೆಗಳೆಂದಿಗೂ ಉಂಟಾಗುವುದಿಲ್ಲ. ॥೨೭೩॥

ಶಿವಪೂಜೆಯೂ ಆ ಪರಶಿವನ ಧ್ಯಾನವೂ ಕೊನೆಗಾಲದಲ್ಲಿ ಉಂಟಾಗುವುದಾದರೆ, ಅದು ಸಕಲ ಪಾಪಗಳನ್ನೂ ದೂರಮಾಡಿ ಮೋಕ್ಷವನ್ನು ಕೊಡುವುದರಲ್ಲಿ ಯಾವ ಸಂಶಯವೂ ಇಲ್ಲವೆಂದು ತಿಳಿಯಿರಿ. ॥೨೭೪॥

ಪುರುಷರಿಗೆ ಮರಣಕಾಲದಲ್ಲಿ ಆ ಶಿವನ ಪೂಜಾಭಾಗ್ಯವು ದೊರೆಯುವುದು ತುಂಬಾ ದುರ್ಲಭವು. ಇದು ಸತ್ಯವಾದ ವಿಷಯವೆಂದು ನಾನು ಭುಜವನ್ನೆತ್ತಿ ಹೇಳುತ್ತಿರುವೆನು. ॥೨೭೫॥

ಮಾನವರು ಆ ಶಂಕರನ ಅನುಗ್ರಹವುಂಟಾದರೆ ಮಾತ್ರ ಕೊನೆಗಾಲದಲ್ಲಿ ಪರಶಿವನನ್ನು ಪೂಜೆಮಾಡುತ್ತಾರೆ. ಹೀಗೆ ಪೂಜೆಮಾಡುವುದರಿಂದ ಕೂಡಲೇ ಅವರ ಸಕಲ ಕಲ್ಮಷಗಳೂ ತೊಡೆದುಹೋಗುವುವು. ॥೨೭೬॥

ಶಿವಾರ್ಚನೇನ ನಷ್ಟೇಷು ಪಾಪೇಷು ವಿವಿಧೇಷ್ವಪಿ ।
ತತಃ ಸಂಪ್ರಾಪ್ನುವಂತ್ಯೇವ ಶಿವರೂಪಮಕಲ್ಮಷಂ ॥೨೭೭॥

ಶಿವಾರ್ಚನಂ ವಿನಾ ನಾಸ್ತಿ ಪಾಪನಾಶಸ್ತಥಾ ಸತಿ ।
ಶಿವಾರ್ಚನೇನ ನಶ್ಯಂತಿ ಪಾಪಾನಿ ವಿವಿಧಾನ್ಯಪಿ ॥೨೭೮॥

ಶಿವಾರ್ಚನಪರಃ ಪಾಪಾನ್ನ ಬಿಭೇತಿ ಕದಾಚನ ।
ಕೃತೇ ಶಿವಾರ್ಚನೇ ಪಾಪಾನ್ಯಪಯಾಂತ್ಯೇವ ಸರ್ವಥಾ ॥೨೭೯॥

ಯಥಾ ದಾವಾನಲೇ ಶೀಘ್ರಂ ನಶ್ಯಂತಿ ಶಲಭಾದಯಃ ।
ತಥಾ ಶಿವಾರ್ಚನೇನೈವ ನಶ್ಯಂತ್ಯಘಕುಲಂ ಕ್ಷಣಾತ್ ॥೨೮೦॥

ಯಃ ಶಂಕರಾರ್ಚನಪರೋ ಭಸ್ಮೋದ್ಧೂಳನಪೂರ್ವಕಂ ।
ಅನನ್ಯಶರಣೋ ನಿತ್ಯಂ ಶಂಕರಾರ್ಚನತತ್ಪರಾಃ ॥೨೮೧॥

ಧನ್ಯಾ ಧನ್ಯತಮಾಃ ಸತ್ಯಂ ಸತ್ಯಂ ಧನ್ಯತರಾಶ್ಚ ತೇ ॥೨೮೨॥

---

ಶಿವನ ಪೂಜೆಯಿಂದ ನಾನಾವಿಧವಾದ ಪಾಪಗಳೂ ನಾಶವಾದಮೇಲೆ ಜನರು ನಿಷ್ಕಲ್ಮಷವಾದ ಆ ಪರಶಿವನ ಸ್ವರೂಪವನ್ನು ಹೊಂದಿಯೇ ಹೊಂದುವರು. ॥೨೭೭॥

ಶಿವನನ್ನು ಪೂಜೆಮಾಡದೇ ಪಾಪವು ನಾಶವಾಗದು. ಇದು ನಿಜ. ನಾನಾವಿಧವಾದ ಪಾತಕಗಳೂ ಆ ಪರಶಿವನ ಪೂಜೆಯಿಂದಲೇ ನಾಶವಾಗುವುವು. ॥೨೭೮॥

ಶಿವಪೂಜಾತತ್ಪರನಾಗಿರುವವನು ಎಂದಿಗೂ ಪಾಪಗಳಿಂದ ಭಯಪಡುವುದಿಲ್ಲ ಆ ಪರಶಿವನನ್ನು ಪೂಜೆಮಾಡಿದರೆ ಪಾಪಗಳೆಲ್ಲವೂ ನಿಃಸಂಶಯವಾಗಿ ತೊಲಗುವುವು. ॥೨೭೯॥

ಕಾಡುಗಿಚ್ಚಿನಲ್ಲಿ ಪತಂಗವೇ ಮೊದಲಾದ ಹುಳುಗಳು ಗುಂಪು ಗುಂಪಾಗಿ ನಾಶವಾಗುವಂತೆ, ಶಿವಪೂಜೆಮಾಡುವುವರಿಂದ ಪಾಪಸಮೂಹವೆಲ್ಲವೂ ಕ್ಷಣಮಾತ್ರದಲ್ಲಿ ಧ್ವಂಸವಾಗಿಬಿಡುವುದು. ॥೨೮೦॥

ಭಸ್ಮಲೇಪನಪೂರ್ವಕವಾಗಿ ಆ ಶಂಕರನ ಪೂಜೆಯಲ್ಲಿ ನಿರತನಾಗಿರುವವನೂ, ಮತ್ತಾರನ್ನೂ ಮರೆಹೋಗದೇ ಆ ಲೋಕಶಂಕರನೊಬ್ಬನನ್ನೇ ಪೂಜಿಸುವವನೂ,

ತೇಷಾಮುದ್ಧೂಳನೇ ಪ್ರೀತಿರ್ನಿತ್ಯಂ ಸ್ವಾಭಾವಿಕೀ ಭವೇತ್ ।
ತ ಏವ ಧನ್ಯಾ ಪೂಜ್ಯಾಶ್ಚ ಪ್ರಯತ್ನೇನಾನುವಾಸರಂ ॥೨೮೩॥

ತ್ರಿಪುಂಡ್ರಧಾರಣೇ ಪ್ರೀತಿರ್ಯೇಷಾಂ ಸ್ವಾಭಾವಿಕೀ ಭವೇತ್ ।
ತ ಏವ ಧನ್ಯಾ ಪೂಜ್ಯಾಶ್ಚ ಪ್ರಯತ್ನೇನಾನುವಾಸರಂ ॥೨೮೪॥

ಶಿವಲಿಂಗಾರ್ಚನೇ ಪ್ರೀತಿರ್ಯೇಷಾಂ ಸ್ವಾಭಾವಿಕೀ ಭವೇತ್ ।
ತ ಏವ ಧನ್ಯಾ ಪೂಜ್ಯಾಶ್ಚ ಪ್ರಯತ್ನೇನಾನುವಾಸರಂ ॥೨೮೫॥

ರುದ್ರಾಕ್ಷಧಾರಣೇ ಪ್ರೀತಿರ್ಯೇಷಾಂ ಸ್ವಾಭಾವಿಕೀ ಭವೇತ್ ।
ತ ಏವ ಧನ್ಯಾಃ ಪೂಜ್ಯಾಶ್ಚ ಪ್ರಯತ್ನೇನಾನುವಾಸರಂ ॥೨೮೬॥

ರುದ್ರಾಧ್ಯಾಯಜಪೇ ಪ್ರೀತಿರ್ಯೇಷಾಂ ಸ್ವಾಭಾವಿಕೀ ಭವೇತ್ ।
ತ ಏವ ಧನ್ಯಾಃ ಪೂಜ್ಯಾಶ್ಚ ಪ್ರಯತ್ನೇನಾನುವಾಸರಂ ॥೨೮೭॥

ಪಂಚಾಕ್ಷರಜಪೇ ಪ್ರೀತಿರ್ಯೇಷಾಂ ಸ್ವಾಭಾವಿಕೀ ಭವೇತ್ ।
ತ ಏವ ಧನ್ಯಾಃ ಪೂಜ್ಯಾಶ್ಚ ಪ್ರಯತ್ನೇನಾನುವಾಸರಂ ॥೨೮೮॥

---

ಧನ್ಯನೆನಿಸುವನು. ಇಂತಹ ಶಿವಭಕ್ತರೇ ಧನ್ಯರು. ಸತ್ಯವಾಗಿಯೂ ಎಲ್ಲರಿಗಿಂತಲೂ ಇವರು ಧನ್ಯರೆನಿಸುವರು. ॥೨೮೧-೨೮೨॥

ಸ್ವಭಾವದಿಂದಲೇ ಭಸ್ಮೋದ್ಧೂಳನದಲ್ಲಿಯೂ, ಭಸ್ಮತ್ರಿಪುಂಡ್ರಧಾರಣೆಯಲ್ಲಿಯೂ ಪ್ರೀತಿಯುಳ್ಳವರೇ ಧನ್ಯರು. ಅವರನ್ನೇ ಪ್ರತಿದಿನವೂ ನಾವು ಪೂಜೆ ಮಾಡಬೇಕು. ॥೨೮೩-೨೮೪॥

ಸ್ವಭಾವವಾಗಿ, ಶಿವಲಿಂಗಪೂಜೆಯಲ್ಲಿಯೂ, ರುದ್ರಾಕ್ಷಧಾರಣೆಯಲ್ಲಿಯೂ, ಪ್ರೀತಿಯುಳ್ಳವರೇ ಧನ್ಯರು. ಅವರನ್ನೇ ನಾವು ಪ್ರತಿದಿನವೂ ನಿಯಮದಿಂದ ಪೂಜೆ ಮಾಡಬೇಕು. ॥೨೮೫-೨೮೬॥

ಸರ್ವದಾ ರುದ್ರಾಧ್ಯಾಯಮಂತ್ರ ಜಪದಲ್ಲಿಯೂ, ಶಿವಪಂಚಾಕ್ಷರ ಮಹಾ ಮಂತ್ರಜಪದಲ್ಲಿಯೂ ಪ್ರೀತಿಯುಳ್ಳವರೇ ಧನ್ಯರು. ಪ್ರತಿದಿನವೂ ನಾವು ಅವರನ್ನು ನಿಯಮದಿಂದ ಪೂಜೆಮಾಡಬೇಕು. ॥೨೮೭-೨೮೮॥

ಶಿವಾರ್ಚನಪರಾಃ ಸರ್ವೇ ಚತುರ್ವರ್ಗಫಲಾಶ್ರಯಾಃ ।
ತತಃ ಶಿವಾರ್ಚನಪರೈರಪ್ರಾಪ್ಯಂ ನಾಸ್ತಿ ಸರ್ವಥಾ ॥೨೮೯॥

ಯೇ ಯಜಂತಿ ಮಹಾದೇವಮುಪಚಾರೈಶ್ಚ ಷೋಡಶೈಃ ।
ತೇ ಸರ್ವೇ ಭಾಗ್ಯನಿಲಯಾ ಭವಿಷ್ಯಂತಿ ನ ಸಂಶಯಃ ॥೨೯೦॥

ಯಸ್ಯ ಸ್ಮರಣಮಾತ್ರೇಣ ಮೋಕ್ಷಃ ಸಂಪ್ರಾಪ್ಯತೇ ಜನೈಃ ।
ತಸ್ಯಾರ್ಚನೇನ ಸೌಭಾಗ್ಯಮವಶ್ಯಂ ಪ್ರಾಪ್ಯತೇ ಜನೈಃ ॥೨೯೧॥

ಭುಕ್ತಿಮುಕ್ತಿಪ್ರದಂ ನೃಣಾಂ ಮಹಾದೇವಸ್ಯ ಪೂಜನಂ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೯೨॥

ಶಿವಪೂಜಾಂ ವಿಹಾಯಾನ್ಯನ್ನಾಭೀಷ್ಟಫಲದಾಯಕಂ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೯೩॥

---

ಶಿವಪೂಜಾತತ್ಪರರೆಲ್ಲರೂ, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವರ್ಗಗಳಿಗೆ ಆಶ್ರಯರಾಗಿಯೇ ಇರುವರು. ಆದ್ದರಿಂದ ಆ ಶಿವಪೂಜಾಸಕ್ತರಿಗೆ ಯಾವುದೂ ದುರ್ಲಭವಾಗಲಾರದು. ಆ ಮಹಾದೇವನನ್ನು 'ಧ್ಯಾನ, ಆವಾಹನ' ಮೊದಲಾದ ಹದಿನಾರು ಉಪಚಾರಗಳಿಂದ ಪೂಜೆಮಾಡುವರೆಲ್ಲರೂ ಸಕಲ ಐಶ್ವರ್ಯಗಳಿಗೂ ನೆಲೆಯಾಗಿ ಮೆರೆಯುವರೆಂಬುದರಲ್ಲಿ ಸಂದೇಹವೇ ಇಲ್ಲ. ॥೨೮೯-೨೯೦॥

ತನ್ನ ಸ್ಮರಣಮಾತ್ರದಿಂದಲೇ ಮಾನವರಿಗೆ (ಭಕ್ತರಿಗೆ) ಮೋಕ್ಷವನ್ನು ಕರುಣಿಸುವ ಆ ಮಹಾದೇವನನ್ನು ಪೂಜೆಮಾಡುವುದರಿಂದ ಜನಗಳಿಗೆ ಖಂಡಿತವಾಗಿಯೂ ಸಕಲಸೌಭಾಗ್ಯಗಳೂ ದೊರೆಯುವುವು. ॥೨೯೧॥

ಆ ಮಹಾದೇವನ ಪೂಜೆಯು ಮನುಷ್ಯರಿಗೆ, ಇಹದಲ್ಲಿ ಸಕಲ ಭೋಗಗಳನ್ನೂ, ಪರದಲ್ಲಿ ಮೋಕ್ಷವನ್ನೂ ಸತ್ಯವಾಗಿಯೂ ಕೊಡುವುದು. ಶಿವಪೂಜೆಯನ್ನು ಬಿಟ್ಟು ಉಳಿದುದಾವುದೂ ಜನಗಳಿಗೆ ಅಭೀಷ್ಟಗಳನ್ನು ಕೊಡಲಾರದು. ಇದು ಸತ್ಯವಾದ ವಿಷಯವೆಂದು ನಾನು ಭುಜವನ್ನೆತ್ತಿ ಸಾರಿ ಹೇಳುತ್ತೇನೆ. ॥೨೯೨-೨೯೩॥

ವೈಕುಂಠಲೋಕಂ ಸಂಪ್ರಾಪ ವಿಷ್ಣುಃ ಶಂಕರಪೂಜಯಾ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೯೪॥

ಸತ್ಯಲೋಕಂ ವಿಧಿಃ ಪ್ರಾಪ ಶಂಕರಸ್ಯೈವ ಪೂಜಯಾ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೯೫॥

ಶಂಕರಾಭ್ಯರ್ಚನಾದೇವ ಸ್ವರ್ಗಂ ಪ್ರಾಪ ಶಚೀಪತಿಃ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೨೯೬॥

ಕಿಂ ಚ ಕಿಂ ಬಹುನೋಕ್ತೇನ ಶೃಣ್ವಂತ್ವೇಕಂ ವಚೋ ಮಮ ।
ಅಶೈವಾನಾನಯಂತ್ವತ್ರ ಶೈವಾಂಸ್ತು ನ ಕದಾಚನ ॥೨೯೭॥

ಶೈವಾಸ್ತೇ ಯೇ ಮಹಾದೇವಮನನ್ಯಶರಣಾಃ ಸದಾ ।
ಪೂಜಯಂತ್ಯತಿಯತ್ನೇನ ತೇ ಸಂಪೂಜ್ಯಾ ಮಮ ಧ್ರುವಂ ॥೨೯೮॥

ಯೇ ಭಸ್ಮಚ್ಛನ್ನಸರ್ವಾಂಗಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ತೇ ಶೈವಾಃ ಶಂಕರಾಸಕ್ತಾಸ್ತೇ ತು ಪೂಜ್ಯಾ ಮಮ ಧ್ರುವಂ ॥೨೯೯॥

---

ಶಿವಪೂಜೆಮಾಡಿ ವಿಷ್ಣುವು ವೈಕುಂಠವನ್ನೂ, ಬ್ರಹ್ಮನು ಸತ್ಯಲೋಕವನ್ನೂ, ಶಚೀದೇವಿಯ ರಮಣನಾದ ಇಂದ್ರನು ಸ್ವರ್ಗಲೋಕವನ್ನೂ ಸತ್ಯವಾಗಿಯೂ ಹೊಂದಿದರು. ಈ ವಿಷಯವು ಸತ್ಯವಾದದ್ದು ಎಂದು ನಾನು ಪುನಃ ಪುನಃ ಭುಜವೆತ್ತಿ ಹೇಳುತ್ತೇನೆ. ॥೨೯೪-೨೯೫-೨೯೬॥

ಓ ಭಟರೇ! ಹೆಚ್ಚು ಹೇಳುವುದರಿಂದ ಪ್ರಯೋಜನವೇನು! ಸಾರಭೂತವಾದ ಒಂದೇ ಮಾತನ್ನು ಹೇಳುವೆನು ಕೇಳಿ. ಇಲ್ಲಿಗೆ ಈಶ್ವರಭಕ್ತರಲ್ಲದ ಇತರರನ್ನು ಮಾತ್ರ ತೆಗೆದುಕೊಂಡು ಬರುವುದೇ ಹೊರತು, ಶಿವಾನುಗ್ರಹಕ್ಕೆ ಪಾತ್ರರಾಗಿರುವರನ್ನು ಎಂದಿಗೂ ತರಬೇಡಿರಿ. ॥೨೯೭॥

ಮತ್ತಾವ ದೇವತೆಗಳನ್ನೂ ಶರಣುಹೊಂದದೇ ಯಾವಾಗಲೂ ಆ ಮಹಾದೇವನನ್ನೇ ಶ್ರದ್ಧಾ ನಿಯಮದಿಂದ ಪೂಜೆಮಾಡುವ ಪರಶಿವಭಕ್ತರು ನಿಶ್ಚಯವಾಗಿ ನನಗೂ ಪೂಜ್ಯರೇ ಆಗಿರುವರು. ॥೨೯೮॥

ಸಕಲ ಅವಯವಗಳಿಗೂ ಭಸ್ಮವನ್ನು ಬಳಿದುಕೊಂಡು, ಹಣೆ, ತೋಳು, ಮೊದಲಾದ ಸ್ಥಳಗಳಲ್ಲಿ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ಕೊರಳು, ಮೊದಲಾದ

ಯೇ ಕಂಠಾದ್ಯಂಗಸಂಸಕ್ತರುದ್ರಾಕ್ಷಾಭರಣಾಃ ಸದಾ ।
ತೇ ಶೈವಾಃ ಶಂಕರಾಸಕ್ತಾಸ್ತೇ ತು ಪೂಜ್ಯಾ ಮಮ ಧ್ರುವಂ ॥೨೦೦॥

ಯೇಷಾಮಸ್ತಿ ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೨೦೧॥

ಯೇಷಾಂ ಭಸ್ಮನಿ ರುದ್ರಾಕ್ಷೇ ಭಕ್ತಿರವ್ಯಭಿಚಾರಿಣೀ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೨೦೨॥

ಯೇ ಕುರ್ವಂತಿ ಶಿವಧ್ಯಾನಮಪ್ರಮಾದೇನ ಸರ್ವದಾ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೨೦೩॥

ಯೇ ಕುರ್ವಂತಿ ಪ್ರಯತ್ನೇನ ಸೋಮವಾರವ್ರತಂ ಜನಾಃ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೨೦೪॥

ಯೇ ಕುರ್ವಂತಿ ಶಿವಸ್ಥಾನೇ ಧೂಪದಾನಂ ಪ್ರಯತ್ನತಃ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೨೦೫॥

ಯೇ ಕುರ್ವಂತಿ ಶಿವಸ್ಥಾನೇ ದೀಪಮಾಲಾಂ ಪ್ರಯತ್ನತಃ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೨೦೬॥

---

ಜಾಗಗಳಲ್ಲಿ ರುದ್ರಾಕ್ಷಗಳನ್ನು ಅಲಂಕರಿಸಿಕೊಂಡಿರುವ, ಆ ಶಿವಭಕ್ತರು ಯಾವಾಗಲೂ ಆ ಶಂಕರನಲ್ಲಿಯೇ ಆಸಕ್ತರಾಗಿರುವುದರಿಂದ ನನಗೂ ಅವರು ಪೂಜ್ಯರೇ ಎಂಬುದರಲ್ಲಿ ಸಂದೇಹವೇ ಇಲ್ಲ. ॥೧೯೯-೨೦೦॥

ಆ ಮಹಾದೇವನಲ್ಲಿಯೂ, ಭಸ್ಮ ಮತ್ತು ರುದ್ರಾಕ್ಷ ಇವುಗಳಲ್ಲಿಯೂ ಚಂಚಲವಾಗದ ಭಕ್ತಿಯು ಇರುವವರಿಗೆ ಸಂದೇಹವೇ ಇಲ್ಲದೇ ಮೋಕ್ಷವುಂಟಾಗುವುದು. ॥೨೦೧-೨೦೨॥

ಪ್ರಮಾದವಿಲ್ಲದೇ ಯಾವಾಗಲೂ ಶಿವಧ್ಯಾನಮಾಡುವವರಿಗೂ, ನಿಯಮದಿಂದ ಸೋಮವಾರ ವ್ರತವನ್ನು ಆಚರಿಸುವವರಿಗೂ, ಸಂದೇಹವಿಲ್ಲದೇ ಮೋಕ್ಷವು ದೊರೆತೇ ದೊರೆಯುವುದು. ॥೨೦೩-೨೦೪॥

ಶಿವದೇವಾಲಯದಲ್ಲಿ ನಿಯಮದಿಂದ ಧೂಪವನ್ನೂ, ದೀಪಮಾಲೆಯನ್ನೂ

ಯೇ ಕುರ್ವಂತಿ ಪ್ರಯತ್ನೇನ ಬಿಲ್ವಪತ್ರೈಃ ಶಿವಾರ್ಚನಂ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೩೦೭॥

ಯೇ ಕುರ್ವಂತಿ ಪ್ರಯತ್ನೇನ ಭಸ್ಮರುದ್ರಾಕ್ಷಧಾರಣಂ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೩೦೮॥

ಯೇ ಕುರ್ವಂತ್ಯತಿಯತ್ನೇನ ರುದ್ರಾಧ್ಯಾಯಜಪಂ ಮುದಾ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೩೦೯॥

ಯೇ ಕುರ್ವಂತ್ಯತಿಯತ್ನೇನ ಪಂಚಾಕ್ಷರಜಪಂ ಮುದಾ ।
ತೇಷಾಂ ಮುಕ್ತಿರ್ಭವತ್ಯೇವ ಮಾ ಕುರ್ವಂತ್ವತ್ರ ಸಂಶಯಂ ॥೩೧೦॥

ಶೈವಾಸ್ತು ರುದ್ರಾ ರುದ್ರಾಕ್ಷಭೋಗ ಭೋಗಿ ವಿಭೂಷಣಾಃ ।
ತ್ರಿಪುಂಡ್ರಚಂದ್ರಾರ್ಧಧರಾ ನಿತ್ಯಂ ಶಂಕರಕಿಂಕರಾಃ ॥೩೧೧॥

ಕಃ ಸಮೀಕ್ಷಯಿತುಂ ಶಕ್ಯೋ ಭುವಿ ಶಂಕರಕಿಂಕರಾನ್ ।
ಯೈರಿಂದ್ರೋಪೇಂದ್ರಚಂದ್ರಾದ್ಯಾಸ್ತೃಣವತ್ಸಮುಪೇಕ್ಷಿತಾಃ ॥೩೧೨॥

---

ಸಮರ್ಪಣೆಮಾಡುವವರಿಗೆ ಸಂಶಯವಿಲ್ಲದೇ ಮೋಕ್ಷವು ದೊರೆತೇ ದೊರೆಯುವುದು. ॥೩೦೫-೩೦೬॥

ನಿಯಮದಿಂದ ಬಿಲ್ವಪತ್ರೆಗಳನ್ನು ತಂದು ಶಿವಪೂಜೆಮಾಡುವವನಿಗೂ, ಭಸ್ಮ ತ್ರಿಪುಂಡ್ರ, ಮತ್ತು ರುದ್ರಾಕ್ಷಮಾಲಾ, ಇವುಗಳನ್ನು ಧರಿಸುವವನಿಗೂ ತಪ್ಪದೇ ಮೋಕ್ಷವುಂಟಾಗುವುದೆಂಬುದರಲ್ಲಿ ಸಂಶಯವೇ ಇಲ್ಲ. ॥೩೦೭-೩೦೮॥

ಪ್ರೀತಿಪೂರ್ವಕವಾಗಿ ಭಕ್ತಿ ನಿಯಮದಿಂದ ರುದ್ರಾಧ್ಯಾಯವನ್ನು ಜಪ ಮಾಡುವನಿಗೂ, ಹಾಗೆಯೇ ಶಿವಪಂಚಾಕ್ಷರ ಮಹಾಮಂತ್ರವನ್ನು ಜಪಿಸುವವನಿಗೂ ಸಂಶಯವಿಲ್ಲದೇ ಮೋಕ್ಷವುಂಟಾಗುವುದು. ॥೩೦೯-೩೧೦॥

ಶಿವಭಕ್ತರೆಲ್ಲರೂ ರುದ್ರನಂತೆಯೇ, ರುದ್ರಾಕ್ಷ, ಸರ್ಪ ಇವುಗಳನ್ನು ಅಲಂಕರಿಸಿಕೊಂಡಿರುವರು. ಆ ಶಂಕರನ ಕಿಂಕರರ ಹಣೆಯಲ್ಲಿ ಭಸ್ಮತ್ರಿಪುಂಡ್ರವೂ, ಜಟೆಗಳಲ್ಲಿ ಅರ್ಧಚಂದ್ರನೂ ಶೋಭಿಸುತ್ತಿರುವರು. ॥೩೧೧॥

ಇಂದ್ರ, ವಿಷ್ಣು, ಚಂದ್ರ, ಇವರೇ ಮೊದಲಾದವರನ್ನು ಹುಲ್ಲಿನಂತೆ ಉಪೇಕ್ಷೆಮಾಡಿರುವ ಆ ಶಂಕರನ ಕಿಂಕರರನ್ನು ಈ ಭೂಮಂಡಲದಲ್ಲಿ ಯಾರು ತಾನೇ ದರ್ಶನಮಾಡಲು ಸಾಧ್ಯವಾದೀತು ? ॥೩೧೨॥

ಇಂದ್ರೋಪೇಂದ್ರಾದಯೋ ದೇವಾಃ ಶೈವಾನ್ದೃಷ್ಟ್ವಾತಿಯತ್ನತಃ ।
ಅಭ್ಯುತ್ಥಾಯಾರ್ಘ್ಯಪಾದ್ಯಾದ್ಯೈಃ ಪೂಜಾಂ ಕುರ್ವಂತಿ ಸಾದರಂ ॥೩೧೩॥

ಭೂರಿಭಾಗ್ಯಪ್ರಭಾವೇನ ಶೈವೋ ಭವತಿ ಮಾನವಃ ।
ತಂ ನಾರ್ಚಯಂತಿ ಯೇ ಭಕ್ತ್ಯಾ ತೇ ಮೂಢಾಃ ಶಿವವಂಚಿತಾಃ ॥೩೧೪॥

ಅತೋ ಭವಂತಃ ಸತತಂ ಯದಿ ಜೀವಾತುಮಿಚ್ಛತಿ ।
ತದಾ ಶೈವಾನ್ಪೂಜಯಂತು ಪ್ರಯತ್ನೇನ ಸ್ವಶಕ್ತಿತಃ ॥೩೧೫॥

ರುದ್ರಾಕ್ಷಭಸ್ಮಾಭರಣಾಃ ಶಿವೈಕಪರದೇವತಾಃ ।
ಪೂಜ್ಯಾ ಭವಂತಿ ಯತ್ನೇನ ಬ್ರಹ್ಮನಾರಾಯಣಾದಿಭಿಃ ॥೩೧೬॥

ಮಾ ಗಚ್ಛಂತು ಭ್ರಮೇಣಾಪಿ ಯೂಯಂ ಶೈವಗೃಹಾನ್ಪ್ರತಿ ।
ಭವದ್ರೂಪಂ ಸಮಾಲೋಕ್ಯ ತೇಷಾಂ ಪೀಡಾ ಭವಿಷ್ಯತಿ ॥೩೧೭॥

---

ಇಂದ್ರ, ಉಪೇಂದ್ರ, ಮೊದಲಾದ ದೇವತೆಗಳೂ ಸಹ ಈಶ್ವರಭಕ್ತರನ್ನು ನೋಡಿ, ಭಕ್ತಿ ನಿಯಮದಿಂದ, ಎದ್ದು ಅರ್ಘ್ಯ, ಪಾದ್ಯ, ಮೊದಲಾದವುಗಳನ್ನು ಕೊಟ್ಟು ಆದರಪೂರ್ವಕವಾಗಿ ಪೂಜೆಮಾಡುತ್ತಾರೆ. ॥೩೧೩॥

ಅತಿಶಯವಾದ ಭಾಗ್ಯಮಹಿಮೆಯಿಂದ ಮಾನವನು ಶೈವವರ್ಯನಾಗಿ ಜನಿಸುತ್ತಾನೆ. ಅಂತಹ ಶೈವಜನರನ್ನು ಭಕ್ತಿಯಿಂದ ಪೂಜೆಮಾಡದೇ ಇರುವ ಮೂರ್ಖರು ನಿಜವಾಗಿಯೂ ಆ ಪರಶಿವನಿಂದ ವಂಚಿತರೇ ಸರಿ. ॥೩೧೪॥

ಆದ್ದರಿಂದ ನೀವೆಲ್ಲರೂ ಯಾವಾಗಲೂ ಬದುಕಲು ಅಪೇಕ್ಷಿಸುವುದಾದರೆ ನಿಮ್ಮ ಶಕ್ತ್ಯನುಸಾರವಾಗಿ ನಿಯಮದಿಂದ ಆ ಶಿವಪೂಜಾಸಕ್ತರಾದ ಶೈವರನ್ನು ಪೂಜೆಮಾಡಿರಿ. ॥೩೧೫॥

ರುದ್ರಾಕ್ಷ, ಮತ್ತು ವಿಭೂತಿ ಇವುಗಳನ್ನಲಂಕರಿಸಿಕೊಂಡು, ಆ ಶಿವನೊಬ್ಬನನ್ನೇ ಉತ್ಕೃಷ್ಟ ದೈವವೆಂದು ತಿಳಿದಿರುವ ಆ ಶಿವಭಕ್ತರು ಬ್ರಹ್ಮ, ನಾರಾಯಣ ಮೊದಲಾದ ದೇವತೆಗಳಿಂದಲೂ ನಿಯಮದಿಂದ ಪೂಜಾರ್ಹರಾಗಿರುವರು. ॥೩೧೬॥

ಅಜ್ಞಾನದಿಂದಲಾದರೂ ನೀವು ಆ ಶಿವಪೂಜಕರ ಮನೆಗೆ ಹೋಗಬೇಡಿ. ಹಾಗೆ ಹೋದರೆ ನಿಮ್ಮ ಭಯಂಕರವಾದ ಆಕಾರವನ್ನು ನೋಡಿ, ಈಶ್ವರಭಕ್ತರಿಗೆ ವ್ಯಥೆಯುಂಟಾಗುತ್ತದೆ. ॥೩೧೭॥

ಭವತ್ಕೃತಂ ಯದಿ ಭವೇತ್ತೇಷಾಂ ದುಃಖಂ ತದಾ ಮಯಾ ।
ತ್ಯಾಜ್ಯಾ ಭವಂತಃ ಸರ್ವೇಽಪಿ ಶಿಕ್ಷಣೀಯಾಶ್ಚ ಯತ್ನತಃ ॥೩೧೮॥

ಭವದ್ಭಿಃ ಶೈವಪೂಜಾರ್ಥಂ ಗಮ್ಯತೇ ಯದಿ ಸಾದರಂ ।
ಸೌಮ್ಯರೂಪಧರೈರೇವ ಗಂತವ್ಯಂ ಪುಷ್ಪಪಾಣಿಭಿಃ ॥೩೧೯॥

ಯಥಾ ಶಿವಾರ್ಚನೇ ಪ್ರೀತಿಸ್ತಥಾ ಶೈವಜನಾರ್ಚನೇ ।
ಪ್ರೀತಿಃ ಕಾರ್ಯಾ ತಯಾ ಪ್ರೀತ್ಯಾ ಪ್ರೀತೋ ಭವತಿ ಶಂಕರಃ ॥೩೨೦॥

ಪುರಾ ವಿಷ್ಣುಪ್ರಭೃತಿಭಿಃ ಕದಾಚಿದ್ಭೂತಲೇ ಗತಂ ।
ತದಾ ಹಿಮಾಲಯಪ್ರಾಂತೇ ದದೃಶುಃ ಶಿವಪೂಜಕಂ ॥೩೨೧॥

ಭಸ್ಮೋದ್ಧೂಲಿತಸರ್ವಾಂಗಂ ತ್ರಿಪುಂಡ್ರಾಂಕಿತಮಸ್ತಕಂ ।
ರುದ್ರಾಕ್ಷಮಾಲಾಭರಣಂ ಪಂಚಾಕ್ಷರಪರಾಯಣಂ ॥೩೨೨॥

---

ನಿಮ್ಮಿಂದ ಮಹೇಶ್ವರಭಕ್ತರಿಗೆ ದುಃಖವುಂಟಾಗುವುದಾದರೆ, ನಾನು ನಿಮ್ಮೆಲ್ಲರನ್ನೂ ತ್ಯಾಗಮಾಡುವೆನಲ್ಲದೇ ಬಲಾತ್ಕಾರವಾಗಿ ನಿಮಗೆ ಶಿಕ್ಷೆಮಾಡುವೆನು. ॥೩೧೮॥

ಒಂದುವೇಳೆ ನೀವು ಆದರದಿಂದ ಪರಮಶಾಂಭವರನ್ನು ಪೂಜೆಮಾಡಲು ಹೋಗುವುದಾದರೆ ಆಗ ಅವರ ಮನಸ್ಸಿಗೆ ಉದ್ವೇಗವುಂಟಾಗದಂತೆ, ಸೌಮ್ಯರೂಪವನ್ನು ತಾಳಿ ಕೈಯಲ್ಲಿ ಹೂಗಳನ್ನು ತೆಗೆದುಕೊಂಡು ಹೋಗಬೇಕು. ॥೩೧೯॥

ಶಿವನ ಪೂಜೆಯಲ್ಲಿರುವಂತೆಯೇ ಅವನ ಭಕ್ತರ ಪೂಜೆಯ ವಿಷಯದಲ್ಲಿಯೂ ಪ್ರೀತಿಯನ್ನು ತೋರಿಸುವುದರಿಂದ ಆ ಶಂಕರನು ಸಂತುಷ್ಟನಾಗುವನು. ॥೩೨೦॥

ಹಿಂದೆ ವಿಷ್ಣುವೇ ಮೊದಲಾದ ದೇವತೆಗಳು ಒಂದು ಸಲ ಈ ಭೂಮಿಯಲ್ಲಿ ಸಂಚಾರ ಹೊರಟರು. ಹಾಗೆಯೇ ಬರುಬರುತ್ತಾ ಹಿಮಾಲಯ ಪರ್ವತದ ತಪ್ಪಲಲ್ಲಿ, ಸಕಲ ಅವಯವಗಳಿಗೂ ವಿಭೂತಿಯನ್ನು ಬಳಿದುಕೊಂಡು, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಮಾಲಾಲಂಕೃತನಾಗಿ ಶಿವಪಂಚಾಕ್ಷರ ಮಂತ್ರವನ್ನು ಪಾರಾಯಣಮಾಡುತ್ತಿರುವ ಶಿವಪೂಜಕನೊಬ್ಬನನ್ನು ಕಂಡರು. ॥೩೨೧-೩೨೨॥

ಬಿಲ್ವಪತ್ರೈರ್ಮಹಾದೇವಂ ಪೂಜಯಂತಂ ಪ್ರಯತ್ನತಃ ।
ಪಶ್ಯಂತಂ ದೇವದೇವೇಶಂ ಮಹೇಶಂ ಪೂಜಿತಂ ಮುದಾ ॥೩೨೩॥

ಏತಾದೃಶಂ ವಿಲೋಕ್ಯೈತೇ ರೋಮಾಂಚಾಂಕಿತವಿಗ್ರಹಾಃ ।
ಶಿವಂ ಸಂಪೂಜ್ಯ ನತ್ವಾ ತಂ ಪ್ರಣೇಮುರತಿಭಕ್ತಿತಃ ॥೩೨೪॥

ತತಃ ಕೃತಾಂಜಲಿಪುಟಾ ವಿಷ್ಣ್ವಾದ್ಯಾಸ್ತತ್ರ ಸಂಸ್ಥಿತಾಃ ।
ಶೈವಃ ಸಮಾಪ್ಯ ಪೂಜಾಂ ತಾನ್ವಿಷ್ಣ್ವಾದೀನ್ಸಮಲೋಕಯತ್ ॥೩೨೫॥

ಕೃತಾಂಜಲಿಪುಟಾನ್ದೇವಾನ್ದೃಷ್ಟ್ವಾ ಸಂತುಷ್ಟಮಾನಸಃ ।
ಪ್ರಣಮ್ಯ ಶೈವಬುದ್ಧ್ಯಾ ತಾನ್ಕುಶಲಂ ಪರ್ಯಪೃಚ್ಛತ ॥೩೨೬॥

ತತಃ ಪ್ರಸನ್ನವದನಃ ವಿಷ್ಣುಃ ಶಿವಪರಾಯಣಃ ।
ಉವಾಚ ವಚನಂ ಚಾರು ಶ್ರದ್ಧಾಭಕ್ತಿಪುರಸ್ಸರಂ ॥೩೨೭॥

---

ಆ ಸಮಯದಲ್ಲಿ ಆತನು ಬಿಲ್ವಪತ್ರೆಗಳಿಂದ ಮಹಾದೇವನನ್ನು ಪ್ರಯತ್ನ ಪುರಸ್ಸರವಾಗಿ ಪೂಜೆಮಾಡುತ್ತಲೂ, ಹಾಗೆ ಪೂಜೆಮಾಡಿದ ದೇವದೇವನೆನಿಸಿದ ಮಹೇಶ್ವರನನ್ನು ನೋಡುತ್ತಲೂ ಇದ್ದನು. ॥೩೨೩॥

ಈರೀತಿಯಾಗಿರುವ ಶೈವೋತ್ತಮನನ್ನು ನೋಡಿ ಆ ವಿಷ್ಣುವೇ ಮೊದಲಾದ ದೇವತೆಗಳು ಆಶ್ಚರ್ಯದಿಂದ ರೋಮಾಂಚವನ್ನು ಹೊಂದಿ, ತಾವೂ ಆ ಶಿವನನ್ನು ಪೂಜೆಮಾಡಿ, ಶಿವಭಕ್ತನಿಗೆ ತುಂಬಾ ಭಕ್ತಿಯಿಂದ ನಮಸ್ಕಾರ ಮಾಡಿದರು. ॥೩೨೪॥

ಅನಂತರ ವಿಷ್ಣುವೇ ಮೊದಲಾದ ದೇವತೆಗಳು ಕೈಜೋಡಿಸಿ ಆ ಶಿವಭಕ್ತನ ಹತ್ತಿರ ನಿಂತುಕೊಂಡರು. ಆಗ ಆತನು ತನ್ನ ಪೂಜೆಯನ್ನು ಮುಗಿಸಿದ ನಂತರ ಆ ವಿಷ್ಣ್ವಾದಿದೇವತೆಗಳನ್ನು ನೋಡಿದನು. ॥೩೨೫॥

ಹೀಗೆ ಕೈಜೋಡಿಸಿ ನಿಂತುಕೊಂಡಿರುವ ಆ ವಿಷ್ಣ್ವಾದಿದೇವತೆಗಳನ್ನು ನೋಡಿ ಆ ಶಾಂಭವನು ಸಂತೋಷಭರಿತವಾದ ಮನಸ್ಸುಳ್ಳವನಾಗಿ ಆ ವಿಷ್ಣ್ವಾದಿಗಳೂ ಈಶ್ವರಭಕ್ತರೇ ಎಂಬ ಬುದ್ಧಿಯಿಂದ ಅವರಿಗೆ ತಾನು ನಮಸ್ಕಾರಮಾಡಿ, ಅನಂತರ ಕುಶಲಪ್ರಶ್ನೆಮಾಡಿದನು. ॥೩೨೬॥

ಆಗ ಪ್ರಸನ್ನವಾಗಿರುವ ಮುಖಮುದ್ರೆಯುಳ್ಳ ಆ ಭಕ್ತನನ್ನು ನೋಡಿ, ಶಿವ

ಯದ್ಭವದ್ದರ್ಶನಂ ಜಾತಂ ತತ್ತು ಪುಣ್ಯೇನ ಭೂಯಸಾ ।
ಅತಃ ಪರಂ ತು ಕುಶಲಮಸ್ಮಾಕಂ ಭಾವಿ ಸರ್ವದಾ ॥೩೨೮॥

ಶಿವೈಕಶರಣಸ್ಯಾದ್ಯ ದೃಷ್ಟಂ ತ್ವತ್ಪದಪಂಕಜಂ ।
ಅತಃ ಪರಂ ತು ಕಲ್ಯಾಣಮಸ್ಮಾಕಂ ಭಾವಿ ಸರ್ವಥಾ ॥೩೨೯॥

ಶಿವಭಕ್ತಸ್ಯ ಸಂಸರ್ಗಃ ಕಲ್ಯಾಣಂ ತನುತೇ ನ ಕಿಂ ।
ಶಿವಪೂಜಾಪರೈಃ ಶೈವೈಃ ಬಹವಃ ಪೂರ್ವಮುದ್ಧೃತಾಃ ॥೩೩೦॥

ಯಸ್ಯಾಂಗೇ ಭಸಿತಂ ಭಾತಿ ಭವರೋಗಭಯಾಪಹಂ ।
ತದ್ದರ್ಶನಂ ಭಾವುಕಾನಿ ಭೂಯಾಂಸಿ ಜನಯಿಷ್ಯತಿ ॥೩೩೧॥

ಯಸ್ಯಾಸ್ತಿ ಶಂಕರೇ ನಿತ್ಯಂ ಭಕ್ತಿರವ್ಯಭಿಚಾರಿಣೀ ।
ತದ್ದರ್ಶನೇನ ಪಾಪಾನಿ ವಿನಶ್ಯಂತಿ ಬಹೂನ್ಯಪಿ ॥೩೩೨॥

---

ಪೂಜಾನಿರತನಾದ ಆ ಮಹಾವಿಷ್ಣುವು ಶ್ರದ್ಧಾಭಕ್ತಿಗಳೊಡನೆ ಮನೋಹರವಾಗಿ ಹೀಗೆ ಮಾತನಾಡಿದನು. ॥೩೨೭॥

ವಿಶೇಷವಾದ ಪುಣ್ಯವಶದಿಂದ ನಮಗೆ ತಮ್ಮ ದರ್ಶನವಾಯಿತು. ಇನ್ನು ಮುಂದೆ ನಮಗೆ ಯಾವಾಗಲೂ ಇದರಿಂದ ಕುಶಲವಾಗುವುದು. ಶಿವನೊಬ್ಬನನ್ನೇ ಶರಣುಹೊಂದಿರುವ ನಿಮ್ಮ ಪಾದಕಮಲವನ್ನು ದರ್ಶನಮಾಡಿದೆವು. ಆದ್ದರಿಂದ ಮುಂದೆ ನಮಗೆ ನಿಶ್ಚಯವಾಗಿಯೂ ಮಂಗಳವೇ ಉಂಟಾಗುವುದು. ಇದರಲ್ಲಿ ಸಂದೇಹವಿಲ್ಲ. ॥೩೨೮-೩೨೯॥

ಶಿವಭಕ್ತರ ಸಂಸರ್ಗದಿಂದ ಮಂಗಳವುಂಟಾಗುವುದಿಲ್ಲವೇನು ? ಶಿವಪೂಜಾ ತತ್ಪರರಾದ ಶೈವರಿಂದ ಹಿಂದೆ ಬಹಳ ಜನರು ಉದ್ಧಾರವಾಗಿರುವರು. ಸಂಸಾರ ವೆಂಬ ರೋಗದ ಭಯವನ್ನು ಹೋಗಲಾಡಿಸುವ ಭಸ್ಮವು ಅಂಗಗಳಲ್ಲಿ ಶೋಭಿಸು ತ್ತಿರುವ ಮಹಾತ್ಮರ ದರ್ಶನವು ನಾನಾ ವಿಧವಾದ ಮಂಗಳವನ್ನುಂಟುಮಾಡು ವುದು. ॥೩೩೦-೩೩೧॥

ಆ ಶಂಕರನಲ್ಲಿ ಚಂಚಲವಾಗದ ಭಕ್ತಿಯನ್ನು ಹೊಂದಿರುವವರ ದರ್ಶನ ದಿಂದ ಅನೇಕ ವಿಧವಾದ ಪಾಪಗಳೂ ನಾಶವಾಗುವುವು. ॥೩೩೨॥

ತ್ರಿಪುಂಡ್ರಬಾಲಚಂದ್ರಾಂಕಾಃ ರುದ್ರಾಕ್ಷಫಣಿಭೂಷಿತಾಃ ।
ಶೈವಾಃ ಶಿವೈಕಶರಣಾಃ ಶಿವಸ್ಯಾಪರವಿಗ್ರಹಾಃ ॥೩೩೩॥

ಶಿವನಾಮಾಮೃತಾಸ್ವಾದಮೋದಮಾನಮನೀಷಿಣಃ ।
ಭೂರಿಪುಣ್ಯಪ್ರಭಾವೇನ ದೃಶ್ಯಂತೇ ಖಲು ಶಾಂಕರಾಃ ॥೩೩೪॥

ಈದೃಶೀ ಶಾಂಕರೀ ನಿಷ್ಠಾ ಕಿಂ ನಾನಂತತಪಃ ಫಲಂ ।
ಧನ್ಯೋಽಸಿ ವಯಮಪ್ಯೇತೇ ಧನ್ಯಾಃ ಸ್ಮಸ್ತವ ದರ್ಶನಾತ್ ॥೩೩೫॥

ಶಾಂಕರಾಣಾಂ ದರ್ಶನೇನ ಧನ್ಯಾ ಜಾತಾಃ ಪುರಾ ಯತಃ ।
ಅತೋ ವಯಂ ಚ ಧನ್ಯಾಃ ಸ್ಮಸ್ತವ ಶಾಂಕರದರ್ಶನಾತ್ ॥೩೩೬॥

ಇತ್ಯುದೀರಿತಮಾಕರ್ಣ್ಯ ವಿಷ್ಣುವಾಕ್ಯಂ ಸ ಶಾಂಕರಃ ।
ಕೃತಾಂಜಲಿಪುಟೋ ಭೂತ್ವಾ ವಿಷ್ಣುಂ ಪ್ರತ್ಯಾಹ ಶಾಂಕರಃ ॥೩೩೭॥

---

ಭಸ್ಮತ್ರಿಪುಂಡ್ರ, ಬಾಲಚಂದ್ರ ಇವುಗಳನ್ನು ಧರಿಸಿರುವವರೂ, ರುದ್ರಾಕ್ಷ, ಮತ್ತು ಸರ್ಪ ಇವುಗಳನ್ನಲಂಕರಿಸಿಕೊಂಡಿರುವವರೂ, ಶಿವನೊಬ್ಬನನ್ನೇ ನಂಬಿರುವವರೂ, ಶಿವನ ಬೇರೆ ಆಕಾರದಂತಿರುವವರೂ, ಶಿವನ ದಿವ್ಯನಾಮಾಮೃತವನ್ನು ಪಾನಮಾಡುವುದರಿಂದ ಸಂತೋಷ ಹೊಂದುವ ಬುದ್ಧಿಯುಳ್ಳವರೂ ಆದ ಶಾಂಭವರು ಪುಣ್ಯಮಹಿಮೆಯಿಂದ ಮಾತ್ರ ಗೋಚರವಾಗುವರು. ॥೩೩೩-೩೩೪॥

ಈರೀತಿಯಾದ ಶಂಕರನ ಭಕ್ತಿಯು ಅಪಾರವಾದ ತಪಸ್ಸಿನ ಫಲವಲ್ಲವೇನು! ನಿನ್ನ ದಿವ್ಯವಾದ ಸಂದರ್ಶನದಿಂದ ನಾವೆಲ್ಲರೂ ಈಗ ಧನ್ಯರಾಗಿರುವೆವು. ॥೩೩೫॥

ಹಿಂದೆ ಆ ಶಂಕರನ ಭಕ್ತರ ದರ್ಶನದಿಂದ ಅನೇಕರು ಧನ್ಯರಾಗಿರುವುದರಿಂದ ಈಗ ನಾವೂ ಶಂಕರನ ಭಕ್ತಾಗ್ರೇಸರನಾದ ನಿನ್ನ ದಿವ್ಯಸಂದರ್ಶನದಿಂದ ಧನ್ಯರಾಗಿರುವೆವು. ॥೩೩೬॥

ಹೀಗೆ ನುಡಿದ ಆ ವಿಷ್ಣುವಿನ ವಾಕ್ಯಗಳನ್ನು ಕೇಳಿ ಶಂಕರಭಕ್ತನಾದ ಆತನು ಕೈಮುಗಿದುಕೊಂಡು ವಿಷ್ಣುವಿನೊಡನೆ ಹೀಗೆ ಮಾತನಾಡಿದನು. ॥೩೩೭॥

ಭಸ್ಮಭಾಸಿತಫಾಲಾಯ ರುದ್ರಾಕ್ಷಾಭರಣಾಯ ತೇ ।
ನಮಶ್ಚಂದ್ರಕಿರೀಟಾಯ ನಮಃ ಶೈವಾಯ ವಿಷ್ಣವೇ ॥೩೩೮॥

ಶೈವೋತ್ತಮಸ್ತ್ವಮೇವಾಸಿ ವಿಷ್ಣೋ ಧನ್ಯೋಽಸಿ ಸರ್ವಥಾ ।
ಜ್ಞಾತಂ ಯತಸ್ತ್ವಯಾ ತತ್ವಂ ಶೈವಂ ಸಮ್ಯಗಸಂಶಯಂ ॥೩೩೯॥

ಸ ಏವ ಧನ್ಯಃ ಪೂಜ್ಯಶ್ಚ ಯತಸ್ತ್ವಂ ವೇದ ಶಾಂಕರಂ ।
ಅತಃ ಶಂಕರತತ್ವಜ್ಞಃ ಪೂಜನೀಯೋ ಭವಾನ್ಮಯಾ ॥೩೪೦॥

ವಿಷ್ಣುತ್ವಂ ಯತ್ಪ್ರಸಾದೇನ ತ್ವಯಾ ಪ್ರಾಪ್ತಂ ಸ ಶಂಕರಃ ।
ಶಂ ಕರೋತು ಸದಾ ತುಭ್ಯಂ ಶಿವೈಕಶರಣೋ ಭವ ॥೩೪೧॥

॥ ಯಮ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ವಿಷ್ಣುರಾನಂದಪೂರಿತಃ ।
ಪ್ರಣಮ್ಯಾಭ್ಯರ್ಚಿತಂ ಶೈವಂ ಜಗಾಮ ಚ ತದಾಜ್ಞಯಾ ॥೩೪೨॥

---

ವಿಭೂತಿಧಾರಣೆಯಿಂದ ಶೋಭಿಸುತ್ತಿರುವ ಹಣೆಯುಳ್ಳವನೂ, ರುದ್ರಾಕ್ಷ ಮಾಲೆಯನ್ನು ಅಲಂಕರಿಸಿಕೊಂಡಿರುವವನೂ, ಮತ್ತು ಚಂದ್ರನನ್ನು ಕಿರೀಟದಲ್ಲಿ ಧರಿಸಿದವನೂ, ಪರಶಿವನ ಭಕ್ತನೂ ಆದ ವಿಷ್ಣುವಿಗೆ ನಮಸ್ಕಾರಮಾಡುವೆನು. ॥೩೩೮॥

ಓ, ವಿಷ್ಣುವೇ! ಶಿವನ ತತ್ವವನ್ನು ಚೆನ್ನಾಗಿ ಸ್ವಲ್ಪವೂ ಸಂಶಯವಿಲ್ಲದೇ ತಿಳಿದಿರುವುದರಿಂದ ಶಿವಭಕ್ತಾಗ್ರೇಸರನಾದ ನೀನೇ ನಿಶ್ಚಯವಾಗಿಯೂ ಧನ್ಯನು. ॥೩೩೯॥

ಶಂಕರನ ಸ್ವರೂಪವನ್ನೂ ಆತನ ತತ್ವವನ್ನೂ ನೀನು ಚೆನ್ನಾಗಿ ತಿಳಿದಿರುವುದರಿಂದ ನೀನೇ ಧನ್ಯನು. ನಮ್ಮಿಂದ ನೀನು ಪೂಜಾರ್ಹನೂ ಆಗಿರುವೆ. ॥೩೪೦॥

ಯಾರ ಅನುಗ್ರಹದಿಂದ ನೀನು ವಿಷ್ಣುಪದವಿಯನ್ನು ಹೊಂದಿದೆಯೋ ಆ ಶಂಕರನು ನಿನಗೆ ಮಂಗಳವನ್ನುಂಟುಮಾಡಲಿ. ನೀನು ಶಿವನಲ್ಲಿ ಮಾತ್ರ ಭಕ್ತಿಯನ್ನಿಡುವನಾಗು. ॥೩೪೧॥

ಆ ಶಿವಭಕ್ತನ ಈರೀತಿಯಾದ ಮಾತುಗಳನ್ನು ಕೇಳಿ ಮಹಾವಿಷ್ಣುವು ಆನಂದಭರಿತನಾಗಿ, ಆ ಶೈವನಿಗೆ ನಮಸ್ಕಾರಮಾಡಿ, ಆತನ ಅಪ್ಪಣೆ ಪಡೆದು ಹಿಂತಿರುಗಿದನು. ॥೩೪೨॥

ಅತಃ ಶೈವಾಃ ಪೂಜನೀಯಾಃ ಪ್ರಯತ್ನೇನ ಸ್ವಶಕ್ತಿತಃ ।
ಶೈವಾಃ ಶಿವೈಕಶರಣಾಃ ಯತಃ ಶಂಕರವಿಗ್ರಹಾಃ ॥೩೪೩॥

ಸ್ವಪ್ನೇಽಪಿ ಶೈವಧಿಕ್ಕಾರೋ ನ ಕರ್ತವ್ಯಃ ಶುಭೇಪ್ಸುಭಿಃ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೩೪೪॥

ಶೈವದ್ರೋಹೋ ಭ್ರಮೇಣಾಪಿ ನ ಕಾರ್ಯ ಇತಿ ಯಾಚ್ಯತೇ ।
ಕದಾಪಿ ನೈವ ಕರ್ತವ್ಯಾ ಯಾಚ್ಞೇಯಂ ವಿಫಲಾ ಮಮ ॥೩೪೫॥

ಕ್ರಿಯತೇ ಯದಿ ಮೋಹೇನ ಭವದ್ಭಿಃ ಶೈವಪೀಡನಂ ।
ತದಾ ತು ನರಕಾವಾಸೋ ಭವಿಷ್ಯತಿ ಮಮ ಧ್ರುವಂ ॥೩೪೬॥

ಮಮೈವ ನರಕಾವಾಸೋ ನ ಕಿಂ ತು ಭವತಾಮಪಿ ।
ಭವಿಷ್ಯತಿ ನ ಸಂದೇಹಃ ಸತ್ಯಮೇವೋಚ್ಯತೇ ಮಯಾ ॥೩೪೭॥

---

ಆದ್ದರಿಂದ ಪ್ರಯತ್ನಪೂರ್ವಕವಾಗಿ ಪರಶಿವಭಕ್ತರನ್ನು ತಮ್ಮ ಶಕ್ತ್ಯನುಸಾರವಾಗಿ ಪೂಜೆಮಾಡಬೇಕು. ಆ ಶಾಂಭವರು, ಶಿವನಲ್ಲಿಯೇ ಶರಣರಾಗಿ ಆ ಶಂಕರನ ಸ್ವರೂಪರೇ ಆಗಿರುತ್ತಾರೆ. ॥೩೪೩॥

ಶುಭಫಲಗಳನ್ನು ಅಪೇಕ್ಷಿಸುವವರು ಕನಸಿನಲ್ಲಿಯೂ ಆ ಶೈವರನ್ನು ಧಿಕ್ಕಾರ ಮಾಡಬಾರದು. ಇದು ಸತ್ಯವೆಂದು ಸತ್ಯವಾಗಿಯೂ ಭುಜವನ್ನೆತ್ತಿ ಹೇಳುತ್ತೇನೆ. ॥೩೪೪॥

ಭ್ರಾಂತಿಯಿಂದಲಾದರೂ ಆ ಶಿವದ್ರೋಹವನ್ನು ಮಾಡಬಾರದೆಂದು ಪ್ರಾರ್ಥಿಸುತ್ತೇನೆ. ಈ ನನ್ನ ಪ್ರಾರ್ಥನೆಯು ಎಂದಿಗೂ ವಿಫಲವಾಗಬಾರದು. ಒಂದುವೇಳೆ ಅಜ್ಞಾನದಿಂದ ಆ ಶೈವರನ್ನು ಪೀಡೆಮಾಡುವುದಾದರೆ ಆಗ ನಿಮ್ಮ ದೆಸೆಯಿಂದ ನನಗೆ ನರಕವಾಸವು ಖಂಡಿತ ಉಂಟಾಗುವುದೆಂದು ತಿಳಿಯಿರಿ. ॥೩೪೫-೩೪೬॥

ನನಗೊಬ್ಬನಿಗಲ್ಲದೇ, ನಿಮಗೂ ನರಕವಾಸವು ಸತ್ಯವಾಗಿಯೂ ಉಂಟಾಗುತ್ತದೆ. ಇದರಲ್ಲಿ ಸಂದೇಹವಿಲ್ಲವೆಂದು ನಾನು ಹೇಳುವೆನು. ॥೩೪೭॥

ಭೂಯೋ ಭೂಯೋಽಪಿ ಯತ್ನೇನ ಯಾಚ್ನೇಽಯಂ ಕ್ರಿಯತೇ ಮಯಾ ।
ಅತೋ ಭವಂತಃ ಶೈವಾನಾಂ ಪೂಜಯಂತು ಪದಾಂಬುಜಂ ॥೩೪೮॥

ಸದೇಶೋ ಯತ್ನತಸ್ತ್ಯಾಜ್ಯೋ ಯತ್ರ ತಿಷ್ಠಂತಿ ಶಾಂಕರಾಃ ।
ಭವದ್ಭಿಃ ಕ್ರೂರರೂಪೈಸ್ತು ತತ್ರ ಗಂತವ್ಯಮೇವ ನ ॥೩೪೯॥

ಕಿಮುಕ್ತೇನಾತ್ರ ಬಹುನಾ ಸಾರಂ ವಚನಮುಚ್ಯತೇ ।
ಶೈವಾಃ ಪೂಜ್ಯಾಃ ಪ್ರಯತ್ನೇನ ಭವದ್ಭಿಃ ಸಾಧುಸಾಧನೈಃ ॥೩೫೦॥

॥ ಶಿವ ಉವಾಚ ॥

ಇತ್ಯುಕ್ತಾಸ್ತೇ ಭಟಾಃ ಸರ್ವೇ ಯಮೇನ ವಿನಯಾನ್ವಿತಾಃ ।
ದುಃಖಂ ವಿಹಾಯ ತೇ ಕಾಲಂ ಪ್ರಣೇಮುರ್ಭಕ್ತಿಪೂರ್ವಕಂ ॥೩೫೧॥

ಏತಸ್ಮಿನ್ನಂತರೇ ದೇವಿ ದುಂದುಭಿಧ್ವಾನಪೂರ್ವಕಂ ।
ನಂದಿಧ್ವಜಸಮಾಕೀರ್ಣಂ ವಿಮಾನಂ ದದೃಶುರ್ದಿವಿ ॥೩೫೨॥

---

ಪದೇಪದೇ ನಿಯಮದಿಂದ ನೀವೆಲ್ಲರೂ ಆ ಶಿವಭಕ್ತರ ಪಾದಕಮಲಗಳನ್ನು ಪ್ರಯತ್ನಪೂರ್ವಕವಾಗಿ ಪೂಜೆಮಾಡಿರೆಂದು ನಿಮ್ಮನ್ನು ಪ್ರಾರ್ಥನೆಮಾಡುತ್ತಿರುವೆನು. ॥೩೪೮॥

ಆ ಶಂಕರನ ಭಕ್ತರು ನೆಲಸಿರುವ ಪ್ರದೇಶಗಳನ್ನೇ ನೀವು ಬಿಟ್ಟುಬಿಡಿರಿ. ನೀವು ಈರೀತಿಯಾದ ಭಯಂಕರವಾದ ರೂಪನ್ನು ಧರಿಸಿ, ಅಲ್ಲಿಗೆ ನೀವು ಹೋಗಲೇಬೇಡಿ. ॥೩೪೯॥

ಹೆಚ್ಚು ಮಾತಿನಿಂದ ಪ್ರಯೋಜನವೇನು? ಸಾರಭೂತವಾದ ಮಾತನ್ನು ಹೇಳುತ್ತೇನೆ. ನೀವೆಲ್ಲರೂ ಉತ್ತಮವಾದ ಪೂಜಾಸಾಧನೆಗಳಿಂದ ನಿಯಮಪೂರ್ವಕವಾಗಿ ಆ ಶಿವಭಕ್ತರನ್ನು ಪೂಜೆಮಾಡಿರಿ.'' ॥೩೫೦॥

ಯಮನಿಂದ ಈರೀತಿಯಾಗಿ ಹೇಳಲ್ಪಟ್ಟ ಭಟರೆಲ್ಲರೂ, ತಮಗೆ ಉಂಟಾಗಿದ್ದ ದುಃಖವನ್ನು ಬಿಟ್ಟು ಆ ಯಮನಿಗೆ ಭಕ್ತಿಪುರಸ್ಸರವಾಗಿ ನಮಸ್ಕಾರಮಾಡಿದರು. ॥೩೫೧॥

ಆ ಸಂದರ್ಭದಲ್ಲಿ ದುಂದುಭಿವಾದ್ಯಗಳೊಡನೆ ಮೊರೆಯುತ್ತಾ ನಂದಿಧ್ವಜಯುಕ್ತವಾಗಿ ಆಕಾಶದಲ್ಲಿ ಹೋಗುತ್ತಿದ್ದ ಒಂದು ವಿಮಾನವನ್ನು ಅವರು ನೋಡಿದರು. ॥೩೫೨॥

ತದ್ವಿಮಾನಸ್ಥಮಾಲೋಕ್ಯ ತೇಜಃ ಪುಂಜಮಯಂ ದ್ವಿಜಂ ।
ಯಮಃ ಸಂತುಷ್ಟಹೃದಯಶ್ಚಿತ್ರಗುಪ್ತಮುವಾಚ ಹ ॥೩೫೩॥

॥ ಯಮ ಉವಾಚ ॥

ಚಿತ್ರಗುಪ್ತ ವಿಮಾನಸ್ಥಃ ಕೋಽಯಂ ಯಾತಿ ವದಸ್ವ ಮೇ ।
ಕಿಮನೇನ ಕೃತಂ ಪುಣ್ಯಂ ವಿಚಾರ್ಯಾದರಪೂರ್ವಕಂ ॥೩೫೪॥

॥ ಚಿತ್ರಗುಪ್ತ ಉವಾಚ ॥

ಕಿಂ ವಕ್ತವ್ಯಂ ಮಯಾ ಕಾಲ ಕಾಲಕಾಲಸ್ಯ ಕೀರ್ತನಾತ್ ।
ಪಾಪಿನೋಽಪಿ ಪ್ರಯಾಸ್ಯಂತಿ ಕೈಲಾಸನಿಲಯಾಲಯಂ ॥೩೫೫॥

ಬ್ರಾಹ್ಮಣೋಽಪ್ಯಯಮಾಚಾರಂ ಸಂತ್ಯಜತ್ಪಾಪಿಸಂಗಮಾತ್ ।
ಸ್ವಕುಲಾಚಾರಸಂಗಸ್ತು ತ್ಯಕ್ತ ಏವ ದುರಾತ್ಮನಾ ॥೩೫೬॥

---

ಆ ವಿಮಾನದಲ್ಲಿ ಕುಳಿತಿರುವ ಮತ್ತು ತೇಜಸ್ಸಮೂಹದಿಂದ ಪ್ರಜ್ವಲಿಸುತ್ತಿರುವ ಬ್ರಾಹ್ಮಣನನ್ನು ನೋಡಿ, ಯಮನು ಸಂತೋಷಭರಿತವಾದ ಮನಸ್ಸುಳ್ಳವನಾಗಿ ಚಿತ್ರಗುಪ್ತನನ್ನು ಕುರಿತು ಇಂತೆಂದನು. ॥೩೫೩॥

ಅಯ್ಯ ಚಿತ್ರಗುಪ್ತನೇ! ಈ ವಿಮಾನದಲ್ಲಿ ಕುಳಿತು ಹೋಗುತ್ತಿರುವನಾರು? ಈ ಮಹಾತ್ಮನು ಮಾಡಿರುವ ಪುಣ್ಯವಾವುದು? ಇವುಗಳನ್ನು ಚೆನ್ನಾಗಿ ವಿಚಾರಿಸಿ ಆದರದಿಂದ ನನಗೆ ತಿಳಿಸೆಂದು ಯಮನು ಚಿತ್ರಗುಪ್ತನನ್ನು ಕೇಳಿದನು. ॥೩೫೪॥

ಆಗ ಚಿತ್ರಗುಪ್ತನು ಅಯ್ಯ ಯಮನೇ! ಕಾಲಕಾಲನೆನಿಸಿದ (ಕಾಲಸ್ವರೂಪನಾದ ನಿನಗೂ ಮೃತ್ಯುಪ್ರದನಾದ) ಆ ಮಹಾದೇವನ ದಿವ್ಯ ನಾಮಸಂಕೀರ್ತನದಿಂದ ಪಾಪಿಗಳೂ ಸಹ ಕೈಲಾಸಪಟ್ಟಣಕ್ಕೆ ಹೋಗುತ್ತಿರುವರು. ॥೩೫೫॥

ಈತನು ಬ್ರಾಹ್ಮಣನಾದರೂ ಪಾಪಿಗಳ ಸಹವಾಸದಿಂದ ತನ್ನ ಬ್ರಾಹ್ಮಣ ಕುಲದ ಆಚಾರವನ್ನೇ ಬಿಟ್ಟಿರುವನು. ಅಲ್ಲದೇ ಈ ದುಷ್ಟನು ತನ್ನ ವಂಶಪಾರಂಪರ್ಯವಾಗಿ ಬಂದ ಆಚಾರಸಂಬಂಧವನ್ನೇ ತೊರೆದಿರುವನು. ॥೩೫೬॥

ಅನೇನ ಬಹವಃ ಶಿಷ್ಟಾ ಬ್ರಾಹ್ಮಣಾ ಏವ ಸಂಹತಾಃ ।
ಏತದ್ಧತಬ್ರಾಹ್ಮಣಾನಾಂ ಸಂಖ್ಯಾಂ ಕರ್ತುಂ ನ ಶಕ್ಯತೇ ॥೩೫೭॥

ಗಾವೋ ಹತಾ ಬ್ರಾಹ್ಮಣಾನಾಮನೇನೈವಹಿ ಕೋಟಿಶಃ ।
ವಿತ್ತಾಪಹಾರೋ ಬಹುಧಾ ಬ್ರಾಹ್ಮಣಾನಾಂ ಕೃತೋಽಮುನಾ॥೩೫೮॥

ಬಹುಧಾಽನೇನ ಭುಕ್ತಾ ಹಿ ಯುವತ್ಯೋ ಬ್ರಾಹ್ಮಣಸ್ತ್ರಿಯಃ ।
ಮದ್ಯಮಾಂಸಪರೇಣೈವಂ ಭುಕ್ತಾಶ್ಚಾನ್ಯಾಃ ಪರಸ್ತ್ರಿಯಃ ॥೩೫೯॥

ಕದಾಚಿದ್ಯುವತೀಂ ದೃಷ್ಟ್ವಾ ಸ್ವಕನ್ಯಾಮತಿಸುಂದರೀಂ ।
ತಾಮಾಕಾರ್ಯ ಪ್ರಯತ್ನೇನ ರೇಮೇ ರತಿವಿಶಾರದಃ ॥೩೬೦॥

ತಸ್ಯಾಮುತ್ಪಾದಯಾಮಾಸ ಕನ್ಯಕಾದ್ವಯಮುತ್ತಮಂ ।
ಕಾಲೇನ ಯೌವನಂ ಪ್ರಾಪ್ಯ ಸ್ಥಿತಂ ತತ್ಕನ್ಯಕಾದ್ವಯಂ ॥೩೬೧॥

---

ಈತನು ಅನೇಕ ಶ್ರೋತ್ರಿಯರಾದ ಬ್ರಾಹ್ಮಣರನ್ನೇ ಕೊಂದುಹಾಕಿರುವನು. ಈತನು ಸಂಹರಿಸಿರುವ ಬ್ರಾಹ್ಮಣರ ಸಂಖ್ಯೆಯು ಎಣಿಸುವುದಕ್ಕೂ ಅಸಾಧ್ಯವಾದ ಷ್ಟಿರುವುದು. ॥೩೫೭॥

ಈತನು ಕೋಟ್ಯಂತರ ಬ್ರಾಹ್ಮಣರು ಮತ್ತು ಅವರ ಗೋವುಗಳನ್ನೂ ಕೊಂದಿರುವನು. ಅಲ್ಲದೇ ಅನೇಕ ಬ್ರಾಹ್ಮಣರ ದ್ರವ್ಯವನ್ನು ಬಹಳವಾಗಿ ಅಪಹರಿಸಿರುವನು. ॥೩೫೮॥

ಯವ್ವನಭರಿತೆಯರಾದ ಅನೇಕ ಬ್ರಾಹ್ಮಣಸ್ತ್ರೀಯರು ಈತನಿಂದ ಉಪಭೋಗಿಸಲ್ಪಟ್ಟಿರುವರು. ಇದಲ್ಲದೆ, ಹೆಂಡ ಮತ್ತು ಮಾಂಸ, ಇವುಗಳನ್ನು ಸೇವಿಸುವುದರಲ್ಲಿ ತತ್ಪರನಾದ ಈತನು ಇನ್ನೂ ಅನೇಕ ಪರಸ್ತ್ರೀಯರನ್ನು ಸಂಭೋಗಿಸಿರುವನು. ॥೩೫೯॥

ಒಂದು ದಿನ ಅತ್ಯಂತ ಸುಂದರಿಯಾದ ತನ್ನ ಸ್ವಂತ ಮಗಳನ್ನೇ ನೋಡಿ, ಬಲಾತ್ಕಾರದಿಂದ ಅವಳನ್ನು ಕರೆದು ರತಿಕ್ರೀಡಾನಿಪುಣನಾದ ಈ ದುಷ್ಟನು ಅವಳೊಡನೆ ವಿಹಾರಮಾಡಿದನು. ॥೩೬೦॥

ಕ್ರಮೇಣ ಅವಳಲ್ಲಿ ಎರಡು ಹೆಣ್ಣುಮಕ್ಕಳು ಹುಟ್ಟಿದುವು, ಆ ಉತ್ತಮರಾದ ಕನ್ಯೆಯರಿಬ್ಬರೂ ಪ್ರಾಪ್ತವಯಸ್ಕರಾಗಲು ಕಾಮಾತುರನಾದ ಈ ಮೂರ್ಖನು

ತತಃ ಕಾಮಾತುರೋ ರೇಮೇ ಸುಂದರಂ ಕನ್ಯಕಾದ್ವಯಂ ।
ತತ್ರಾಪಿ ಜನಯಾಮಾಸ ಪುತ್ರಾನ್ದುಸ್ಸಂಗಮುಪ್ರಿಯಾನ್ ॥೩೬೨॥

ಏವಮನ್ಯಾನಿ ಪಾಪಾನಿ ಕೃತ್ವಾಽಯಂ ಸಂಸ್ಥಿತಃ ಪುರಾ ।
ಏವಂ ಸ್ಥಿತೋ ವನಂ ಪ್ರಾಪ್ಯ ಕದಾಚಿದಯಮುದ್ಧತಃ ॥೩೬೩॥

ತತ್ರಾಪಶ್ಯದ್ದ್ವಿಜಾನ್ಮಾರ್ಗೇ ದಶವಿತ್ತಕರಾನ್ಮುದಾ ।
ತತಸ್ತಾನ್ಹಂತುಮುದ್ಯುಕ್ತಃ ಶಸ್ತ್ರಂ ಜಗ್ರಾಹ ಪಾಣಿನಾ ॥೩೬೪॥

ತತೋ ಜಘಾನ ತೇಷ್ವಷ್ಟೌ ದ್ವಿಜಾನಮಿತವಿಕ್ರಮಾನ್ ।
ತತಸ್ತಾಂಸ್ತದ್ಧತಾನ್ದೃಷ್ಟ್ವಾ ಉಭೌ ದುಃಖವಶಂಗತೌ ॥೩೬೫॥

ತತಸ್ತಂ ತಾದೃಶಂ ದೃಷ್ಟ್ವಾ ವಿಪ್ರಾವುರ್ವರಿತಾವುಭೌ ।
ತಮೇವ ಹಂತುಮುದ್ಯುಕ್ತೌ ದ್ರವ್ಯಲೋಭವಶೀಕೃತೌ ॥೩೬೬॥

ತತಸ್ತಚ್ಛಸ್ತ್ರಮಾದಾಯ ದ್ವಿಜೌ ತೌ ತು ನಿಜಘ್ನತುಃ ।
ತಾಭ್ಯಾಂ ಹತಃ ಸ ಪಾಪಿಷ್ಠಃ ಪಪಾತ ಪೃಥಿವೀತಲೇ ॥೩೬೭॥

---

ಆ ಸುಂದರಿಯೊಡನೆಯೂ ಸಂಭೋಗಮಾಡಿ ಅವರಲ್ಲಿ ಮುಂದೆ ದುಷ್ಟಸಹವಾಸದಲ್ಲಿಯೇ ತತ್ಪರರಾಗುವ ಅನೇಕ ಮಕ್ಕಳನ್ನು ಪಡೆದನು. ॥೩೬೧-೩೬೨॥

ಹೀಗೆಯೇ ಈತನು ಇನ್ನೂ ಅನೇಕ ಪಾಪಕಾರ್ಯಗಳನ್ನು ಮಾಡುತ್ತಾ ಹೇಗೋ ವಾಸಿಸುತ್ತಿದ್ದನು. ಒಂದು ದಿನ ಉದ್ಧತನಾದ ಈತನು ಕಾಡಿಗೆ ಬಂದು ಅಲ್ಲಿ ಆ ಕಾಡಿನ ದಾರಿಯಲ್ಲಿ ಅಪಾರವಾದ ದುಡ್ಡನ್ನು ಹಿಡಿದು ಬರುತ್ತಿರುವ ಹತ್ತುಮಂದಿ ಬ್ರಾಹ್ಮಣರನ್ನು ಕಂಡು ಸಂತೋಷದಿಂದ ಅವರನ್ನು ಕೊಂದುಹಾಕಲು ಕೈಯಲ್ಲಿ ಆಯುಧವನ್ನು ತೆಗೆದುಕೊಂಡನು. ॥೩೬೩-೩೬೪॥

ಕ್ರೂರನಾದ ಆತನು ಅವರಲ್ಲಿ ಅಪಾರವಾದ ಪರಾಕ್ರಮವುಳ್ಳ ಎಂಟು ಮಂದಿ ಬ್ರಾಹ್ಮಣರನ್ನು ಕೊಂದುಹಾಕಲು ಉಳಿದ ಇಬ್ಬರು ಬ್ರಾಹ್ಮಣರು ತಮ್ಮ ಜತೆಯವರಿಗೆ ಹೀಗಾದುದನ್ನು ನೋಡಿ ಬಹಳ ದುಃಖಪಟ್ಟು, ದುಡ್ಡಿನ ಲೋಭಕ್ಕೊಳಗಾಗಿ, ತುಂಬಾ ರೋಷದಿಂದ ಅವನನ್ನೇ ಕೊಲ್ಲಲು ಪ್ರಯತ್ನಮಾಡಿದರು. ॥೩೬೫-೩೬೬॥

ಆಗ ಬ್ರಾಹ್ಮಣರಿಬ್ಬರೂ ಆ ನೀಚನ ಕೈಲಿದ್ದ ಶಸ್ತ್ರವನ್ನು ಕಿತ್ತುಕೊಂಡು ಅವನನ್ನು ಬಲವಾಗಿ ಆದರಿಂದ ಹೊಡೆದನು. ಆಗ ಬ್ರಾಹ್ಮಣರಿಬ್ಬರ ಏಟನ್ನು ತಾಳಲಾರದೇ ಈ ಪಾಪಿಯು ಭೂಮಿಯ ಮೇಲೆ ಬಿದ್ದನು. ॥೩೬೭॥

ತದಾ ವನಚರಃ ಕಶ್ಚಿಚ್ಛಸ್ತ್ರಪಾಣಿರುಪಾಯಯೌ ।
ತಂ ವಿಲೋಕ್ಯ ಜಗಾದೈವಂ ಪತಿತೋಽಪ್ಯವನೀತಲೇ ॥೩೬೮॥

ಆಹರಾಸ್ತ್ರಂ ಸಂಹರೈತೌ ಪ್ರಹರ ಪ್ರಹರಾಧುನಾ ।
ಇತ್ಯುಕ್ತ್ವಾ ಸಂಜಹೌ ಪ್ರಾಣಾಂಛಸ್ತ್ರಘಾತನಪೀಡಿತಃ ॥೩೬೯॥

ತತಸ್ತದ್ವಚನಾದೇವ ತೌ ಹತೌ ವಿಪ್ರಸತ್ತಮೌ ।
ತತೋ ಗೃಹೀತ್ವಾ ತದ್ದ್ರವ್ಯಂ ಸ ಯಯೌ ವಿಪ್ರಘಾತಕಃ ॥೩೭೦॥

ಪ್ರಹೃಷ್ಟವದನೋ ಭಿಲ್ಲೋ ವಿಪ್ರೌ ನಿಕ್ಷಿಪ್ಯ ಭೂತಲೇ ।
ತಾವಾಚ್ಛಾದ್ಯ ಮೃದಾ ಸ್ಥೂಲೈರುಪಲೈಶ್ಚ ಮಹತ್ತರೈಃ ॥೩೭೧॥

ಆಹರೇತ್ಯಾದಿ ತದ್ವಾಕ್ಯಂ ಸರ್ವಸಾಕ್ಷೀ ಸದಾಶಿವಃ ।
ಶ್ರುತ್ವಾ ಪಾರ್ಶ್ವಸ್ಥಿತಾನ್ಪ್ರಾಹ ಗಣಾನ್ಪ್ರತಿ ಕೃಪಾನಿಧಿಃ ॥೩೭೨॥

---

ಅದೇ ಸಂದರ್ಭದಲ್ಲಿ ಮತ್ತೊಬ್ಬ ಕಾಡಿನಲ್ಲಿ ಸಂಚಾರಮಾಡುವ ಭಿಲ್ಲನು ಶಸ್ತ್ರವನ್ನು ಹಿಡಿದುಕೊಂಡು ಅಲ್ಲಿಗೆ ಬಂದನು. ಆತನನ್ನು ನೋಡಿ, ಈ ಪಾಪಿಯು ನೆಲದ ಮೇಲೆ ಬಿದ್ದಿದ್ದರೂ, ಅಯ್ಯ! ಶಸ್ತ್ರವನ್ನು ತೆಗೆದುಕೋ, ಇವರನ್ನು ಹೊಡೆದು ಸಂಹಾರಮಾಡೆಂದು ಹೇಳಿ ತಾನು ಶಸ್ತ್ರದ ಏಟನ್ನು ತಾಳಲಾರದೇ ಮೃತನಾದನು. ॥೩೬೮-೩೬೯॥

ನೀಚನ ಆ ಮಾತಿನಂತೆಯೇ ಆ ಬ್ರಾಹ್ಮಣಶ್ರೇಷ್ಠರಿಬ್ಬರೂ ಆತನಿಂದ ಕೊಲ್ಲಲ್ಪಟ್ಟರು. ಆಗ ಆ ಬ್ರಾಹ್ಮಣಘಾತುಕನು ಅವರ ದುಡ್ಡನ್ನೆಲ್ಲಾ ತೆಗೆದುಕೊಂಡು ಮನೆಗೆ ಹಿಂತಿರುಗಿದನು. ॥೩೭೦॥

ಆಗ ಆ ಬೇಡರವನು, ಸಂತೋಷಭರಿತವಾದ ಮುಖವುಳ್ಳವನಾಗಿ ತಾನು ಕೊಂದ ಆ ಇಬ್ಬರು ಬ್ರಾಹ್ಮಣರನ್ನು ಭೂಮಿಯಲ್ಲಿ ಹೂಳಿ, ಅವರ ಮೇಲೆ ದಪ್ಪನಾಗಿ ಮಣ್ಣನ್ನೂ ದೊಡ್ಡದೊಡ್ಡ ಕಲ್ಲುಗಳನ್ನೂ ಮುಚ್ಚಿಬಿಟ್ಟನು. ॥೩೭೧॥

ಎಲ್ಲ ಕೆಲಸಗಳನ್ನೂ ತಾನೇ ಸ್ವತಃ ನೋಡುತ್ತಿದ್ದ ಆ ಸದಾಶಿವನು 'ಆಹರ' 'ಪ್ರಹರ' ಮುಂತಾಗಿ ಈ ಮೂರ್ಖನು ಹೇಳಿದ ವಾಕ್ಯಗಳನ್ನು ಕೇಳಿ ತಾನು ದಯಾಸಮುದ್ರನಾದುದರಿಂದ ತನ್ನ ಪಕ್ಕದಲ್ಲಿರುವ ಗಣಗಳಿಗೆ ಹೀಗೆ ಆಜ್ಞಾಪಿಸಿದನು. ॥೩೭೨॥

॥ ಶ್ರೀಮಹಾದೇವ ಉವಾಚ ॥

ರೇರೇ ಸೌಮ್ಯಗಣಾಽಽಯಾಹಿ ಶೃಣು ಕೌತೂಹಲಂ ವಚಃ ।
ಯಚ್ಛ್ರುತ್ವಾ ಭವತಾಂ ಚೇತಃ ಪ್ರಸಾದಮುಪಗಚ್ಛತಿ ॥೩೭೩॥

ಅದ್ಯ ಕಶ್ಚಿನ್ಮಹಾಪಾಪೀ ಮೃತೋ ಬ್ರಹ್ಮವಧಪ್ರಿಯಃ ।
ತತ್ಕೃತಾನಾಂ ತು ಪಾಪಾನಾಂ ಸಂಖ್ಯಾ ನಾಸ್ತ್ಯೇವ ಸರ್ವಥಾ ॥೩೭೪॥

ತೇನೈವೋಕ್ತಮಿದಂ ವಾಕ್ಯಂ ಶೃಣು ತದ್ವಕ್ಷ್ಯತೇ ಮಯಾ ।
ಆಹರಾಸ್ತ್ರಂ ಸಂಹರೇತೌ ಪ್ರಹರಪ್ರಹರಾಧುನಾ ॥೩೭೫॥

ಇತ್ಯುಕ್ತ್ವಾ ಸ ಮೃತಃ ಪಾಪೀ ಕೃತಬ್ರಹ್ಮವಧಃ ಖಲಃ ।
ತತ್ಪಾತಕಾನಿ ನಷ್ಟಾನಿ ತದ್ವಾಕ್ಯೋಚ್ಚಾರಣಾತ್ತದಾ ॥೩೭೬॥

ಆಹರೇತ್ಯಾದಿವಾಕ್ಯಸ್ಥಂ ಹರನಾಮಾಘನಾಶಕಂ ।
ಜಾತಂ ಹಿ ಮೃತಕಾಲೀನಂ ಸರ್ವಪಾಪವಿನಾಶಕಂ ॥೩೭೭॥

---

ಎಲೈ ಸೌಮ್ಯರಾದ ಗಣಗಳಿರಾ! ಇಲ್ಲಿಗೆ ಬನ್ನಿರಿ. ಒಂದು ಕುತೂಹಲವನ್ನುಂಟುಮಾಡುವ ಮಾತನ್ನು ನಿಮಗೆ ಹೇಳುತ್ತೇನೆ. ಇದನ್ನು ಕೇಳುವುದರಿಂದ ನಿಮ್ಮ ಮನಸ್ಸು ನಿರ್ಮಲವಾಗುತ್ತದೆ. ॥೩೭೩॥

ಈದಿನ ಬ್ರಹ್ಮಹತ್ಯೆಮಾಡುವುದರಲ್ಲಿ ತುಂಬಾ ಆಸಕ್ತನಾಗಿದ್ದ ಒಬ್ಬ ಮಹಾಪಾಪಿಷ್ಠನು ಸತ್ತಿರುವನು. ಆತನು ಮಾಡಿರುವ ಪಾಪಗಳಿಗೆ ಗಣನೆಯೇ ಇಲ್ಲವಾಗಿದೆ. ॥೩೭೪॥

ಸಾಯುವ ಸಮಯದಲ್ಲಿ ಆತನು ಹೇಳಿದ ವಾಕ್ಯಗಳನ್ನು ತಿಳಿಸುವೆನು ಕೇಳಿರಿ. 'ಆಯುಧವನ್ನು ತೆಗೆದುಕೋ? ಇವರನ್ನು ಸಂಹರಿಸು, ಚೆನ್ನಾಗಿ ಇವರನ್ನು ಹೊಡೆ?' ಎಂಬ ಅರ್ಥವನ್ನು ಸೂಚಿಸುವ "ಆಹರಾಸ್ತ್ರಂ ಸಂಹರೇತೌ ಪ್ರಹರ ಪ್ರಹರಾಧುನಾ'' ಎಂಬ ವಾಕ್ಯವನ್ನು ಹೇಳಿ ಬ್ರಹ್ಮಹತ್ಯೆಮಾಡಿದ್ದ ಆ ಪಾಪಿಯು ಮೃತನಾದನು. ಆ ವಾಕ್ಯಗಳನ್ನುಚ್ಚಾರಣೆಮಾಡಿದ ಮಾತ್ರದಿಂದಲೇ ಅವನ ಪಾಪಗಳೆಲ್ಲವೂ ನಾಶವಾದವು. ॥೩೭೫-೩೭೬॥

'ಆಹರ' ಎಂದು ಹೇಳಿದ ವಾಕ್ಯದಲ್ಲಿರುವ ಪಾಪನಾಶಕವಾದ ಹರನಾಮವು ಮರಣಕಾಲದಲ್ಲಿ ಉಚ್ಚರಿತವಾದ್ದರಿಂದ ಅವನ ಸಕಲ ಪಾಪಗಳೂ ಅದರಿಂದ ನಾಶವಾದವು. ॥೩೭೭॥

ಅತಃ ಪರಂ ಸಂಹರೇತಿವಾಕ್ಯಸ್ಥ ಹರನಾಮತಃ ।
ತಸ್ಮೈ ವಿನಷ್ಟಪಾಪಾಯ ಮೋಕ್ಷಂ ದಾಸ್ಯಾಮ್ಯಸಂಶಯಂ ॥೩೭೮॥

ಪ್ರಹರಪ್ರಹರೇತ್ಯತ್ರ ಯನ್ನಾಮದ್ವಯಮಸ್ತಿ ತತ್ ।
ಮತ್ಸ್ಮರಣಾರ್ಥಮಭೂತ್ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೭೯॥

ಆಹರೇತ್ಯಾದಿವಾಕ್ಯಸ್ಥಂ ಹರನಾಮಚತುಷ್ಟಯಂ ।
ಸರ್ವಾಭೀಷ್ಟಪ್ರದಂ ಸತ್ಯಮುಪಸರ್ಗವಿನಾಕೃತಂ ॥೩೮೦॥

ಅಬುದ್ಧಿಪೂರ್ವಕಂ ವಾಸ್ತು ಬುದ್ಧಿಪೂರ್ವಕಮೇವ ವಾ ।
ಮನ್ನಾಮೋಚ್ಚರಿತಂ ಪುಂಸಾಂ ಮುಕ್ತಿದಂ ಮೃತಿಕಾಲಿಕಂ ॥೩೮೧॥

ಮೃತಾಕಾಲೀನ ಮನ್ನಾಮಸ್ಮರಣಾನ್ಮೋಕ್ಷಮಾಶ್ವಹಂ ।
ದಾಸ್ಯಾಮಿ ಸತ್ಯಮೇವೇತಿ ಪ್ರತಿಜ್ಞೇಯಂ ಮಯಾ ಕೃತಾ ॥೩೮೨॥

---

ಅನಂತರ 'ಸಂಹರ' ಎಂಬ ವಾಕ್ಯದಲ್ಲಿರುವ ಇನ್ನೊಂದು ಹರನಾಮವನ್ನು ಚ್ಚಾರಣೆಮಾಡಿದುದರಿಂದ ಪಾಪವನ್ನು ಕಳೆದುಕೊಂಡಿರುವ ಅವನಿಗೆ ನಾನು ಸಂಶಯವೇ ಇಲ್ಲದೇ ಮೋಕ್ಷವನ್ನು ಕೊಡುವೆನು. ॥೩೭೮॥

ಅಲ್ಲದೇ 'ಪ್ರಹರಪ್ರಹರ' ಎಂದು ಹೇಳಿದಾಗ ಅದರಲ್ಲಿರುವ ನನ್ನ ಎರಡು ನಾಮಗಳಿಂದ ನನ್ನನ್ನು ಸ್ಮರಣೆಮಾಡಿದಂತಾಯಿತೆಂದು ನಾನು ಭುಜವನ್ನೆತ್ತಿ ಹೇಳುತ್ತೇನೆ. ॥೩೭೯॥

ಆಹರ, ಸಂಹರ, ಪ್ರಹರ ಈ ವಾಕ್ಯಗಳಲ್ಲಿರುವ ಉಪಸರ್ಗಗಳನ್ನು ತೆಗೆದು ಉಳಿದ ನಾಲ್ಕು ಹರನಾಮಗಳೂ ಸತ್ಯವಾಗಿ ಸಕಲ ಅಭೀಷ್ಟಗಳನ್ನೂ ಕೊಡುವುವು. ॥೧೮೦॥

ಬುದ್ಧಿಯಿಂದಲಾಗಲೀ ಅಥವ ಬುದ್ಧಿಯಿಲ್ಲದೇ ಆಗಲಿ, ಮರಣ ಕಾಲದಲ್ಲಿ ನನ್ನ ನಾಮಸ್ಮರಣೆಮಾಡಿದ ಪುರುಷರಿಗೆ ಮುಕ್ತಿಯುಂಟಾಗುವುದು. ಮರಣ ಕಾಲದಲ್ಲಿ ನನ್ನ ನಾಮಸ್ಮರಣೆಮಾಡುವವರಿಗೆ ನಾನು ಜಾಗ್ರತೆಯಾಗಿ ಮೋಕ್ಷವನ್ನು ಕೊಡುತ್ತೇನೆಂದು ಪ್ರತಿಜ್ಞೆಮಾಡಿದ್ದೇನೆ. ಇದು ಸತ್ಯ. ॥೩೮೧-೩೮೨॥

ಆಹರೇತ್ಯಾದಿವಾಕ್ಯಸ್ಥಾನುಪಸರ್ಗಾನ್ವಿಹಾಯ ತತ್ ।
ರಾಜತೇ ಮುಕ್ತಿದಂ ನೄಣಾಂ ತನ್ಮೇ ನಾಮಚತುಷ್ಟಯಂ ॥೩೮೩॥

ಮಹಾಪಾತಕಿನಾಪ್ಯುಕ್ತಂ ಮನ್ನಾಮ ಮೃತಿಕಾಲಿಕಂ ।
ತಸ್ಮೈ ಮೋಕ್ಷಂ ದದಾತ್ಯೇವ ಸ್ವಭಾವಸ್ತಸ್ಯ ತಾದೃಶಃ ॥೩೮೪॥

ಮಮ ನಾಮಾನಿ ಯಾವಂತಿ ತಾವತಾಮಪಿ ಸರ್ವಥಾ ।
ಮುಕ್ತಿದತ್ವಸ್ವಭಾವೋಽಸ್ತಿ ತಾದೃಶಾನ್ಯೇವ ತಾನಿ ಹಿ ॥೩೮೫॥

ಮೃತಿಕಾಲೀನಮನ್ನಾಮಸ್ಮರಣಾದ್ಬಹುಭಿಃ ಪುರಾ ।
ಮೋಕ್ಷಃ ಪ್ರಾಪ್ತಃ ಕಿಮಸ್ತ್ಯತ್ರ ಚಿತ್ರಂ ನಾಮ್ನೈವ ತಾದೃಶಂ ॥೩೮೬॥

ಹರನಾಮ ಹರತ್ಯೇವ ಪಾತಕಾನಿ ಬಹೂನ್ಯಪಿ ।
ಯತಃ ಪಾಪಹರತ್ವೇನ ಪ್ರಸಿದ್ಧಂ ನಾಮ ತಾದೃಶಂ ॥೩೮೭॥

---

'ಆಹರ' ಸಂಹರ ಸಂಹರ, ಪ್ರಹರ ಈ ವಾಕ್ಯಗಳಲ್ಲಿರುವ ಆ, ಸಂ, ಸಂ, ಪ್ರ ಮೊದಲಾದ ನಾಲ್ಕು ಉಪಸರ್ಗಗಳನ್ನು ಬಿಟ್ಟು ಪ್ರಕಾಶಿಸುತ್ತಿರುವ ಹರನೆಂಬ ನನ್ನ ನಾಲ್ಕು ನಾಮಗಳು ಮೋಕ್ಷವನ್ನು ಕೊಡುವುವು. ಮಹಾಪಾಪಿಯಾದರೂ ಈತನಿಂದ ಮರಣಕಾಲದಲ್ಲಿ ನನ್ನ ನಾಮವು ಉಚ್ಚರಿತವಾದುದರಿಂದ ಆತನಿಗೆ ಮೋಕ್ಷವನ್ನು ಅದು ಕೊಟ್ಟೇ ಕೊಡುತ್ತದೆ. ಅದರ ಸ್ವಭಾವವೇ ಹಾಗಿರುವುದು. ॥೩೮೩-೩೮೪॥

ನನ್ನ ಹೆಸರುಗಳೆಲ್ಲಕ್ಕೂ ಖಂಡಿತವಾಗಿಯೂ ಮೋಕ್ಷವನ್ನು ಕೊಡುವ ಸಾಮರ್ಥ್ಯವಿರುವುದು. ಅವುಗಳ ಸ್ವಭಾವವೇ ಅಂಥದು. ಮರಣಕಾಲದಲ್ಲಿ ನನ್ನ ನಾಮಸ್ಮರಣೆಮಾಡಿ ಅನೇಕರು ಹಿಂದೆ ಮೋಕ್ಷವನ್ನು ಹೊಂದಿರುವರು. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಆ ನಾಮಮಹಿಮೆಯೇ ಆ ರೀತಿಯದು. ॥೩೮೫-೩೮೬॥

ಪಾಪವನ್ನು ನಾಶಮಾಡುವ ವಿಷಯದಲ್ಲಿ ಪ್ರಸಿದ್ಧವಾದ ಹರನೆಂಬ ನನ್ನ ನಾಮವು ನಾನಾವಿಧವಾದ ಪಾಪಗಳನ್ನೂ ನಾಶಮಾಡಿಬಿಡುವುದರಲ್ಲಿ ಸಂದೇಹವೇ ಇಲ್ಲ. ॥೩೮೭॥

ಸದ್ಯಃ ಕೃತಮಹಾಪಾಪೋಽಪ್ಯಂತಕಾಲಶಿವಸ್ಮೃತೇಃ ।
ಮೋಕ್ಷಂ ಪ್ರಾಪ್ನೋತ್ಯತಃ ಸೌಮ್ಯ ತಮಿಹಾನಯ ಸತ್ವರಂ ॥೩೮೮॥

ಇತ್ಯುಕ್ತಃ ಸ ಮಹೇಶೇನ ಶಮೇವ ನಯತಿ ದ್ವಿಜಂ ।
ಅತಃ ಪರಂ ನ ತಸ್ಯಾಸ್ತಿ ದುಃಖಲೇಶೋಽಪಿ ಸರ್ವಥಾ ॥೩೮೯॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಯಮಃ ಸಂತುಷ್ಟಮಾನಸಃ ।
ಶ್ರುತಂ ಕಿಂ ಚಿತ್ರಗುಪ್ತೋಕ್ತಮಿತಿ ದೂತಾನುವಾಚ ಸಃ ॥೩೯೦॥

ತತಃ ಸ ವಿಪ್ರಃ ಸಂಪ್ರಾಪ ಮಾಮೇವ ಸುರಪುಂಗವಂ ।
ಸೋಽಪಿ ಮಾಂ ಪ್ರಾಪ ಸುಭಗೇ ಯಮೇನ ಪರಿಪೂಜಿತಃ ॥೩೯೧॥

ಅತ ಏವಾತಿಯತ್ನೇನ ಮದರ್ಚನಪರಾಯಣಾಃ ।
ನಿಃಶ್ರೇಯಸಂ ಪ್ರಾಪ್ನುವಂತಿ ಸುಲಭೇನ ವರಾನನೇ ॥೩೯೨॥

---

ಈ ಕ್ಷಣದಲ್ಲಿ ಮಹಾಪಾಪಗಳನ್ನು ಮಾಡಿದ್ದರೂ ಮರಣಕಾಲದಲ್ಲಿ ಪರಶಿವನ ಸ್ಮರಣೆಮಾಡುವುದರಿಂದ ಆತನು ತಪ್ಪದೇ ಮೋಕ್ಷವನ್ನು ಹೊಂದುವನಾದ್ದರಿಂದ ಎಲೈ ಸೌಮ್ಯನೇ, ಆ ನನ್ನ ಭಕ್ತನನ್ನು ಜಾಗ್ರತೆಯಾಗಿ ಇಲ್ಲಿಗೆ ಕರೆದುಕೊಂಡು ಬಾ ಎಂದು ಮಹೇಶ್ವರನು ತನ್ನ ಗಣದಲ್ಲೊಬ್ಬನಿಗೆ ಆಜ್ಞೆಮಾಡಿದನು. ॥೩೮೮॥

ಹೀಗೆ ಆ ಮಹೇಶ್ವರನಿಂದ ಆಜ್ಞೆಮಾಡಲ್ಪಡಲು ಶಿವಗಣವು ಅದೇ ಬ್ರಾಹ್ಮಣನನ್ನೇ ಈ ವಿಮಾನದಲ್ಲಿ ಕರೆದೊಯ್ಯುತ್ತಿರುವುದು. ಇನ್ನು ಮುಂದೆ ಈತನಿಗೆ ಯಾವ ವಿಧವಾದ ದುಃಖಲೇಶವೂ ಇರುವುದಿಲ್ಲ'' ಎಂದನು. ॥೩೮೯॥

ಚಿತ್ರಗುಪ್ತನಾಡಿದ ಆ ಮಾತುಗಳನ್ನು ಕೇಳಿ ಯಮನು ಸಂತುಷ್ಟಾಂತರಂಗನಾಗಿ 'ದೂತರನ್ನು ಕುರಿತು ಇಲ್ಲಿಯವರೆಗೂ ಚಿತ್ರಗುಪ್ತನು ಹೇಳಿದ ಮಾತನ್ನು ಕೇಳಿದಿರಾ' ಎಂದು ನುಡಿದನು. ॥೩೯೦॥

ಸೌಭಾಗ್ಯವತಿಯೇ! ಅನಂತರ ನನ್ನ ಸಮೀಪಕ್ಕೆ ಬರುತ್ತಿದ್ದ ಆ ಬ್ರಾಹ್ಮಣನು ಯಮನಿಂದಲೂ ಪೂಜಿಸಲ್ಪಟ್ಟು ಕೊನೆಗೆ ದೇವತೋತ್ತಮನಾದ ನನ್ನ ಬಳಿಗೆ ಬಂದುಸೇರಿದನು. ॥೩೯೧॥

ಸುಂದರಮುಖಿಯೇ! ಆದ್ದರಿಂದಲೇ ತುಂಬಾ ನಿಯಮಗಳಿಂದ ನನ್ನನ್ನು ಪೂಜೆಮಾಡುವುದರಲ್ಲಿ ತತ್ಪರರಾಗಿರುವವರು ಸುಲಭವಾಗಿ ಮಂಗಳವನ್ನು ಹೊಂದುತ್ತಾರೆ. ॥೩೯೨॥

ದೇವತಾಸಾರ್ವಭೌಮೋಽಹಂ ಮದೇಕಶರಣಾತ್ಮನಾಂ ।
ಮೋಕ್ಷಂ ದಾಸ್ಯಾಮಿ ಸುಭಗೇ ಸತ್ಯಂ ಸತ್ಯಂ ನ ಸಂಶಯಃ ॥೩೯॥

ರುದ್ರಾಕ್ಷಾಂಗದಕಂಕಣಾಃ ಸಿತಲಸದ್ಭಸ್ಮಾಂಗರಾಗಾಃ ಸದಾ
ಶಂಭೋ ಶಂಕರ ಚಂದ್ರಶೇಖರ ಮಹಾದೇವೇತಿ ಸಂವಾದಿನಃ ।
ಮನ್ನಾಮೈಕಸುಧಾಸಮುದ್ರಲಹರೀ ಕಲ್ಲೋಲಲೋಲೋಲ್ಲಸ
ಜ್ಜಿಹ್ವಾಜಿಹ್ಮವಿವರ್ಜಿತಾ ಮಮ ಹಿತಾಃ ಸತ್ಯಂ ಬ್ರವೀಮಿ ಪ್ರಿಯೇ ॥೪೦॥

ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಶಿವನಾಮೋಚ್ಚಾರಣ
ಮಹಿಮಾದಿವರ್ಣನೇ ಸಪ್ತದಶೋಽಧ್ಯಾಯಃ

---

ಭಾಗ್ಯವತಿಯೇ! ದೇವತೆಗಳಲ್ಲೆಲ್ಲಾ ಅತ್ಯುತ್ತಮನಾದುದರಿಂದ ಸಾರ್ವಭೌಮನೆನಿಸಿರುವ ನಾನು, ನನ್ನನ್ನೇ ಮರೆಹೊಕ್ಕು ಎಡಬಿಡದೇ ಪೂಜಾಧ್ಯಾನಾದಿಗಳನ್ನು ಮಾಡುತ್ತಿರುವ ನನ್ನ ಭಕ್ತರಿಗೆ ಸತ್ಯವಾಗಿಯೂ ಮೋಕ್ಷವನ್ನು ಕೊಡುತ್ತೇನೆ. ಇದರಲ್ಲಿ ಸಂಶಯವಿಲ್ಲ. ॥೩೯॥

ಪ್ರಿಯಳೇ! ರುದ್ರಾಕ್ಷಗಳನ್ನೇ ಭುಜಕೀರ್ತಿ, ಮತ್ತು ಕಂಕಣಗಳನ್ನಾಗಿ ಮಾಡಿಕೊಂಡು, ಶುಭ್ರವಾದ ವಿಭೂತಿಯನ್ನು ಅಂಗರಾಗದಂತೆ ಮೈಗೆಲ್ಲಾ ಯಾವಾಗಲೂ ಬಳಿದುಕೊಂಡು ಪ್ರಕಾಶಿಸುತ್ತಾ, ಶಂಭೋ! ಶಂಕರ! ಚಂದ್ರಚೂಡ! ಮಹಾದೇವ! ಎಂದು ನನ್ನ ದಿವ್ಯನಾಮಗಳನ್ನು ಹೇಳುತ್ತಾ ನನ್ನ ನಾಮಾಮೃತವೆಂಬ ಸಮುದ್ರದ ಚಂಚಲವಾದ ಅಲೆಗಳಿಂದ ಶೋಭಿಸುತ್ತಿರುವ ನಾಲಿಗೆಗಳುಳ್ಳವರಾಗಿ ಕೌಟಿಲ್ಯವಿಲ್ಲದೇ ಇರುವವರು ನನಗೆ ಸತ್ಯವಾಗಿ ಆಪ್ತರೆಂದು ಹೇಳುವೆನು. ಎಂದು ಮಹೇಶ್ವರನು ಪಾರ್ವತಿಗೆ ತನ್ನ ನಾಮಮಹಿಮೆಯನ್ನು ತಿಳಿಯಪಡಿಸಿದನು. ॥೪೦॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿನ ಉಗ್ರನಾಮಕವಾದ ಏಳನೆಯ ಅಂಶದಲ್ಲಿ
ಶಿವನ ನಾಮಗಳ ಉಚ್ಚಾರಣಾಮಾಹಾತ್ಮ್ಯ ಮೊದಲಾದುವುಗಳ ವರ್ಣನೆಯೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಅಷ್ಟಾದಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಶೃಣು ದೇವಿ ಕಥಾಮನ್ಯಾಮತಿಸಂತೋಷದಾಮಿಮಾಂ ।
ಯತ್ಕಥಾಶ್ರವಣಾದೇವ ಹೃಷ್ಟಚಿತ್ತಾ ಭವಿಷ್ಯಸಿ ॥೧॥

ಪುರಾ ಸ್ವರ್ಗೇ ಶಚೀನಾಥಂ ದೃಷ್ಟ್ವಾ ಗುರುರತಿಪ್ರಿಯೇ ।
ಉವಾಚ ವಚನಂ ವಾಗ್ಮೀ ಸಸ್ಮಿತಂ ಪ್ರೀತಿಪೂರ್ವಕಂ ॥೨॥

ಭೂಲೋಕತೀರ್ಥಸೇವಾರ್ಥಂ ಮಯಾ ಗತಮನೇಕಧಾ ।
ದೃಷ್ಟಾನಿ ಶಿವತೀರ್ಥಾನಿ ವೇದೋಕ್ತಾನ್ಯೇವ ಸಾದರಂ ॥೩॥

---

## ಹದಿನೆಂಟನೆಯ ಅಧ್ಯಾಯ

ದೇವಿಯೇ, ವಿಶೇಷ ಸಂತೋಷಕರವಾದ ಮತ್ತೊಂದು ಕಥೆಯನ್ನು ಹೇಳುವೆನು ಲಾಲಿಸು. ಆ ಕಥೆಯನ್ನು ಕೇಳುವುದರಿಂದಲೇ ನಿನ್ನ ಮನಸ್ಸು ಸಂತುಷ್ಟವಾಗುವುದು. ಎಂದು ಶಂಕರನು ಶಿವಕ್ಷೇತ್ರಗಳ ಮಹಿಮೆಯನ್ನು ಹೇಳತೊಡಗಿದನು. ॥೧॥

ಪ್ರೇಯಸಿ, ಹಿಂದೆ ಒಂದು ದಿನ ವಾಚಸ್ಪತಿಯಾದ ಬೃಹಸ್ಪತ್ಯಾಚಾರ್ಯನು ಸ್ವರ್ಗಲೋಕದಲ್ಲಿ ಶಚೀರಮಣನಾದ ದೇವೇಂದ್ರನನ್ನು ಕಂಡು ಅವನೊಡನೆ ಮುಗುಳುನಗೆಯನ್ನು ಬೀರುತ್ತಾ ಪ್ರೀತಿಯಿಂದ ಹೀಗೆ ಮಾತನಾಡಿದನು. ॥೨॥

ದೇವರಾಜ, ನಾನು ಭೂಲೋಕದಲ್ಲಿರುವ ನಾನಾ ತೀರ್ಥಕ್ಷೇತ್ರಗಳ ಸೇವೆಗೋಸ್ಕರ ಅನೇಕಸಲ ಹೋಗಿ, ವೇದಪ್ರತಿಪಾದಿತಗಳಾದ ಅನೇಕ ಶಿವತೀರ್ಥ

ತೀರ್ಥೇಷು ಬಹವೋ ದೃಷ್ಟಾಃ ಶೈವಾ ಏವ ಶಿವಾರ್ಚಕಾಃ ।
ತೇಷಾಂ ತು ದರ್ಶನಾದೇವ ಸಂತೋಷೋ ವರ್ಧತೇ ಮಹಾನ್ ॥೪॥

ಭಸ್ಮೋದ್ಧೂಳಿತಸರ್ವಾಂಗಾಃ ದೃಶ್ಯಂತೇ ಭಾಗ್ಯತೋ ಯದಾ ।
ತದಾ ಮಮಾಪಿ ಸಂತೋಷೋ ಭವತ್ಯೇವ ನ ಸಂಶಯಃ ॥೫॥

ದೃಶ್ಯಂತೇ ಯತ್ರ ಯತ್ರೈವ ಭಸ್ಮರುದ್ರಾಕ್ಷಭೂಷಣಾಃ ।
ತತ್ರ ತತ್ರ ಸದಾ ತೇಷು ಶಿವಬುದ್ಧಿಃ ಪ್ರಜಾಯತೇ ॥೬॥

ಸತ್ಸಂಗತಿಂ ವಿಹಾಯಾತ್ರ ಬಲಾದಾಗಮ್ಯತೇ ಮಯಾ ।
ತತ್ಸಂಗತಿಪರಿತ್ಯಾಗಃ ಕರ್ತುಮೇವ ನ ಶಕ್ಯತೇ ॥೭॥

ಯಥಾ ತತ್ರ ಸುಖಂ ಭೂರಿ ತಥಾ ನಾತ್ರ ಮಮ ಧ್ರುವಂ ।
ಶೈವಾನಾಮೇವ ಸಂಗೇನ ಸ್ಥಾತವ್ಯಮಿತಿ ಧೀರ್ಮಮ ॥೮॥

ಶೈವಾಃ ಶಂಕರತತ್ವಜ್ಞಾಃ ಬಹವಃ ಸಂತಿ ಭೂತಲೇ ।
ತೇಷಾಂ ದರ್ಶನಮಾತ್ರೇಣ ನಶ್ಯಂತ್ಯಘಕುಲಂ ಕ್ಷಣಾತ್ ॥೯॥

---

ಗಳನ್ನು ಆದರದಿಂದ ನೋಡಿದೆನು. ಆ ತೀರ್ಥಗಳಲ್ಲಿ ಶಿವಪೂಜಾನಿರತರಾದ ಅನೇಕ ಈಶ್ವರಭಕ್ತರು ಕಾಣಿಸಿಕೊಂಡರು. ಅವರ ಸಂದರ್ಶನದಿಂದ ನನಗೆ ವಿಶೇಷವಾದ ಆನಂದವು ಅಭಿವೃದ್ಧಿಹೊಂದಿತು. ॥೩-೪॥

ಸಕಲ ಅವಯವಗಳಿಗೂ ಭಸ್ಮವನ್ನು ಲೇಪನಮಾಡಿಕೊಂಡಿರುವ ಪರಶಿವ ಭಕ್ತರು ಅದೃಷ್ಟವಶದಿಂದ ಗೋಚರವಾದಾಗಲೆಲ್ಲಾ ನನಗೆ ಸಂತೋಷವುಂಟಾಗುವುದೆಂಬುದರಲ್ಲಿ ಸಂದೇಹವೇ ಇಲ್ಲ. ॥೫॥

ವಿಭೂತಿ, ರುದ್ರಾಕ್ಷ ಇವುಗಳನ್ನಲಂಕರಿಸಿಕೊಂಡಿರುವವರು ಕಾಣುವ ಸ್ಥಳಗಳಲ್ಲೆಲ್ಲಾ ನನಗೆ ಯಾವಾಗಲೂ ಅವರ ವಿಷಯದಲ್ಲಿ ಆ ಪರಶಿವನ ವಿಷಯಕವಾದ ಬುದ್ಧಿಯೇ ಹುಟ್ಟುತ್ತದೆ. ಒಂದುವೇಳೆ ಈ ಸ್ವರ್ಗಲೋಕದಲ್ಲಿ ಸತ್ಪುರುಷರ ಸಹವಾಸವನ್ನಾದರೂ ಬಲಾತ್ಕಾರವಾಗಿ ಬಿಟ್ಟು ಬರಬಹುದು. ಆದರೆ ಆ ಭೂಲೋಕದಲ್ಲಿ ಶಿವಭಕ್ತರ ಸಹವಾಸವನ್ನು ಮಾತ್ರ ಬಿಡಲು ಸಾಧ್ಯವೇ ಆಗುವುದಿಲ್ಲ. ॥೬-೭॥

ಅಲ್ಲಿರುವ ಸುಖವು ನನಗೆ ಇಲ್ಲಿ ನಿಶ್ಚಯವಾಗಿಯೂ ಇಲ್ಲವೆಂದು ತೋರುವುದು. ಯಾವಾಗಲೂ ಪರಮೇಶ್ವರಭಕ್ತರ ಸಹವಾಸದಲ್ಲಿಯೇ ಇರಬೇಕೆಂದು ನನಗೆ

ಯದಾ ತೇ ಬಿಲ್ವಪತ್ರಾದ್ಯೈರರ್ಚಯಂತಿ ಮಹೇಶ್ವರಂ ।
ತದಾ ತದರ್ಚನಂ ಸಮ್ಯಗ್ದೃಷ್ಟ್ವೈವ ಸ್ಥೀಯತೇ ಮಯಾ ॥೧೦॥

ತದ್ದರ್ಶನೇನ ಸಂತೋಷೋ ಜಾಯತೇ ಯಾದೃಶಸ್ತದಾ ।
ತಾದೃಶಸ್ತ್ವತ್ರ ಸಂತೋಷಃ ಕದಾಪಿ ನ ಭವಿಷ್ಯತಿ ॥೧೧॥

ಶಿವಲಿಂಗಾರ್ಚನಂ ಕೃತ್ವಾ ಭಕ್ತಿಶ್ರದ್ಧಾಪುರಃಸರಂ ।
ಪ್ರಣಮ್ಯ ನರ್ತನಂ ಕೃತ್ವಾ ಸ್ತುವಂತಿ ವಿವಿಧೈಃಸ್ತವೈಃ ॥೧೨॥

ಶಿವನಾಮಾಮೃತಂ ಪೀತ್ವಾ ಸಂತುಷ್ಟಾಃ ಸಂತಿ ಸರ್ವದಾ ।
ತದುತ್ಸಾಹಸಮೋತ್ಸಾಹೋ ನ ಕೇನಾಪ್ಯನುಭೂಯತೇ ॥೧೩॥

ತೇಷಾಂ ಶಿವಾರ್ಚನಂ ತ್ಯಕ್ತ್ವಾ ಕಾರ್ಯಮನ್ಯನ್ನ ವಿದ್ಯತೇ ।
ಪ್ರದಕ್ಷಿಣಂ ವಿನಾಽನ್ಯತ್ರ ಸಂಚಾರೋ ನಾಪಿ ದೃಶ್ಯತೇ ॥೧೪॥

---

ಬುದ್ಧಿಯುಂಟಾಗಿರುವುದು. ಆ ಭೂಮಿಯಲ್ಲಿ ಶಂಕರನ ತತ್ವವನ್ನರಿತವರನೇಕರಿರುವರು. ಅವರ ದರ್ಶನಮಾತ್ರದಿಂದಲೇ ಪಾಪಸಮೂಹಗಳೆಲ್ಲವೂ ಕ್ಷಣಮಾತ್ರದಲ್ಲಿ ನಾಶವಾಗುವುವು. ॥೮-೯॥

ಆ ಶೈವರು ಬಿಲ್ವಪತ್ರೆ, ಹೂವು, ಮೊದಲಾದ ಪೂಜಾಸಾಧನಗಳಿಂದ ಮಹೇಶ್ವರನನ್ನು ಪೂಜೆಮಾಡುತ್ತಿರುವಾಗ ಆ ಪೂಜೆಯನ್ನೇ ನಾನು ಚೆನ್ನಾಗಿ ನಿಂತು ನೋಡುತ್ತಿರಬೇಕೆನ್ನುವ ಹಾಗಾಗುತ್ತದೆ. ಅವರ ದಿವ್ಯದರ್ಶನದಿಂದಾಗುವ ಸಂತೋಷವು ಇಲ್ಲಿ ಎಂದಿಗೂ ಆಗುವುದಿಲ್ಲವೆಂದೇ ನನಗೆ ತೋರುವುದು. ॥೧೦-೧೧॥

ಶಿವಕ್ಷೇತ್ರದಲ್ಲಿ ಭಕ್ತರು ಶಿವಲಿಂಗವನ್ನು ಶ್ರದ್ಧಾಭಕ್ತಿಪುರಸ್ಸರವಾಗಿ ಪೂಜೆಮಾಡಿ ದೇವದೇವನಿಗೆ ನಮಸ್ಕರಿಸಿ, ಅನಂತರ ಅವನ ಮುಂದೆ ನರ್ತನಮಾಡಿ ಆಮೇಲೆ ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸುತ್ತಾರೆ. ॥೧೨॥

ಶಿವನಾಮವೆಂಬ ಅಮೃತವನ್ನು ಪಾನಮಾಡಿ ಅವರು ಯಾವಾಗಲೂ ಸಂತೋಷಭರಿತರಾಗಿಯೇ ಇರುವರು. ಅವರಿಗಿರುವ ಉತ್ಸಾಹಕ್ಕೆ ಸಮಾನವಾದ ಉತ್ಸಾಹವು ಮತ್ತಾರಿಂದಲೂ ಅನುಭವಿಸಲ್ಪಡಲು ಸಾಧ್ಯವಿಲ್ಲ. ಆ ಶಿವನ ಪೂಜೆಯನ್ನು ಬಿಟ್ಟು ಅವರಿಗೆ ಮತ್ತೊಂದು ಕಾರ್ಯವೇ ಇಲ್ಲ. ಆ ದೇವನಿಗೆ ಪ್ರದಕ್ಷಿಣೆ

ಶಿವೋತ್ಕರ್ಷಪ್ರಧಾನೈವ ಕಥಾ ಸಂಶ್ರೂಯತೇ ಹಿ ತೈಃ ।
ವೇದಾರ್ಥ ಏವ ಸತತಂ ವಿಚಾರ್ಯ ಸ್ಥೀಯತೇ ಮುದಾ ॥೧೫॥

ಬಹಿಸ್ತು ತೇಷಾಂ ಗಮನಂ ಬಿಲ್ವಪತ್ರಾರ್ಥಮೇವ ಹಿ ।
ತದನ್ಯಾರ್ಥಂ ತು ಗಮನಂ ತೇಷಾಂ ನೈವ ಹಿ ದೃಶ್ಯತೇ ॥೧೬॥

ಏತಾದೃಶಾಃ ಶಿವಾಚಾರನಿರತಾಃ ಶಿವಪೂಜಕಾಃ ।
ಬಹವಃ ಸಂತಿ ಭೂಲೋಕೇ ಶಿವಪಾರಿಷದಾ ಇವ ॥೧೭॥

ಏವಂ ಸತಿ ಮಯಾ ದೃಷ್ಟಮಪೂರ್ವಂ ತದ್ವದಾಮ್ಯಹಂ ।
ತಚ್ಛೃಣುಷ್ವಾತಿಯತ್ನೇನ ಕೌತೂಹಲಕರಂ ಪರಂ ॥೧೮॥

ಕಶ್ಚಿದ್ಬಿಲ್ವದಲೈರೀಶಂ ಸಂಪೂಜ್ಯಾತಿಪ್ರಯತ್ನತಃ ।
ಸ್ತೋತ್ರೈರನೇಕಧಾ ಸ್ತುತ್ವಾ ಹೃಷ್ಟಚಿತ್ತೋ ಬಭೂವ ಸಃ ॥೧೯॥

---

ಮಾಡುವುದನ್ನು ಬಿಟ್ಟರೆ ಅವರಿಗೆ ಬೇರೆ ಎಲ್ಲಿಯೂ ಸಂಚಾರವೇ ಇರುವುದಿಲ್ಲ. ॥೧೩-೧೪॥

ಶಿವನ ಉತ್ಕರ್ಷವನ್ನೇ ಪ್ರಧಾನವಾಗಿ ತಿಳಿಸುವ ಶಿವಕಥೆಗಳನ್ನೇ ಅವರು ಯಾವಾಗಲೂ ಕೇಳುತ್ತಿರುವರು. ಯಾವಾಗಲೂ ವೇದಾರ್ಥಗಳನ್ನು ಪೂರ್ಣವಾಗಿ ಪ್ರೀತಿಯಿಂದ ವಿಚಾರಮಾಡುತ್ತಾ ಅವರು ವಾಸಿಸುತ್ತಿರುವರು. ॥೧೫॥

ಅವರು ಬಿಲ್ವಪತ್ರೆಗಳನ್ನು ತರುವುದಕ್ಕೆ ಮಾತ್ರವೇ ಹೊರಗೆ ಹೋಗುವರು. ಬೇರೆ ಯಾವ ಕೆಲಸಕ್ಕೂ ಅನ್ಯತ್ರ ಹೊರಡುವುದೇ ಕಾಣುವುದಿಲ್ಲ. ಈರೀತಿಯಾಗಿ ಆ ಶಿವನ ಆಚಾರದಲ್ಲಿ ನಿರತರಾಗಿ ಶಿವಪೂಜಕರಾಗಿರುವರನೇಕರು ಈ ಲೋಕದಲ್ಲಿ ಶಿವನ ಪಾರಿಷದರಂತೆಯೇ (ಪ್ರಮಥಗಣ) ಇರುವರು. ॥೧೬-೧೭॥

ಹೀಗಿರುವಾಗ ನಾನೊಂದು ಅಪೂರ್ವ ಸಂಗತಿಯನ್ನು ಕಂಡೆನು. ವಿಶೇಷ ಕುತೂಹಲವನ್ನುಂಟುಮಾಡುವ ಆ ಸಮಾಚಾರವನ್ನು ಹೇಳುವೆನು; ಸಾವಧಾನವಾಗಿ ಕೇಳು. ಒಬ್ಬ ಶಿವಭಕ್ತನು ಬಿಲ್ವಪತ್ರೆಗಳಿಂದ ಮಹೇಶ್ವರನನ್ನು ನಿಯಮಪೂರ್ವಕವಾಗಿ ಪೂಜೆಮಾಡಿ ನಾನಾ ವಿಧವಾದ ಸ್ತೋತ್ರಗಳಿಂದ (ನನ್ನನ್ನು) ಮಹಾದೇವನನ್ನು ಸ್ತೋತ್ರಮಾಡಿ ಸಂತುಷ್ಟಾಂತರಂಗನಾದನು. ॥೧೮-೧೯॥

ತದಾ ಕಶ್ಚಿದ್ದ್ವಿಜಸ್ತತ್ರ ಸಮಾಗತ್ಯ ತಮಬ್ರವೀತ್ ।
ಏನಮೇವಾತಿಯತ್ನೇನ ಕಿಮರ್ಥಂ ಪೂಜಯತ್ಯಯಂ ॥೨೦॥

ಯಥಾಽಯಮೇವಮೇವಾನ್ಯಾಃ ಪೂಜ್ಯಾಸ್ತಿಷ್ಠಂತಿ ದೇವತಾಃ ।
ತಾನ್ವಿಹಾಯಾತಿಯತ್ನೇನ ಪೂಜಯತ್ಯೇನಮೇವ ಕಿಂ ॥೨೧॥

ದೇವಾಃ ಸರ್ವೇ ಸಮಾ ಏವ ತಥಾಚ್ಯೈನಂ ವಿಶೇಷತಃ ।
ಏಕಮೇವಾತ್ರ ಸಂಪೂಜ್ಯ ಮೋಹೇನಾಯಂ ತು ತಿಷ್ಠತಿ ॥೨೨॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸ ಶೈವಃ ಶಿವಪೂಜನಂ ।
ಶೀಘ್ರಂ ಸಮಾಪ್ಯ ಯತ್ನೇನ ನಿರ್ಯಯೌ ಶಿವಮಂಟಪಾತ್ ॥೨೩॥

ತತೋ ಜಗ್ರಾಹ ತಂ ವಿಪ್ರಂ ಶಿವಾನುತ್ಕರ್ಷವಾದಿನಂ ।
ಗೃಹೀತ್ವಾ ತಸ್ಯ ರಸನಾಮುತ್ಪಾಟ್ಯ ಸ ಜಘಾನ ತಂ ॥೨೪॥

---

ಈ ಸಂದರ್ಭದಲ್ಲಿ ಒಬ್ಬ ದ್ವಿಜನು ಅಲ್ಲಿಗೆ ಬಂದು, ಈ ಶಿವನೊಬ್ಬನನ್ನೇ ಈತನು ಇಷ್ಟೊಂದು ನಿಯಮದಿಂದ ಪೂಜೆಮಾಡುತ್ತಾನೆ! ಇವನಂತೆಯೇ ಪೂಜಾರ್ಹರಾದ ಇನ್ನೂ ಅನೇಕ ದೇವತೆಗಳಿರುವರು. ಅವರಾರನ್ನೂ ಪೂಜಿಸದೇ ಈ ಶಿವನೊಬ್ಬನನ್ನೇ ತುಂಬಾ ನಿಯಮದಿಂದ ಪೂಜೆಮಾಡಲು ಕಾರಣವೇನು? ॥೨೦-೨೧॥

ಎಲ್ಲಾ ದೇವತೆಗಳೂ ಸಮಾನರಾಗಿಯೇ ಇರುವಾಗ ಈತನು ವಿಶೇಷವಾಗಿ ಈ ಶಿವನೊಬ್ಬನನ್ನೇ ಪೂಜಿಸಿ ಅಜ್ಞಾನಿಯಾಗಿರುವನೆಂದು ಹೇಳಿದನು. ॥೨೨॥

ಅವನು ಹೀಗೆ ಹೇಳಿದುದನ್ನು ಕೇಳಿ, ಈಶ್ವರಭಕ್ತನು ತಾನು ಮಾಡುತ್ತಿದ್ದ ಶಿವಪೂಜೆಯನ್ನು ನಿಯಮದಿಂದ ಜಾಗ್ರತೆಯಾಗಿಯೇ ಮುಗಿಸಿ ಆ ಶಿವಮಂಟಪದಿಂದ ಹೊರಗೆ ಬಂದನು. ॥೨೩॥

ಅನಂತರ ಶಿವನ ಉತ್ಕರ್ಷವನ್ನು ಹೇಳದಿರುವ ಆ ಬ್ರಾಹ್ಮಣನನ್ನು ಹಿಡಿದು, ಅವನ ನಾಲಿಗೆಯನ್ನು ಕಿತ್ತು, ಕೊನೆಗೆ ಆ ಶಿವಾಪರಾಧಿಯನ್ನು ಕೊಂದು ಹಾಕಿದನು ॥೨೪॥

ವಿಷ್ಠಾನುಲಿಪ್ತಾಂ ರಸನಾಂ ಮುಖ್ಯೇ ತಸ್ಯ ತತಃ ಪರಂ ।
ಪ್ರಕ್ಷಿಪ್ಯ ವಿಷ್ಟಯಾ ಪೂರ್ಣಂ ಮುಖಂ ತಸ್ಯ ಚಕಾರ ಸಃ ॥೨೫॥

ತತಃ ಪರಮುಪಾನದ್ಭ್ಯಾಂ ತಾಡಯಿತ್ವಾ ತದಾನನಂ ।
ಶಿಶ್ನಮುತ್ಪಾಟ್ಯ ತದ್ವಕ್ತ್ರೇ ಪ್ರಕ್ಷಿಪ್ಯಾತಾಡಯತ್ತತಃ ॥೨೬॥

ತತಃ ಪರಂ ತಚ್ಛರೀರಂ ಚಕರ್ತ ಕ್ರೋಧಸಂಕುಲಃ ।
ತತಃ ಪರಂ ಸುಖಂ ಪ್ರಾಪ ಸ ಶಿವಾರಾಧನಪ್ರಿಯಃ ॥೨೭॥

ಏತಾದೃಶಃ ಸ ಶೈವೇಂದ್ರಃ ಶಿವಾನುತ್ಕರ್ಷವಾದಿನಂ ।
ಹತ್ವೈವ ಚಂಡಚಂಡಾಲಗೃಹಮಧ್ಯೇ ವಿನಿಕ್ಷಿಪೇತ್ ॥೨೮॥

ತತಃ ಪರಂ ಸ ಚಂಡಾಲೈರ್ಗರ್ತಮಧ್ಯೇ ನಿಪಾತಿತಃ ।
ಏವಂ ಬಹುವಿಧಂ ದುಃಖಂ ಪ್ರಾಪ ಶಂಕರದೂಷಕಃ ॥೨೯॥

ಸ ಶೈವೇಂದ್ರಸ್ತು ತಂ ಹತ್ವಾ ಪ್ರಾಪಾನಂದಮಖಂಡಿತಂ ।
ತತಃ ಪರಂ ಯಮುಭಟೈಃ ಸ ನೀತೋಽಸ್ತಿ ದ್ವಿಜೋಽಧುನಾ ॥೩೦॥

---

ಆಮೇಲೆ ಆತನ ನಾಲಿಗೆಗೆ ಅಮೇಧ್ಯವನ್ನು ಬಳಿದು ಅದನ್ನು ಅವನ ಬಾಯಲ್ಲಿ ಇಟ್ಟು ಅವನ ಬಾಯಿಗೆಲ್ಲಾ ತುಂಬಾ ಪುರೀಷವನ್ನು ತುಂಬಿದನು. ॥೨೫॥

ಹಾಗೆಯೇ ಅವನ ಮುಖಕ್ಕೆ ಎಕ್ಕಡದಿಂದ ಹೊಡೆದು, ಅವನ ಮೂತ್ರೇಂದ್ರಿಯವನ್ನು ಕಿತ್ತು ಅವನ ಬಾಯಿಗೆ ಹಾಕಿ ಚೆನ್ನಾಗಿ ಶಿಕ್ಷಿಸಿದನು. ॥೨೬॥

ಇದರಿಂದ ಕೋಪೋದ್ರಿಕ್ತನಾದ ಆ ಶೈವನು ಪಾಪಿಯ ಶರೀರವನ್ನು ಕತ್ತರಿಸಿದ ನಂತರ ಶಿವಪೂಜೆಯಲ್ಲಿ ಪ್ರೀತಿಯುಳ್ಳವನಾಗಿ ಮಾನಸಿಕ ಸುಖವನ್ನು ಹೊಂದಿದನು. ॥೨೭॥

ಈ ರೀತಿಯಾಗಿರುವ ಆ ಶಿವಭಕ್ತಾಗ್ರೇಸರನು ಶಿವನನ್ನು ಶ್ರೇಷ್ಠನೆಂದು ಹೇಳದೇ ಇರುವ ಆ ಪಾಪಿಯನ್ನು ಕೊಂದು, ಹಾಗೆಯೇ ಅವನನ್ನು ಕ್ರೂರರಾದ ಚಂಡಾಲರ ಮನೆಯ ಮಧ್ಯದಲ್ಲಿ ಎಸೆದುಬಿಟ್ಟನು. ॥೨೮॥

ಅದಾದನಂತರ ಚಂಡಾಲರೂ ಆತನನ್ನು ಒಂದು ಹಳ್ಳದ ಮಧ್ಯದಲ್ಲಿ ತೆಗೆದುಕೊಂಡುಹೋಗಿ ತಳ್ಳಿದರು. ಈ ರೀತಿಯಾಗಿ ಶಂಕರನನ್ನು ದೂಷಣೆಮಾಡಿದ ಬ್ರಾಹ್ಮಣನು ನಾನಾವಿಧವಾದ ದುಃಖವನ್ನನುಭವಿಸಿದನು. ಆ ಶಿವಭಕ್ತನಾದರೋ

ತಸ್ಯ ಕಿಂ ಶಾಸನಂ ಭಾವಿ ತದ್ದ್ರಷ್ಟವ್ಯಂ ಪ್ರಯತ್ನತಃ ।
ವಕ್ತುಂ ವಾರ್ತಾಮಿಮಾಮಿಂದ್ರ ಸಂಪ್ರಾಪ್ತೋಽಸ್ಮಿ ತವಾಂತಿಕಂ ॥೩೧॥

ತ್ವಮಪ್ಯಾಯಾಹಿ ದೇವೇಂದ್ರ ಸತ್ವರಂ ಸಾನುಗೋಽಧುನಾ ।
ದ್ರಷ್ಟವ್ಯಂ ಕಾಲಸದನಮಶೈವಭಯದಂ ಸದಾ ॥೩೨॥

ಇತಿ ತದ್ವಚನಂ ಶ್ರುತ್ವಾ ದೇವೇಂದ್ರೋ ಗುರುಣಾ ಸಹ ।
ಯಯಾವತ್ಯಂತವೇಗೇನ ಯಮದರ್ಶನಕಾಂಕ್ಷಯಾ ॥೩೩॥

ತತಸ್ತಮಾಗತಂ ದೃಷ್ಟ್ವಾ ಯಮೋ ದೇವೇಂದ್ರಮಾದರಾತ್ ।
ಪೂಜಯಾಮಾಸ ಸ ಗುರುಮುಪವೇಶ್ಯಾಸನೇ ಶುಭೇ ॥೩೪॥

ತದಾನೀಮೇವ ಯಾಮೀಯಾಃ ಶಿವಾನುತ್ಕರ್ಷವಾದಿನಂ ।
ಪ್ರೋಥಯಿತ್ವೈವ ಶೂಲಾಗ್ರೇ ತಮಾನೀಯ ನಿಚಿಕ್ಷಿಪುಃ ॥೩೫॥

---

ಆತನನ್ನು ಕೊಂದು ಸಂಪೂರ್ಣವಾದ ಆನಂದವನ್ನು ಹೊಂದಿದನು. ಇದಾದಮೇಲೆ ಯಮಭಟರು ಶಿವನಿಂದಕನಾದ ಆ ಬ್ರಾಹ್ಮಣನನ್ನು ಈಗ ತೆಗೆದುಕೊಂಡು ಹೋಗಿರುವರು. ॥೨೯-೩೦॥

ದೇವೇಂದ್ರನೇ, ಅವನಿಗೆ ಯಮಲೋಕದಲ್ಲಿ ಮುಂದೆ ಯಾವರೀತಿಯಾದ ಶಿಕ್ಷೆಯಾಗುವುದೋ ಅದನ್ನು ಅವಶ್ಯವಾಗಿ ನಾವು ನೋಡಬೇಕು. ಈ ವಿಷಯವನ್ನು ತಿಳಿಸುವುದಕ್ಕೋಸ್ಕರವೇ ಈಗ ನಾನು ನಿನ್ನ ಸಮೀಪಕ್ಕೆ ಬಂದಿರುವೆನು.॥೩೧॥

ಎಲೈ ದೇವೇಂದ್ರನೇ, ನೀನೂ ನನ್ನ ಜತೆಯಲ್ಲಿ ಜಾಗ್ರತೆಯಾಗಿ ಬಾ. ಯಾವಾಗಲೂ ಶಿವಭಕ್ತರಲ್ಲದವರಿಗೆ ಭಯಪ್ರದವಾದ ಆ ಯಮನ ಮನೆಯನ್ನು ಅವಶ್ಯವಾಗಿ ನೋಡಬೇಕೆಂದು ದೇವಗುರುವು ಹೇಳಲು, ಇಂದ್ರನು ಅವನ ಇಚ್ಛೆಯಂತೆಯೇ ಯಮನನ್ನು ನೋಡುವ ಕುತೂಹಲದಿಂದ ಜಾಗ್ರತೆಯಾಗಿಯೇ ಗುರುಗಳೊಡನೆ ಅಲ್ಲಿಗೆ ಹೊರಟನು. ॥೩೨-೩೩॥

ಅನಿರೀಕ್ಷಿತವಾಗಿ ಬಂದ ದೇವೇಂದ್ರನನ್ನೂ ಮತ್ತು ದೇವಗುರುವನ್ನೂ ನೋಡಿ ಯಮನು ವಿಶೇಷವಾದ ಆದರದಿಂದ ಅವರನ್ನು ಶುಭಕರವಾದ ಆಸನದಲ್ಲಿ ಕುಳ್ಳಿರಿಸಿ ಭಕ್ತಿಯಿಂದ ಪೂಜೆಮಾಡಿದನು. ॥೩೪॥

ಅದೇ ಸಂದರ್ಭದಲ್ಲಿಯೇ ಯಮಭಟರು ಶಿವನಿಗೆ ಶ್ರೇಷ್ಠತ್ವವನ್ನು ಹೇಳದೆ

ತತಃ ಪರಂ ಚಿತ್ರಗುಪ್ತಂ ವಿಲೋಕ್ಯ ಸ ಯಮಸ್ತದಾ ।
ಕೋಽಯಮಿತ್ಯಾಹ ವಿನಯಾಚ್ಚಿತ್ರಗುಪ್ತೋಽಪ್ಯುವಾಚ ತಂ ॥೩೬॥

॥ ಚಿತ್ರಗುಪ್ತ ಉವಾಚ ॥

ಯಮಾಽಯಂ ಬ್ರಾಹ್ಮಣೋಽನೇನ ಕೃತಂ ಶಂಕರದೂಷಣಂ ।
ಶೈವಾಯ ದುಃಖಂ ದತ್ತಂ ಚ ಮಹಾದೇವಸ್ಯ ನಿಂದಯಾ ॥೩೭॥

ದೇವಾಧಿದೇವಮಜರಮನನ್ಯಸದೃಶಂ ಶಿವಂ ।
ಅನ್ಯದೇವಸಮತ್ವೇನ ಜ್ಞಾತ್ವಾ ಮೋಹಾತ್ತಮಬ್ರವೀತ್ ॥೩೮॥

ಇತ್ಯುಕ್ತಾಂ ಚಿತ್ರಗುಪ್ತೋಕ್ತಿಂ ಶ್ರುತ್ವಾ ಕಾಲೋಽತಿಭೀಷಣಃ ।
ಕ್ರೋಧಾವಿಷ್ಟೋಽಬ್ರವೀದ್ದೂತಾನ್ದ್ವಿಜಮತ್ರಾನಯಂತ್ವಿತಿ ॥೩೯॥

---

ಇದ್ದ ಆ ಪಾಪಿಯನ್ನು ಶೂಲದ ತುದಿಯಲ್ಲಿ ಚುಚ್ಚಿಕೊಂಡು ತಂದು ಯಮನ ಮುಂದೆ ಕೆಡವಿದರು. ॥೩೫॥

ಅನಂತರ ಯಮಧರ್ಮರಾಜನು ಚಿತ್ರಗುಪ್ತನನ್ನು ನೋಡಿ ವಿನಯದಿಂದ ಈತನಾರೆಂದು ಪ್ರಶ್ನೆಮಾಡಲು ಆಗ ಚಿತ್ರಗುಪ್ತನು ಯಮನನ್ನು ಕುರಿತು ಇಂತೆಂದನು. ॥೩೬॥

“ಯಮದೇವನೇ, ಈತನು ಬ್ರಾಹ್ಮಣನು. ಇವನು ಶಂಕರನನ್ನು ದೂಷಣೆ ಮಾಡಿದನು. ಅಲ್ಲದೇ ಆ ಮಹಾದೇವನನ್ನು ನಿಂದಿಸಿ ಅವನ ಭಕ್ತನಿಗೆ ತುಂಬಾ ದುಃಖವನ್ನುಂಟುಮಾಡಿರುವನು. ॥೩೭॥

ದೇವತೆಗಳಿಗೂ ಸಮನಾಗದವನೂ, ಸಕಲ ದೇವತೆಗಳನ್ನೂ ತನ್ನ ಆಶ್ರಿತರನ್ನಾಗಿ ಮಾಡಿಕೊಂಡಿರುವವನೂ ಆದ ಶಿವನನ್ನು ಇತರ ದೇವತೆಗಳಿಗೆ ಸಮಾನನಾದವನೆಂದು ತಿಳಿದು ಅಜ್ಞಾನದಿಂದ ಆ ಶಿವಭಕ್ತನೊಡನೆ ಸಂಭಾಷಣೆಮಾಡಿದನು” ಎಂದು ಚಿತ್ರಗುಪ್ತನು ಯಮನಿಗೆ ಹೇಳಿದನು. ॥೩೮॥

ಚಿತ್ರಗುಪ್ತನು ನುಡಿದ ಈ ಮಾತುಗಳನ್ನು ಕೇಳಿ ಅತ್ಯಂತ ಭಯಂಕರ ಸ್ವರೂಪನಾದ ಆ ಯಮನು ಕೋಪಾಕ್ರಾಂತನಾಗಿ, ಅವನನ್ನು ಇಲ್ಲಿ ಕರೆತನ್ನಿರೆಂದು ತನ್ನ ದೂತರಿಗೆ ಆಜ್ಞೆಮಾಡಿದನು. ॥೩೯॥

ತತಃ ಪರಂ ಸ ನಿಕ್ಷಿಪ್ತೋ ಯಮದೂತೈರ್ಭಯಾಕುಲೈಃ ।
ತತಃ ಶೂಲಮತಿಕ್ರೂರೋ ಗೃಹೀತ್ವಾ ತಮತಾಡಯತ್ ॥೪೦॥

ತತಃ ಶತಘ್ನೀಮಾದಾಯ ಕಾಲಸ್ತಂ ಕ್ರೂರಶಾಸನಃ ।
ತಾಡಯಾಮಾಸ ವೇಗೇನ ಕ್ರೋಧಸಂಕುಲಿತೇಕ್ಷಣಃ ॥೪೧॥

ಸಂತಪ್ತಾಯಸಪಿಂಡೇನ ತಮತಾಡಯದುದ್ಧತಂ ।
ತತೋ ವಿವಿಧಸಂತಪ್ತಶಸ್ತ್ರೈಶ್ಚ ತಮತಾಡಯತ್ ॥೪೨॥

ತತಃ ಪರಂ ಪ್ರಯತ್ನೇನ ಸಂತಪ್ತಗಿರಿಸಂನಿಭಾಂ ।
ಶತಘ್ನೀಂ ಸಮುಪಾದಾಯ ತಯಾ ಸಂತಾಡಯದ್ದ್ವಿಜಂ ॥೪೩॥

ತತಸ್ತಮಾಯಸಸ್ತಂಭೇ ಸಂತಪ್ತೇ ವಹ್ನಿಶೃಂಖಲೈಃ ।
ಬದ್ಧ್ವಾ ತಮತಿವೇಗೇನ ಬಬಂಧ ಕ್ರೂರಶಾಸನಃ ॥೪೪॥

---

ಆಗ ತಮ್ಮ ಸ್ವಾಮಿಯ ಅಪ್ಪಣೆಯಂತೆ ಭಯಾಕ್ರಾಂತರಾದ ಯಮದೂತರು ಅವನನ್ನು ಮುಂದೆ ತಂದುಹಾಕಿದರು. ಆಮೇಲೆ ಅತಿ ಕ್ರೂರನಾದ ಆ ಯಮನು ತ್ರಿಶೂಲವನ್ನು ತೆಗೆದುಕೊಂಡು ಅದರಿಂದ ಆತನನ್ನು ಹೊಡೆದನು. ಅಷ್ಟಕ್ಕೆ ತೃಪ್ತನಾಗದೇ ಭಯಂಕರವಾಗಿ ಶಿಕ್ಷೆಮಾಡುವ ಯಮನು ಶತಘ್ನಿಯೆಂಬ ಆಯುಧವನ್ನು ತೆಗೆದುಕೊಂಡು ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮರಳಿಸುತ್ತಾ ವೇಗವಾಗಿ ಆತನನ್ನು ಅದರಿಂದ ಹೊಡೆದನು. ||೪೦-೪೧||

ಅನಂತರ ಚೆನ್ನಾಗಿ ಕಾದ ಕಬ್ಬಿಣದ ಗುಂಡಿನಿಂದ ಉದ್ಧತನಾದ ಆ ಬ್ರಾಹ್ಮಣಾಧಮನನ್ನು ಹೊಡೆದನು. ಅದಾದಮೇಲೆ, ನಾನಾ ವಿಧವಾದ ಶಸ್ತ್ರಗಳನ್ನು ಚೆನ್ನಾಗಿ ಕಾಯಿಸಿ ಅವುಗಳಿಂದಲೂ ಚೆನ್ನಾಗಿ ಬಡಿದನು. ಇದೂ ಆದಮೇಲೆ ಚೆನ್ನಾಗಿ ಕಾದಿರುವ ಬೆಟ್ಟಕ್ಕೆ ಸಮಾನವಾದ ಆಕೃತಿಯುಳ್ಳ ಶತಘ್ನಿಯೆಂಬ ಆಯುಧವನ್ನು ತೆಗೆದುಕೊಂಡು ಅದರಿಂದಲೂ ಆ ಬ್ರಾಹ್ಮಣನನ್ನು ಚೆನ್ನಾಗಿ ಶಿಕ್ಷಿಸಿದನು. ||೪೨-೪೩||

ಆಮೇಲೆ ಕ್ರೂರವಾದ ಶಾಸನವುಳ್ಳ ಆ ಯಮನು ಚೆನ್ನಾಗಿ ಕಾದಿರುವ ಕಬ್ಬಿಣದ ಕಂಬದಲ್ಲಿ ಬೆಂಕಿಯಂತಿರುವ ಕಾದ ಕಬ್ಬಿಣದ ಸರಪಳಿಗಳಿಂದ ಕಟ್ಟಿ, ಅವನನ್ನು ಹೊಡೆಯುವುದಕ್ಕೋಸ್ಕರ ಹತ್ತುಸಾವಿರ ತನ್ನ ದೂತರನ್ನು, ಇವನನ್ನು

ತತಸ್ತತ್ತಾಡನಾಯಾಯಂ ದೂತಾನಾಮುಯುತಂ ಯಮಃ ।
ಪ್ರೇರಯಾಮಾಸ ಶೂಲಾಗ್ರೈಸ್ತಾಡಯಂತ್ವಿತಿ ಸಾದರಂ ॥೪೫॥

ಏವಮಾದಿಶ್ಯ ಕಾಲೋಽಯಂ ಸಂದಷ್ಟಾಧರಪಲ್ಲವಃ ।
ನಿಃಶ್ವಾಸವಾಯೂನ್ವಿಸೃಜನ್ನುವಾಸ ಕ್ರೂರಶಾಸನಃ ॥೪೬॥

ತದೇದೃಶಂ ಯಮಂ ದೃಷ್ಟ್ವಾ ದೇವೇಂದ್ರೋ ಭಯವಿಹ್ವಲಃ ।
ಶನೈರುವಾಚ ವಚನಂ ವಿನಯಾನ್ನಯಕೋವಿದಃ ॥೪೭॥

॥ ದೇವೇಂದ್ರ ಉವಾಚ ॥

ಯಮಾಽಸ್ಯ ತು ಶಿವಾವಜ್ಞಾಕಾರಿಣಃ ಶಾಸನಂ ಕೃತಂ ।
ಕಿಮೇತಾವದುತಾನ್ಯಚ್ಚ ಶಾಸನಂ ವರ್ತತೇ ವದ ॥೪೮॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಬಭಾಷೇ ವಚನಂ ಯಮಃ ।
ತದಾ ಸ ಗುರುದೇವೇಂದ್ರಪ್ರಭೃತೀನಾಂ ಭಯಪ್ರದಂ ॥೪೯॥

---

ಜಾಗ್ರತೆ ಚೆನ್ನಾಗಿ ಕಾದ ಶೂಲಾಯುಧದ ಮೊನೆಗಳಿಂದ ಹೊಡೆಯಿರೆಂದು ನಿಯಮಿಸಿದನು. ॥೪೪-೪೫॥

ಆ ಯಮನು ತನ್ನ ಭಟರಿಗೆ ಈರೀತಿ ಅಪ್ಪಣೆಮಾಡಿ, ತನ್ನ ಹಲ್ಲುಗಳನ್ನು ಕಡಿಯುತ್ತಾ, ದೀರ್ಘವಾಗಿ ನಿಟ್ಟುಸುರುಗಳನ್ನು ಬಿಟ್ಟು, ತನ್ನ ಕ್ರೂರವಾದ ಶಾಸನಗಳನ್ನು ತೋರ್ಪಡಿಸುತ್ತಾ ಇದ್ದನು. ॥೪೬॥

ಈ ರೀತಿ ಭಯಂಕರನಾಗಿರುವ ಆ ಯಮನನ್ನು ನೋಡಿ ದೇವೇಂದ್ರನು ಭಯಾಕ್ರಾಂತನಾಗಿ ವಿನಯದಿಂದ ನೀತಿಶಾಸ್ತ್ರನಿಪುಣನಾದ ತಾನು ಮೆಲ್ಲಗೆ ಈ ರೀತಿ ಮಾತನಾಡಿದನು. ॥೪೭॥

ಓ ಯಮಧರ್ಮರಾಜ, ಶಿವನನ್ನು ತಿರಸ್ಕಾರಮಾಡಿದ ಈತನಿಗೆ ಈಗ ಮಾಡಿದ ಶಿಕ್ಷೆಯು ಇಷ್ಟೇಯೋ ! ಅಥವಾ ಬೇರೆ ಏನಾದರೂ ಇರುವುದೋ ? ಎಂದು ದೇವೇಂದ್ರನು ಕೇಳಲು, ಆಗ ಯಮನು ಆ ಮಾತನ್ನು ಕೇಳಿ ಬೃಹಸ್ಪತ್ಯಾಚಾರ್ಯ ಮತ್ತು ಇಂದ್ರ ಇವರೇ ಮುಂತಾದವರಿಗೆಲ್ಲಾ ಭಯವನ್ನುಂಟುಮಾಡುವಂತಿರುವ ಕೆಲವು ಮಾತುಗಳನ್ನಾಡಿದನು. ॥೪೮-೪೯॥

॥ ಯಮ ಉವಾಚ ॥

ಕಿಮದ್ಯ ಶಾಸನಂ ಜಾತಂ ಶಿವಾನುತ್ಕರ್ಷವಾದಿನಃ ।
ಆಬ್ರಹ್ಮಕಲ್ಪಮೇತಸ್ಯ ಕ್ರೂರಂ ಭಾವ್ಯೇವ ಶಾಸನಂ ॥೫೦॥

ಶಿವಾನುತ್ಕರ್ಷವಾದೀ ಯಃ ಸ ಸುರೋಽಸ್ತು ನರೋಽಸ್ತು ವಾ ।
ತಸ್ಯಾಹಮೇವ ಶಾಸ್ತಾಽಸ್ಮಿ ಸೋಽಹಮುತ್ಯುಗ್ರಶಾಸನಃ ॥೫೧॥

ಶಿವಭೃತ್ಯೋಽಸ್ಮ್ಯಹಂ ತಸ್ಮಾಚ್ಛಿವಾನುತ್ಕರ್ಷವಾದಿನಂ ।
ಪಾತಯಿಷ್ಯಾಮಿ ನರಕೇಷ್ವಶೇಷೇಷು ನ ಸಂಶಯಃ ॥೫೨॥

ಸಾರ್ಧಾರ್ಬುದಾನಿ ನರಕಾಣ್ಯತಿದುಃಖಪ್ರದಾನಿ ಹಿ ।
ತೇಷ್ವಯಂ ಪ್ರತ್ಯಹಂ ದುಷ್ಟಃ ಪಾತನೀಯೋ ನ ಸಂಶಯಃ ॥೫೩॥

ಕಿಂ ಚೈತತ್ಪಿತರಃ ಸಂತಿ ಸ್ವರ್ಗೇ ಧರ್ಮವಿರಾಜಿತೇ ।
ತೇಽಪ್ಯಾನೇಯಾ ಹಿ ನರಕೇ ಪಾತನೀಯಾಃ ಪ್ರಯತ್ನತಃ ॥೫೪॥

---

ಈಗ ನಾನು ಶಿವನನ್ನು ಉತ್ಕೃಷ್ಟನೆಂದು ಹೇಳದಿರುವ ಈತನಿಗೆ ಮಾಡಿದ ಈ ಕ್ರೂರವಾದ ಶಿಕ್ಷೆಯು ಬ್ರಹ್ಮಕಲ್ಪವು ಇರುವವರೆಗೂ ನಡೆಯುತ್ತಲೇ ಇರುತ್ತದೆ. ಶಿವನ ಉತ್ಕೃಷ್ಟತೆಯನ್ನು ಹೇಳದಿರುವ ದೇವತೆಯಾಗಲೀ ಮಾನವನಾಗಲೀ, ಅವರಿಗೆ, ವಿಶೇಷ ಭಯಂಕರವಾದ ಶಾಸನವುಳ್ಳ ನಾನು ಶಿಕ್ಷಕನಾಗಿರುವೆನು. ॥೫೦-೫೧॥

ನಾನು ಆ ಪರಶಿವನ ಭೃತ್ಯನಾಗಿರುವುದರಿಂದ ಆ ಶಿವನ ಉತ್ಕರ್ಷವನ್ನು ಹೇಳದಿರುವವರನ್ನು ಸಕಲ ನರಕಗಳಲ್ಲಿಯೂ ಸಂದೇಹವೇ ಇಲ್ಲದೇ ತಳ್ಳಿಸುವೆನು. ॥೫೨॥

ಹದಿನೈದು ಸಾವಿರ ನರಕಗಳು ನಮ್ಮಲ್ಲಿ ದುಃಖಕರಗಳಾಗಿರುವುವು. ಈ ದುಷ್ಟನನ್ನು ಆ ನರಕಗಳಲ್ಲಿ ಪ್ರತಿನಿತ್ಯವೂ ಸಂಶಯವಿಲ್ಲದೇ ತಳ್ಳಬೇಕಾಗುತ್ತದೆ. ಇದಲ್ಲದೇ ಈತನ ಪಿತೃದೇವತೆಗಳು ಧರ್ಮದಿಂದ ಶೋಭಿಸುತ್ತಿರುವ ಸ್ವರ್ಗಲೋಕದಲ್ಲಿರುವರು. ಇವನ ದೆಸೆಯಿಂದ ಆ ಪಿತೃಗಳನ್ನೂ ಈ ನರಕಕ್ಕೆ ಕರೆದುಕೊಂಡು ಬಂದು ಬಲಾತ್ಕಾರವಾಗಿ ತಳ್ಳಬೇಕಾಗುತ್ತದೆ. ॥೫೩-೫೪॥

ಸರ್ವದೇವೋತ್ತಮಂ ಶಂಭುಂ ಯೋಽನ್ಯಥಾ ವಕ್ತುಮಿಚ್ಛತಿ ।
ತಸ್ಯಾಪಿ ನರಕಾವಾಸಃ ಸಮ್ಯಗೇವ ಭವಿಷ್ಯತಿ ॥೫೫॥

ಯಃ ಶಿವಂ ದೇವದೇವೇಶಮನ್ಯಥಾ ವದತಿ ಸ್ಫುಟಂ ।
ತಸ್ಯ ವಾಸೋಽಸ್ತಿ ನರಕೇಷ್ವಿತ್ಯತ್ರಾಸ್ತಿ ಕಿಮುದ್ಭುತಂ ॥೫೬॥

ಭ್ರಮೇಣ ವಾ ಪ್ರಮಾದೇನ ಯದ್ವಾ ಮೋಹೇನ ಶಂಕರಂ ।
ಜಾನಾತಿ ಯೋಽನ್ಯಥಾ ತಸ್ಯ ನರಕೇಷು ಸ್ಥಿತಿರ್ಧ್ರುವಾ ॥೫೭॥

ಇಂದ್ರಾಶ್ಚ ಬಹವೋ ಜಾತಾಃ ಶಿವಾನುತ್ಕರ್ಷವಾದಿನಃ ।
ನರಕೇಷ್ವತಿಘೋರೇಷು ಭುಕ್ತ್ವಾ ತಿಷ್ಠಂತಿ ಯಾತನಾಂ ॥೫೮॥

ಇಂದ್ರೇಂದ್ರೋಽಸ್ತ್ವಸ್ತು ಚಂದ್ರೋ ವಾ ಯದ್ವೋಪೇಂದ್ರಸ್ತು ಕಿಂ ಮಮ।
ಯದಿ ತೇಷು ಶಿವದ್ರೋಹೋ ನರಕೇ ಪಾತಯಾಮಿ ತಾನ್ ॥೫೯॥

---

ಸಕಲ ದೇವತೆಗಳಲ್ಲಿಯೂ ಉತ್ತಮನೆನಿಸಿದ ಆ ಶಂಭುವನ್ನು ವಿಪರೀತ ಭಾವನೆಯಿಂದ ತಿಳಿಯಲು ಅಪೇಕ್ಷಿಸುವವನಿಗೆ ಇಂತಹ ನರಕವಾಸವು ದೊರೆಯುವುದು. ಹೀಗಿರುವಾಗ ಆ ದೇವದೇವೋತ್ತಮನೆನಿಸಿದ ಈಶ್ವರನನ್ನು ಸ್ಪಷ್ಟವಾಗಿ ತಿರಸ್ಕಾರಮಾಡುವವನಿಗೆ ನರಕವಾಸವುಂಟಾಗುವುದೆಂಬುದರಲ್ಲಿ ಆಶ್ಚರ್ಯವೇನು? ॥೫೫-೫೬॥

ಭ್ರಾಂತಿಯಿಂದಲಾಗಲೀ ಪ್ರಮಾದದಿಂದಲಾಗಲೀ ಅಥವಾ ಅಜ್ಞಾನದಿಂದಲಾಗಲೀ ಆ ಶಂಕರನನ್ನು ವಿಪರೀತವಾಗಿ ಭಾವಿಸುವವನಿಗೆ ನರಕಗಳ ವಾಸವು ನಿಶ್ಚಯವಾಗಿ ಏರ್ಪಟ್ಟಿರುವುದು. ಆ ಶಿವನ ಉತ್ಕರ್ಷವನ್ನು ಹೇಳದೇ ಇರುವ ಇಂದ್ರರು ಇಲ್ಲಿಯವರೆಗೆ ಅನೇಕರಾಗಿರುವರು. (ಅಂದರೆ ಶಿವದ್ರೋಹಮಾಡಿದ ಆ ಇಂದ್ರರಿಗೆ ನರಕವಾಸವೇರ್ಪಡುವುದರಿಂದ ಅವನ ಸ್ಥಾನದಲ್ಲಿ ಬೇರೆ ಬೇರೆ ಇಂದ್ರರು ನಿರ್ಮಿತರಾಗಿರುವರೆಂದು ಭಾವ.) ಆ ಇಂದ್ರರು ಅತಿ ಭಯಂಕರವಾದ ನರಕಗಳಲ್ಲಿ ಇನ್ನೂ ಯಾತನೆಯನ್ನು ಅನುಭವಿಸುತ್ತಿರುವರು. ॥೫೭-೫೮॥

ಇಂದ್ರನೇ, ಶಿವದ್ರೋಹವನ್ನೆಸಗಿದವನು ಇಂದ್ರನಾಗಲೀ, ಚಂದ್ರನಾಗಲೀ, ಒಂದುವೇಳೆ ಉಪೇಂದ್ರನೆನಿಸಿದ ವಿಷ್ಣುವೇ, ಆಗಲಿ, ಆತನನ್ನು ನಾನು ನಿಶ್ಚಯವಾಗಿ ನರಕಗಳಲ್ಲಿ ತಳ್ಳುವೆನು. ವಿಷ್ಣುವೇ ಒಂದುವೇಳೆ ಭ್ರಾಂತನಾಗಿ ಶಿವದ್ರೋಹಮಾಡಿ

ಶಿವದ್ರೋಹೀ ಯದಿ ಭವೇದುಪೇಂದ್ರೋಽಪಿ ಭ್ರಮಾತ್ತದಾ ।
ಪಾತಯಿಷ್ಯಾಮಿ ನರಕೇಷ್ವಶೇಷೇಷು ನ ಸಂಶಯಃ ॥೬೦॥

ಮಹ್ಯಂ ಮಹೇಶಭೃತ್ಯಸ್ಯ ಕಿಮುಪೇಂದ್ರಃ ಕರಿಷ್ಯತಿ ।
ಶಿವದ್ರೋಹೀ ಯದಿ ಭವೇತ್ತದಾ ಮಚ್ಛಾಸ್ಯ ಏವ ಸಃ ॥೬೧॥

ಶಾಸನೀಯಾಃ ಪ್ರಯತ್ನೇನ ಶಿವಾನುತ್ಕರ್ಷವಾದಿನಃ ।
ಇತ್ಯಾಜ್ಞಾ ಶಂಕರೇಣೈವ ಮಹ್ಯಂ ದತ್ತಾ ಪುರಾ ಮುದಾ ॥೬೨॥

ಇತ್ಯುಕ್ತಂ ತದ್ವಚಃ ಶ್ರುತ್ವಾ ದೇವೇಂದ್ರೋ ಭಯಸಂಕುಲಃ ।
ಉವಾಚ ವಿನಯೇನೈವ ಕೃತಾಂಜಲಿಪುಟಸ್ತದಾ ॥೬೩॥

॥ ಇಂದ್ರ ಉವಾಚ ॥

ಏತೈಃ ಕಿಂ ಕಿಂ ಕೃತಂ ಪಾಪಂ ನರಕೇ ಪತಿತೈರ್ಯಮ ।
ತತ್ಸರ್ವಂ ಸ ವಿಶೇಷೇಣ ವದ ಮಹ್ಯಂ ಯಥಾಕ್ರಮಂ ॥೬೪॥

---

ದರೂ ಆತನನ್ನು ಎಲ್ಲಾ ನರಕಗಳಲ್ಲಿಯೂ ಸಂದೇಹವಿಲ್ಲದೇ ಬೀಳಿಸುವೆನು. ॥೫೯-೬೦॥

ಆ ಮಹೇಶ್ವರನ ಭೃತ್ಯನಾದ ನನ್ನನ್ನು ಆ ವಿಷ್ಣುವೇನು ಮಾಡಬಲ್ಲನು? ಒಂದುವೇಳೆ ಅವನೇ ಶಿವದ್ರೋಹಿಯಾದರೆ ಅವನನ್ನೂ ನಾನು ಶಿಕ್ಷೆಮಾಡಬಲ್ಲೆನು. ಆ ಪರಶಿವನನ್ನು ಉತ್ಕೃಷ್ಟನೆಂದು ಹೇಳದಿರುವ ನೀಚರನ್ನು ಬಲಾತ್ಕಾರವಾಗಿ ಶಿಕ್ಷೆಮಾಡಬೇಕೆಂದು ಹಿಂದೆ ಆ ಶಂಕರನೇ ಸಂತೋಷದಿಂದ ನನಗೆ ಆಜ್ಞೆಮಾಡಿರುವನು. ॥೬೧-೬೨॥

ಹೀಗೆ ನುಡಿದ ಯಮನ ಮಾತುಗಳನ್ನು ಕೇಳಿ ದೇವೇಂದ್ರನು ಭಯಾಕ್ರಾಂತನಾಗಿ ಆಗ ವಿನಯದಿಂದ ಕೈಮುಗಿದುಕೊಂಡು ಆ ಯಮನೊಡನೆ ಇಂತೆಂದನು. ॥೬೩॥

ಅಯ್ಯ ಯಮಧರ್ಮರಾಜನೇ, ಇಲ್ಲಿರುವ ಜನರು ಈ ರೀತಿಯಾಗಿ ನರಕದಲ್ಲಿ ಬೀಳಲು ಇವರು ಮಾಡಿದ ಪಾಪಗಳೇನು? ಅವೆಲ್ಲವನ್ನೂ ನನಗೆ ಕ್ರಮವಾಗಿ ತಿಳಿಸಬೇಕೆಂದು ದೇವೇಂದ್ರನು ಯಮನನ್ನು ಪ್ರಾರ್ಥಿಸಿದನು. ॥೬೪॥

|| ಶಿವ ಉವಾಚ ||

ಇತ್ಯುಕ್ತಂ ತದ್ವಚಃ ಶ್ರುತ್ವಾ ಯಮೋ ವಕ್ತುಮುಪಕ್ರಮೇ ।
ಅಂಗುಲ್ಯಗ್ರೇಣ ತೀಕ್ಷ್ಣೇನ ದರ್ಶಯನ್ನುಗ್ರಲೋಚನಃ ||೬೫||

|| ಯಮ ಉವಾಚ ||

ಏತೇ ಸರ್ವೇಽಪಿ ಪಾಪಿಷ್ಠಾಃ ಶಿವಾರ್ಚನಪರಾಙ್ಮುಖಾಃ ।
ಏತೇ ಸರ್ವೇಽಪಿ ಪಾಪಿಷ್ಠಾಃ ಶಿವಸ್ಮೃತಿಪರಾಙ್ಮುಖಾಃ ||೬೬||

ಏತೇ ಶಿವಾಯ ಸಾಷ್ಟಾಂಗಪ್ರಣಾಮಾಕಾರಿಣೋ ಭ್ರಮಾತ್ ।
ನಿತ್ಯಂ ಸಂದಗ್ಧಸರ್ವಾಂಗಾಸ್ತಿಷ್ಠಂತ್ಯೇತಾನ್ವಿಲೋಕಯ ||೬೭||

ಯಃ ಶಂಕರಾಯ ಸಾಷ್ಟಾಂಗಂ ಪ್ರಣಾಮಾನ್ನ ಕರಿಷ್ಯತಿ ।
ಸಂದಗ್ಧಾಂಗೋಽಗ್ನಿಕುಂಡೇಷು ಪತಿತ್ವೈವಂ ಹಿ ತಿಷ್ಠತಿ ||೬೮||

ಏತೇ ತ್ಯಕ್ತಶಿವಾಲಾಪಾಃ ಶಿವಧ್ಯಾನಪರಾಙ್ಮುಖಾಃ ।
ಸಂದಗ್ಧಶಸ್ತ್ರಕುಂಡೇಷು ತಿಷ್ಠಂತ್ಯೇತಾನ್ವಿಲೋಕಯ ||೬೯||

---

ಹೀಗೆ ಪ್ರಾರ್ಥಿಸಿದ ಆ ಇಂದ್ರನ ಮಾತುಗಳನ್ನು ಕೇಳಿ ಯಮನು ತನ್ನ ಚೂಪಾದ ಉಗುರಿನ ತುದಿಯಿಂದ ಅವರನ್ನು ತೋರಿಸುತ್ತಾ ಭಯವನ್ನುಂಟು ಮಾಡುತ್ತಿರುವ ಕಣ್ಣುಗಳುಳ್ಳವನಾಗಿ ಮುಂದೆ ಹೇಳುವಂತೆ ಪ್ರಾರಂಭಿಸಿದನು.||೬೫||

ಇಲ್ಲಿರುವ ಪಾಪಿಗಳೆಲ್ಲರೂ ಶಿವಪೂಜೆಯಲ್ಲಿ ಪರಾಙ್ಮುಖರಾಗಿರುವರು. ಇವರೆಲ್ಲರೂ ಶಿವನ ಸ್ಮರಣೆಮಾಡದಿರುವ ಪಾಪಿಷ್ಠರು. ಭ್ರಾಂತಿಯಿಂದ ಶಿವನಿಗೆ ಸಾಷ್ಟಾಂಗ ಪ್ರಣಾಮಮಾಡದಿರುವ ಇವರು ಇಲ್ಲಿರುವರು. ಇವರು ನಿತ್ಯವೂ ಸಕಲ ಅವಯವಗಳನ್ನೆಲ್ಲಾ ಸುಡಿಸಿಕೊಳ್ಳುತ್ತಿರುವುದನ್ನು ನೋಡು. ||೬೬-೬೭||

ಶಂಕರನಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡದಿರುವ ಇವರು ಅಗ್ನಿ ಕುಂಡಗಳಲ್ಲಿ ಬಿದ್ದು ಅವಯವಗಳನ್ನೆಲ್ಲಾ ಸುಡಿಸಿಕೊಳ್ಳುತ್ತಾ ಇರುವರು. ಶಿವ ಕಥಾಲಾಪವನ್ನು ಮಾಡದೆ ಶಿವಧ್ಯಾನದಲ್ಲಿಯೂ ಪರಾಙ್ಮುಖರಾಗಿರುವ ಇವರು ಚೆನ್ನಾಗಿ ಕಾದಿರುವ ಶಸ್ತ್ರಗಳ ಕುಂಡಗಳಲ್ಲಿ ಬಿದ್ದು ನರಳುತ್ತಿರುವುದನ್ನು ನೋಡು. ||೬೮-೬೯||

ಏತೇ ಸರ್ವೇ ಮಹಾದೇವಕಥಾಶ್ರವಣವರ್ಜಿತಾಃ ।
ಭುಜಂಗಗರ್ತಪತಿತಾಃ ತಿಷ್ಠಂತ್ಯೇತಾನ್ವಿಲೋಕಯ ॥೨೦॥

ಏತೇ ಸರ್ವೇ ಪ್ರದೋಷೇಷು ತ್ಯಕ್ತಶಂಕರಪೂಜನಾಃ ।
ಘೋರವೃಶ್ಚಿಕಕುಂಡೇಷು ತಿಷ್ಠಂತಿ ಪತಿತಾಃ ಸದಾ ॥೨೧॥

ಏತೇ ಶಿವಾನರ್ಪಿತಾನ್ನಫಲದುಗ್ಧಾದಿಭೋಜಿನಃ ।
ಕ್ರಿಮಿಪೂಯಾಸ್ತ್ರಕುಂಡೇಷು ವಿಲುಠಂತ್ಯವಲೋಕಯ ॥೨೨॥

ತ್ಯಕ್ತಪಂಚಾಕ್ಷರಜಪಾಃ ಸರ್ವೇಽಪ್ಯೇತೇ ದುರಾಶಯಾಃ ।
ಸಂತಪ್ತಾಮೇಧ್ಯಕುಂಡೇಷು ತಿಷ್ಠಂತ್ಯೇತಾನ್ವಿಲೋಕಯ ॥೨೩॥

ತ್ಯಕ್ತರುದ್ರಜಪಾ ಹ್ಯೇತೇ ರುದ್ರಾಧ್ಯಾಯವಿವರ್ಜಿತಾಃ ।
ಸಂತಪ್ತಮೂತ್ರಕುಂಡೇಷು ತಿಷ್ಠಂತ್ಯೇತಾನ್ವಿಲೋಕಯ ॥೨೪॥

ಏತೇ ಸರ್ವೇಽಪಿ ಮೋಹೇನ ಶಿವಾನುತ್ಕರ್ಷವಾದಿನಃ ।
ಬದ್ಧಾನ್ದಗ್ಧಾಯಸಸ್ತಂಭೇಷ್ವೇತಾನ್ಪಶ್ಯಾನಲಾರ್ಚಿತಾನ್ ॥೨೫॥

---

ಇವರೆಲ್ಲರೂ ಆ ಮಹಾದೇವನ ಕಥೆಯನ್ನು ಕೇಳದೇ ಬಿಟ್ಟವರು. ಅದ ಕ್ಕೋಸ್ಕರವೇ ಇವರು ಸರ್ಪಗಳ ಕುಂಡಗಳಲ್ಲಿ ಬಿದ್ದು ನರಳುತ್ತಿರುವುದನ್ನು ನೋಡು. ಇಲ್ಲಿರುವ ಇವರಾದರೋ ಪ್ರದೋಷಕಾಲಗಳಲ್ಲಿ ಆ ಶಂಕರನನ್ನು ಪೂಜೆಮಾಡದಿರುವರು. ಇವರು ವಿಶೇಷ ಘೋರವಾದ ಚೇಳುಗಳ ಕುಂಡದಲ್ಲಿ ಬಿದ್ದು ಯಾವಾಗಲೂ ಗೋಳಾಡುತ್ತಿರುವರು. ॥೨೦-೨೧॥

ಶಿವನಿಗೆ ಮೊದಲು ನಿವೇದನಮಾಡದೇ ಹಣ್ಣು, ಹಾಲು, ಮೊದಲಾದವುಗಳನ್ನು ಸೇವಿಸಿ ಇವರು, ಕ್ರಿಮಿಗಳು, ಕೀವು, ಮತ್ತು ಶಸ್ತ್ರ ಇವುಗಳ ಕುಂಡಗಳಲ್ಲಿ ಬಿದ್ದು ಹೊರಳಾಡುತ್ತಿರುವುದನ್ನು ನೋಡುವನಾಗು. ಕೆಟ್ಟ ಅಭಿಪ್ರಾಯದಿಂದ ಶಿವ ಪಂಚಾಕ್ಷರ ಜಪವನ್ನು ಮಾಡದೇ ಇರುವ ಇವರು, ಚೆನ್ನಾಗಿ ಕಾದ ಅಮೇಧ್ಯ ಕುಂಡಗಳಲ್ಲಿ ಬಿದ್ದು ನರಳುತ್ತಿರುವುದನ್ನು ನೋಡು. ॥೨೨-೨೩॥

ರುದ್ರಜಪವನ್ನೂ, ರುದ್ರಾಧ್ಯಾಯಪಾರಾಯಣವನ್ನೂ ಬಿಟ್ಟಿರುವ ಇವರು ಕಾದ ಮೂತ್ರಕುಂಡಗಳಲ್ಲಿ ಬಿದ್ದು ಗೋಳಾಡುತ್ತಿರುವುದನ್ನು ನೋಡು. ಇವರೆಲ್ಲರೂ ಅಜ್ಞಾನದಿಂದ ಶಿವನನ್ನು ಉತ್ಕೃಷ್ಟನೆಂದು ಹೇಳದಿರುವರು. ಆದ್ದರಿಂದಲೇ ಇವರನ್ನು

ಏತೇ ಸರ್ವೇ ಶ್ರುತಿಪ್ರೋಕ್ತಭಸ್ಮೋದ್ಧೂಲಿತವರ್ಜಿತಾಃ ।
ತಿಷ್ಠಂತ್ಯಜಗರಾವರ್ತೇ ದುಃಖಾರ್ತಾಸ್ತಾನ್ನಿಲೋಕಯ ॥೭೬॥

ಭಸ್ಮತ್ರಿಪುಂಡ್ರರಹಿತಾಃ ಸರ್ವೇಽಪ್ಯೇತೇ ಶಚೀಪತೇ ।
ದಂಶ್ಯಮಾನಾ ಲೋಹಕಾಕೈಸ್ತಿಷ್ಠಂತ್ಯೇತಾನ್ನಿಲೋಕಯ ॥೭೭॥

ಏತೇ ಸರ್ವೇಽಪಿ ದೇವೇಂದ್ರ ತ್ಯಕ್ತರುದ್ರಾಕ್ಷಭೂಷಣಾಃ ।
ಸಂತಪ್ತವಹ್ನಿಕುಹರೇ ತಿಷ್ಠಂತ್ಯೇತಾನ್ನಿಲೋಕಯ ॥೭೮॥

ಏತೇ ದಿವಾ ಪಲಾನ್ನಾದಿಭೋಕ್ತಾರಃ ಸೋಮವಾಸರೇ ।
ಸಂತಪ್ತಶ್ಲೇಷ್ಮಕುಂಡೇಷು ತಿಷ್ಠಂತ್ಯೇತಾನ್ನಿಲೋಕಯ ॥೭೯॥

ಕಾಶ್ಯಾಂ ಕೃತ್ವಾ ಪಾತಕಾನಿ ಯೇ ತು ಕಾಶೀ ಬಹಿರ್ಮೃತಾಃ ।
ತೇ ಸರ್ವೇ ಪತಿತಾಃ ಸಂತಿ ವಹ್ನಿಕುಂಡೇಷು ಪಶ್ಯ ತಾನ್ ॥೮೦॥

---

ಸುಡುತ್ತಿರುವ ಕಬ್ಬಿಣದ ಕಂಬಿಗಳಲ್ಲಿ ಕಟ್ಟಿ ಹಿಂಸಿಸುತ್ತಿರುವುದನ್ನು ನೋಡು, ಇವರಿಗೆ ಕೆಂಡಗಳಿಂದಲೇ ಪೂಜೆಯಾಗುತ್ತಿರುವುದು. ||೭೪-೭೫||

ವೇದೋಕ್ತವಾದ ಭಸ್ಮದ್ಧೂಳನವನ್ನು ಬಿಟ್ಟಿರುವ ಇವರೆಲ್ಲರೂ ಹೆಬ್ಬಾವಿನ ಹೊಂಡದಲ್ಲಿ ಬಿದ್ದು ಎಷ್ಟು ದುಃಖಿತರಾಗಿರುವರು ನೋಡು? ಓ ಇಂದ್ರನೇ, ಇತ್ತ ನೋಡು. ಇವರೆಲ್ಲರೂ ಭಸ್ಮತ್ರಿಪುಂಡ್ರವನ್ನು ಧಾರಣೆಮಾಡದೇ ಹೋದುದರಿಂದ ಕಬ್ಬಿಣದ ಕಾಗೆಗಳು ಇವರನ್ನು ಹೇಗೆ ಕಚ್ಚಿಕೀಳುತ್ತಿರುವುವು? ||೭೬-೭೭||

ದೇವೇಂದ್ರನೇ, ಇವರೆಲ್ಲರೂ ರುದ್ರಾಕ್ಷಮಾಲೆಯನ್ನು ಅಲಂಕರಿಸಿಕೊಳ್ಳದೇ ಉದಾಸೀನರಾಗಿದ್ದರು. ಆದ್ದರಿಂದಲೇ ಇವರು ಚೆನ್ನಾಗಿ ಕಾದಿರುವ ಅಗ್ನಿಕುಂಡದಲ್ಲಿ ದುಃಖಿಸುತ್ತಿರುವುದನ್ನು ನೋಡು. ಇಗೋ ಇಲ್ಲಿ ಕಾಣುವವರು ಸೋಮವಾರದ ದಿವಸ ಹಗಲು, ಮಾಂಸ, ಅನ್ನ ಮತ್ತು ಹಣ್ಣುಹಂಪಲು ಮುಂತಾದವುಗಳನ್ನು ಊಟಮಾಡಿದವರು. ಆದಕ್ಕೋಸ್ಕರವೇ ಇವರು ಕಾದ ಶ್ಲೇಷ್ಮಕುಂಡಗಳಲ್ಲಿ ಬಿದ್ದು ನರಳುತ್ತಿರುವರು. ||೭೮-೭೯||

ಕಾಶಿಯಲ್ಲಿ ಸಕಲ ಪಾಪಗಳನ್ನೂ ಮಾಡಿ ಕಾಶೀಪಟ್ಟಣದ ಹೊರಗಡೆ ಮರಣಹೊಂದಿರುವ ಇವರೆಲ್ಲರೂ ಮುಂದೆಕಾಣುವ ಅಗ್ನಿಕುಂಡಗಳಲ್ಲಿ ಬಿದ್ದಿರುವುದನ್ನು ನೋಡು. ಕಾಶಿಯಲ್ಲಿರುವ ಅಂತರ್ಗೃಹದ ಮಧ್ಯದಲ್ಲಿ ಮಲ, ಮೂತ್ರಾದಿ

ಕಾಶ್ಯಾಮಂತರ್ಗೃಹೇ ಮಧ್ಯೇ ಮಲಾದೀನಿ ವಿಹಾಯ ಯೇ ।
ಮೃತಾಃ ಕಾಶೀಬಹಿರ್ದೇಶೇ ತೇ ತಿಷ್ಠಂತಿ ಮಲೇ ಹ್ರದೇ ॥೮೧॥

ಏತೈಃ ಕಾಶ್ಯಾಮಪಿ ಸ್ಥಿತ್ವಾ ನ ಕೃತಂ ಭಸ್ಮಧಾರಣಂ ।
ತತಃ ಕಾಶೀಬಹಿರ್ದೇಶೇ ಮೃತಂ ಪೂಯಹ್ರದಸ್ಥಿತೈಃ ॥೮೨॥

ಏತೈಃ ಕಾಶ್ಯಾಮಪಿ ಸ್ಥಿತ್ವಾ ವಿನಾ ವಿಶ್ವೇಶದರ್ಶನಂ ।
ಭುಕ್ತಂ ಕಾಶೀಬಹಿರ್ದೇಶೇ ಮೃತಂ ರೇತೋಹ್ರದಸ್ಥಿತೈಃ ॥೮೩॥

ಏತೈಃ ಕಾಶ್ಯಾಮಪಿ ಸ್ಥಿತ್ವಾ ತ್ಯಕ್ತಂ ರುದ್ರಾಕ್ಷಧಾರಣಂ ।
ತತಃ ಕಾಶೀಬಹಿರ್ದೇಶೇ ಮೃತಂ ಪೂಯಹ್ರದಸ್ಥಿತೈಃ ॥೮೪॥

ಏತೈಃ ಕಾಶ್ಯಾಮಪಿ ಸ್ಥಿತ್ವಾ ನ ಕೃತಂ ಭೈರವಾರ್ಚನಂ ।
ತತಃ ಕಾಶೀಬಹಿರ್ದೇಶೇ ಮೃತಂ ಪೂಯಹ್ರದಸ್ಥಿತೈಃ ॥೮೫॥

ಏತೈಃ ಕಾಶ್ಯಾಮಪಿ ಸ್ಥಿತ್ವಾ ನ ಕೃತಂ ಶಿವಚಿಂತನಂ ।
ತತಃ ಕಾಶೀಬಹಿರ್ದೇಶೇ ಮೃತಂ ಪೂಯಹ್ರದಸ್ಥಿತೈಃ ॥೮೬॥

ಏತೈಃ ಕಾಶ್ಯಾಮಪಿ ಸ್ಥಿತ್ವಾ ನ ಕೃತಂ ಶೈವಪೂಜನಂ ।
ತತಃ ಕಾಶೀಬಹಿರ್ದೇಶೇ ಮೃತಂ ಪೂಯಹ್ರದಸ್ಥಿತೈಃ ॥೮೭॥

---

ಗಳನ್ನು ಮಾಡಿ ಆ ಕಾಶೀಪಟ್ಟಣದ ಹೊರಗೆ ಪ್ರಾಣಬಿಟ್ಟಿರುವ ಇವರು ಮಲಗಳ ಮಡುವಿನಲ್ಲಿಯೇ ಬಿದ್ದಿರುವುದನ್ನು ನೋಡು. ॥೮೦-೮೧॥

ಕಾಶಿಯಲ್ಲಿದ್ದುಕೊಂಡೂ ಭಸ್ಮಧಾರಣೆಮಾಡದಿರುವ ಇವರು ಕಾಶೀಪಟ್ಟಣದ ಹೊರಗೆ ಮರಣಹೊಂದಿದವರಾದ್ದರಿಂದ ಕೀವಿನ (ಪೂಯ) ಮಡುಗಳಲ್ಲಿ ಬಿದ್ದು ನರಳುವ ಸ್ಥಿತಿಯು ಇವರಿಗೆ ಪ್ರಾಪ್ತವಾಗಿದೆ. ಇವರಾದರೋ ಕಾಶಿಯಲ್ಲೇ ಇದ್ದರೂ ಆ ವಿಶ್ವೇಶ್ವರನನ್ನು ದರ್ಶನಮಾಡದೇ ಊಟಮಾಡಿದವರು. ಅಲ್ಲದೇ ಕಾಶಿಯ ಹೊರಗೇ ಪ್ರಾಣಬಿಟ್ಟಿರುವವರು. ಆದ್ದರಿಂದ ಇವರು ರೇತಸ್ಸಿನ ಮಡುಗಳಲ್ಲಿ ಮುಳುಗಿ ಕೊಳೆಯುತ್ತಿರುವರು. ॥೮೨-೮೩॥

ಕಾಶಿಯಲ್ಲಿಯೇ ಇದ್ದುಕೊಂಡು ರುದ್ರಾಕ್ಷಗಳನ್ನು ಧರಿಸದವರೂ, ಭೈರವೇಶ್ವರನನ್ನು ಪೂಜಿಸದವರೂ, ಆ ಶಿವನನ್ನು ಧ್ಯಾನಮಾಡದಿರುವವರೂ ಮತ್ತು ಈಶ್ವರ

ಏತೇ ತ್ಯಕ್ತಶಿವಾಚಾರಾಃ ಸರ್ವೇ ತ್ಯಕ್ತಶಿವವ್ರತಾಃ ।
ವಿವಿಧೇಷ್ವೇಷು ತಿಷ್ಠಂತಿ ನರಕೇಷ್ವವಲೋಕಯ ॥೮೮॥

ಸಾರ್ಧಾರ್ಬುದೇಷು ನರಕೇಷ್ವೇತೇಷಾಂ ಪ್ರತಿವಾಸರಂ ।
ಮುಹುರ್ಮುಹುರ್ಭವತ್ಯೇವ ವಾಸೋ ದುಃಸಹದುಃಖದಃ ॥೮೯॥

ಅಶೈವಾಃ ಸಂತಿ ಯಾವಂತಸ್ತಾವತಾಮಪಿ ಸರ್ವದಾ ।
ಭವತ್ಯೇತೇಷು ನರಕೇಷ್ವವಶ್ಯಂ ವಸತಿ ಧ್ರುವಂ ॥೯೦॥

ಏನಂ ಪಶ್ಯಾಗ್ನಿಕುಂಡಸ್ಥಂ ವಾರ್ತಾಪ್ಯಸ್ಯೋಚ್ಯತೇ ಮಯಾ ।
ಯದ್ವಾರ್ತಾಶ್ರವಣಾದೇವ ರೋಮಾಂಚೋಽಪಿ ಭವಿಷ್ಯತಿ ॥೯೧॥

ಅಯಂ ಕುರೂಟಕೋ ನಾಮ ಬ್ರಾಹ್ಮಣೋ ವೇದಪಾರಗಃ ।
ಧನಧಾನ್ಯಾದಿಸಂಪನ್ನೋ ಗೋಮಹಿಷ್ಯಾದಿಪೋಷಕಃ ॥೯೨॥

---

ಭಕ್ತರನ್ನು ಪೂಜೆಮಾಡದಿರುವವರೂ ಆದ ಇವರೆಲ್ಲರೂ ಕೊನೆಗೆ ಆ ಕಾಶೀಪಟ್ಟಣ ದಲ್ಲಿ ಮರಣಹೊಂದದೇ ಇರುವುದರಿಂದ ಇವರಿಗೆ ರಕ್ತ ಕೀವುಗಳ ಮಡುವಿನಲ್ಲಿ ಬಿದ್ದು ನರಳುವ ಅವಸ್ಥೆಯುಂಟಾಗಿದೆ. ||೮೪-೮೫-೮೬-೮೭||

ಆ ಶಿವನಲ್ಲಿ ಆಚರಿಸಬೇಕಾದುದನ್ನು ಬಿಟ್ಟು ಶಿವವ್ರತಗಳನ್ನೂ ತ್ಯಾಗ ಮಾಡಿರುವ ಇವರು ನಾನಾವಿಧವಾದ ನರಕಗಳಲ್ಲಿ ಬಿದ್ದಿರುವುದನ್ನು ನೋಡು. ||೮೮||

ಈ ಸಾವಿರದೈನೂರುಕೋಟಿ ನರಕಗಳಲ್ಲಿ ಈ ಪಾಪಿಗಳಿಗೆ ಪ್ರತಿದಿನವೂ ಆಗಾಗ ಸಹಿಸಲಸಾಧ್ಯವಾದ ದುಃಖವನ್ನುಂಟುಮಾಡುವ ವಾಸವೇರ್ಪಟ್ಟಿರುವುದು. ||೮೯||

ಲೋಕದಲ್ಲಿ ಎಷ್ಟು ಮಂದಿ ಅಶೈವರಿರುವರೋ ಅವರಿಗೆ ಯಾವಾಗಲೂ ಈ ನರಕಗಳಲ್ಲಿ ಅವಶ್ಯವಾಗಿ ವಾಸವೇರ್ಪಡುವುದು ನಿಶ್ಚಯವೆಂದು ತಿಳಿ. ||೯೦||

ಈ ಅಗ್ನಿಕುಂಡದಲ್ಲಿರುವವನನ್ನು ನೋಡು, ಕೇಳಿದ ಮಾತ್ರದಿಂದಲೇ ರೋಮಾಂಚವುಂಟಾಗುವಂತಿರುವ ಈತನ ಸಮಾಚಾರಗಳನ್ನು ತಿಳಿಸುತ್ತೇನೆ; ಕೇಳು. ||೯೧||

ಇವನು ವೇದಪಾರಂಗತನಾದ ಕುರೂಟಕನೆಂಬ ಬ್ರಾಹ್ಮಣನು. ಇವನು ಧನಧಾನ್ಯಾದಿಗಳಿಂದ ಸಮೃದ್ಧನಾಗಿ ಹಸು, ಎಮ್ಮೆ ಮೊದಲಾದವುಗಳನ್ನು ಪೋಷಣೆ ಮಾಡುತ್ತಿದ್ದನು. ||೯೨||

ಕಾಟಕೋಟರ ಇತ್ಯೇಕಃ ಪುತ್ರೋऽಸ್ಯಾಭವದುತ್ತಮಃ ।
ಸ ಸರ್ವದಾ ಶಿವಾಚಾರನಿರತಃ ಶಿವತತ್ಪರಃ ॥೯೩॥

ಉದ್ಧೂಳನತ್ರಿಪುಂಡ್ರಾಭ್ಯಾಂ ರುದ್ರಾಕ್ಷೈಶ್ಚ ವಿಭೂಷಿತಃ ।
ಸ ಪೂಜಯತಿ ಪುಷ್ಪಾದ್ಯೈಃ ಶಿವಲಿಂಗಂ ಪ್ರಯತ್ನತಃ ॥೯೪॥

ಶಿವನಾಮಾಮೃತೇನೈವ ಜಿಹ್ವಾ ತೇನ ಪವಿತ್ರಿತಾ ।
ನಿತ್ಯಂ ಶಿವಕಥಾಮೇವ ಶುಶ್ರಾವ ಪ್ರೀತಮಾನಸಃ ॥೯೫॥

ಸಪ್ತವಾರಂ ಪ್ರಯತ್ನೇನ ಪ್ರತ್ಯಹಂ ಗಿರಿಜಾಪತಿಂ ।
ಸ ಬಿಲ್ವಪತ್ರಪುಷ್ಪಾದ್ಯೈಃ ಪೂಜಯತ್ಯತಿಭಕ್ತಿತಃ ॥೯೬॥

ಪ್ರಣಾಮಾನ್ಬಹುಧಾ ಕೃತ್ವಾ ಸಾಷ್ಟಾಂಗಾನ್ಭಕ್ತಿಪೂರ್ವಕಂ ।
ನೃತ್ಯಂ ಚಕಾರ ಯತ್ನೇನ ಶಿವಂ ವೀಕ್ಷ್ಯಾತಿಹರ್ಷಿತಃ ॥೯೭॥

---

ಇವನಿಗೆ ಕಾಟಕೋಟರನೆಂಬ ಒಬ್ಬ ಉತ್ತಮನಾದ ಮಗನಿದ್ದನು. ಅವನು ಯಾವಾಗಲೂ, ಶಿವನ ಆಚಾರಗಳಲ್ಲಿ ನಿರತನಾಗಿ ಅನವರತವೂ ಆ ಪರಶಿವನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿದ್ದನು. ॥೯೩॥

ಭಸ್ಮಲೇಪನ ಮತ್ತು ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಗಳಿಂದ ಅಲಂಕೃತನಾಗಿ ಈತನು ಶಿವಲಿಂಗವನ್ನು ನಿಯಮದಿಂದ ಹೂವು, ಪತ್ರೆ ಮೊದಲಾದ ಸಾಧನಗಳಿಂದ ಪೂಜೆಮಾಡುತ್ತಿದ್ದನು. ಈತನ ನಾಲಿಗೆಯು ಸದಾ ಶಿವನಾಮಾಮೃತಪಾನದಿಂದ ಪವಿತ್ರವಾಗಿತ್ತು. ಅಲ್ಲದೇ ಈ ಮಹಾನುಭಾವನು ನಿತ್ಯವೂ ಪ್ರೀತಿಯಿಂದ ಪವಿತ್ರವಾದ ಶಿವಕಥೆಯನ್ನೇ ಕೇಳುತ್ತಿದ್ದನು. ॥೯೪-೯೫॥

ಈತನು ಪ್ರತಿನಿತ್ಯವೂ ಏಳುಬಾರಿ ವಿಶೇಷ ಭಕ್ತಿಯಿಂದ ಬಿಲ್ವಪತ್ರೆ, ಹೂ ಮೊದಲಾದವುಗಳನ್ನು ತಂದು ಆ ಗಿರಿಜಾರಮಣನನ್ನು ನಿಯಮಪೂರ್ವಕವಾಗಿ ಪೂಜೆಮಾಡುತ್ತಾನೆ; ಮತ್ತು ಭಕ್ತಿಪೂರ್ವಕವಾಗಿ ಅನೇಕ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ, ಆ ಶಿವನನ್ನು ನೋಡುತ್ತಾ ಅತಿಯಾದ ಸಂತೋಷದಿಂದ ನಾಟ್ಯವಾಡುತ್ತಿದ್ದನು. ॥೯೬-೯೭॥

ಯದಾ ಭುಂಕ್ತೇ ತದಾ ಭೋಜ್ಯಂ ಯಾವದನ್ನಮಪೇಕ್ಷಿತಂ ।
ಸೋಪದಂಶಂ ಸಮಾನೀಯ ನಿವೇದಯತಿ ಶಂಕರೇ ॥೯೮॥

ಅನರ್ಪಿತಂ ಮಹೇಶಾಯ ಫಲಂ ವಾ ಜಲಮೇವ ವಾ ।
ನ ಗೃಹ್ಣಾತ್ಯೇವ ನಿಯಮಾನ್ನಿತ್ಯಂ ಶಪಥಪೂರ್ವಕಂ ॥೯೯॥

ಭಸ್ಮನೋಽಭಿಭವೋ ಭಾವೀತ್ಯುತ್ಕೃಷ್ಟಮಪಿ ಚಂದನಂ ।
ನ ತೇನ ಲೇಪಿತಂ ಭಾಲೇ ವಿಭೂತ್ಯುಪರಿ ಸರ್ವಥಾ ॥೧೦೦॥

ಉದ್ಧೂಲಿತಾಂಗಮಾಲೋಕ್ಯ ಹೃಷ್ಟೋ ಭವತಿ ಸರ್ವದಾ ।
ಕರೋತ್ಯುದ್ಧೂಳನಂ ಭಕ್ತ್ಯಾ ನಿತ್ಯಮಾದರಪೂರ್ವಕಂ ॥೧೦೧॥

ನಿತ್ಯೇಪ್ಯುದ್ಧೂಳನೇ ತಸ್ಯ ಭಕ್ತಿಶ್ರದ್ಧಾಪಿ ತಾದೃಶೀ ।
ವೇದೇ ತು ಮಹತೀ ಭಕ್ತಿಸ್ತಸ್ಯೋದ್ಧೂಳನಬೋಧಕೇ ॥೧೦೨॥

---

ತಾನು ಊಟಮಾಡುವಾಗ ತನಗೆ ಬೇಕಾದಷ್ಟು ಅನ್ನವನ್ನು ಪರಿಕರಗಳೊಡನೆ ತೆಗೆದುಕೊಂಡು ಆ ಶಂಕರನಿಗೆ ಮೊದಲು ನಿವೇದನಮಾಡಿ ಅನಂತರ ತಾನು ತಿನ್ನುತ್ತಿದ್ದನು. ಮಹೇಶ್ವರನಿಗೆ ನಿವೇದನಮಾಡದೇ ಹಣ್ಣನ್ನಾಗಲೀ, ನೀರನ್ನಾಗಲೀ ನಿತ್ಯವೂ ನಿಯಮದಿಂದ ಅಜ್ಞಾನಪೂರ್ವಕವಾಗಿಯಾದರೂ ಸ್ವೀಕರಿಸುತ್ತಿರಲಿಲ್ಲ. ॥೯೮-೯೯॥

ವಿಭೂತಿಯನ್ನು ತಿರಸ್ಕಾರಮಾಡಿದಂತಾಗುತ್ತದೆಂದು ಭಾವಿಸಿ ಶ್ರೇಷ್ಠವಾದ ಚಂದನವನ್ನು ಸಹ ತನ್ನ ಹಣೆಯಲ್ಲಿ ವಿಭೂತಿಯಮೇಲೆ ಎಂದಿಗೂ ಲೇಪನಮಾಡಿಕೊಳ್ಳುತ್ತಿರಲಿಲ್ಲ. ॥೧೦೦॥

ಅವಯವಗಳಿಗೆ ಭಸ್ಮವನ್ನು ಲೇಪನಮಾಡಿಕೊಂಡಿರುವವನನ್ನು ನೋಡಿ ಆತನು ಯಾವಾಗಲೂ ಸಂತುಷ್ಟನಾಗುತ್ತಿದ್ದನು. ಅಲ್ಲದೆ ತಾನೂ ನಿತ್ಯವೂ ಆದರದಿಂದಲೂ ಭಕ್ತಿಯಿಂದಲೂ ಭಸ್ಮೋದ್ಧೂಳನವನ್ನು ಮಾಡಿಕೊಳ್ಳುತ್ತಿದ್ದನು. ನಿತ್ಯಕರ್ಮವೆನಿಸಿದ ಭಸ್ಮೋದ್ಧೂಳನದಲ್ಲಿ ಆತನಿಗೆ ಇದರಂತೆಯೇ ಭಕ್ತಿಶ್ರದ್ಧಾದಿಗಳೆಲ್ಲವೂ ಇರುತ್ತಿದ್ದವು. ಇದೂ ಅಲ್ಲದೇ ಭಸ್ಮೋದ್ಧೂಳನವನ್ನು ತಿಳಿಸುವ ವೇದದಲ್ಲಿ ಈತನಿಗೆ ಅಪಾರವಾದ ಭಕ್ತಿಯಿದ್ದಿತು. ॥೧೦೧-೧೦೨॥

ಸ್ವೇದೇನೋದ್ಧೂಳಿತಂ ಭಸ್ಮ ದೇಹಾದ್ಗಚ್ಛತಿ ಚೇತ್ತದಾ ।
ಪುನರುದ್ಧೂಳನಂ ಸಮ್ಯಕ್ಕರೋತಿ ವಿಧಿಪೂರ್ವಕಂ ॥೧೦೩॥

ತ್ರಿಪುಂಡ್ರಧಾರಣಂ ಸಮ್ಯಕ್ಕರೋತಿ ಚ ತತಃ ಪರಂ ।
ಉದ್ಧೂಳನತ್ರಿಪುಂಡ್ರಾಭ್ಯಾಂ ಸರ್ವದಾಽಪಿ ಸ ಭೂಷಿತಃ ॥೧೦೪॥

ಉದ್ಧೂಳನಾನಂಕಿತಾಂಗಂ ಯದಾ ಪಶ್ಯತಿ ತತ್ಕ್ಷಣೇ ।
ದೃಷ್ಟ್ವಾ ಭಾನುಂ ಪ್ರಯತ್ನೇನ ಶಿವಂ ಧ್ಯಾತ್ವಾ ಸ ತಿಷ್ಠತಿ ॥೧೦೫॥

ಅಯಂ ಕೇವಲಭಸ್ಮಾಂಗಂ ವಿಪ್ರಂ ಚಂಡಾಲಮೇವ ವಾ ।
ದೃಷ್ಟ್ವಾ ಸಂತೋಷಪೂರ್ಣಾಂಗಃ ಕರೋತ್ಯಭ್ಯರ್ಚನಂ ಮುದಾ ॥೧೦೬॥

ನಿತ್ಯಂ ಶಿವಕಥಾಮೇವ ಶೃಣೋತಿ ಪ್ರೀತಮಾನಸಃ ।
ಶೈವೈಃ ಸಹೈವ ಸತತಂ ತಿಷ್ಠಂತಿ ಪ್ರೀತಿಪೂರ್ವಕಂ ॥೧೦೭॥

ಸ ಕದಾಚಿತ್ಪ್ರಯತ್ನೇನ ಬಿಲ್ವಪತ್ರಾರ್ಚನಪ್ರಿಯಃ ।
ಏಕಾಕೀ ಬಿಲ್ವವೃಕ್ಷಾಢ್ಯಂ ವನಂ ಪ್ರಾಪ ಮೃಗಾವೃತಂ ॥೧೦೮॥

---

ಬೆವರಿನಿಂದ ಮೊದಲು ಧರಿಸಿದ್ದ ಭಸ್ಮವು ಹೋದರೇ ಆಗ ಪುನಃ ವಿಧಿಪೂರ್ವಕವಾಗಿ ನಿಯಮದಿಂದ ಈತನು ಭಸ್ಮವನ್ನು ಲೇಪನಮಾಡಿಕೊಳ್ಳುತ್ತಿದ್ದನು. ಅದಾದನಂತರ ಭಸ್ಮತ್ರಿಪುಂಡ್ರಧಾರಣೆಯನ್ನೂ ತಪ್ಪದೆ ಮಾಡುತ್ತಿದ್ದನು. ಈತನು ಯಾವಾಗಲೂ ಭಸ್ಮತ್ರಿಪುಂಡ್ರ ಮತ್ತು ಭಸ್ಮೋದ್ಧೂಳನಗಳಿಂದ ಅಲಂಕೃತನಾಗಿರುತ್ತಿದ್ದನು. ॥೧೦೩-೧೦೪॥

ಈತನು ಭಸ್ಮೋದ್ಧೂಳನವನ್ನು ಮಾಡಿಕೊಳ್ಳದ ಅವಯವವುಳ್ಳ ವ್ಯಕ್ತಿಯನ್ನು ನೋಡಿದ ಕೂಡಲೇ ಸೂರ್ಯನನ್ನು ದರ್ಶನಮಾಡಿ ಆ ಪರಶಿವನನ್ನು ನಿಯಮದಿಂದ ಧ್ಯಾನಮಾಡುತ್ತಾ ನಿಲ್ಲುವನು. ಭಸ್ಮಲೇಪನಮಾಡಿಕೊಂಡಿರುವ ಅವಯವವುಳ್ಳವನು ಬ್ರಾಹ್ಮಣನಾಗಲೀ ಅಥವಾ ಚಂಡಾಲನೇ ಆಗಲೀ ಅವನನ್ನು ನೋಡಿ ಸಂತೋಷಭರಿತನಾಗಿ ಪ್ರೀತಿಯಿಂದ ಆತನನ್ನು ಪೂಜೆಮಾಡುತ್ತಿದ್ದನು. ॥೧೦೫-೧೦೬॥

ನಿತ್ಯವೂ ಪ್ರೀತಿಯಿಂದ ಶಿವಕಥೆಗಳನ್ನೇ ಕೇಳುವನು. ಅನವರತವೂ ಶಿವಭಕ್ತರೊಡನೆಯೇ ಪ್ರೀತಿಪೂರ್ವಕವಾಗಿ ವಾಸಮಾಡುವನು. ಈತನು ಒಂದು

ತತ್ರ ಕಶ್ಚಿದ್ಘೋರರೂಪಃ ಪಿಶಾಚಃ ಪರ್ವತಾಕೃತಿಃ ।
ವಿಲೋಕ್ಯ ಬಾಲಕಂ ವಿಪ್ರಮಾಜಗಾಮಾತಿವೇಗತಃ ॥೧೦೯॥

ತಂ ತಾದೃಶಂ ಸಮಾಯಾಂತಂ ಪಿಶಾಚಂ ವೀಕ್ಷ್ಯ ದೂರತಃ ।
ಜಗಾದ ವಚನಂ ಬಾಲೋ ಹಸನ್ವಿಸ್ಮಯಪೂರ್ವಕಂ ॥೧೧೦॥

॥ ಕಾಟಕೋಟರ ಉವಾಚ ॥

ಪಿಶಾಚೋಽಯಂ ಸಮಾಗತ್ಯ ಕಿಂ ವಾ ಮಹ್ಯಂ ಕರಿಷ್ಯತಿ ।
ಮೂರ್ಖೋಽಯಂ ನಾಭಿಜಾನಾತಿ ಪ್ರಭಾವಂ ಭಸ್ಮನೋ ಧ್ರುವಂ ॥೧೧೧॥

ಪರಿವೇಷಂ ಕರಿಷ್ಯಾಮಿ ಭಸ್ಮನಾ ಸಾವಧಾನತಃ ।
ಪರಿವೇಷಮತೀತ್ಯಾಯಮಾಗಂತುಂ ಶಕ್ನುಯಾತ್ಕಥಂ ॥೧೧೨॥

ವೇದಾಃ ಸ್ತುವಂತಿ ಬಹುಧಾ ಪ್ರಭಾವಂ ಭಸ್ಮನಃ ಸದಾ ।
ಜಾನಂತಿ ಮಹಿಮಾನಂತೇ ತದೇವ ಧ್ರಿಯತೇ ಮಯಾ ॥೧೧೩॥

---

ದಿನ ನಿಯಮದಿಂದ ಬಿಲ್ವಪತ್ರೆಗಳನ್ನು ತರುವುದರಲ್ಲಿ ಪ್ರೀತಿಯುಳ್ಳವನಾಗಿ, ಒಬ್ಬನೇ ಅನೇಕ ಬಿಲ್ವವೃಕ್ಷಗಳಿಂದ ಯುಕ್ತವಾಗಿ ಅನೇಕ ಕಾಡುಪ್ರಾಣಿಗಳಿಗೆ ಆಶ್ರಯವಾಗಿದ್ದ ಒಂದು ಕಾಡಿಗೆ ಹೋದನು. ॥೧೦೭-೧೦೮॥

ಆ ಕಾಡಿನಲ್ಲಿ ಪರ್ವತದಂತೆ ಆಕಾರವುಳ್ಳ ಭಯಂಕರರೂಪಿನ ಒಂದು ಪಿಶಾಚವು ಈ ಬ್ರಾಹ್ಮಣಬಾಲಕನನ್ನು ನೋಡಿ ಅವನ ಸಮೀಪಕ್ಕೆ ಬಹು ವೇಗದಿಂದ ಬಂದಿತು. ಆ ರೀತಿಯಾಗಿ ತನ್ನ ಸಮೀಪಕ್ಕೆ ಬರುತ್ತಿರುವ ಪಿಶಾಚವನ್ನು ದೂರದಿಂದಲೇ ನೋಡಿ ಆ ಬಾಲಕನು ನಗುತ್ತಾ ಹೀಗೆ ನುಡಿದನು. ॥೧೦೯-೧೧೦॥

"ಈ ಪಿಶಾಚವು ಬಂದು ನನ್ನನ್ನೇನು ಮಾಡಬಲ್ಲುದು? ಈ ಮೂರ್ಖನು ವಿಭೂತಿಯ ಪ್ರಭಾವವನ್ನು ಹೇಗೆ ಅರಿತಾನು? ಭಸ್ಮದಿಂದ ಒಂದು ಮಂಡಲವನ್ನು ಸಾವಧಾನವಾಗಿ ಈಗಲೇ ರಚಿಸುತ್ತೇನೆ. ಆ ಮಂಡಲವನ್ನು ಇವನು ಹೇಗೆ ಮೀರಿ ಬರಬಲ್ಲನು? ನೋಡೋಣ. ॥೧೧೧-೧೧೨॥

ವೇದಗಳು ವಿಭೂತಿಯ ಮಹಿಮೆಯನ್ನು ನಾನಾವಿಧವಾಗಿ ಯಾವಾಗಲೂ ಸ್ತೋತ್ರಮಾಡುತ್ತಿರುವುವು. ಅಲ್ಲದೆ ಅದರ ಮಹಿಮೆಯನ್ನೂ ಆ ವೇದಗಳೇ ಅರಿತಿರುವುವು. ಆದ್ದರಿಂದ ಆ ಭಸ್ಮವನ್ನೇ ನಾನು ಈಗ ಧರಿಸಿರುವೆನು. ಮಂತ್ರದಿಂದ

ಮಂತ್ರಪೂತಮಿದಂ ಭಸ್ಮ ಮಮ ರಕ್ಷಾಂ ಕರಿಷ್ಯತಿ ।
ಸತ್ಯಂ ಸತ್ಯಮಿದಂ ಸತ್ಯಂ ಸಂಶಯೋ ನಾತ್ರ ಸರ್ವಥಾ ॥೧೧೪॥

ನ ಕರಿಷ್ಯತಿ ಚೇದಸ್ಮಾತ್ಪಿಶಾಚಾದ್ರಕ್ಷಣಂ ಮಮ ।
ತದಾ ಭಸ್ಮ ಕಥಂ ಭೂಯಾದ್ಘೋರಸಂಸಾರನಾಶಕಂ ॥೧೧೫॥

ಸಂಸಾರಭರ್ತ್ಸಕಂ ಭಸ್ಮ ಘೋರಪಾಪೌಘಭರ್ತ್ಸಕಂ ।
ಭರ್ತ್ಸನಾದ್ಭಸ್ಮ ಇತ್ಯೇಷಾ ಶ್ರುತಿರೇವ ಬಲಂ ಮಮ ॥೧೧೬॥

ವೇದ ಏವ ಪ್ರಮಾಣಂ ಮೇ ಬ್ರಾಹ್ಮಣೋತ್ತಮಜನ್ಮನಃ ।
ತಥಾಚೇದಂ ಧೃತಂ ಭಸ್ಮ ಭಯಂ ಮೇ ನಾಶಯಿಷ್ಯತಿ ॥೧೧೭॥

ಇತ್ಯುಕ್ತ್ವಾ ಭಸ್ಮ ಸಂಗೃಹ್ಯ ಶಿವಮಂತ್ರಾಭಿಮಂತ್ರಿತಂ ।
ಚಕಾರೋದ್ಧೂಳನಂ ವಿಪ್ರಃ ತ್ರಿಪುಂಡ್ರಂ ಚ ಯಥಾವಿಧಿ ॥೧೧೮॥

---

ಪರಿಶುದ್ಧವಾದ ಈ ಭಸ್ಮವು ನನ್ನನ್ನು ರಕ್ಷಣೆಮಾಡುವುದು. ಇದು ಸತ್ಯವು. ಇದರಲ್ಲಿ ಖಂಡಿತವಾಗಿಯೂ ಸಂಶಯವಿಲ್ಲ. ॥೧೧೩-೧೧೪॥

ಈ ಪಿಶಾಚಭಯದಿಂದ ನನ್ನನ್ನು ಈ ಭಸ್ಮವು ಕಾಪಾಡದೇ ಹೋದರೆ ಇದು ಭಯಂಕರವಾದ ಸಂಸಾರಭಯವನ್ನು ಹೇಗೆ ತಾನೇ ನಾಶಮಾಡಬಲ್ಲದು ? ಸಂಸಾರದುಃಖವನ್ನು ನಾಶಮಾಡುವ ಈ ಭಸ್ಮವು ಸಕಲ ಪಾಪರಾಶಿಗಳನ್ನೂ ಧ್ವಂಸಮಾಡಬಲ್ಲುದು. ಸಕಲ ಭಯಗಳನ್ನೂ ನಾಶಮಾಡುವುದರಿಂದಲೇ ಭಸ್ಮವೆಂದು ಪ್ರಸಿದ್ಧವಾಗಿರುವುದು. ಶ್ರುತಿಯೇ ನನಗೆ ಈ ವಿಷಯದಲ್ಲಿ ಪ್ರಮಾಣವಾಗಿರುವುದು. ॥೧೧೫-೧೧೬॥

ಬ್ರಾಹ್ಮಣೋತ್ತಮನಾಗಿ ಜನಿಸಿರುವ ನನಗೆ ವೇದಗಳೇ ಪ್ರಮಾಣವಾಗಿರುವುದರಿಂದ ಅದನ್ನನುಸರಿಸಿ ನಾನು ಈ ಭಸ್ಮವನ್ನು ಧಾರಣೆಮಾಡಿರುವೆನು. ಇದು ಅವಶ್ಯವಾಗಿ ಸರ್ವ ಭಯವನ್ನೂ ನಾಶಮಾಡುತ್ತದೆ." ಎಂದು ಹೇಳಿ ಶಿವಮಂತ್ರದಿಂದ ಭಸ್ಮವನ್ನು ಅಭಿಮಂತ್ರಣಮಾಡಿ ತಾನು ಭಸ್ಮಲೇಪನವನ್ನೂ, ಭಸ್ಮತ್ರಿಪುಂಡ್ರಧಾರಣೆಯನ್ನೂ ವಿಧಿಪೂರ್ವಕವಾಗಿ ಆಚರಿಸಿದನು. ॥೧೧೭-೧೧೮॥

ಪರಿವೇಷಂ ತತಶ್ಚಕ್ರೇ ಭಸ್ಮನಾ ತ್ರಿಸ್ತ್ರಿರಾಸ್ತಿಕಃ ।
ತತಃ ಸಮಾಗತಃ ಸೋಽಪಿ ಪಿಶಾಚೋ ವಿಕೃತಾನನಃ ॥೧೧೯॥

ಗೃಹೀತುಕಾಮಸ್ತ್ವರಸಾ ಧೃತಮುಷ್ಟಿಸ್ತಮುದ್ಧತಃ ।
ಪರಿವೇಷಾದ್ಬಹಿಃ ಸ್ಥಿತ್ವಾ ಬಲವಾನ್ದುಃಖಿತೋಽಪ್ಯಭೂತ್ ॥೧೨೦॥

ಅಂತಃ ಪ್ರವೇಷ್ಟುಂ ಶಕ್ತೋಽಪಿ ನ ಶಶಾಕಾಭಿಮಂತ್ರಿತಂ ।
ತದ್ಭಸ್ಮಮಂಡಲಂ ಶುದ್ಧಂ ಮಹಾಶೈವಕೃತಂ ಶುಭಂ ॥೧೨೧॥

ಬಹುಧಾ ಪರಿವೃತ್ಯಾಽಯಂ ಪರಿವೇಷಂ ಮುಹುರ್ಮುಹುಃ ।
ಅತ್ಯಂತಮಲಸೋ ಜಾತಃ ಸ್ವೇದಾಪೂರಿತವಿಗ್ರಹಃ ॥೧೨೨॥

ತತಃ ಸ ದೂರತಃ ಸ್ಥಿತ್ವಾ ಪರಿವೇಷಾದುವಾಚ ತಂ ।
ಬಾಲಕಾತ್ರ ತ್ವಯಾ ಕಿಂ ವಾ ಕೃತಮಸ್ತಿ ವದಸ್ವ ಮೇ ॥೧೨೩॥

ಅಹಂ ತು ಪರ್ವತಾಕಾರಃ ಸಿಂಹಾನಾಮಪಿ ಮರ್ದಕಃ ।
ಏತಾದೃಶಸ್ಯ ಮೇ ಬಾಲ ಕಥಂ ವಾ ಕುಂಠಿತಂ ಬಲಂ ॥೧೨೪॥

---

ಅನಂತರ ಆಸ್ತಿಕನಾದ ಆ ಬ್ರಾಹ್ಮಣಬಾಲಕನು ವಿಭೂತಿಯಿಂದ ಮೂರು ಸಾರಿ ಸುತ್ತುಕಟ್ಟಿ ತಾನು ಮಧ್ಯದಲ್ಲಿ ಕುಳಿತುಕೊಂಡನು. ಆಗ ಆ ಪಿಶಾಚವು ವಿಕಾರವಾಗಿ ಮುಖವನ್ನು ಮಾಡುತ್ತಾ ಇವನನ್ನು ಹಿಡಿಯಬೇಕೆಂಬ ಅಪೇಕ್ಷೆ ಯಿಂದ ಮುಷ್ಟಿಯನ್ನು ಮೇಲೆತ್ತಿಕೊಂಡು ವೇಗವಾಗಿ ಓಡಿಬಂದಿತು. ಆದರೆ ತಾನು ಅತ್ಯಂತ ಬಲಶಾಲಿಯಾಗಿದ್ದರೂ ಆ ಮಂಡಲದ ಹೊರಗಡೆಯಲ್ಲಿಯೇ ನಿಂತುಕೊಂಡು ಬಹಳ ದುಃಖದಿಂದ ಪೇಚಾಡಿತು. ॥೧೧೯-೧೨೦॥

ಒಳಗೆ ಪ್ರವೇಶಮಾಡುವ ಸಾಮರ್ಥ್ಯವಿದ್ದರೂ ಆ ಪಿಶಾಚವು ಮಹಾಶಿವ ಭಕ್ತನಾದ ಆ ಬ್ರಾಹ್ಮಣಬಾಲಕನಿಂದ ಮಂತ್ರಪೂರ್ವಕವಾಗಿ ನಿರ್ಮಿಸಲ್ಪಟ್ಟಿರುವ ಭಸ್ಮಮಂಡಲವನ್ನು ಪ್ರವೇಶಿಸಲು ಸಾಧ್ಯವಾಗಲಿಲ್ಲ. ಆಗ ಆ ಪಿಶಾಚಿಯು ಅನೇಕ ಬಾರಿ ಆ ಮಂಡಲದ ಸುತ್ತಲೂ ಪದೇ ಪದೇ ಸುತ್ತುತ್ತಾ ಬೆವರು ಹೊಂದಿ ತುಂಬಾ ಖಿನ್ನವಾಯಿತು. ॥೧೨೧-೧೨೨॥

ಆಗ ಆ ಪಿಶಾಚಿಯು ಮಂಡಲದಿಂದ ದೂರದಲ್ಲೇ ನಿಂತುಕೊಂಡು, " ಎಲೈ ಬಾಲಕನೇ, ನಾನು ಪರ್ವತಕ್ಕೇ ಸಮಾನವಾದ ಆಕಾರವುಳ್ಳವನು. ದೊಡ್ಡ ದೊಡ್ಡ

ಏವಂ ವಿಲೋಕ್ಯ ತಂ ದುಷ್ಟಂ ವಿಲೋಕ್ಯಾತ್ಯಂತದುಃಖಿತಂ ।
ಉವಾಚ ವಚನಂ ಬಾಲಃ ಸ್ಮಿತಪೂರ್ವಮತಂದ್ರಿತಃ ॥೧೨೫॥

॥ ಕಾಟಕೋಟರ ಉವಾಚ ॥

ರೇರೇ ಪಿಶಾಚ ಕಿಂ ಪೂರ್ವಂ ಪಾಪಮಸ್ತಿ ಕೃತಂ ತ್ವಯಾ ।
ಯೇನ ಪ್ರಾಪ್ತಂ ಪಿಶಾಚತ್ವಂ ಬಹುದುಃಖಪ್ರದಾಯಕಂ ॥೧೨೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ದುಃಖಿತಸ್ತಮುವಾಚ ಸಃ ।
ನ ಸ್ಮರ್ಯತೇ ಮಯಾ ಪಾಪಮಿತಿ ನತ್ವಾ ಪುನಃ ಪುನಃ ॥೧೨೭॥

ಇತ್ಯುಕ್ತಂ ತದ್ವಚಃ ಶ್ರುತ್ವಾ ದೃಷ್ಟ್ವಾ ಚ ವಿನಯಾನ್ವಿತಂ ।
ಮಂತ್ರಿತಂ ಭಸ್ಮ ಸಂಗೃಹ್ಯ ತನ್ಮೂರ್ಧ್ನಿ ಸ ವಿನಿಕ್ಷಿಪತ್ ॥೧೨೮॥

---

ಸಿಂಹಗಳನ್ನು ಕೂಡ ಹಿಂಸೆಮಾಡಿ ಧ್ವಂಸಿಸಬಲ್ಲೆನು. ಈ ರೀತಿಯಾದ ನನ್ನ ಬಲವು ಕುಂದಲು ಕಾರಣವೇನು? ನೀನು ಏನು ಮಾಡಿರುವೆ? ಅದನ್ನು ನನಗೆ ತಿಳಿಸು" ಎಂದು ಪಿಶಾಚಿಯು ಬಾಲಕನನ್ನು ಕುರಿತು ಮಾತನಾಡಿತು. ॥೧೨೩-೧೨೪॥

ವಿಶೇಷ ದುಃಖಿತನಾಗಿರುವ ದುಷ್ಟಸ್ವಭಾವದ ಆ ಪಿಶಾಚವನ್ನು ನೋಡಿ, ಆ ಬಾಲಕನು ಧೈರ್ಯದಿಂದ ಮುಗುಳುನಗೆಯುಳ್ಳವನಾಗಿ ಈ ರೀತಿ ಮಾತನಾಡಿದನು. ॥೧೨೫॥

"ಎಲೈ ಪಿಶಾಚಿಯೇ, ನೀನು ಹಿಂದೆ ಮಾಡಿದ ಪಾಪವೇನು? ಯಾವ ಕಾರಣದಿಂದ ಇಂತಹ ದುಃಖಪ್ರದವಾದ ಈ ಪಿಶಾಚತ್ವವು ನಿನಗೆ ಉಂಟಾಯಿತು?" ಎಂದು ಕಾಟಕೋಟರನು ಕೇಳಲು, ಆಗ ಆ ಮಾತನ್ನು ಕೇಳಿ ಆ ಪಿಶಾಚಿಯು ವಿಶೇಷ ದುಃಖಿತನಾಗಿ, ಅಯ್ಯ! ನಾನು ಮಾಡಿದ ಪಾಪಗಳು ಸ್ಮೃತಿಗೆ ಬರುವುದಿಲ್ಲವಾಗಿದೆಯೆಂದು ಹೇಳಿ ಬಾರಿಬಾರಿಗೂ ಆ ಬ್ರಾಹ್ಮಣಕುಮಾರನಿಗೆ ನಮಸ್ಕಾರಮಾಡಿತು. ॥೧೨೬-೧೨೭॥

ವಿನಯಯುಕ್ತವಾಗಿರುವ ಆ ಪಿಶಾಚವನ್ನು ನೋಡಿ ಅವನ ಮಾತುಗಳನ್ನು ಕೇಳಿ ಕರುಣೆಯಿಂದ, ಶಿವಮಂತ್ರದಿಂದ ಅಭಿಮಂತ್ರಣಮಾಡಿದ ಭಸ್ಮವನ್ನು ತೆಗೆದುಕೊಂಡು ಆ ಪಿಶಾಚದ ತಲೆಯ ಮೇಲೆ ಎರಚಿದನು. ಅನಂತರ ಆ ಭಸ್ಮದ

ತತಸ್ತದ್ಭಸ್ಮಯೋಗೇನ ಧ್ವಸ್ತಪಾಪಃ ಸ ತತ್ಕ್ಷಣೇ ।
ದಿವ್ಯಾಂ ಸ್ವಕಾಂ ತನುಂ ಪ್ರಾಪ ಸೂರ್ಯಮಂಡಲಸಂನಿಭಾಂ ॥೧೨೯॥

ತತಃ ಸಂತುಷ್ಟಹೃದಯಃ ಪುಷ್ಪೈಃ ಸಂಪೂಜ್ಯ ಬಾಲಕಂ ।
ನತ್ವಾ ಕೃತಾಂಜಲಿಪುಟಃ ಕೃತಾರ್ಥೋಽಸ್ಮೀತ್ಯುವಾಚ ಸಃ ॥೧೩೦॥

ತಂ ದೃಷ್ಟ್ವಾ ವಿಸ್ಮಿತೋ ಬಾಲಸ್ತಮುವಾಚ ವಚೋ ಮುದಾ ।
ಕಿಂ ಪಾತಕಂ ತ್ವಯಾ ಪೂರ್ವಂ ಕೃತಮಿತ್ಯನುವೋದಯ ॥೧೩೧॥

ತತಸ್ತಂ ಬಾಲಕಂ ದೃಷ್ಟ್ವಾ ಸ್ಮಿತಪೂರ್ವಕಮಾದರಾತ್ ।
ಉವಾಚ ವಚನಂ ಚಾರು ಪ್ರತಿಜ್ಞಾಪೂರ್ವಕಂ ಮುದಾ ॥೧೩೨॥

ಗಂಧರ್ವೋಽಹಂ ದ್ವಿಜಶ್ರೇಷ್ಠ ಗಾನಶಾಸ್ತ್ರವಿಶಾರದಃ ।
ಮಯಾ ದುಃಖಂ ಪುರಾ ದತ್ತಂ ಶೈವಾಯಾಮಿತತೇಜಸೇ ॥೧೩೩॥

---

ಸಂಬಂಧದಿಂದ ಆ ಪಿಶಾಚಿಯು ಕೂಡಲೆ ತನ್ನ ಪಾಪಗಳನ್ನು ಕಳೆದುಕೊಂಡು ಸೂರ್ಯಮಂಡಲಕ್ಕೆ ಸಮಾನವಾದ ತನ್ನ ದಿವ್ಯವಾದ ಹಿಂದಿನ ಶರೀರವನ್ನು ಹೊಂದಿತು. ॥೧೨೮-೧೨೯॥

ಆಗ ಆತನು ಸಂತೋಷಭರಿತವಾದ ಮನಸ್ಸಿನಿಂದ ಆ ಬಾಲಕನನ್ನು ಹೂಗಳಿಂದ ಪೂಜಿಸಿ, ನಮಸ್ಕಾರಮಾಡಿ, ಕೈಮುಗಿದುಕೊಂಡು ನಿನ್ನಿಂದ ನಾನು ಇಂದು ಕೃತಕೃತ್ಯನಾದೆನೆಂದು ಹೇಳಿದನು. ॥೧೩೦॥

ಆಗ ಆ ಬ್ರಾಹ್ಮಣಬಾಲಕನು ಆಶ್ಚರ್ಯದಿಂದ ಆ ದಿವ್ಯರೂಪವನ್ನು ಧರಿಸಿದ ಪಿಶಾಚಿಯೊಡನೆ ಪ್ರೀತಿಪೂರ್ವಕವಾಗಿ, ಅಯ್ಯ! ನೀನು ಹಿಂದೆ ಏನು ಪಾಪ ಮಾಡಿದೆಯೆಂಬುದನ್ನು ಈಗ ತಿಳಿಸು ಎಂದು ಕೇಳಲು, ಅದನ್ನು ಕೇಳಿ ಆ ವ್ಯಕ್ತಿಯು ಬಾಲಕನನ್ನು ನಗುಮುಖದಿಂದ ಆದರಪೂರ್ವಕವಾಗಿ ನೋಡಿ, ಪ್ರೀತಿಯಿಂದ ಮನೋಹರವಾಗಿ ಇಂತೆಂದನು. ॥೧೩೧-೧೩೨॥

ಅಯ್ಯ ಶ್ರೇಷ್ಠನಾದ ಬ್ರಾಹ್ಮಣಕುಮಾರನೇ! ಹಿಂದೆ ನಾನು ಸಂಗೀತಶಾಸ್ತ್ರದಲ್ಲಿ ಪಂಡಿತನಾದ ಗಂಧರ್ವನಾಗಿದ್ದೆನು. ಆಗ ಅಪಾರವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಒಬ್ಬ ಈಶಭಕ್ತನಿಗೆ ನಾನು ದುಃಖವನ್ನುಂಟುಮಾಡಿದೆನು. ಆ ಸಂದರ್ಭದಲ್ಲಿ ಅಜ್ಞಾನದಿಂದ ಆತನೊಡನೆ, ಅಯ್ಯ ಶಿವಭಕ್ತನೇ! ನಿನ್ನ ಶರೀರವೆಲ್ಲಾ ಈ

ಏವಮುಕ್ತಂ ಮಯಾ ಪೂರ್ವಂ ಶೈವಮಾಲೋಕ್ಯ ಬಾಲಕಂ ।
ಭಸ್ಮನಾ ಶ್ವೇತಮಭವಚ್ಛರೀರಮಿತಿ ನೋಹತಃ ॥೧೩೪॥

ತತಃ ಸ ದುಃಖಿತಃ ಶೈವೋ ಮಾಂ ಶಶಾಪ ಹಿ ತತ್ಕ್ಷಣೇ ।
ಪಿಶಾಚತನುಮಾಶ್ರಿತ್ಯ ವನೇ ತಿಷ್ಠೇತಿ ಸತ್ವರಂ ॥೧೩೫॥

ತದಾಪ್ರಭೃತಿ ಘೋರೇಯಂ ಪಿಶಾಚತನುರಾಗತಾ ।
ಕಲ್ಪಾನಾಮಯುತಂ ಜಾತಂ ದುಃಖಂ ಭುಕ್ತಂ ಮಯಾ ಬಹು ॥೧೩೬॥

ತ್ವತ್ಪ್ರಸಾದೇನ ಶೈವೇಂದ್ರ ಮುಕ್ತೋಽಹಂ ಘೋರಪಾತಕಾತ್ ।
ತ್ವದೀಯೋಽಯಂ ನ ಸಂದೇಹಃ ಪಾಲನೀಯೋಽಸ್ಮಿ ಸರ್ವಥಾ ॥೧೩೭॥

ಪುನರ್ಮಹ್ಯಂ ಮಂತ್ರಪೂತಂ ಭಸ್ಮ ದೇಹಿ ದ್ವಿಜೋತ್ತಮ ।
ಯದ್ಯೋಗೇನ ಮಯಾ ಪ್ರಾಪ್ತಾ ಗಾಂಧರ್ವಾ ತನುರುತ್ತಮಾ ॥೧೩೮॥

---

ವಿಭೂತಿಧಾರಣೆಯಿಂದ ಬಿಳುಪಾಗಿರುವುದಲ್ಲಾ .(ಅಂದರೆ ಇಲ್ಲಿ ಆ ಶಿವಭಕ್ತನನ್ನು ಕುಷ್ಠರೋಗಿಯ ಸದೃಶನೆಂದು ಭಾವಿಸಿ ಹೀಗೆ ಹೇಳಿರುವನೆಂದು ತಿಳಿಯಬೇಕು.) ಎಂದು ಹೇಳಿ ಹಾಸ್ಯಮಾಡಿದೆನು. ||೧೩೩-೧೩೪||

ನನ್ನ ಈ ಮಾತಿನಿಂದ ಅತ್ಯಂತ ದುಃಖಿತನಾದ ಶೈವನು ಆ ಕೂಡಲೇ ನೀನು ಪಿಶಾಚರೂಪವನ್ನು ತಾಳಿ ಕಾಡಿನಲ್ಲಿ ವಾಸಿಸೆಂದು ನನಗೆ ಶಾಪಕೊಟ್ಟನು. ಅದು ಮೊದಲುಗೊಂಡು ನನಗೆ ಈ ಭಯಂಕರವಾದ ಶರೀರವು ಪ್ರಾಪ್ತವಾಯಿತು. ಇದರಿಂದ ಹತ್ತುಸಾವಿರ ಕಲ್ಪಗಳ ಕಾಲ ನಾನು ನಾನಾವಿಧವಾದ ದುಃಖಗಳನ್ನು ಅನುಭವಿಸಿದೆನು. ||೧೩೫-೧೩೬||

ಅಯ್ಯ ಶಿವಭಕ್ತಶ್ರೇಷ್ಠನೇ! ನಿನ್ನ ಅನುಗ್ರಹದಿಂದ ನಾನು ಈ ಭಯಂಕರವಾದ ಪಾಪಗಳ ಸಂಬಂಧದಿಂದ ಬಿಡುಗಡೆ ಹೊಂದಿದೆನು. ಆದ್ದರಿಂದ ನಾನು ಈಗ ನಿನ್ನವನು, ಇದರಲ್ಲಿ ಸಂದೇಹವಿಲ್ಲ. ನನ್ನನ್ನು ಅವಶ್ಯವಾಗಿ ಕಾಪಾಡಬೇಕು. ಎಲೈ ಬ್ರಾಹ್ಮಣೋತ್ತಮನೇ! ಉತ್ತಮವಾದ ಈ ಗಂಧರ್ವಶರೀರವನ್ನು ನಾನು ಹೊಂದಲು ಕಾರಣಭೂತವಾಗಿರುವ, ಮಂತ್ರದಿಂದ ಪಾವನವಾಗಿರುವ ಆ ಭಸ್ಮವನ್ನು ಪುನಃ ನನಗೆ ಕೊಟ್ಟು ಅನುಗ್ರಹಿಸು. ||೧೩೭-೧೩೮||

ಉಪಕಾರೋ ಮಯಾ ಕಾರ್ಯಃ ಸ್ವಶಕ್ತ್ಯಾ ಶೈವಪುಂಗವ ।
ಕಿಂ ವಾ ತವೇಪ್ಸಿತಂ ವಸ್ತು ವದಾತ್ರ ಭುವನತ್ರಯೇ ॥೧೩೯॥

ಶಿವಭಕ್ತ್ಯಾ ಭವಾನ್ನಿತ್ಯಂ ಪ್ರಾಪ್ತಕಾಮೋಽಸಿ ಯದ್ಯಪಿ ।
ತಥಾಪಿ ಸ್ತೌಮಿ ಶೈವೇಂದ್ರ ಮತ್ಸಂತೋಷಾರ್ಥಮಾದರಾತ್ ॥೧೪೦॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಭಸ್ಮ ದತ್ವಾಽಭಿಮಂತ್ರಿತಂ ।
ಮಯಾ ಸ್ಮೃತಸ್ತ್ವಮಾಯಾಹೀತ್ಯುವಾಚ ಪ್ರೀತಿಪೂರ್ವಕಂ॥೧೪೧॥

ತತಃ ಸ ನತ್ವಾ ಶೈವೇಂದ್ರಂ ತಥೇತ್ಯುಕ್ತ್ವಾ ಜಗಾಮ ಸಃ ।
ತತಃ ಪರಂ ಬಿಲ್ವಪತ್ರಾಣ್ಯಾಹರ್ತುಂ ಸಮುಪಕ್ರಮೇ ॥೧೪೨॥

ಸ ತತ್ರಾತ್ಯಂತರಮ್ಯಾಣಿ ಬಿಲ್ವಪತ್ರಾಣಿ ಸಾದರಂ ।
ಗೃಹೀತ್ವಾ ಸ ವನಂ ತ್ಯಕ್ತ್ವಾ ಸ್ವಗೃಹಾಭಿಮುಖೋ ಯಯೌ ॥೧೪೩॥

---

ಈಶ್ವರಭಕ್ತಾಗ್ರೇಸರನೇ! ನನ್ನ ಶಕ್ತಿಯನ್ನನುಸರಿಸಿ ಅವಶ್ಯವಾಗಿ ನಾನು ನಿನಗೆ ಉಪಕಾರಮಾಡಬೇಕಾದುದು ಧರ್ಮ. ಆದ್ದರಿಂದ ಈ ಮೂರುಲೋಕಗಳಲ್ಲಿ ನಿನಗೆ ಇಷ್ಟವಾದ ಪದಾರ್ಥವಾವುದು? ಯದ್ಯಪಿ ನೀನು ಶಿವಭಕ್ತನಾಗಿರುವುದರಿಂದ ಅನವರತವೂ ನಿನಗೆ ಸಕಲ ಇಷ್ಟಾರ್ಥಗಳೂ ಆ ದೇವದೇವನ ಅನುಗ್ರಹದಿಂದ ಉಂಟಾಗಿರುವುವು. ಆದರೂ, ಅಯ್ಯ ಶಿವಭಕ್ತಾಗ್ರಣಿಯೇ! ನನ್ನ ಸಂತೋಷಕ್ಕೋಸ್ಕರ ಹೀಗೆ ನಾನು ಪ್ರಾರ್ಥಿಸುತ್ತಿರುವೆನು. ॥೧೩೯-೧೪೦॥

ಆ ದಿವ್ಯಪುರುಷನ ಮಾತುಗಳನ್ನು ಕೇಳಿ ಆ ಶೈವಬಾಲಕನು ಅವನ ಪ್ರಾರ್ಥನೆಯಂತೆ ವಿಭೂತಿಯನ್ನು ಅಭಿಮಂತ್ರಿಸಿಕೊಟ್ಟು, ನಾನು ಸ್ಮರಿಸಿದಾಗ ನೀನು ಬರಬೇಕೆಂದು ಪ್ರೀತಿಯಿಂದ ಕೇಳಿಕೊಂಡನು. ಆಗ ಆ ಗಂಧರ್ವನು ಹಾಗೆಯೇ ಆಗಲೆಂದು ಆ ಶಿವಭಕ್ತನಿಗೆ ನಮಸ್ಕಾರಮಾಡಿ ತನ್ನ ಸ್ಥಳಕ್ಕೆ ಹೊರಟು ಹೋದನು. ಅನಂತರ ಈ ಬ್ರಾಹ್ಮಣಬಾಲಕನಾದ ಕಾಟಕೋಟರನು ಬಿಲ್ವಪತ್ರೆಗಳನ್ನು ಸಂಪಾದಿಸಲು ಪ್ರಾರಂಭಿಸಿದನು. ॥೧೪೧-೧೪೨॥

ಆ ಬಾಲಕನು ವನದಲ್ಲಿ ತುಂಬಾ ಮನೋಹರವಾದ ಬಿಲ್ವಪತ್ರೆಗಳನ್ನು ಆದರದಿಂದ ಕೊಯ್ದು ತೆಗೆದುಕೊಂಡು ಕಾಡಿನಿಂದ ಮನೆಯ ಕಡೆಗೆ ಹೊರಟನು. ಅವನು ಮನೆಗೆ ಬರುವ ಹೊತ್ತಿಗೆ ಸೂರ್ಯನು ಆಗಲೇ ಅಸ್ತಾಚಲಪರ್ವತವನ್ನೇರಿ

ತದಾನೀಮೇವ ಸವಿತಾ ಸಂಪ್ರಾಪ್ತೋಽಸ್ತಗಿರಿಂ ತದಾ ।
ಬಾಲಃ ಪ್ರದೋಷಕಾಲೀನಾಂ ಪೂಜಾಂ ಕರ್ತುಂ ಸಮಾರಭೇ॥೧೪೪॥

ಸ ಗೋಮಯಮಯಂ ಲಿಂಗಂ ಸಂಪಾದ್ಯಾತ್ಯಂತಯತ್ನತಃ ।
ಧ್ಯಾತ್ವಾ ಸಮ್ಯಙ್ಮಹಾದೇವಂ ಚಕಾರಾವಾಹನಂ ಮುದಾ ॥೧೪೫॥

ತದಾನೀಂ ತತ್ಪಿತಾ ಪುತ್ರಃ ಕ್ವಗತೋಽಸ್ತೀತಿ ದುಃಖಿತಃ ।
ಆಜಗಾಮಾತಿಯತ್ನೇನ ಸರ್ವತೋಽಪಿ ವಿಚಾರಯನ್ ॥೧೪೬॥

ಆಗತ್ಯ ವಿಹಿತೇ ಲಿಂಗೇ ಸ ಗೋಮಯಮಯೇ ದ್ವಿಜಃ ।
ನಿಕ್ಷಿಪಚ್ಚರಣದ್ವಂದ್ವಂ ಕ್ವ ಗತೋಽಸೀತಿ ಸಂವದನ್ ॥೧೪೭॥

ಲಿಂಗೋಪರಿ ಸ್ಥಿತಂ ದೃಷ್ಟ್ವಾ ತತ್ಪಿತುಶ್ಚರಣದ್ವಯಂ ।
ಚಿಚ್ಛೇದ ಕ್ರೂರಶಸ್ತ್ರೇಣ ಕ್ರೋಧಸಂಕುಲಿತೇಕ್ಷಣಃ ॥೧೪೮॥

---

ದ್ದನು. ಆದ್ದರಿಂದ ಆ ಬ್ರಾಹ್ಮಣಕುಮಾರನು ಕೂಡಲೇ ಪ್ರದೋಷಕಾಲದ ಶಿವ ಪೂಜೆಯನ್ನು ಅಲ್ಲಿಯೇ ಮಾಡಲು ಪ್ರಾರಂಭಿಸಿದನು. ||೧೪೩-೧೪೪||

ಅವನು ಸಗಣಿಯಿಂದ ಲಿಂಗವನ್ನು ವಿಶೇಷ ಪ್ರಯಾಸದಿಂದ ಮಾಡಿ ಕೊಂಡು ಆ ಮಹಾದೇವನನ್ನು ಧ್ಯಾನಮಾಡುತ್ತಾ ಪ್ರೀತಿಯಿಂದ ಆ ಲಿಂಗದಲ್ಲಿ ಶಿವನನ್ನು ಆವಾಹನೆಮಾಡಿದನು. ಅಷ್ಟು ಹೊತ್ತಿಗೆ ಸರಿಯಾಗಿ ಕಾಟಕೋಟರನ ತಂದೆಯಾದ ಕುರೂಟಕನು ತನ್ನ ಮಗನು ಇಲ್ಲಿಯ ವರೆಗೂ ಬರದಿದ್ದುದರಿಂದ ಎಲ್ಲಿ ಹೋದನೋ ಎಂಬ ದುಃಖದಿಂದ ಅವನನ್ನು ಎಲ್ಲಾ ಕಡೆಗಳಲ್ಲಿಯೂ ವಿಚಾರಿಸುತ್ತಾ ಕೊನೆಗೆ ಬಹಳ ಕಷ್ಟದಿಂದ ಅಲ್ಲಿಗೆ ಬಂದನು. ||೧೪೫-೧೪೬||

ಬಂದವನೇ ವಿಧಿಪೂರ್ವಕವಾಗಿ ಶಿವನನ್ನು ಆವಾಹನೆಮಾಡಿರುವ ಆ ಸಗಣಿಯ ಲಿಂಗದಲ್ಲಿ 'ಮಗನೇ, ಎಲ್ಲಿಗೆ ಹೋಗಿದ್ದೆ' ಎಂದು ಹೇಳುತ್ತಾ ತನ್ನ ಎರಡು ಕಾಲುಗಳನ್ನೂ ಇಟ್ಟನು. ಆಗ ಲಿಂಗದ ಮೇಲೆ ಇಟ್ಟ ತನ್ನ ತಂದೆಯ ಎರಡು ಕಾಲುಗಳನ್ನೂ ನೋಡಿ, ಆಕ್ಷಣವೇ ಕಾಟಕೋಟರನು ಕೋಪದಿಂದ ಕೆಂಪಾದ ಕಣ್ಣುಗಳನ್ನು ಬಿಡುತ್ತಾ ಹರಿತವಾದ ಕತ್ತಿಯಿಂದ ತಂದೆಯ ಕಾಲು ಗಳನ್ನು ಕತ್ತರಿಸಿಬಿಟ್ಟನು. ||೧೪೭-೧೪೮||

ತತಃ ಸ ಭೂಮೌ ಪತಿತಃ ಪಿತಾ ದುಃಖಾಭಿಕರ್ಷಿತಃ।
ಹಾಹಾ ಹತೋಽಸ್ಮಿ ಪುತ್ರೇತಿ ರುರೋದಾಶ್ರೂಣಿ ಮೋಚಯನ್ ॥೧೪೯॥

ತತಃ ಸ ಜಿಹ್ವಾಮುತ್ಪಾಟ್ಯ ಪ್ರಾಣೇಭ್ಯೋಽಪಿ ವಿಯೋಜಯತ್।
ಶಿವಲಿಂಗೇ ಕಥಂ ದತ್ತಶ್ಚರಣೋಽದ್ಯೇತಿ ಸಂವದನ್ ॥೧೫೦॥

ಏತಸ್ಮಿನ್ನಂತರೇ ತಸ್ಯ ಕ್ರೋಧಃ ಶಾಂತೋಽಭವತ್ತದಾ।
ತತಃ ಪೂಜಾಂ ಚಕಾರಾಯಂ ಶಿವಲಿಂಗಾಂತರೇ ತದಾ ॥೧೫೧॥

ತದಾನೀಮತಿಸಂತುಷ್ಟಃ ಶಿವಃ ಪ್ರತ್ಯಕ್ಷತಾಂ ಗತಃ।
ವಿಲೋಕ್ಯ ಶಂಕರಂ ಶೈವಸ್ತುಷ್ಟಾವ ಬಹುಧಾಸ್ತವೈಃ ॥೧೫೨॥

ತತೋ ದೇವೋ ಭವಸ್ವೇತಿ ವರೋ ದತ್ತಃ ಶಿವೇನ ಹಿ।
ಶೈವಸ್ತದ್ವರಮಾಕರ್ಣ್ಯ ಯಯಾಚೇಽನ್ಯಂ ವರಂ ಮುದಾ ॥೧೫೩॥

ತ್ವಯ್ಯಸ್ತು ಮಮ ಗೌರೀಶ ಭಕ್ತಿರವ್ಯಭಿಚಾರಿಣೀ।
ಸೈವ ಭಕ್ತಿರಭೀಷ್ಟಾನಿ ಮಹ್ಯಂ ದಾಸ್ಯತ್ಯಸಂಶಯಂ ॥೧೫೪॥

---

ಅನಂತರ ತಂದೆಯು ಕಾಲುಹೋದ ದುಃಖದಿಂದ ನೊಂದು, ಮಗನೇ! ಸತ್ತೆನು; ಸತ್ತೆನು; ಎಂದು ಕಣ್ಣೀರುಬಿಡುತ್ತಾ ನೆಲದ ಮೇಲೆ ಬಿದ್ದುಬಿಟ್ಟನು. ಆದಾದಮೇಲೆ ಮಗನು ತನ್ನ ತಂದೆಯ ನಾಲಿಗೆಯನ್ನೂ ಕಿತ್ತು ನೀನು ಹೇಗೆ ಶಿವಲಿಂಗದ ಮೇಲೆ ಈಗ ನಿನ್ನ ಕಾಲನ್ನಿಟ್ಟೆಯೆಂದು ಹೇಳುತ್ತಾ ಸ್ವಲ್ಪವೂ ಕನಿಕರ ಪಡದೇ ಅವನು ಪ್ರಾಣಬಿಡುವಂತೆ ಮಾಡಿದನು. ॥೧೪೯-೧೫೦॥

ಇಷ್ಟಾದಮೇಲೆ ಆ ಬ್ರಾಹ್ಮಣಕುಮಾರನ ಕೋಪವು ಸಮಾಧಾನವಾಯಿತು. ಆಮೇಲೆ ಅವನು ಆ ಶಿವಲಿಂಗಮಂಡಲದಲ್ಲಿ ಭಕ್ತಿಯಿಂದ ಪೂಜೆಮಾಡಿದನು. ಆಗ ಇವನ ಪೂಜೆಯಿಂದ ಸಂತುಷ್ಟನಾದ ಪರಶಿವನು ಅವನಿಗೆ ಕೂಡಲೇ ಪ್ರತ್ಯಕ್ಷವಾದನು. ಹೀಗೆ ತನಗೆ ಪ್ರತ್ಯಕ್ಷವಾಗಿರುವ ಶಂಕರನನ್ನು ನೋಡಿ ಕಾಟಕೋಟರನು ನಾನಾ ವಿಧವಾದ ಸ್ತೋತ್ರಗಳಿಂದ ಆ ದೇವದೇವನನ್ನು ಸ್ತುತಿಸಿದನು. ॥೧೫೧-೧೫೨॥

ಆಗ ಶಿವನು 'ಅಯ್ಯ ಮಗುವೇ! ನಿನಗೆ ದೇವತ್ವವುಂಟಾಗಲಿ' ಎಂದು ವರವನ್ನು ಕೊಟ್ಟನು. ಆಗ ಆ ಭಕ್ತನು ವರವನ್ನು ಪರಮೇಶ್ವರನು ತನಗೆ ಅನುಗ್ರಹಮಾಡಿದುದನ್ನು ಕೇಳಿ ಸಂತೋಷದಿಂದ, ದೇವದೇವನಾದ ಗೌರೀ

ಕಿಂ ಮೇ ತ್ರಿದಶಭಾವೇನ ತ್ರಿದಶತ್ವಂ ನ ಮೇ ಮತಂ ।
ತ್ರಿದಶತ್ವಂ ಮಯಾ ಪ್ರಾಪ್ಯಂ ಮಹೇಶ ತವ ಪೂಜಯಾ ॥೧೫೫॥

ಅಧುನಾ ತ್ರಿದಶತ್ವಂ ಚ ಮಮ ಮಾಸ್ತು ಮಹೇಶ್ವರ ।
ಭೂಲೋಕ ಏವ ಸ್ಥಿತ್ವಾಽಹಂ ತವ ಪೂಜಾಂ ಕರೋಮ್ಯಹಂ ॥೧೫೬॥

ಅನೇಕಜನ್ಮತಪಸಾ ಮಾನುಷ್ಯಂ ಜನ್ಮ ಲಭ್ಯತೇ ।
ತತ್ರಾಸ್ತಿ ದ್ವಿಜಜನ್ಮತ್ವಂ ತ್ವತ್ಪ್ರಸಾದೇನ ಲಭ್ಯತೇ ॥೧೫೭॥

ತತ್ರಾಪಿ ಭಾರತೇ ವರ್ಷೇ ಜನ್ಮ ದುರ್ಲಭಮೇವ ಹಿ ।
ಬ್ರಾಹ್ಮಣ್ಯಂ ಭಾರತೇ ವರ್ಷೇ ತ್ವತ್ಪ್ರಸಾದೇನ ಲಭ್ಯತೇ ॥೧೫೮॥

ತತ್ರಾಪಿ ಭೂರಿಭಾಗ್ಯೇನ ತ್ವಯಿ ಭಕ್ತಿಃ ಪ್ರಜಾಯತೇ ।
ಸಾ ಮೋಕ್ಷದಾ ಭವತ್ಯೇವ ಭಕ್ತಿರವ್ಯಭಿಚಾರಿಣೀ ॥೧೫೯॥

---

ರಮಣನೇ! ನನಗೆ ನಿನ್ನಲ್ಲಿ ಶಾಶ್ವತವಾದ ಭಕ್ತಿಯುಂಟಾಗಲಿ. ಅದೇ ನನಗೆ ಸಕಲ ಅಭೀಷ್ಟಗಳನ್ನೂ ತಪ್ಪದೇ ಕೊಡಬಲ್ಲುದೆಂದೂ, ಆದರೂ ಮತ್ತೊಂದು ವರವನ್ನು ಕೊಡಬೇಕೆಂದೂ ಪ್ರಾರ್ಥಿಸಿದನು. ॥೧೫೩-೧೫೪॥

ಮಹೇಶ್ವರ! ನೀನು ಕರುಣಿಸಿರುವ ದೇವಪದವಿಯಿಂದ ನನಗೇನು ಪ್ರಯೋಜನ! ಆ ದೇವತ್ವಪ್ರಾಪ್ತಿಯಲ್ಲಿ ನನಗೆ ಅಭಿರುಚಿಯಿಲ್ಲವು. ನಿನ್ನನ್ನು ಪೂಜೆಮಾಡಿ ಆ ದೇವತಾಪದವಿಯನ್ನು ಹೊಂದುವುದು ನನಗೆ ಸಾಧ್ಯವು. ಮಹಾದೇವ! ಈಗ ನನಗೆ ಆ ದೇವತಾಪದವಿಯು ಬೇಡ. ಈ ಭೂಲೋಕದಲ್ಲಿಯೇ ಇದ್ದುಕೊಂಡು ನಾನು ನಿನ್ನ ಪೂಜೆಯನ್ನು ಭಕ್ತಿಯಿಂದ ಮಾಡುತ್ತೇನೆ. ॥೧೫೫-೧೫೬॥

ಅನೇಕ ಜನ್ಮಗಳಲ್ಲಿ ತಪಸ್ಸುಮಾಡಿ ಈ ಮನುಷ್ಯಜನ್ಮವನ್ನು ಪಡೆಯಬೇಕು. ಅದರಲ್ಲಿಯೂ ಬ್ರಾಹ್ಮಣನಾಗಿ ಹುಟ್ಟಬೇಕಾದರೆ ನಿನ್ನ ಅನುಗ್ರಹದಿಂದಲೇ ಸರಿ. ದೇವ! ಈ ಭಾರತದೇಶದಲ್ಲಿ ಜನ್ಮತಾಳುವುದಂತೂ ವಿಶೇಷ ದುರ್ಲಭವೇ ಆಗಿದೆ. ಮಹೇಶ್ವರ! ಈ ಭರತಖಂಡದಲ್ಲಿ ನಿನ್ನ ಅನುಗ್ರಹದಿಂದಲೇ ಮಾನವನು ಬ್ರಾಹ್ಮಣಪದವಿಯನ್ನು ಸಂಪಾದಿಸಬೇಕು. ॥೧೫೭-೧೫೮॥

ಅದರಲ್ಲಿಯೂ ನಿನ್ನಲ್ಲಿ ಭಕ್ತಿಯುಂಟಾಗಬೇಕಾದರೆ ಅಪಾರವಾದ ಭಾಗ್ಯ ಸಂಪತ್ತಿರಬೇಕು. ಶಾಶ್ವತವಾಗಿ ನಿನ್ನಲ್ಲಿ ಭಕ್ತಿ ಹುಟ್ಟಿದರೆ ಅದರಿಂದ ಅವಶ್ಯವಾಗಿ

ಸ್ಥಿತ್ವಾಸ್ಮಿ ಭಾರತೇ ವರ್ಷೇ ತವ ಪೂಜಾಂ ಕರೋಮ್ಯಹಂ ।
ಪುಷ್ಪೈರ್ನಾನಾವಿಧೈರ್ದಿವ್ಯೈರ್ಬಿಲ್ವಪತ್ರೈಶ್ಚ ಕೋಮಲೈಃ ॥೧೬೦॥

ಅವಿಚ್ಛಿನ್ನಾ ಯಥಾ ಪೂಜಾ ಕ್ರಿಯತೇ ಸರ್ವದಾ ಮಯಾ ।
ತಥಾ ವರಂ ಮಹಾದೇವ ದೇಹಿ ಮಹ್ಯಂ ಸುರೋತ್ತಮ ॥೧೬೧॥

ಕಿಂ ಚ ಮಾಂ ಪ್ರಾಪಯ ವಿಭೋ ಕಾಶೀಂ ದೇವೋತ್ತಮೇಶ್ವರ ।
ಯತ್ರ ಗತ್ವಾ ನ ಶೋಚಂತಿ ದೇವಾ ಇವ ಶಿವಾರ್ಚಕಾಃ ॥೧೬೨॥

ವಿಶ್ವೇಶಲಿಂಗರೂಪೇಣ ಯತ್ರ ತ್ವಮಧಿತಿಷ್ಠಸಿ ।
ತತ್ರಾಸ್ತು ಮಮ ದೇಹಸ್ಯ ವಿನಾಶಶ್ಶೀಘ್ರಮೀಶ್ವರ ॥೧೬೩॥

ತತ್ರ ತ್ಯಕ್ತತನೋಶ್ಶಂಭೋ ಶ್ರೀಮತ್ಪಂಚಾಕ್ಷರಃ ಪರಃ ।
ದೇಯಸ್ತ್ವಯಾ ಕೃಪಾಸಿಂಧೋ ಯೇನ ಮೋಕ್ಷಮವಾಪ್ನುಯಾತ್ ॥೧೬೪॥

---

ಮೋಕ್ಷಪ್ರಾಪ್ತಿಯುಂಟಾಗುವುದು. ದೇವ! ನಾನು ಈ ಭಾರತದೇಶದಲ್ಲಿಯೇ ಇದ್ದುಕೊಂಡು ನಾನಾವಿಧವಾದ ದಿವ್ಯಪುಷ್ಪಗಳಿಂದಲೂ ಕೋಮಲವಾದ ಬಿಲ್ವಪತ್ರೆಗಳಿಂದಲೂ ನಿನ್ನನ್ನು ಪೂಜೆಮಾಡುತ್ತೇನೆ. ॥೧೫೯-೧೬೦॥

ದೇವತೆಗಳಲ್ಲಿ ಉತ್ತಮನೆನಿಸಿದ ಮಹಾದೇವನೇ! ನಿನ್ನನ್ನು ನಾನು ಎಡಬಿಡದೇ ಪೂಜೆಮಾಡುವಂತಿರುವ ವರವನ್ನು ಕೊಟ್ಟು ಅನುಗ್ರಹಿಸುವನಾಗು. ಸರ್ವವ್ಯಾಪಕನಾದ ಪರಮೇಶ್ವರನೇ! ಮಾನವರು ಎಲ್ಲಿಗೆ ಹೋಗಿ ತಾವು ಯಾವಾಗಲೂ ಕೊಂಚವೂ ದುಃಖವನ್ನು ಹೊಂದದೇ ದೇವತೆಗಳಂತೆ ಆನಂದಭರಿತರಾಗಿರುವರೋ ಅಂತಹ ಕಾಶೀಪಟ್ಟಣಕ್ಕೆ ನಾನು ಹೋಗುವಂತೆ ಅನುಗ್ರಹಿಸು ಸ್ವಾಮಿ! ॥೧೬೧-೧೬೨॥

ಪರಮೇಶ್ವರನೇ, ವಿಶ್ವೇಶ್ವರಲಿಂಗರೂಪದಿಂದ ಸರ್ವದಾ ನೀನು ನೆಲಸಿರುವ ಕಾಶೀಕ್ಷೇತ್ರದಲ್ಲಿ ನಾನು ಈ ಪಾಂಚಭೌತಿಕವಾದ ದೇಹವನ್ನು ಬಿಡುವಂತಹ ವರವನ್ನು ಕರುಣಿಸು. ಮತ್ತು ಹಾಗೆ ನಾನು ಕಾಶಿಯಲ್ಲಿ ದೇಹತ್ಯಾಗಮಾಡುವಾಗ ಪಂಚಾಕ್ಷರಮಂತ್ರವನ್ನು ನಿನ್ನಿಂದ ಉಪದೇಶ ಪಡೆಯುವ ಪರಮ ಭಾಗ್ಯವು ನನಗೊದಗಿ, ಅದರಿಂದ ಶಾಶ್ವತವಾದ ಮುಕ್ತಿಯು ನನಗೆ ಲಭಿಸುವಂತೆ ವರ ಕರುಣಿಸು. ॥೧೬೩-೧೬೪॥

ಭಕ್ತಿರ್ವಿಶ್ವೇಶ್ವರೇ ಲಿಂಗೇ ಕಾಶ್ಯಾಂ ನಿವಸತೋ ಮಮ ।
ಯಥಾ ದೃಢಾ ಭವೇನ್ನಿತ್ಯಂ ತಥಾ ಕುರು ಮಹೇಶ್ವರ ॥೧೬೫॥

ಅಯಂ ವರೋತ್ತಮಃ ಶಂಭೋ ವರೋಽನ್ಯೋ ನೈವ ಯಾಚತೇ ।
ಅಯಮೇವ ವರೋ ಯಸ್ಮಾದನೇಕತಪಸಾಂ ಫಲಂ ॥೧೬೬॥

॥ ಯಮ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ತಥಾಽಸ್ತ್ವಿತ್ಯನುಮೋದಿತಃ ।
ತತ್ರೈವಾಂತರ್ದಧೇ ಲಿಂಗೇ ಲಿಂಗರೂಪೀ ಸದಾಶಿವಃ ॥೧೬೭॥

ತತ್ಪಿತಾಽಯಂ ಶಿವದ್ರೋಹೀ ತತ್ಪುತ್ರೇಣೈವ ಮಾರಿತಃ ।
ಭುಕ್ತ್ವಾ ಬಹೂನಿ ದುಃಖಾನಿ ಸ್ಥಾಸ್ಯತ್ಯತ್ರ ನ ಸಂಶಯಃ ॥೧೬೮॥

ಪಶ್ಯ ಶಂಕರಭಕ್ತಾನಾಂ ಮಾಹಾತ್ಮ್ಯಮತಿಶೋಭನಂ ।
ಅಗಣಯ್ಯ ದ್ವಿಜಂ ತಾತಂ ಹತ್ವಾ ಹೃಷ್ಟೋಽಧಿತಿಷ್ಠತಿ ॥೧೬೯॥

---

ಸಕಲೈಶ್ವರ್ಯಭರಿತನಾದ ಸ್ವಾಮಿಯೇ, ವಿಶ್ವೇಶ್ವರಲಿಂಗದ ಸ್ವರೂಪದಿಂದ ನೀನು ನೆಲಸಿರುವ ಆ ಕಾಶೀಪಟ್ಟಣದಲ್ಲಿಯೇ ನನಗೆ ಜಾಗ್ರತೆಯಾಗಿ ಮರಣವುಂಟಾಗಲಿ. ಶಂಭೋ! ಇದೇ ಉತ್ತಮವಾದ ವರವೆಂದು ತಿಳಿದು ಮತ್ತಾವುದನ್ನೂ ಬೇಡದೆ ಇದನ್ನೇ ಪ್ರಾರ್ಥಿಸುತ್ತಿರುವೆನು. ನಾನಾವಿಧವಾದ ತಪಸ್ಸುಗಳಿಗೂ ಈ ರೀತಿಯಾದ ವರವೇ ಫಲವಾಗಿರುವುದೆಂದು ಆ ಕಾಟಕೋಟರನೆಂಬ ಬ್ರಾಹ್ಮಣ ಬಾಲಕನು ಮಹಾದೇವನನ್ನು ಪ್ರಾರ್ಥಿಸಿದನು. ॥೧೬೫-೧೬೬॥

ಹೀಗೆ ನುಡಿದ ಆ ಬ್ರಾಹ್ಮಣಕುಮಾರನ ಮಾತುಗಳನ್ನು ಕೇಳಿ, ಲಿಂಗಸ್ವರೂಪಿಯಾದ ಸದಾಶಿವನು ಹಾಗೆಯೇ ಆಗಲೆಂದು ಅನುಮೋದಿಸಿ, ಆ ಗೋಮಯ ಲಿಂಗದಲ್ಲಿಯೇ ಮರೆಯಾದನು. ॥೧೬೭॥

ಆತನ ತಂದೆಯಾದರೊ ಶಿವದ್ರೋಹಿಯೆನಿಸಿ ತನ್ನ ಮಗನಿಂದಲೇ ಕೊಲ್ಲಲ್ಪಟ್ಟು ನಾನಾವಿಧವಾದ ದುಃಖಗಳನ್ನು ಅಹೋರಾತ್ರಿಯೂ ಅನುಭವಿಸುತ್ತಾ ಇರುವನು. ಅಯ್ಯ ದೇವೇಂದ್ರನೇ, ಮಂಗಳಕರವಾದ ಶಂಕರಭಕ್ತರ ಮಹಿಮೆಯನ್ನು ನೋಡು, ಬ್ರಾಹ್ಮಣನಾದ ತನ್ನ ತಂದೆಯನ್ನೇ ಕೊಂದರೂ ಪಾಪಸಂಬಂಧವಿಲ್ಲದೆ ಎಷ್ಟು ಸಂತೋಷದಿಂದಿರುವನು! ॥೧೬೮-೧೬೯॥

ಸ್ನೇಹಾಶ್ರಯಃ ಪಿತಾ ತತ್ರಾಪ್ಯಯಂ ವೇದವಿದುತ್ತಮಃ ।
ತಥಾಪಿ ನಿಜಘಾನೈನಂ ಶಿವದ್ರೋಹವಶಾತ್ಸುತಃ ॥೧೭೦॥

ಪಿತಾ ಪಿತಾಮಹೋ ವಾಸ್ತು ಬ್ರಾಹ್ಮಣಃ ಕ್ಷತ್ರಿಯೋಽಥವಾ ।
ಶಿವದ್ರೋಹೀ ಯದಿ ಭವೇತ್ಸಂಹರ್ತವ್ಯ ಇತಿ ಶ್ರುತಿಃ ॥೧೭೧॥

ಶಿವದ್ರೋಹಿಣಮಾಯಾಂತಂ ಯಾದೃಶಂ ತಾದೃಶಂ ದ್ವಿಜಂ ।
ಹತ್ವಾ ಮೋಕ್ಷಮವಾಪ್ನೋತೀತ್ಯಸ್ತಿ ಶ್ರುತಿರನೇಕಧಾ ॥೧೭೨॥

ಪ್ರಬಲಶ್ಚೇಚ್ಛಿವದ್ರೋಹೀ ಯದಿ ಹಂತುಂ ನ ಶಕ್ಯತೇ ।
ತದಾ ದೇಶಾಂತರಂ ಗಚ್ಛೇದತಿಯತ್ನೇನ ಸಾದರಂ ॥೧೭೩॥

ತಥಾ ಚ ಶ್ರುತಿತತ್ವಜ್ಞಃ ಶೈವಃ ಸ್ವಪಿತರಂ ದ್ವಿಜಂ ।
ಶ್ರುತಿತತ್ವಂ ವಿಚಾರ್ಯೈವ ಜಘಾನ ಶ್ರುತಿಪಾರಗಃ ॥೧೭೪॥

ಶಿವಾನ್ಯಸುರತುಲ್ಯತ್ವಂ ಯಃ ಶಿವೇ ವಕ್ತುಮಿಚ್ಛತಿ ।
ನಿಯೋಜಯತಿ ತಂ ಶೀಘ್ರಂ ಪ್ರಾಣೇಭ್ಯೋಽಯಂ ಶಿವಾರ್ಚಕಃ ॥೧೭೫॥

---

ತಂದೆಯು ಸ್ನೇಹಕ್ಕೆ ಪಾತ್ರನಾಗಿರುವವನು ; ಅದರಲ್ಲಿಯೂ ವೇದವನ್ನರಿತವರಲ್ಲಿ ಉತ್ತಮನೆನಿಸಿದವನು. ಹೀಗಿದ್ದರೂ ಶಿವನಿಗೆ ದ್ರೋಹಮಾಡಿದುದರಿಂದ ಮಗನಾದರೂ ಈತನು ತನ್ನ ತಂದೆಯನ್ನೇ ಕೊಂದುಬಿಟ್ಟನು. ತಂದೆಯಾಗಲಿ, ಅಜ್ಜನಾಗಲೀ, ಕ್ಷತ್ರಿಯನಾಗಲೀ, ಬ್ರಾಹ್ಮಣನೇ ಆಗಲೀ ಆತನು ಶಿವದ್ರೋಹಿಯಾಗಿದ್ದ ಪಕ್ಷದಲ್ಲಿ ಅವನನ್ನು ಸಂಹಾರಮಾಡಬೇಕೆಂದು ವೇದವು ಹೇಳುತ್ತಿರುವುದು. ॥೧೭೦-೧೭೧॥

ಶಿವದ್ರೋಹಮಾಡಿದವನು ಬರುತ್ತಿದ್ದರೆ ಅವನು ಎಂತಹ ಬ್ರಾಹ್ಮಣನೇ ಆಗಿದ್ದರೂ ಅವನನ್ನು ಕೊಂದರೆ ಮೋಕ್ಷಪ್ರಾಪ್ತಿಯಾಗುವುದೆಂದು ಅನೇಕ ಪ್ರಕಾರದಿಂದ ವೇದವು ಸಾರುತ್ತಿರುವುದು. ಒಂದುವೇಳೆ ಆ ಶಿವದ್ರೋಹಿಯು ತುಂಬಾ ಬಲಿಷ್ಠನಾಗಿ, ಅವನನ್ನು ಕೊಲ್ಲಲು ಸಾಧ್ಯವಾಗದಿದ್ದರೆ ಅವನಿರುವ ದೇಶವನ್ನೇ ಬಿಟ್ಟು ಬೇರೆ ದೇಶಕ್ಕೆ ಆದರದಿಂದ ಹೊರಟು ಹೋಗಬೇಕು. ॥೧೭೨-೧೭೩॥

ವೇದಗಳ ತತ್ವವನ್ನು ತಿಳಿದ ಆ ಶಿವಭಕ್ತನು ತಾನೂ ವೇದಪಾರಂಗತನಾದ್ದರಿಂದ ಅದರ ಮರ್ಮಗಳನ್ನೆಲ್ಲಾ ಚೆನ್ನಾಗಿ ತಿಳಿದು ಬ್ರಾಹ್ಮಣನಾಗಿದ್ದ ತನ್ನ

ಶಿವಂ ಶಿವಾನ್ಯದೇವೇಭ್ಯೋ ನ್ಯೂನತಾ ಯೇನ ಚೋಚ್ಯತೇ ।
ತತ್ತನುಂ ಕ್ರಕಚೈರೇವ ವಿದಾರಯತಿ ಸತ್ವರಂ ॥೧೭೬॥

ದೃಷ್ಟ್ವಾಸ್ತೇನ ತು ಯಾವಂತಃ ಶಿವಾನುತ್ಕರ್ಷವಾದಿನಃ ।
ತಾವತಾಮಪಿ ಸರ್ವೇಷಾಂ ಮುಖಾನಿ ಜ್ವಾಲಯತ್ಯಯಂ ॥೧೭೭॥

ದಿವಾ ಯೇನ ಭ್ರಮೇಣಾಪಿ ಭುಜ್ಯತೇ ಸೋಮವಾಸರೇ ।
ತಮಾನೀಯ ಕ್ರೂರಚಿತ್ತಃ ಕಶಾಭಿಸ್ತಾಡಯತ್ಯಯಂ ।೧೭೮॥

ರುದ್ರಾಕ್ಷಧಾರಣಂ ತ್ಯಕ್ತಂ ಯೇನ ಭ್ರಾಂತ್ಯಾಪಿ ತಂ ನರಂ ।
ಕಾರಾಗೃಹೇ ಪ್ರಯತ್ನೇನ ಪ್ರವೇಶಯತಿ ಸತ್ವರಂ ॥೧೭೯॥

ಯೋ ಭಸ್ಮಧಾರಣಂ ತ್ಯಕ್ತ್ವಾ ಭೋಕ್ತುಮಿಚ್ಛತಿ ಮಾನವಃ ।
ತಮಾನೀಯಾತಿಯತ್ನೇನ ಪಾಷಾಣೈಸ್ತಾಡಯತ್ಯಯಂ ॥೧೮೦॥

---

ತಂದೆಯನ್ನೇ ಕೊಂದುಬಿಟ್ಟನು. ಶಿವನಿಗೆ ಶಿವೇತರವಾದ ವಿಷ್ಣ್ವಾದಿದೇವತೆಗಳ ಸಾಮ್ಯವನ್ನು ಹೇಳಲಿಚ್ಛಿಸುವವನನ್ನು ಈ ಶಿವಪೂಜಕನು ಕೂಡಲೇ ಪ್ರಾಣತ್ಯಾಗ ಮಾಡುವಂತೆ ಪ್ರೇರಿಸುವನು. ||೧೭೪-೧೭೫||

ವಿಷ್ಣ್ವಾದಿದೇವತೆಗಳಿಗಿಂತಲೂ ಶಿವನನ್ನು ಕಡಿಮೆ ದರ್ಜೆಯವನೆಂದು ಹೇಳುವವನ ಶರೀರವನ್ನು ಕಾಟಕೋಟರನು ಗರಗಸದಿಂದ ಕುಯ್ದುಬಿಡುವನು. ಶಿವನ ಉತ್ಕರ್ಷವನ್ನು ಹೇಳದಿರುವ ಜನಗಳೆಲ್ಲರ ಮುಖಗಳನ್ನೂ ಈತನು ಕಂಡ ಕೂಡಲೇ ಸುಟ್ಟುಬಿಡುವನು. ||೧೭೬-೧೭೭||

ಸೋಮವಾರದ ದಿವಸ ಅಜ್ಞಾನದಿಂದ ಹಗಲು ಭೋಜನಮಾಡುವವನನ್ನು ಕಠಿನಮನಸ್ಸಿನಿಂದ ಈ ಶಿವಭಕ್ತನು ಎಳತಂದು ಅವನನ್ನು ಚಾವಟಿಗಳಿಂದ ಹೊಡೆಯುತ್ತಾನೆ. ಅಜ್ಞಾನದಿಂದ ರುದ್ರಾಕ್ಷಿಯನ್ನು ಧರಿಸದೇ ಇರುವ ಮೂರ್ಖನನ್ನು ಬಲಾತ್ಕಾರವಾಗಿ ಕೂಡಲೇ ಎಳತಂದು ಕಾರಾಗೃಹದಲ್ಲಿ ಇಡುತ್ತಾನೆ. ||೧೭೮-೧೭೯||

ವಿಭೂತಿಯನ್ನು ಧಾರಣೆಮಾಡದೇ ಊಟಮಾಡಲು ಅಪೇಕ್ಷೆಪಡುವ ಮಾನವನನ್ನು ಬಲಾತ್ಕಾರವಾಗಿ ಎಳತಂದು ಕಲ್ಲುಗಳಿಂದ ಈತನು ಹೊಡೆಯು

ಶಿವಲಿಂಗಾರ್ಚನಂ ತ್ಯಕ್ತ್ವಾ ಭೋಕ್ತುಮಿಚ್ಛತಿ ಯೋ ನರಃ ।
ತಮಾನೀಯಾಯಸೈಃ ಪಿಂಡೈಃ ಸಂತಾಡಯತಿ ತತ್ತ್ವಸುಂ ॥೧೪೧॥

ಯೇನ ನ ಕ್ರಿಯತೇ ನಿತ್ಯಂ ಪ್ರದೋಷೇ ಶಿವಪೂಜನಂ ।
ತಮಾನೀಯಾತಿಯತ್ನೇನ ಕಂಟಕೈಸ್ತಾಡಯತ್ಯಯಂ ॥೧೪೨॥

ಶಿವವ್ರತಾನಿ ತ್ಯಕ್ತಾನಿ ಯೇನ ನಿತ್ಯಂ ಭ್ರಮಾದಪಿ ।
ತಂ ನರಂ ಶೃಂಖಲೈರ್ಬದ್ಧ್ವಾ ಗರ್ತೇ ಸಂಪಾತಯತ್ಯಯಂ ॥೧೪೩॥

ಅಧರ್ಮನಿರತಾನ್ದುಷ್ಟಾನ್ನ್ಯಾಸಯನ್ನೇವಮಾಸ್ತಿಕಃ ।
ಬಹೂನ್ಧರ್ಮರತಾನೇವ ಚಕಾರಾಯಂ ಶಿವಾರ್ಚಕಃ ॥೧೪೪॥

ಏವಮೇತಾದೃಶಂ ಶ್ರುತ್ವಾ ತದ್ದೇಶಾಧಿಪತಿರ್ಧನೀ ।
ತದ್ದರ್ಶನಾರ್ಥಂ ಯತ್ನೇನ ಸಾಮಾತ್ಯಃ ಸಮುಪಾಯಯೌ ॥೧೪೫॥

ಆಗತ್ಯಾತ್ಯಂತವಿನಯಾತ್ಸ ರಾಜಾ ಕುಸುಮಾಂಜಲಿಃ ।
ಪೂಜಯಾಮಾಸ ಶೈವೇಂದ್ರಂ ಸಾಮಾತ್ಯಃ ಸಾನುಗೋ ಮುದಾ॥೧೪೬॥

---

ತ್ತಾನೆ. ಶಿವಲಿಂಗವನ್ನು ಪೂಜೆಮಾಡದೇ ಊಟಮಾಡಬಯಸುವ ಮನುಷ್ಯನನ್ನು ಈ ಶಿವಭಕ್ತನು ಎಳೆತಂದು ಅವನ ಶರೀರವನ್ನು ಕಬ್ಬಿಣದ ಗುಂಡುಗಳಿಂದ ಚೆನ್ನಾಗಿ ಹೊಡೆಯುತ್ತಾನೆ. ೧೪೦-೧೪೧॥

ಇವನು ಎಳೆದುಕೊಂಡುಬಂದು ಬಲಾತ್ಕಾರವಾಗಿ ಮುಳ್ಳುಗಳಿಂದ ಹೊಡೆಯುತ್ತಾನೆ. ನಿತ್ಯವೂ ಅಜ್ಞಾನದಿಂದ ಶಿವವ್ರತಗಳನ್ನು ಬಿಡುವ ಮನುಷ್ಯನನ್ನು ಸರಪಣಿಗಳಿಂದ ಕಟ್ಟಿ ಹಳ್ಳಗಳಲ್ಲಿ ತಳ್ಳುತ್ತಾನೆ. ॥೧೪೨-೧೪೩॥

ಆಸ್ತಿಕನಾದ ಆ ಶಿವಭಕ್ತನು ಅಧರ್ಮದಲ್ಲಿ ನಿರತರಾದ ದುಷ್ಟರನ್ನು ಶಿಕ್ಷಿಸುತ್ತಾ, ಅನೇಕ ಜನಗಳನ್ನು ಧರ್ಮಕಾರ್ಯಗಳಲ್ಲಿ ತತ್ಪರರಾಗುವಂತೆ ಮಾಡಿದನು. ಈ ರೀತಿಯಾದ ಮಹಿಮೆಯುಳ್ಳ ಕಾಟಕೋಟರನ ವಿಷಯವನ್ನು ಕೇಳಿ ಧನಿಕನಾದ ಆ ದೇಶದ ರಾಜನು ತನ್ನ ಮಂತ್ರಿಯೊಡನೆ ಆತನನ್ನು ದರ್ಶನಮಾಡುವುದಕ್ಕೋಸ್ಕರ ಅಲ್ಲಿಗೆ ಬಂದನು. ॥೧೪೪-೧೪೫॥

ಆ ರಾಜನು ತನ್ನ ಮಂತ್ರಿ ಮತ್ತು ಪರಿವಾರದೊಡನೆ ಪುಷ್ಪಹಸ್ತನಾಗಿ ಬಂದು ಬಹಳ ಸಂತೋಷದಿಂದ ಆ ಶೈವಾಗ್ರಗಣ್ಯನಾದ ಕಾಟಕೋಟರನನ್ನು

ತತಃ ಸ ಶೈವಸ್ತಂ ದೃಷ್ಟ್ವಾ ಭಸ್ಮಭೂಷಿತವಿಗ್ರಹಂ ।
ಕುಶಲಂ ಕಿಮು ರಾಜೇಂದ್ರೇತ್ಯಾಬಭಾಷೇ ನತಾನನಂ ॥೧೮೭॥

ತತಃ ಸ ರಾಜಾ ವಿನಯಾತ್ಪ್ರಣಮ್ಯೋವಾಚ ಸಾದರಂ ।
ಬೃಹಸ್ಪತಿರಿವಾತ್ಯಂತಂ ಶ್ರಾವ್ಯಂ ವಚನಮುತ್ತಮಂ ॥೧೮೮॥

॥ ರಾಜೋವಾಚ ॥

ಶೈವೇಂದ್ರ ತ್ವತ್ಪ್ರಸಾದೇನ ಕುಶಲಂ ಸರ್ವತೋ ಮಮ ।
ರಾಷ್ಟ್ರಂ ಸರ್ವಂ ತ್ವತ್ಪ್ರಸಾದಾತ್ಸುಖೇನೈವಾಧಿತಿಷ್ಠತಿ ॥೧೮೯॥

ಯಸ್ಮಿನ್ರಾಷ್ಟ್ರೇ ತ್ವಯಾ ನಿತ್ಯಂ ಸ್ಥೀಯತೇ ಶೈವಪುಂಗವ ।
ತಸ್ಯ ರಾಷ್ಟ್ರಸ್ಯ ಸರ್ವಸ್ಯ ಶುಭಮಸ್ತ್ಯೇವ ಸರ್ವಥಾ ॥೧೯೦॥

ತವ ದರ್ಶನಮಾತ್ರೇಣ ಕೃತಾರ್ಥೋಽಸ್ಮಿ ಶಿವಾರ್ಚಕ ।
ಆಜ್ಞಾಪಯ ಮಯಾ ನಿತ್ಯಂ ಕಿಂ ಕರ್ತವ್ಯಂ ಪ್ರಯತ್ನತಃ ॥೧೯೧॥

---

ಪೂಜೆಮಾಡಿದನು. ಆಗ ವಿಭೂತಿಯಿಂದ ಅಲಂಕೃತವಾದ ದೇಹದಿಂದ ಶೋಭಿಸುತ್ತಾ ವಿನಯದಿಂದ ತಲೆಬಾಗಿ ನಿಂತಿರುವ ಆ ರಾಜನನ್ನು ನೋಡಿ ಕಾಟಕೋಟರನು ರಾಜಶ್ರೇಷ್ಠನೇ! ಕುಶಲವೇ ಎಂದು ಪ್ರಶ್ನೆಮಾಡಿದನು. ॥೧೮೬-೧೮೭॥

ಆಗ ಆ ರಾಜನು ವಿನಯದಿಂದ ಆದರಪೂರ್ವಕವಾಗಿ ಶೈವವರ್ಯನಿಗೆ ನಮಸ್ಕಾರಮಾಡಿ, ದೇವಗುರುವಿನಂತೆ, ಕೇಳಲು ಯೋಗ್ಯವಾಗಿಯೂ ಉತ್ತಮವಾಗಿಯೂ ಇರುವ ವಚನಗಳಿಂದ ಹೀಗೆ ಮಾತನಾಡಿದನು. ॥೧೮೮॥

ಶಿವಭಕ್ತಾಗ್ರೇಸರನೇ, ನಿನ್ನ ಅನುಗ್ರಹದಿಂದ ನಾನೂ ನನ್ನ ಸಕಲ ರಾಷ್ಟ್ರಗಳೂ ಸುಖವಾಗಿರುವುವು. ಶೈವಶ್ರೇಷ್ಠನಾದ ನೀನು ನೆಲಸಿರುವ ರಾಜ್ಯದಲ್ಲಿ ಎಲ್ಲೆಲ್ಲಿಯೂ ಯಾವಾಗಲೂ ಶಾಂತಿಯೇ ನೆಲಸಿರುವುದರಲ್ಲಿ ಸಂದೇಹವೇನು? ॥೧೮೯-೧೯೦॥

ಎಲೈ ಶಿವಪೂಜಾಧುರಂಧರನೇ, ನಿನ್ನ ದರ್ಶನಮಾತ್ರದಿಂದಲೇ ನಾನು ಕೃತಕೃತ್ಯನಾಗಿರುವೆನು. ಮಹಾನುಭಾವ, ಅವಶ್ಯವಾಗಿ ನಾನು ಪ್ರತಿನಿತ್ಯವೂ ಮಾಡಬೇಕಾದ ಕಾರ್ಯಗಳನ್ನು ಅಪ್ಪಣೆಕೊಡಿಸುವನಾಗು? ಎಂದು ರಾಜನನ್ನು

ಇತ್ಯುಕ್ತಂ ತದ್ವಚಃ ಶ್ರುತ್ವಾ ಬಭಾಷೇ ಶೈವಪುಂಗವಃ ।
ಸ್ಮಿತಪೂರ್ವಂ ಪ್ರಯತ್ನೇನ ವಾಕ್ಯಮೇವಂ ಮನೋಹರಂ ॥೯೨॥

॥ ಕಾಟಕೋಟರ ಉವಾಚ ॥

ಅಪ್ರಮಾದೇನ ಸತತಂ ಭಸ್ಮನೋದ್ಧೂಳನಂ ಕುರು ।
ತ್ರಿಪುಂಡ್ರಧಾರಣಂ ಸಮ್ಯಕ್ಕುರು ವಿಧ್ಯುಕ್ತಮಾರ್ಗತಃ ॥೯೩॥

ರುದ್ರಾಕ್ಷಧಾರಣಂ ನಿತ್ಯಂ ಕುರು ಯತ್ನೇನ ಸಾದರಂ ।
ಶಿವಪೂಜಾಂ ಪ್ರಯತ್ನೇನ ಕುರು ಬಿಲ್ವದಳೈರ್ಮುದಾ ॥೯೪॥

ಶೈವಂ ಪಂಚಾಕ್ಷರಂ ನಿತ್ಯಂ ಜಪ ಯತ್ನಪುರಸ್ಸರಂ ।
ಕಾಲತ್ರಯೇಽಪ್ಯರ್ಚಯಸ್ವ ಶಿವಲಿಂಗಂ ಪ್ರಯತ್ನತಃ ॥೯೫॥

ರುದ್ರಾಭಿಷೇಕಪಾನೀಯಂ ಪಿಬ ಪ್ರತ್ಯಹಮಾದರಾತ್ ।
ಭುಂಕ್ಷ್ವಾನ್ನಂ ಪ್ರತ್ಯಹಂ ಸರ್ವಂ ಶಿವಾಯ ವಿನಿವೇದಿತಂ ॥೯೬॥

---

ಪ್ರಾರ್ಥಿಸಲು, ಆಗ ಆ ಶೈವಶ್ರೇಷ್ಠನು ರಾಜನ ಮಾತುಗಳನ್ನು ಕೇಳಿ ಮಂದಹಾಸಪೂರ್ವಕವಾಗಿ ಮನೋಹರವಾಗಿರುವ ಈ ಮಾತುಗಳನ್ನು ನುಡಿದನು. ॥೯೧-೯೨॥

ಅಯ್ಯ ರಾಜನೇ, ಪ್ರಮಾದವಿಲ್ಲದೇ ಅನವರತವೂ ಅಂಗಾಂಗಗಳಿಗೆಲ್ಲಾ ಭಸ್ಮಲೇಪನವನ್ನೂ, ವಿಧಿಪ್ರಕಾರ ಭಸ್ಮತ್ರಿಪುಂಡ್ರಧಾರಣೆಯನ್ನೂ ಅವಶ್ಯವಾಗಿ ಆಚರಿಸು. ನಿಯಮಪೂರ್ವಕವಾಗಿ ಆದರದಿಂದ ರುದ್ರಾಕ್ಷಗಳನ್ನು ಧಾರಣೆಮಾಡು. ಬಿಲ್ವಪತ್ರೆಗಳನ್ನು ತಂದು ನಿಯಮದಿಂದಲೂ ಸಂತೋಷದಿಂದಲೂ ಶಿವಪೂಜೆಯನ್ನು ನಿತ್ಯವೂ ತಪ್ಪದೇ ಮಾಡುವನಾಗು. ॥೯೩-೯೪॥

ನಿಯಮಪೂರ್ವಕವಾಗಿ ಪ್ರತಿದಿನವೂ ಶಿವಪಂಚಾಕ್ಷರ ಮಹಾಮಂತ್ರವನ್ನು ಜಪಮಾಡು. ಪ್ರಾತಃಕಾಲ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಶಿವಲಿಂಗವನ್ನು ಪ್ರಯತ್ನಪೂರ್ವಕವಾಗಿ ಪೂಜೆಮಾಡು. ನಿತ್ಯವೂ ರುದ್ರಾಭಿಷೇಕಮಾಡಿದ ನೀರನ್ನು ಆದರದಿಂದ ಕುಡಿಯುವವನಾಗು ? ಪ್ರತಿನಿತ್ಯವೂ ಆ ಪರಶಿವನಿಗೆ ನಿವೇದನಮಾಡಿದ ಅನ್ನವನ್ನೇ ಊಟಮಾಡು. ॥೯೫-೯೬॥

ಶಂಕರಾಯ ನಿವೇದ್ಯೈವ ಪಿಬೋದಕಮಪಿ ಪ್ರಿಯಂ ।
ನಿವೇದಿತಂ ಶಂಕರಾಯ ತಾಂಬೂಲಂ ಸ್ವೀಕುರು ಪ್ರಿಯಂ ॥೧೯೭॥

ಶಯನೇ ಭೋಜನೇ ನಿತ್ಯಂ ಶಂಕರಂ ಸ್ಮರ ಸಾದರಂ ।
ನಿತ್ಯಂ ಶಿವಕಥಾಮೇವ ಶೃಣು ಭಕ್ತಿಪುರಃಸರಂ ॥೧೯೮॥

ಶೈವೈಃ ಸಹೈವ ಸತತಂ ವಾರ್ತಾಂ ಕುರು ಯಥೋಚಿತಂ ।
ಶೈವೇಭ್ಯ ಏವ ಯತ್ನೇನ ಧನಂ ದೇಹಿ ಸ್ವಶಕ್ತಿತಃ ॥೧೯೯॥

ಶೈವಾನ್ ದೃಷ್ಟ್ವಾತಿಯತ್ನೇನ ಪೂಜಯೋತ್ಥಾಯ ಸಾದರಂ ।
ಶೈವೇಷು ವಿನಯೇನೈವ ವಾರ್ತಾಂ ಕುರು ಕೃತಾಂಜಲಿಃ ॥೨೦೦॥

ಶೈವೇ ನ ಕುರು ಕೌಟಿಲ್ಯಂ ಪ್ರಮಾದೇನಾಪಿ ಸರ್ವಥಾ ।
ಶೈವಾಂತೋಷಯ ಯತ್ನೇನ ಪೂಜಯ ತ್ವಂ ಸದಾ ನೃಪ ॥೨೦೧॥

ಅಶೈವಾನತಿಯತ್ನೇನ ಸಂಹರಾದರಪೂರ್ವಕಂ ।
ಅಶೈವಸಂಶ್ರಯಂ ದೇಶಂ ಮಾ ಪಾಲಯ ನರಾಧಿಪ ॥೨೦೨॥

---

ಆ ಶಂಕರನಿಗೆ ನಿವೇದನಮಾಡಿದ ನೀರನ್ನೇ ಪ್ರಿಯಕರವೆಂದು ಪಾನಮಾಡು. ತಾಂಬೂಲವನ್ನೂ ಶಂಕರನಿಗೆ ಸಮರ್ಪಿಸಿಯೇ ಪ್ರೀತಿಯಿಂದ ನೀನು ಸ್ವೀಕರಿಸು. ಮಲಗುವಾಗಲೂ, ಊಟಮಾಡುವಾಗಲೂ ನಿತ್ಯವೂ ಲೋಕಶಂಕರನನ್ನು ಆದರದಿಂದ ಸ್ಮರಣೆಮಾಡುವನಾಗು. ಅಲ್ಲದೇ ಪ್ರತಿನಿತ್ಯವೂ ಆ ಶಂಕರನ ಕಥೆಗಳನ್ನೇ ಭಕ್ತಿಪೂರ್ವಕವಾಗಿ ಕೇಳುತ್ತಾ ಕಾಲಯಾಪನೆ ಮಾಡು. ॥೧೯೭-೧೯೮॥

ಶೈವರ ಸಂಪರ್ಕದಲ್ಲಿಯೇ ಇದ್ದು ಯಾವಾಗಲೂ ಯೋಗ್ಯವಾದ ಸಂಭಾಷಣೆಗಳನ್ನಾಡು. ನಿನ್ನ ಯೋಗ್ಯತಾನುಸಾರವಾಗಿ ಶಾಂಭವರಿಗೇ ದ್ರವ್ಯದಾನಮಾಡುವನಾಗು. ಶಿವಭಕ್ತರನ್ನು ನೋಡಿದರೆ ಗೌರವದಿಂದಲೂ ಆದರದಿಂದಲೂ ಮೇಲಕ್ಕೆದ್ದು ನಿಂತು ಅವರನ್ನು ನಿಯಮದಿಂದ ಪೂಜೆಮಾಡು. ಅಲ್ಲದೆ ಅವರಲ್ಲಿ ವಿನಯದಿಂದಲೇ ಕೈಜೋಡಿಸಿ ಭಕ್ತಿಯುತನಾಗಿ ಸಂಭಾಷಣೆಮಾಡುವವನಾಗು. ॥೧೯೯-೨೦೦॥

ರಾಜೇಂದ್ರನೇ, ಒಂದುವೇಳೆ ಅಜ್ಞಾನದಿಂದಲಾದರೂ ಶಾಂಭವರಲ್ಲಿ ವಂಚನೆ ಮಾಡಬೇಡ. ಆ ಶಿವಭಕ್ತರನ್ನು ಯಾವಾಗಲೂ ನಿಯಮದಿಂದ ಸಂತೋಷಪಡಿ

ಶಿವಾಲಯಾನಿ ಯತ್ನೇನ ಕಾರಯಸ್ವ ಸ್ವಶಕ್ತಿತಃ ।
ಶಿವಾಲಯೇಷು ಸರ್ವೇಷು ಕಾರಯಸ್ವಾರ್ಚನಂ ಮುದಾ ॥೨೦೩॥

ಶಿವಸ್ಥಾನೇಷು ರಮ್ಯಾಣಿ ಜಲಕುಂಡಾನಿ ಕಾರಯ ।
ಶಿವಸ್ಥಾನೇಷು ವಿಭವಾಃ ಕಾರಣೀಯಾಃ ಪ್ರಯತ್ನತಃ ॥೨೦೪॥

ಕಾರಯಸ್ವಾಲಂಕೃತಾನಿ ಶಿವಸ್ಥಾನಾನಿ ಸಾದರಂ ।
ನಾಟ್ಯಂ ಕಾರಯ ಸರ್ವೇಷು ಶಿವಸ್ಥಾನೇಷು ಸಾದರಂ ॥೨೦೫॥

ದೀಪಮಾಲಾಲಂಕೃತಾನಿ ಶಿವಸ್ಥಾನಾನಿ ಕಾರಯ ।
ಸಂಮಾರ್ಜಿತಾನಿ ತಿಷ್ಠಂತು ಶಿವಸ್ಥಾನಾನಿ ಸರ್ವದಾ ॥೨೦೬॥

ದುಂದುಭಿಧ್ವಾನಪೂರ್ಣಾನಿ ಶಿವಸ್ಥಾನಾನಿ ಕಾರಯ ।
ಸ ಪುಷ್ಪಜಲಸಿಕ್ತಾನಿ ಶಿವಸ್ಥಾನಾನಿ ಕಾರಯ ॥೨೦೭॥

---

ಸುತ್ತಾ ಅವಶ್ಯವಾಗಿ ಸದಾ ಪೂಜೆಮಾಡುವನಾಗು. ಶಿವಪೂಜಕರಲ್ಲದ ಇತರರನ್ನು ಬಲಾತ್ಕಾರವಾಗಿ ಸಂಹಾರಮಾಡು. ಶಿವಸೇವಕರಲ್ಲದ ಜನರು ವಾಸಮಾಡುವ ದೇಶವನ್ನು ಎಂದಿಗೂ ನೀನು ಆಳಬೇಡ. ॥೨೦೧-೨೦೨॥

ನಿನ್ನ ಶಕ್ತಿಯನ್ನನುಸರಿಸಿ ಶಿವದೇವಾಲಯಗಳನ್ನು ಅವಶ್ಯವಾಗಿ ಕಟ್ಟಿಸುವನಾಗು. ಸಕಲ ಶಿವದೇವಾಲಯಗಳಲ್ಲಿಯೂ ಸಂತೋಷದಿಂದ ಪೂಜೆಮಾಡಿಸು. ಶಿವದೇವಸ್ಥಾನಗಳಲ್ಲಿ ಮನೋಹರವಾದ ನೀರಿನ ಕುಂಡಗಳನ್ನು ನಿರ್ಮಿಸು. ಅಲ್ಲದೇ ಅವುಗಳಲ್ಲಿ ನಾನಾವಿಧವಾದ ಉತ್ಸವಗಳು ನಡೆಯುವಂತೆ ನಿಯಮವನ್ನು ಮಾಡಿಸು. ॥೨೦೩-೨೦೪॥

ಶಿವದೇವಾಲಯಗಳನ್ನು ಆದರದಿಂದ ಅಲಂಕಾರಪಡಿಸು. ಎಲ್ಲಾ ಶಿವದೇವಾಲಯಗಳಲ್ಲೂ ಆದರಪೂರ್ವಕವಾಗಿ ನರ್ತನಮಾಡಿಸು. ಶಿವದೇವಸ್ಥಾನಗಳಲ್ಲಿ ದೀಪಪಂಕ್ತಿಗಳನ್ನಿಡಿಸಿ ಸದಾ ಆ ಸ್ಥಳಗಳು ಗುಡಿಸಲ್ಪಡುವಂತೆ ಮಾಡುವವನಾಗು.. ॥೨೦೫-೨೦೬॥

ಶಿವನು ನೆಲಸಿರುವ ಸ್ಥಳಗಳಲ್ಲಿ ಯಾವಾಗಲೂ ದುಂದುಭಿವಾದ್ಯಧ್ವನಿಗಳು ತುಂಬಿರುವಂತೆ ಮಾಡಿಸು. ಆ ದೇವಸ್ಥಾನಗಳಲ್ಲೆಲ್ಲಾ ಹೂವಿನಿಂದ ಮಿಶ್ರವಾದ

ಮಾ ಪಾಲಯಸ್ವ ತದ್ರಾಷ್ಟ್ರಂ ಯದ್ರಾಷ್ಟ್ರಮಶಿವಾಲಯಂ ।
ಮಾ ವಿಲೋಕಯ ತಂ ದೇಶಂ ಯದ್ದೇಶೋಽಸ್ತ್ಯಶಿವಾಲಯಃ ॥೨೦೮॥

ಮಾ ವಿಲೋಕಯ ಯತ್ನೇನ ಸ್ತ್ರಿಯಂ ತ್ಯಕ್ತಶಿವಾರ್ಚನಾಂ ।
ಮಾ ವಿಲೋಕಯ ಭೃತ್ಯಾಂಶ್ಚ ಶಿವಚಿಹ್ನವಿವರ್ಜಿತಾನ್ ॥೨೦೯॥

ಶಿವವ್ರತಾನಿ ಸತತಂ ಕುರು ಯತ್ನೇನ ಪಾರ್ಥಿವ ।
ನಿತ್ಯಂ ಪಾರ್ಥಿವಲಿಂಗಾನಿ ಪೂಜಯಸ್ವ ನರೇಶ್ವರ ॥೨೧೦॥

ಯಸ್ತು ಪಾರ್ಥಿವಲಿಂಗಾನಿ ಪೂಜಯಿಷ್ಯತಿ ಸಾದರಂ ।
ಸ ಮಹಾಭಾಗ್ಯಭುಗ್ಭೂತ್ವಾ ಲಭತೇ ಶಾಂಕರಂ ಪದಂ ॥೨೧೧॥

ಯಸ್ಯಾಸ್ತ್ಯೈಶ್ವರ್ಯಮೋಕ್ಷೇಚ್ಛಾ ತೇನ ಯತ್ನೇನ ಸಾದರಂ ।
ಪೂಜನೀಯಂ ವಿಧಾನೇನ ಪಾರ್ಥಿವಂ ಲಿಂಗಮುತ್ತಮಂ ॥೨೧೨॥

ರಾಜನ್ ಪಾರ್ಥಿವಲಿಂಗಸ್ಯ ಪೂಜನಾದೇವ ಸರ್ವಥಾ ।
ಮುಕ್ತಿಕಾಂತಾ ಸಮಾಯಾತಿ ಸ್ವಯಮೇವಾತಿಯತ್ನತಃ ॥೨೧೩॥

---

ನೀರನ್ನು ಚುಮುಕಿಸುವಂತೇರ್ಪಡಿಸು. ಶಿವದೇವಾಲಯಗಳಿಲ್ಲದಿರುವ ರಾಜ್ಯಗಳನ್ನು ಕಾಪಾಡದಿರುವುದಲ್ಲದೇ ಅಂತಹ ದೇಶಗಳನ್ನು ಕಣ್ಣೆತ್ತಿ ಸಹ ನೋಡಬೇಡ. ॥೨೦೭-೨೦೮॥

ಶಿವಪೂಜೆಮಾಡದಿರುವ ಹೆಂಗಸನ್ನೂ ಶೈವನ ಗುರುತುಗಳು ಇಲ್ಲದಿರುವ ಸೇವಕರನ್ನೂ ಎಂದಿಗೂ ದರ್ಶನಮಾಡಬೇಡ. ಯಾವಾಗಲೂ ಆ ಪರಶಿವನ ಸಂಬಂಧವಾದ ವ್ರತಗಳನ್ನೇ ಮಾಡುವವನಾಗು. ಅಯ್ಯ ರಾಜೇಂದ್ರನೇ, ನಿತ್ಯವೂ ಪಾರ್ಥಿವಲಿಂಗಗಳನ್ನೇ ಭಕ್ತಿಯಿಂದ ಪೂಜೆಮಾಡುವನಾಗು. ॥೨೦೯-೨೧೦॥

ಈ ಪಾರ್ಥಿವಲಿಂಗಗಳನ್ನು ಆದರಪೂರ್ವಕವಾಗಿ ಪೂಜೆಮಾಡುವವನು ಮಹಾಭಾಗ್ಯವನ್ನು ಅನುಭವಿಸುವನಾಗಿ ಕೊನೆಗೆ ಶಂಕರನ ಸಾನ್ನಿಧ್ಯವನ್ನು ಪಡೆಯುತ್ತಾನೆ. ಐಶ್ವರ್ಯ ಮತ್ತು ಮೋಕ್ಷ ಇವುಗಳನ್ನಪೇಕ್ಷಿಸುವ ಮನುಷ್ಯನು ನಿಯಮದಿಂದ ಉತ್ತಮವಾದ ಆ ಪರಶಿವನ ಪಾರ್ಥಿವಲಿಂಗವನ್ನು ತಪ್ಪದೇ ಪೂಜೆ ಮಾಡಬೇಕು. ॥೨೧೧-೨೧೨॥

ಅಯ್ಯ ರಾಜನೇ, ಪಾರ್ಥಿವಲಿಂಗವನ್ನು ನಿಯಮದಿಂದ ಪೂಜೆಮಾಡುವುದ

ಮೃನ್ಮಯಂ ಲಿಂಗಮಭ್ಯರ್ಚ್ಯ ಮಹಾದಾರಿದ್ರ್ಯನಾಶಕಂ ।
ತೇನ ದಾರಿದ್ರ್ಯನಾಶಸ್ತು ಭವತ್ಯೇವ ಹಿ ಸರ್ವಥಾ ॥೨೧೪॥

ಅರ್ಚಿತಂ ಪಾರ್ಥಿವಂ ಲಿಂಗಂ ನಾಶಯತ್ಯಘಪರ್ವತಾನ್ ।
ತದಾತಿ ಮಹದೈಶ್ವರ್ಯಂ ಮುಕ್ತಿಮಂತೇ ದದಾತಿ ಚ ॥೨೧೫॥

ಪಾರ್ಥಿವಂ ಲಿಂಗಮಭ್ಯರ್ಚ್ಯಂ ಶಿವೈಕಪರದೈವತೈಃ ।
ನಾನ್ಯದಿತ್ಯಾಹ ಜಾಬಾಲಸ್ತತ್ತಥೈವ ಹಿ ಸರ್ವಥಾ ॥೨೧೬॥

ಶಿವಾನ್ಯದೈವತಾಸಕ್ತಃ ಪಾರ್ಥಿವಂ ಲಿಂಗಮರ್ಚಯನ್ ।
ನ ತತ್ಫಲಮವಾಪ್ನೋತಿ ಸತ್ಯಮಿತ್ಯಾಹ ಗೌತಮಃ ॥೨೧೭॥

ಅತಃ ಶೈವೋ ಭವ ಪ್ರೀತ್ಯಾ ಪಾರ್ಥಿವಂ ಲಿಂಗಮರ್ಚಯ ।
ತತ್ಪೂಜಯಾ ತವೇಷ್ಟಾರ್ಥಾಃ ಸಿದ್ಧ್ಯಂತ್ಯೇವ ನ ಸಂಶಯಃ ॥೨೧೮॥

---

ರಿಂದ ಮೋಕ್ಷಾಂಗನೆಯು ತಾನಾಗಿಯೇ ಬಲಾತ್ಕಾರದಿಂದ ಒಲಿದು ಬರುತ್ತಾಳೆ. ಅಪಾರವಾದ ದಾರಿದ್ರ್ಯವನ್ನು ನಾಶಮಾಡುವ ಮಣ್ಣಿನ ಲಿಂಗವನ್ನು ಅವಶ್ಯವಾಗಿ ಪೂಜೆಮಾಡುವುದರಿಂದ ಖಂಡಿತವಾಗಿಯೂ ಬಡತನವು ನಾಶವಾಗಿಯೇ ಆಗುವುದು. ॥೨೧೩-೨೧೪॥

ಪಾರ್ಥಿವಲಿಂಗಗಳನ್ನು ಪೂಜೆಮಾಡುವುದರಿಂದ ಪರ್ವತಗಳಂತೆ ಅಪಾರವಾಗಿರುವ ಪಾಪಗಳೆಲ್ಲಾ ತೊಲಗಿ ಸಕಲೈಶ್ವರ್ಯಗಳೂ ಉಂಟಾಗುವುವಲ್ಲದೆ ಕೊನೆಗೆ ಮೋಕ್ಷವೂ ದೊರೆಯುವುದು. ಶಿವನೊಬ್ಬನೇ ಮುಖ್ಯನಾದ ದೇವತೆಯೆಂದು ನಂಬಿರುವ ಜನಗಳು ಪಾರ್ಥಿವಲಿಂಗವನ್ನೇ ಪೂಜೆಮಾಡಬೇಕೇ ಹೊರತು ಇತರ ದೇವತೆಗಳನ್ನು ಪೂಜೆಮಾಡಬಾರದೆಂದು ಜಾಬಾಲಮಹರ್ಷಿಯು ಹೇಳಿರುವುದು ಸರಿಯಾಗಿದೆ. ॥೨೧೫-೨೧೬॥

ಶಿವನಲ್ಲದ ಇತರ ವಿಷ್ಣ್ವಾದಿದೇವತೆಗಳಲ್ಲಿ ಆಸಕ್ತಿ ಹೊಂದಿ, ಶಿವನ ಪಾರ್ಥಿವ ಲಿಂಗವನ್ನು ಪೂಜೆಮಾಡುವವನು ಸತ್ಯವಾಗಿಯೂ ಆ ಫಲವನ್ನು ಹೊಂದಲಾರನೆಂದು ಗೌತಮಮುನಿಯು ಹೇಳಿರುವನು. ಅಯ್ಯ ರಾಜನೇ, ಆದ್ದರಿಂದ ನೀನು ಶಿವಭಕ್ತನಾಗಿ ಪ್ರೀತಿಯಿಂದ ಆ ಶಿವಲಿಂಗವನ್ನು ಪೂಜೆಮಾಡು. ಆ ಪೂಜೆಯಿಂದ ನಿನಗೆ ಸಂಶಯವೇ ಇಲ್ಲದೇ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ॥೨೧೭-೨೧೮॥

ಕುಬೇರಸ್ಯ ಧನಂ ಪೂರ್ವಂ ಸರ್ವಂ ವಿಶ್ವವಸಾ ಹೃತಂ ।
ತತೋ ದರಿದ್ರಃ ಸಮಭೂತ್ಕುಬೇರೋ ಧನವರ್ಜಿತಃ ॥೨೧೯॥

ತತೋऽತಿದುಃಖಂ ಸಂಪ್ರಾಪ್ಯ ಜಗಾಮ ಹಿಮವದ್ಗೃಹಂ ।
ಹಿಮವಾನ್ಪೂಜಯಿತ್ವಾ ತಂ ಪಪ್ರಚ್ಛಾತ್ಯಂತದುಃಖಿತಂ ॥೨೨೦॥

ಕಿಮಾಸೀದ್ರಾಜರಾಜಾದ್ಯ ಖಿನ್ನ ಏವ ಹಿ ದೃಶ್ಯಸೇ ।
ಖೇದಕಾರಣಮಾಚಕ್ಷ್ವ ದುಃಖಂ ತ್ಯಕ್ತ್ವಾ ಸ್ಥಿರೋ ಭವ ॥೨೨೧॥

ಏವಂ ಪೃಷ್ಟೋ ಹಿಮವತಾ ಬಾಷ್ಪಧಾರಾಪರಿಪ್ಲುತಃ ।
ಜಗಾದ ವಚನಂ ದುಃಖೀ ಗತಂ ಧನಮಿತಿ ಸ್ವಕಂ ॥೨೨೨॥

ತಚ್ಛ್ರುತ್ವಾ ಹಿಮವಾನ್ ಧೀರೋ ವಿಸ್ಮಿತಃ ಪರ್ಯಪೃಚ್ಛತ ।
ಕಥಂ ಗತಂ ಕಿಮುದ್ಯಾಸೀದಿತ್ಯೇನಂ ಪ್ರೀತ್ಯುವಾಚ ಸಃ ॥೨೨೩॥

ಪೂರ್ವೇದ್ಯುರನ್ಯಾಸಕ್ತೇನ ತ್ಯಕ್ತಂ ಸಾಯಂ ಶಿವಾರ್ಚನಂ ।
ತತಃ ಪರಂ ಮಯಾ ರಾತ್ರೌ ನ ಕೃತಂ ಶಿವಪೂಜನಂ ॥೨೨೪॥

---

ಹಿಂದೆ ಕುಬೇರನ ದ್ರವ್ಯವೆಲ್ಲವನ್ನೂ ವಿಶ್ವಾವಸುವೆಂಬ ಗಂಧರ್ವನು ಅಪಹರಿಸಿದನು. ಆಗ ಇದರಿಂದ ಕುಬೇರನು ಹಣವಿಲ್ಲದೆ ಬಡವನಾದನು. ಒಮ್ಮೆ ಹಿಮವಂತನು ಅಪೂರ್ವವಾಗಿ ಬಂದ ಆ ಕುಬೇರನನ್ನು ಗೌರವದಿಂದ ಪೂಜಿಸಿ ದುಃಖಿತನಾಗಿರುವ ಅವನನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು. ॥೨೧೯-೨೨೦॥

ಅಯ್ಯಾ ರಾಜಾಧಿರಾಜನೇ, ಈ ದಿವಸ ನೀನು ಖಿನ್ನನಾಗಿರುವಂತೆ ಕಾಣುತ್ತಿರುವೆ. ಈ ರೀತಿಯಾಗಿ ಖಿನ್ನನಾಗಲು ಕಾರಣವೇನು? ದುಃಖವನ್ನು ಬಿಟ್ಟು ಶಾಂತನಾಗು. ಎಂದು ಹಿಮವಂತನು ಎಷ್ಟು ಹೇಳಿದರೂ ಕುಬೇರನು ಕಣ್ಣೀರಿನ ಧಾರೆಗಳಿಂದ ನೆನೆಯಲ್ಪಟ್ಟವನಾಗಿ ತನ್ನ ಹಣವೆಲ್ಲವೂ ಹೋಯಿತೆಂದು ದುಃಖದಿಂದ ಹೇಳಿದನು. ॥೨೨೧-೨೨೨॥

ಇದನ್ನು ಕೇಳಿ ಧೀರನಾದ ಹಿಮವಂತನು ಆಶ್ಚರ್ಯಗೊಂಡು, ಎಲೈ ಕುಬೇರನೇ, ನಿನ್ನ ಹಣವು ಯಾವ ರೀತಿಯಿಂದ ಹೋಯಿತು? ಅದಕ್ಕೆ ಕಾರಣವೇನು ನಡೆಯಿತೆಂದು ಪ್ರಶ್ನೆ ಮಾಡಲು, ಆಗ ಕುಬೇರನು, ಅಯ್ಯಾ ಹಿಮವಂತನೇ, ಹಿಂದಿನ ದಿವಸ ನಾನು ಬೇರೆ ಕಾರ್ಯದಲ್ಲಿ ನಿರತನಾಗಿದ್ದುದರಿಂದ ಸಾಯಂಕಾಲದಲ್ಲಿ

ತದಾನೀಂ ವಿಶ್ರವಾ ನಾಮ ಗಂಧರ್ವಃ ಕಶ್ಚಿದಾಗತಃ ।
ತೇನ ಸರ್ವಂ ಧನಂ ನೀತಂ ತಿರಸ್ಕೃತ್ಯೈವ ಮಾಂ ತತಃ ॥೨೨೫॥

ಇತ್ಯುದೀರಿತಮಾಕರ್ಣ್ಯ ಕುಬೇರಸ್ಯ ಹಿತಾವಹಂ ।
ಬಭಾಷೇ ವಚನಂ ಧೀಮಾನ್ವಿಚಾರ್ಯ ಚ ಪುನಃ ಪುನಃ ॥೨೨೬॥

ಕುರುಷ್ವ ಪಾರ್ಥಿವಂ ಲಿಂಗಂ ಷೋಡಶಾಂಗುಲಮುನ್ನತಂ ।
ಅನಾವೃತ್ತಸಮಾವೃತ್ತಮಾಮೂಲಾಗ್ರಮನುನ್ನತಂ ॥೨೨೭॥

ಸಾರ್ಧವತ್ಸರಪರ್ಯಂತಂ ಪೂಜಯಸ್ವ ವಿಧಾನತಃ ।
ಭಸ್ಮರುದ್ರಾಕ್ಷನೀತಾಂಗೋ ಬ್ರಹ್ಮಚರ್ಯೇಣ ಸಂಸ್ಥಿತಃ ॥೨೨೮॥

ಆನಯಸ್ವಾತಿಯತ್ನೇನ ಹೇಮಪದ್ಮಾತಿಸುಂದರಂ ।
ಬಿಲ್ವಪತ್ರಾಣಿ ಹೈಮಾನಿ ಕೈಲಾಸಾದಾನಯಾನ್ವಹಂ ॥೨೨೯॥

ರತ್ನೈಃ ಪದ್ಮೈರ್ಬಿಲ್ವಪತ್ರೈಃ ಪೂಜಯಸ್ವ ಮಹೇಶ್ವರಂ ।
ಸಹಸ್ರಂ ರಚಯ ಪ್ರೀತ್ಯಾ ದೀಪಾನಾಂ ಲಿಂಗಸನ್ನಿಧೌ ॥೨೩೦॥

---

ಶಿವನನ್ನು ಪೂಜೆಮಾಡಲಿಲ್ಲ. ಅದೂ ಅಲ್ಲದೆ ನಾನು ರಾತ್ರಿಯಲ್ಲಾದರೂ ಆ ಪರಶಿವನನ್ನು ಪೂಜಿಸಬಹುದಾಗಿತ್ತು. ಪೂಜೆಮಾಡಲಿಲ್ಲ. ॥೨೨೩-೨೨೪॥

ಆಗ ವಿಶ್ರವಸನೆಂಬ ಒಬ್ಬ ಗಂಧರ್ವನು ಅಲ್ಲಿಗೆ ಬಂದು ನನ್ನನ್ನು ತಿರಸ್ಕರಿಸಿ ನನ್ನಲ್ಲಿದ್ದ ಹಣವನ್ನೆಲ್ಲಾ ಅಪಹರಿಸಿಕೊಂಡು ಹೋದನು, ಎಂದು ಹೇಳಲು ಮೇಧಾವಿಯಾದ ಹಿಮವಂತನು ಕುಬೇರನಿಗೆ ಹಿತವಾಗುವಂತೆ ಯೋಚಿಸಿ ಹೀಗೆ ಮಾತನಾಡಿದನು. ॥೨೨೫-೨೨೬॥

ಅಯ್ಯ ಕುಬೇರನೇ, ಮೊದಲಿನಿಂದ ಕೊನೆಯವರೆಗೂ ಮತ್ತು ಸುತ್ತಲೂ ಸುಂದರವಾಗಿ ಒಂದೇಸಮನಾಗಿ ರಚಿತವಾಗಿರುವ ಹದಿನಾರು ಅಂಗುಲ ಎತ್ತರವಾಗಿರುವ ಪಾರ್ಥಿವಲಿಂಗವನ್ನು, ಒಂದೂವರೆ ವರುಷದವರೆಗೆ, ಭಸ್ಮ ರುದ್ರಾಕ್ಷಗಳನ್ನು ಧಾರಣೆಮಾಡಿ, ಬ್ರಹ್ಮಚರ್ಯವ್ರತದಲ್ಲಿದ್ದುಗೊಂಡು ವಿಧಿಪೂರ್ವಕವಾಗಿ ಪೂಜೆ ಮಾಡುವನಾಗು. ॥೨೨೭-೨೨೮॥

ಪ್ರಯತ್ನಪಟ್ಟು ಅತ್ಯಂತ ಸುಂದರವಾಗಿರುವ ಚಿನ್ನದ ಕಮಲಗಳನ್ನೂ ಚಿನ್ನದ ಬಿಲ್ವಪತ್ರೆಗಳನ್ನೂ ಪ್ರತಿನಿತ್ಯವೂ ಕೈಲಾಸದಿಂದ ತೆಗೆದುಕೊಂಡು ಬಾ.

ಪ್ರದಕ್ಷಿಣಶತಂ ನಿತ್ಯಂ ಸಮ್ಯಗಷ್ಟೋತ್ತರಂ ಕುರು ।
ಪ್ರಣಾಮಾನ್ಕುರು ಸಾಷ್ಟಾಂಗಂ ನಿತ್ಯಮಷ್ಟೋತ್ತರಂ ಶತಂ ॥೨೩೧॥

ಪರಮಾನ್ನೇನ ನೈವೇದ್ಯಂ ಕುರು ಯತ್ನೇನ ಸಾದರಂ ।
ಕರ್ಪೂರದೀಪಾನಮಲಾನ್ಕುರು ಸಾರ್ಧಾಯುತತ್ರಯಂ ॥೨೩೨॥

ಗಂಡಾಲಾಗರುಧೂಪೇನ ಪ್ರೀಣಯಸ್ವ ಮಹೇಶ್ವರಂ ।
ಚತುರ್ವಿಂಶತಿಸಾಹಸ್ರಂ ಜಪ ಪಂಚಾಕ್ಷರಂ ಸದಾ ॥೨೩೩॥

ಏವಮೇವಾನ್ವಹಂ ಪ್ರೀತ್ಯಾ ಸಪ್ತವಾರಂ ಮಹೇಶ್ವರಂ ।
ಪೂಜಯಸ್ವಾತಿಯತ್ನೇನ ಶಿವೈಕಶರಣಃ ಸದಾ ॥೨೩೪॥

ಸಾರ್ಧವತ್ಸರಪರ್ಯಂತಮೇವಂ ಕೃತ್ವಾ ಶಿವಾರ್ಚನಂ ।
ತತಃ ಕುರು ಯಥಾಶಾಸ್ತ್ರಮುದ್ಯಾಪನಮತಂದ್ರಿತಃ ॥೨೩೫॥

---

ರತ್ನಗಳಿಂದಲೂ, ಕಮಲಗಳಿಂದಲೂ, ಬಿಲ್ವಪತ್ರೆಗಳಿಂದಲೂ ಆ ಮಹೇಶ್ವರನನ್ನು ಪೂಜೆಮಾಡು. ಶಿವಲಿಂಗದ ಸಂನಿಧಾನದಲ್ಲಿ ಪ್ರೀತಿಪೂರ್ವಕವಾಗಿ ಸಾವಿರ ದೀಪಗಳನ್ನು ರಚಿಸುವನಾಗು. ॥೨೨೯-೨೩೦॥

ಪ್ರತಿದಿನವೂ ಶಿವಲಿಂಗಕ್ಕೆ ನೂರೆಂಟು ಪ್ರದಕ್ಷಿಣೆಗಳನ್ನೂ ಮತ್ತು ಅಷ್ಟೇ ಸಾಷ್ಟಾಂಗ ನಮಸ್ಕಾರಗಳನ್ನೂ ಮಾಡುವನಾಗು. ನಿಯಮದಿಂದ ಆದರಪೂರ್ವಕವಾಗಿ ಪರಮಾನ್ನವನ್ನು ಶಿವನಿಗೆ ನಿವೇದನ ಮಾಡು. ಅಲ್ಲದೇ ಆದರದಿಂದ ಪರಿಶುದ್ಧವಾದ ನಲವತ್ತೈದುಸಾವಿರ ಕರ್ಪೂರದ ದೀಪಗಳನ್ನು ಪರಶಿವನಿಗೆ ಅರ್ಪಿಸುವನಾಗು. ॥೨೩೧-೨೩೨॥

ಸಾಮ್ರಾಣಿ ಮತ್ತು ಅಗರು ಇವುಗಳ ಧೂಪಗಳನ್ನು ಹಾಕಿ ಆ ಮಹೇಶ್ವರನಿಗೆ ಪ್ರೀತಿಯುಂಟಾಗುವಂತೆ ಮಾಡು. ಯಾವಾಗಲೂ ಇಪ್ಪತ್ತುನಾಲ್ಕು ಸಾವಿರ ಶಿವಪಂಚಾಕ್ಷರ ಮಹಾಮಂತ್ರವನ್ನು ಜಪಮಾಡು. ಹೀಗೆ ಪ್ರತಿದಿನವೂ ಏಳುಬಾರಿ ಪ್ರೀತಿಯಿಂದ ಆ ಮಹೇಶ್ವರನನ್ನು ನಿಯಮದಿಂದ ಪೂಜೆಮಾಡುತ್ತಾ ಅನವರತವೂ ಆ ಶಿವನಲ್ಲಿಯೇ ಶರಣುಹೊಂದು. ॥೨೩೩-೨೩೪॥

ಒಂದೂವರೆ ವರ್ಷ ಪರ್ಯಂತವೂ ಹೀಗೆ ಶಿವಪೂಜೆಯನ್ನು ಮಾಡಿ ಅನಂತರ ಶಾಸ್ತ್ರೋಕ್ತವಾಗಿ ಆಲಸ್ಯವಿಲ್ಲದೇ ಉದ್ಯಾಪನೆಮಾಡು. ಅಯ್ಯ ರಾಜೇಂದ್ರನೇ,

ಉದ್ಯಾಪನವಿಧಿಂ ವಕ್ಷ್ಯೇ ಶೃಣು ಸರ್ವಂ ವಿಶೇಷತಃ ।
ಯತ್ಕೃತ್ವೈವಾವಿಲಂಬೇನ ಲಪ್ಸ್ಯಸೇ ಧನಮುತ್ತಮಂ ॥೨೩೬॥

ಉಕ್ತಮೃಲ್ಲಿಂಗಮಾನೇನ ಸೌವರ್ಣಂ ಲಿಂಗಮುತ್ತಮಂ ।
ಸಂಪಾದನೀಯಂ ಯತ್ನೇನ ನವಲಕ್ಷಣಲಕ್ಷಿತಂ ॥೨೩೭॥

ರಾಜತಾನ್ಯಪಿ ಲಿಂಗಾನಿ ತಾದೃಶಾನಿ ಚತುರ್ದಶ ।
ಸಂಪಾದ್ಯ ಹೇಮವೃಷಭಾಃ ಕಾರ್ಯಾಃ ಪಂಚದಶೋತ್ತಮಾಃ ॥೨೩೮॥

ಸೌವರ್ಣಾಯುತವಿಂಶತ್ಯಾ ಕಾರ್ಯಂ ಲಿಂಗಂ ಹಿರಣ್ಮಯಂ ।
ರಾಜತಾನ್ಯಪಿ ಲಿಂಗಾನಿ ತೇನ ಮಾನೇನ ಕಾರಯೇತ್ ॥೨೩೯॥

ಸುವರ್ಣೈರಯುತೈಃ ಕಾರ್ಯಾ ಏಕೈಕೋ ವೃಷಭೇಶ್ವರಃ ।
ಅನ್ಯೂನಾನತಿರಿಕ್ತಾಸ್ತು ವೃಷಭೇಶಾಃ ಪ್ರಕೀರ್ತಿತಾಃ ॥೨೪೦॥

---

ಉದ್ಯಾಪನೆಮಾಡುವ ಸಕಲ ವಿಧಿಗಳನ್ನೂ ವಿಶೇಷವಾಗಿ ನಿನಗೆ ತಿಳಿಸುವೆನು ಕೇಳು. ಆ ಉದ್ಯಾಪನೆಯನ್ನು ಮಾಡಿದ ಕೂಡಲೇ ಸ್ವಲ್ಪವೂ ಸಾವಕಾಶವಿಲ್ಲದೇ ಉತ್ತಮವಾದ ದ್ರವ್ಯವನ್ನು ಪಡೆಯುವೆ. ॥೨೩೫-೨೩೬॥

ಹಿಂದೆ ಹೇಳಿದ ಮಣ್ಣಿನ ಲಿಂಗದ ಪ್ರಮಾಣವನ್ನನುಸರಿಸಿ ಉತ್ತಮವಾದ ಒಂದು ಚಿನ್ನದ ಲಿಂಗವನ್ನು ಒಂಬತ್ತು ಲಕ್ಷಣಗಳಿಂದಲೂ ಯುಕ್ತವಾಗಿರುವಂತೆ ಪ್ರಯತ್ನಪೂರ್ವಕವಾಗಿ ಮಾಡಿಸಬೇಕು. ಅದೇ ಮಾನದಲ್ಲಿರುವ ಹದಿನಾಲ್ಕು ಬೆಳ್ಳಿಯ ಲಿಂಗಗಳನ್ನೂ ಸಂಪಾದಿಸಿ, ಇವುಗಳ ಜತೆಗೆ ಉತ್ತಮವಾದ ಹದಿನೈದು ಚಿನ್ನದ ವೃಷಭಗಳನ್ನು ಮಾಡಿಸಬೇಕು. ॥೨೩೭-೨೩೮॥

ಎರಡುಲಕ್ಷ ತೊಲ ಅಥವಾ ಇತರ ಪರಿಮಾಣವನ್ನನುಸರಿಸಿ ಚಿನ್ನದಿಂದ ಶಿವಲಿಂಗವನ್ನು ಮಾಡಬೇಕು. ಅದೇ ಪ್ರಮಾಣವನ್ನಿಟ್ಟುಕೊಂಡು ಬೆಳ್ಳಿಯಿಂದಲೂ ಲಿಂಗಗಳನ್ನು ಮಾಡಿಸಬೇಕು. ಹತ್ತುಸಾವಿರ ತೊಲ ಪರಿಮಾಣದ ಚಿನ್ನದಿಂದ ಒಂದೊಂದು ವೃಷಭರಾಜನನ್ನು ಮಾಡಿಸಬೇಕು. ಆ ವೃಷಭಗಳೆಲ್ಲಾ ಒಂದೊಂದೂ ಸ್ವಲ್ಪವೂ ವ್ಯತ್ಯಾಸವಿರದಂತೆ ನಿಯಮಬದ್ಧವಾಗಿ ಮಾಡಿಸಬೇಕೆಂದು ಹೇಳಲ್ಪಟ್ಟಿದೆ. ॥೨೩೯-೨೪೦॥

ಏತಾನಿ ಸೋಪಕರಣಾನ್ಯುಪಾದಾಯ ತತಃ ಪರಂ ।
ಗ್ರಾಹ್ಯಾಣಿ ಪಟ್ಟವಸ್ತ್ರಾಣಿ ಶ್ವೇತಾನ್ಯತ್ಯುಜ್ವಲಾನಿ ಚ ॥೨೪೧॥

ತತಶ್ಚ ಶ್ರಾವಣೇ ಮಾಸಿ ಪೌರ್ಣಮಾಸ್ಯಾಂ ವಿಶೇಷತಃ ।
ಉದ್ಯಾಪನಂ ಪ್ರಯತ್ನೇನ ಕರ್ತವ್ಯಂ ವಿಧಿಪೂರ್ವಕಂ ॥೨೪೨॥

ತತ್ಪೂರ್ವೇದ್ಯುಃ ಪ್ರಯತ್ನೇನ ವಿಪ್ರಾಃ ಷೋಡಶ ಶಾಂಕರಾಃ ।
ನಿಮಂತ್ರಣೀಯಾ ವಿಧಿವದರ್ಘ್ಯದಾನಪುರಃ ಸರಂ ॥೨೪೩॥

ಆಚಾರ್ಯಸ್ತತ್ರ ಕರ್ತವ್ಯಸ್ತದನ್ಯಃ ಶೈವಪುಂಗವಃ ।
ತತ್ರ ಬ್ರಹ್ಮಾ ತು ಕರ್ತವ್ಯಸ್ತದನ್ಯಃ ಶಾಂಕರೋತ್ತಮಃ ॥೨೪೪॥

ತತೋ ಲಿಂಗಾನಿ ದುಗ್ಧಾದ್ಯೈರಭಿಷಿಚ್ಯ ಯಥಾವಿಧಿ ।
ಮಂಟಪೇ ಸ್ಥಾಪನೀಯಾನಿ ವಿತಾನಾದ್ಯೈರಲಂಕೃತೇ ॥೨೪೫॥

ರಾತ್ರೌ ಪೂಜಾಪ್ರಯತ್ನಾನಿ ಕರ್ತವ್ಯಾ ವಿಧಿಪೂರ್ವಕಂ ।
ರಾತ್ರೌ ಜಾಗರಣಂ ಕಾರ್ಯಮುಪೋಷಣಪುರಃಸರಂ ॥೨೪೬॥

---

ಇವುಗಳನ್ನೆಲ್ಲಾ ಪರಿಕರಗಳೊಡನೆ ಸಂಗ್ರಹಮಾಡಿದನಂತರ ಶುಭ್ರವಾಗಿಯೂ ಉಜ್ಜ್ವಲವಾಗಿಯೂ ಇರುವ ರೇಷ್ಮೆಯ ಬಟ್ಟೆಗಳನ್ನು ಸಂಪಾದಿಸಬೇಕು. ಇವುಗಳೆಲ್ಲಾ ಆದಮೇಲೆ ಶ್ರಾವಣಮಾಸದ ಹುಣ್ಣಿಮೆದಿನ ವಿಶೇಷ ನಿಯಮದಿಂದ ವಿಧಿಪೂರ್ವಕವಾಗಿ ಉದ್ಯಾಪನಮಾಡಬೇಕು. ॥೨೪೧-೨೪೨॥

ಆದರ ಹಿಂದಿನ ದಿವಸ ಪ್ರಯತ್ನಪೂರ್ವಕವಾಗಿ ಹದಿನಾರು ಜನ ಈಶ್ವರ ಭಕ್ತರನ್ನು ವಿಧಿಪೂರ್ವಕವಾಗಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟನಂತರ ಆಹ್ವಾನ ಮಾಡಬೇಕು. ಹೀಗೆ ಬಂದ ಶಂಕರಭಕ್ತರಲ್ಲಿ ಶಂಕರನ ಭಕ್ತಾಗ್ರೇಸರನಾದ ಒಬ್ಬನನ್ನು ಆಚಾರ್ಯನನ್ನಾಗಿಯೂ ಮತ್ತೊಬ್ಬನನ್ನು ಬ್ರಹ್ಮನನ್ನಾಗಿಯೂ ನಿಯಮಿಸಬೇಕು. ॥೨೪೩-೨೪೪॥

ಆ ಮೇಲೆ ಹಾಲು, ಮೊಸರು ಮೊದಲಾದ ಪಂಚಾಮೃತದ್ರವ್ಯಗಳಿಂದ ವಿಧಿಪೂರ್ವಕವಾಗಿ ಆ ಶಿವಲಿಂಗಗಳಿಗೆ ಅಭಿಷೇಕಮಾಡಿ ಅನಂತರ ಚಪ್ಪರವೇ ಮೊದಲಾದವುಗಳಿಂದಲಂಕೃತವಾದ ಮಂಟಪದಲ್ಲಿ ಸ್ಥಾಪಿಸಬೇಕು. ॥೨೪೫-೨೪೬॥

ತತಃ ಪ್ರಾತಃ ಸಮುತ್ಥಾಯ ಸ್ನಾತ್ವಾ ಪೂಜಾಂ ವಿಧಾಯ ಚ ।
ಬ್ರಾಹ್ಮಣೈಃ ಸಹ ಸರ್ವೈಶ್ಚ ಶಾಂಭವೈರ್ಯತ್ನಪೂರ್ವಕಂ ॥೨೪೭॥

ಮಧ್ವಾಜ್ಯಶರ್ಕರಾಯುಕ್ತಪರಮಾನ್ನೇನ ಸಾದರಂ ।
ಹೋಮಃ ಕಾರ್ಯಃ ಪ್ರಯತ್ನೇನ ಪಂಚಾಕ್ಷರವಿಧಾನತಃ ॥೨೪೮॥

ಪಂಚಲಕ್ಷಂ ಪ್ರಯತ್ನೇನ ಹುತ್ವಾ ತು ಪರಮಾನ್ನತಃ ।
ತತಃ ಸ ಬಿಲ್ವಮಧುನಾ ಹೋಮಸ್ತ್ವಾಸ್ವಿಧೀಯತೇ ॥೨೪೯॥

ತತಃ ಸಕ್ಷೀರಮಧುನಾ ಬಿಲ್ವಪತ್ರಾನ್ವಿತೇನ ಚ ।
ಸಾಜ್ಯಸಕ್ಷೀರಮಧುನಾ ಬಿಲ್ವಪತ್ರಾನ್ವಿತೇನ ಚ ॥೨೫೦॥

ಏವಂ ಹೋಮಃ ಪ್ರಯತ್ನೇನ ಕರ್ತವ್ಯಸ್ತದನಂತರಂ ।
ಲಿಂಗದಾನಾನಿ ಕಾರ್ಯಾಣಿ ಜಾಬಾಲೋಕ್ತವಿಧಾನತಃ ॥೨೫೧॥

ಭೋಜನೀಯಾಃ ಪ್ರಯತ್ನೇನ ತತಃ ಶಾಂಕರಪುಂಗವಾಃ ।
ಸುವರ್ಣಾಯುತಮುತ್ಕೃಷ್ಟಂ ದಕ್ಷಿಣಾತ್ರ ವಿಧೀಯತೇ ॥೨೫೨॥

---

ಅನಂತರ ಬೆಳಗಾಗುತ್ತಲೇ ಎದ್ದು ಸ್ನಾನಮಾಡಿದ ಮೇಲೆ ಪೂಜೆಮಾಡಿ ಈಶ್ವರಭಕ್ತರಾದ ಎಲ್ಲಾ ಬ್ರಾಹ್ಮಣರೊಡನೆ ನಿಯಮದಿಂದ ಜೇನುತುಪ್ಪ, ಸಕ್ಕರೆ ಇವುಗಳಿಂದ ಮಿಶ್ರವಾದ ಪರಮಾನ್ನವನ್ನು ತೆಗೆದುಕೊಂಡು ಶಿವಪಂಚಾಕ್ಷರೀಮಂತ್ರ ವಿಧಿಪ್ರಕಾರವಾಗಿ ಹೋಮಮಾಡಬೇಕು. ॥೨೪೭-೨೪೮॥

ಪರಮಾನ್ನದಿಂದ ಐದುಲಕ್ಷ ಹೋಮವನ್ನು ನಿಯಮದಿಂದ ಮಾಡಿ, ಅನಂತರ ಬಿಲ್ವಪತ್ರೆಯೊಡನೆ ಜೇನುತುಪ್ಪವನ್ನು ಹೋಮಮಾಡಬೇಕು. ಆಮೇಲೆ ಹಾಲು, ಜೇನು, ಬಿಲ್ವಪತ್ರೆ ಇವುಗಳನ್ನು ಸಮರ್ಪಣೆಮಾಡಬೇಕು. ಅದಾದಮೇಲೆ ತುಪ್ಪ, ಹಾಲು, ಜೇನು ಇವುಗಳೊಡನೆ ಬಿಲ್ವಪತ್ರೆಗಳನ್ನು ಹೋಮಮಾಡಬೇಕು. ॥೨೪೯-೨೫೦॥

ಹೀಗೆ ನಿಯಮದಿಂದ ಹೋಮವನ್ನು ಮಾಡಿದಮೇಲೆ ಜಾಬಾಲ ಮಹರ್ಷಿಯು ಹೇಳಿರುವ ವಿಧಿಯಂತೆ ಶಿವಲಿಂಗಗಳನ್ನು ದಾನಮಾಡಬೇಕು. ಅನಂತರ ಭಕ್ತರಿಗೆ ಸಂತೋಷವಾಗುವಂತೆ ಭೋಜನಮಾಡಿಸಬೇಕು. ಈ ಶಿವಲಿಂಗದಾನಕ್ಕೆ ಹತ್ತುಸಾವಿರ ಹೊನ್ನುಗಳ ದಕ್ಷಿಣೆ ಉತ್ಕೃಷ್ಟವೆಂದು ಹೇಳಿದೆ. ॥೨೫೧-೨೫೨॥

ವೃಷಭಾನ್ವಿತಲಿಂಗಾನಿ ದತ್ವಾ ವಸ್ತ್ರಾಣಿ ಚಾದರಾತ್ ।
ಸ್ವಕೃತಂ ಕರ್ಮ ಕರ್ತವ್ಯಂ ಮಹಾದೇವಾರ್ಪಣಂ ತತಃ ॥೨೫೩॥

ಏವಂ ಕರೋತಿ ಯಃ ಸಮ್ಯಙ್ಮಹಾದೇವಸ್ಯ ಪೂಜನಂ ।
ತೇನೈವ ನಿಧಯಃ ಪ್ರಾಪ್ಯಾ ನವಾಪ್ಯಾಶು ನ ಸಂಶಯಃ ॥೨೫೪॥

॥ ಕಾಟಕೋಟರ ಉವಾಚ ॥

ಏವಮುಕ್ತೋ ಹಿಮವತಾ ಸ ಚಕಾರ ತದಾವ್ರತಂ ।
ತತಃ ಕುಬೇರಃ ಸಂಪ್ರಾಪ್ಯ ಶೀಘ್ರಂ ಸ ನಿಧಯೋ ನವ ॥೨೫೫॥

ತದಾ ಪ್ರಭೃತಿ ಯತ್ನೇನ ಕುಬೇರಃ ಶಿವಪೂಜನಂ ।
ಸಪ್ತವಾರಂ ಪ್ರಯತ್ನೇನ ಕರ್ತುಂ ಸಮುಪಚಕ್ರಮೇ ॥೨೫೬॥

ಅತಃ ಪಾರ್ಥಿವ ಯತ್ನೇನ ಭವಾನಪಿ ಶಿವಾರ್ಚನಂ ।
ಕುರು ಯತ್ನೇನ ಸತತಂ ಬಿಲ್ವಪತ್ರಾದಿಸಾಧನೈಃ ॥೨೫೭॥

---

ವೃಷಭಗಳನ್ನೂ, ಶಿವಲಿಂಗಗಳನ್ನೂ, ವಸ್ತ್ರಗಳೊಡನೆ ಆದರದಿಂದ ದಾನ ಮಾಡಿ ಅನಂತರ ತಾನು ಈ ರೀತಿಯಾಗಿ ಮಾಡಿರುವ ಕರ್ಮಗಳನ್ನು ಶ್ರೀಮಹಾದೇವನಿಗೆ ಸಮರ್ಪಣೆಮಾಡಬೇಕು. ಹೀಗೆ ವಿಧಿಯನ್ನನುಸರಿಸಿ ಭಕ್ತಿಯಿಂದ ಮಹಾದೇವನನ್ನು ಪೂಜೆಮಾಡಿದವನಿಗೆ ನವನಿಧಿಗಳೂ (ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರ,) ಖಂಡಿತವಾಗಿ ಜಾಗ್ರತೆ ದೊರೆಯುವುದರಲ್ಲಿ ಸಂದೇಹವೇ ಇಲ್ಲವೆಂದು ಹಿಮವಂತನು ಕುಬೇರನಿಗೆ ಹೇಳಿದನು. ||೨೫೩-೨೫೪||

ಹೀಗೆ ಹಿಮವಂತನಿಂದ ಹೇಳಲ್ಪಟ್ಟವನಾಗಿ ಆ ಕುಬೇರನು ಶೈವವ್ರತವನ್ನು ಮಾಡಿ ಕೂಡಲೇ ನವನಿಧಿಗಳನ್ನೂ ಹೊಂದಿದನು. ಅದು ಮೊದಲುಗೊಂಡು ಕುಬೇರನು ನಿಯಮದಿಂದ ಪ್ರತಿದಿನವೂ ಏಳುಸಲ ಶಿವಪೂಜೆಮಾಡಲು ಪ್ರಾರಂಭಿಸಿದನೆಂದು ಕಾಟಕೋಟರನು ಆ ರಾಜನಿಗೆ ತಿಳಿಸಿ, ||೨೫೫-೨೫೬||

ಅಯ್ಯ ರಾಜನೇ, ನೀನೂ ಕೂಡ ನಿಯಮದಿಂದ ಭಕ್ತಿಪೂರ್ವಕವಾಗಿ ಯಾವಾಗಲೂ ಬಿಲ್ವಪತ್ರೆ ಮೊದಲಾದ ಪೂಜಾಸಾಧನಗಳಿಂದ ಶಿವಲಿಂಗವನ್ನು

ಸರ್ವದಾ ಶಂಕರಸ್ಯೈವ ಕುರು ಧ್ಯಾನಂ ಪ್ರಯತ್ನತಃ ।
ನಿರೀಕ್ಷಯ ಪ್ರಯತ್ನೇನ ಪೂಜಿತಂ ಶ್ರೀಮಹೇಶ್ವರಂ ॥೨೫೮॥

ಜಪ ಪಂಚಾಕ್ಷರಂ ಮಂತ್ರಮಪ್ರಮಾದೇನ ಸಾದರಂ ।
ತೇನ ಸರ್ವಾರ್ಥಸಿದ್ಧಿಸ್ತೇ ಭವಿಷ್ಯತಿ ನ ಸಂಶಯಃ ॥೨೫೯॥

ಕ್ಷಣಾರ್ಧಮಪಿ ರಾಜೇಂದ್ರ ಶಂಕರಧ್ಯಾನವರ್ಜಿತಂ ।
ಮಾಕುರುಷ್ವೋಪದೇಶೋಽಯಂ ಸರ್ವಾರ್ಥಫಲದಾಯಕಃ॥೨೬೦॥

ಸರ್ವಸಾಧಾರಣಾ ಧರ್ಮಾ ಇದಾನೀಂ ಮದುದೀರಿತಾಃ ।
ರಾಜಧರ್ಮೇಣ ಸತತಂ ಪಾಲಯಸ್ವ ಸ್ವಕಾಃ ಪ್ರಜಾಃ ॥೨೬೧॥

॥ ಯಮ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ರಾಜಾ ವಿನಯಪೂರ್ವಕಂ ।
ಶೈವಂ ಸಂಪೂಜ್ಯ ಯತ್ನೇನ ಜಗಾಮ ನಗರಂ ಪ್ರತಿ ॥೨೬೨॥

---

ಪೂಜೆಮಾಡು. ಯಾವಾಗಲೂ ಆ ಶಂಕರನನ್ನೇ ನಿಯಮದಿಂದ ಧ್ಯಾನಮಾಡು. ಹಾಗೆ ಪೂಜೆಮಾಡಿರುವ ಮಹೇಶ್ವರನನ್ನು ಅವಶ್ಯವಾಗಿ ದರ್ಶನಮಾಡುವನಾಗು. ॥೨೫೭-೨೫೮॥

ಪ್ರಮಾದವಿಲ್ಲದೇ ಶಿವಪಂಚಾಕ್ಷರಮಂತ್ರವನ್ನು ಆದರದಿಂದ ಜಪಮಾಡು. ಇದರಿಂದ ಸಂಶಯವಿಲ್ಲದೇ ನಿನಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು. ಅಯ್ಯ ರಾಜೇಂದ್ರನೇ, ಅರ್ಧಕ್ಷಣ ಕಾಲವನ್ನಾದರೂ ನೀನು ಆ ಶಂಕರನ ಧ್ಯಾನವಿಲ್ಲದೇ ಕಳೆಯಬೇಡ. ಈ ನನ್ನ ಉಪದೇಶವು ಸಕಲಮನೋರಥಗಳನ್ನೂ ಈಡೇರಿಸುವು ದೆಂದು ನಂಬು. ॥೨೫೯-೨೬೦॥

ಅಯ್ಯ ರಾಜನೇ, ಈಗ ನಾನು ನಿನಗೆ ಹೇಳಿರುವ ಧರ್ಮಗಳು ಸರ್ವ ಸಾಮಾನ್ಯವೆಂದು ತಿಳಿಯುವನಾಗು. ನೀನು ರಾಜನಾದುದರಿಂದ ಯಾವಾಗಲೂ ನಿನ್ನ ರಾಜಧರ್ಮವನ್ನನುಸರಿಸಿ ನಿನ್ನ ಪ್ರಜೆಗಳನ್ನು ಪಾಲನೆಮಾಡೆಂದು ಕಾಟ ಕೋಟರನು ರಾಜನಿಗೆ ವಿವೇಕ ಹೇಳಿದನು. ॥೨೬೧॥

ಹೀಗೆ ನುಡಿದ ಕಾಟಕೋಟರನ ಮಾತುಗಳನ್ನು ಕೇಳಿ ರಾಜನು ವಿನಯ ಪೂರ್ವಕವಾಗಿ ಆತನನ್ನು ನಿಯಮದಿಂದ ಪೂಜೆಮಾಡಿ ತನ್ನ ಪಟ್ಟಣಕ್ಕೆ

ತಸ್ಯ ಶೈವಸ್ಯ ಜನಕಃ ಶಿವದ್ರೋಹವಶಾದಿಹ ।
ಪತಿತೋ ಭೂರಿದುಃಖಾನಿ ಭುಕ್ತ್ವಾ ತಿಷ್ಠತಿ ದುಃಖಿತಃ ॥೨೬೩॥

ಅನೇನ ಚರಣೌ ದತ್ತ್ವಾ ಶಿವಲಿಂಗೋಪರಿ ಭ್ರಮಾತ್ ।
ತಾವತಾಽಪ್ಯನುಭೂಯಂತೇ ದುಃಖಾನ್ಯೇತಾನಿ ಸರ್ವದಾ ॥೨೬೪॥

ಧ್ಮಾಯಮಾನಾಗ್ನಿಕುಂಡಸ್ಥೋ ದ್ರಷ್ಟವ್ಯೋ ಮನ್ಮಥಸ್ತ್ವಯಾ ।
ಸ್ತಂಭಂ ದಂದಹ್ಯಮಾನಂ ತಂ ಸಮಾಲಿಂಗ್ಯಾಧಿತಿಷ್ಠತಿ ॥೨೬೫॥

ಮನ್ಮಥೋಽಯಂ ತಾಡ್ಯತೇ ಹಿ ಸಂತಪ್ತಾಯಸಶೃಂಖಲೈಃ ।
ಕಶಾಭಿಸ್ತಾಡ್ಯತೇ ತಪ್ತೈರ್ವಕ್ರೈರ್ದೀರ್ಘೈಶ್ಚ ದಾರುಣೈಃ ॥೨೬೬॥

ಭಿಂಡಿಪಾಲೈಸ್ತಾಡಯಂತೇ ತಪ್ತೈರತ್ಯಂತಮುನ್ನತೈಃ ।
ಸಂತಪ್ತಾಯಸಪಿಂಡೈಶ್ಚ ತಾಡ್ಯತೇ ದುಃಖದಾಯಕೈಃ ॥೨೬೭॥

---

ಹಿಂತಿರುಗಿದನು. ಆ ಕಾಟಕೋಟರನ ತಂದೆಯು ತಾನು ಮಾಡಿದ ಶಿವದ್ರೋಹದ ದೆಸೆಯಿಂದ ಈ ನರಕದಲ್ಲಿ ಬಿದ್ದು ಅನೇಕ ದುಃಖಗಳನ್ನನುಭವಿಸಿ ನರಳುತ್ತಿರುವನು. ||೨೬೨-೨೬೩||

ಈತನು ಭ್ರಾಂತಿಯಿಂದ ಶಿವಲಿಂಗದ ಮೇಲೆ ಕಾಲುಗಳನ್ನಿಟ್ಟನು. ಇಷ್ಟರಿಂದಲೇ ಇವನು ಯಾವಾಗಲೂ ಈ ದುಃಖಗಳನ್ನನುಭವಿಸುತ್ತಿರುವನು. ಎಲೈ ಇಂದ್ರನೇ, ಹೊಗೆಯಾಡುತ್ತಿರುವ ಅಗ್ನಿಕುಂಡದಲ್ಲಿ ಬಿದ್ದಿರುವ ಈ ಮನ್ಮಥನನ್ನು ನೋಡು. ಚೆನ್ನಾಗಿ ಉರಿಯುತ್ತಿರುವ ಕಂಬವನ್ನು ತಬ್ಬಿಕೊಂಡು ನಿಂತಿರುವನು. ||೨೬೪-೨೬೫||

ಈ ಮನ್ಮಥನು ಕೆಂಪಾಗಿ ಕಾದ ಕಬ್ಬಿಣದ ಸರಪಳಿಗಳಿಂದ ಕಟ್ಟಲ್ಪಡುತ್ತಿರುವನು. ಚೆನ್ನಾಗಿ ಕಾದಿರುವ ವಕ್ರವೂ, ದೀರ್ಘವೂ, ತುಂಬಾ ಭಯಂಕರವೂ ಆದ ಚಾವಟಿಗಳಿಂದ ಇವನನ್ನು ನನ್ನ ಭಟರು ಹೊಡೆಯುತ್ತಿರುವರು. ಅಲ್ಲದೇ ಕಾದಿರುವ ದಪ್ಪವಾದ ಭಿಂಡಿಪಾಲಾಯುಧಗಳಿಂದಲೂ, ದುಃಖಪ್ರದವಾದ ಕಾದ ಕಬ್ಬಿಣದ ಗುಂಡುಗಳಿಂದಲೂ ಇವನು ಚೆನ್ನಾಗಿ ಶಿಕ್ಷಿಸಲ್ಪಡುತ್ತಿರುವನು. ||೨೬೬-೨೬೭||

ಕಥಂ ವಾ ತಪ್ತಶೂಲಾಗ್ರ್ಯೈಃ ಪ್ರೋಥಿತೋಽಸ್ತ್ಯತಿದಾರುಣೈಃ ।
ಕಥಂ ವಾ ತಪ್ತತೈಲೇನ ಸಿಚ್ಯತೇ ದುಃಸಹೇನ ಚ ॥೨೬೮॥

ಅನ್ಯದೇವಸಮೋ ರುದ್ರೋ ನ ರುದ್ರೋ ದೇವಕೋತ್ತಮಃ ।
ಇತ್ಯುವಾಚ ಪುರಾ ಕಾಮಸ್ತಸ್ಯೇದಂ ಕರ್ಮಣಃ ಫಲಂ ॥೨೬೯॥

ಸರ್ವದೇವಾಧಿದೇವೇಶಂ ಶಿವಂ ಯೋ ಮನುತೇಽನ್ಯಥಾ ।
ತೇನೈವಮೇವ ದುಃಖಾನಿ ಪ್ರಾಪ್ತವ್ಯಾನಿ ನ ಸಂಶಯಃ ॥೨೭೦॥

ಮಹಾವಿಷ್ಣುಪ್ರಿಯತಮಃ ಶಂಬರಾರಿಸ್ತಥಾಪ್ಯಯಂ ।
ಭುಕ್ತ್ವಾ ಘೋರಾಣಿ ನರಕಾಣ್ಯತ್ರ ತಿಷ್ಠತಿ ಸರ್ವದಾ ॥೨೭೧॥

ನರಕೇ ಪತಿತಂ (ದೃಷ್ಟ್ವಾ) ಶ್ರುತ್ವಾ ಮನ್ಮಥಂ ಕಮಲಾ ಪುರಾ ।
ದುಃಖಾದ್ವಿಷ್ಣುಮುವಾಚೇದಂ ವಚನಂ ಸಾ ರುದನ್ಮುಖಂ ॥೨೭೨॥

---

ಈತನು ಭಯಂಕರವಾದ ಕಾದ ಶೂಲಾಯುಧದ ಮೊನೆಗಳಿಂದ ಹೇಗೆ ಚುಚ್ಚಲ್ಪಟ್ಟು, ಪೋಣಿಸಲ್ಪಟ್ಟಿರುವನು ನೋಡು. ಸಹಿಸಲಸಾಧ್ಯವಾದ ಕಾದ ಎಣ್ಣೆಯನ್ನು ಮೇಲೆ ಎರಚುತ್ತಿರುವುದರಿಂದ ಹೇಗೆ ಸಂಕಟ ಪಡುತ್ತಿರುವನು ನೋಡು. ಹಿಂದೆ ಈ ಮನ್ಮಥನು, ರುದ್ರನು ಇತರ ವಿಷ್ಣ್ವಾದಿ ದೇವತೆಗಳಿಗೆ ಸಮಾನನೆಂದೂ, ದೇವತೋತ್ತಮನಲ್ಲವೆಂದೂ ಹೇಳಿದ್ದನು. ಅದರ ಫಲವಾಗಿ ಈತನು ಈ ರೀತಿಯಾದ ಘೋರ ನರಕವಾಸರೂಪವಾದ ಫಲವನ್ನನುಭವಿಸುತ್ತಿರುವನು. ॥೨೬೮-೨೬೯॥

ಸಕಲ ದೇವತೆಗಳನ್ನೂ ತನ್ನ ಆಶ್ರಿತರನ್ನಾಗಿ ಮಾಡಿಕೊಂಡು ಸರ್ವೇಶ್ವರನೆನಿಸಿರುವ ಆ ಮಹೇಶ್ವರನನ್ನು ವಿಪರೀತವಾಗಿ (ಇತರ ದೇವತೆಗಳಿಗೆ ಸಮಾನನೆಂದು) ತಿಳಿಯುವವರೆಲ್ಲರೂ ಈ ರೀತಿಯಾದ ದುಃಖಗಳನ್ನು ಅವಶ್ಯವಾಗಿ ಅನುಭವಿಸುವುದರಲ್ಲಿ ಸಂಶಯವೇ ಇಲ್ಲ. ಈ ಮನ್ಮಥನು, ಮಹಾವಿಷ್ಣುವಿಗೆ ತುಂಬಾ ಪ್ರೀತಿಪಾತ್ರನು. ಶಂಬರಾಸುರನ ಶತ್ರುವು. ಹಾಗಿದ್ದರೂ ಈತನೂ ಶಿವದ್ರೋಹದಿಂದ ಭಯಂಕರವಾದ ನರಕಗಳನ್ನನುಭವಿಸುತ್ತಾ ಇರುವನು. ॥೨೭೦-೨೭೧॥

ತನ್ನ ಮುದ್ದಿನ ಮಗನಾದ ಮನ್ಮಥನು ಹೀಗೆ ನರಕದಲ್ಲಿ ಬಿದ್ದು ನರಳುತ್ತಿರುವನೆಂದು ಕೇಳಿ, ಲಕ್ಷ್ಮೀದೇವಿಯು ದುಃಖದಿಂದ ಅಳುತ್ತಾ ತನ್ನ ಪತಿಯಾದ ಮಹಾವಿಷ್ಣುವನ್ನು ಕುರಿತು ಹಿಂದೊಮ್ಮೆ ಹೀಗೆ ಮಾತನಾಡಿದಳು. ॥೨೭೨॥

ತವ ಪ್ರಿಯತಮೋ ಮಾರೋ ನರಕೇ ಪತಿತೋ ಹರೇ ।
ತಮುದ್ಧರಾತಿಯತ್ನೇನ ಮಮ ದುಃಖಂ ನಿವಾರಯ ॥೨೭೩॥

ಇತಿ ತದ್ವಚನಂ ಶ್ರುತ್ವಾ ಸ ಲಕ್ಷ್ಮೀರಮಣೋಽಬ್ರವೀತ್ ।
ದುಃಖಂ ಮಾಕುರು ಮುಗ್ಧೇತಿ ಪುನರನ್ಯದುವಾಚ ಚ ॥೨೭೪॥

ಅಸ್ಮದಾದಿಸಮತ್ವೇನ ಶಿವಂ ವೇದ ಸ ಮನ್ಮಥಃ ।
ದೇವಾಧಿದೇವಃ ಸ ಶಿವಃ ಸೋಽಸ್ಮತ್ತುಲ್ಯಃ ಕಥಂ ಭವೇತ್ ॥೨೭೫॥

ಅಹಂ ತು ದೇವದೇವಸ್ಯ ಮಹಾದೇವಸ್ಯ ಸೇವಕಃ ।
ಮತ್ತುಲ್ಯಃ ಸ ಕಥಂ ಭೂಯಾಚ್ಛಿವೋ ದೇವಶಿಖಾಮಣಿಃ ॥೨೭೬॥

ಸೇವಕಾದಧಿಕಃ ಸೇವ್ಯಃ ಸರ್ವಸೇವ್ಯೋ ಮಹೇಶ್ವರಃ ।
ತಥಾ ಚ ಸೇವಕಾನ್ಮತ್ತೋ ಮಹಾನೇವ ಮಹೇಶ್ವರಃ ॥೨೭೭॥

---

ವಿಷ್ಣುದೇವನೇ, ನಿನ್ನ ಪ್ರೀತಿಪಾತ್ರನಾದ ಮನ್ಮಥನು ನರಕದಲ್ಲಿ ಬಿದ್ದು ನರಳು ತ್ತಿರುವನು. ತುಂಬಾ ಪ್ರಯಾಸಪಟ್ಟಾದರೂ ಆವನನ್ನು ನರಕದಿಂದ ಉದ್ಧಾರ ಮಾಡಿ ನನ್ನ ದುಃಖವನ್ನು ಶಾಂತಿಗೊಳಿಸು, ಎಂದು ಹೇಳಲು ಆ ಮಾತನ್ನು ಕೇಳಿ ಲಕ್ಷ್ಮೀಕಾಂತನಾದ ವಿಷ್ಣುವು, ಸುಂದರಾಂಗಿಯೇ, ದುಃಖ ಪಡಬೇಡವೆಂದು ಸಮಾಧಾನ ಮಾಡಿ, ಬೇರೆಯ ರೀತಿಯಿಂದ ಅವಳಿಗೆ ನಿಜವಾದ ವಿಷಯವನ್ನು ತಿಳಿಸಲು ಹೀಗೆ ನುಡಿದನು. ॥೨೭೩-೨೭೪॥

"ಆ ಮನ್ಮಥನು ಪರಶಿವನನ್ನು ನಮ್ಮಗಳಿಗೆ ಸಮಾನನೆಂದು ತಿಳಿದನು. ದೇವಾಧಿದೇವನಾದ ಆ ಶಿವನು ಹೇಗೆತಾನೇ ನಮಗೆ ಸರಿಸಮನೆನಿಸಿಯಾನು? ನಾನಾದರೋ ಸಕಲ ದೇವತೆಗಳಿಗೂ ದೇವನೆನಿಸಿರುವ ಮಹಾದೇವನ ಸೇವಕನು. ಹೀಗಿರುವಾಗ ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವ ಪರಮಶಿವನು ನನಗೆ ಹೇಗೆ ಸಮನಾಗುವನು? ॥೨೭೫-೨೭೬॥

ಸೇವೆಮಾಡಿಸಿಕೊಳ್ಳಬಲ್ಲ ಸ್ವಾಮಿಯು ಸೇವಕನಿಗಿಂತಲೂ ಉತ್ತಮನಲ್ಲವೇ! ಆ ಮಹೇಶ್ವರನು ಸಕಲರಿಂದಲೂ ಪೂಜಿಸಲ್ಪಡತಕ್ಕವನು. ಆದ್ದರಿಂದ ಸೇವಕನಾದ ನನಗಿಂತಲೂ ಆ ಮಹೇಶ್ವರನು ದೊಡ್ಡವನೇಸರಿ. ಆ ಶಿವನೇ ಮಹೇಶ್ವರನೆಂದು

ಮಹೇಶ್ವರ ಇತಿಖ್ಯಾತಃ ಶಿವ ಏವ ತಥಾ ಸತಿ ।
ಸೋಽಸ್ಮತ್ತುಲ್ಯಃ ಕಥಂ ಭೂಯಾತ್ಸರ್ವದೇವಮಹೇಶ್ವರಃ ॥೨೭೮॥

ಬ್ರಹ್ಮೇಂದ್ರಪ್ರಮುಖಾ ದೇವಾಃ ಶಂಕರಸ್ಯೈವ ಸೇವಕಾಃ ।
ತತಸ್ತತ್ತುಲ್ಯತಾಂ ಶಂಭೌ ಕಥಂ ಭವತಿ ತದ್ವದ ॥೨೭೯॥

ಸೇವ್ಯಂ ಸೇವಕತುಲ್ಯಂ ಚೇನ್ಮನುತೇ ಮೋಹತಸ್ತದಾ ।
ಸ ಸೇವಕೋ ದಂಡನೀಯಃ ಸೇವ್ಯೇನ ಭವತಿ ಧ್ರುವಂ ॥೨೮೦॥

ವಯಂ ಬ್ರಹ್ಮಾದಯೋ ದೇವಾ ನಿತ್ಯಂ ಯದ್ದ್ವಾರಿ ಕಿಂಕರೈಃ ।
ತಾಡ್ಯಂತೇ ತೇನ ದೇವೇನ ಸಮಾಃ ಸ್ಯಾಮಃ ಕಥಂ ಪ್ರಿಯೇ ॥೨೮೧॥

ಅಸ್ಮಾನ್ನ ಗಣಯತ್ಯೇವ ಕೋಽಪಿ ಶಂಕರಕಿಂಕರಃ ।
ತಾದೃಶಃ ಶಂಕರೋಽಸ್ಮಾಭಿಃ ಕಥಂ ತುಲ್ಯೋ ಭವಿಷ್ಯತಿ ॥೨೮೨॥

---

(ಅಪಾರವಾದ ಐಶ್ವರ್ಯವುಳ್ಳವನು) ಪ್ರಸಿದ್ಧನಾಗಿರುವನು. ಹೀಗಿರುವಾಗ ದೇವ ತೋತ್ತಮನಾದ ಆ ಮಹೇಶ್ವರನು ನನಗೆ ಸಮಾನನೆಂದು ಹೇಳುವುದು ಹೇಗೆ ಸರಿಯಾದೀತು? ॥೨೭೭-೨೭೮॥

ಬ್ರಹ್ಮ, ಇಂದ್ರ, ಮುಂತಾದ ದೇವತೆಗಳೂ ಆ ಶಂಕರನ ಕಿಂಕರರೇ ಆಗಿರುವರು. ಹೀಗಿರುವಾಗ ಆ ಬ್ರಹ್ಮಾದಿಗಳುತಾನೇ ಆ ಶಂಕರನಿಗೆ ಹೇಗೆ ಸಮನಾಗುವರು? ಸೇವಾರ್ಹನಾದ ಸ್ವಾಮಿಯನ್ನು ಅಜ್ಞಾನದಿಂದ ಸೇವಕನ ಸರಿಸಮಾನಸ್ಥನೆಂದು ಹೇಳುವ ಆ ಸೇವಕನು ತನ್ನ ಸ್ವಾಮಿಯಿಂದ ನಿಶ್ಚಯವಾಗಿ ಶಿಕ್ಷೆಹೊಂದದೇ ಇರುವನೆ! ॥೨೭೯-೨೮೦॥

ಪ್ರೇಯಸಿ, ನಾನೂ ಬ್ರಹ್ಮಾದಿ ದೇವತೆಗಳೂ ಸಹ ಆ ದೇವದೇವನ ಮನೆಯ ಬಾಗಿಲಿನಲ್ಲಿ ನಿತ್ಯವೂ ಆ ಮಹಾದೇವನ ಸಂದರ್ಶನಕ್ಕೆ ಹೋಗುವಾಗ ಅವನ ಭಟರು ನಮ್ಮನ್ನು ಹೊಡೆದು ಹಿಂದಕ್ಕಟ್ಟುತ್ತಿರುವರು. ಹೀಗಿರುವಾಗ ನಾವುಗಳು ಆ ದೇವದೇವನಿಗೆ ಹೇಗೆತಾನೇ ಸಮಾನರೆನಿಸುವೆವು? ॥೨೮೧॥

ಆ ಶಂಕರನ ಯಾವ ಒಬ್ಬ ಸೇವಕನೂ ನಮ್ಮನ್ನು ಗಣನೆ ಮಾಡುವುದಿಲ್ಲ. ಹೀಗಿರುವಾಗ ಇಂತಹ ಅನೇಕ ಗಣಗಳಿಗೆ ಅಧಿಪತಿಯಾದ ಆ ಶಂಕರನು ನಮಗೆ

ಮನ್ಮಥಃ ಸ ಮಹಾದೇವಮಸ್ಮತ್ತುಲ್ಯಮಮನ್ಯತ ।
ಅತಸ್ತೇನೈವ ಪಾಪೇನ ನರಕೇ ಪತಿತೋ ಧ್ರುವಂ ॥೨೮೩॥

ಪ್ರಾಪ್ತಂ ಯತ್ಪೂಜಯಾಽಸ್ಮಾಭಿರ್ದೇವತ್ವಂ ಕಮಲೇಽಮಲೇ ।
ತೇನ ದೇವೇನ ತುಲ್ಯತ್ವಂ ಕಥಮಸ್ಮಾಸು ತದ್ವದ ॥೨೮೪॥

ಯೋಽನ್ಯತುಲ್ಯತಯಾ ವೇದ ಭ್ರಮೇಣಾಪಿ ಮಹೇಶ್ವರಂ ।
ಸ ಘೋರನರಕಾವಾಸಂ ಪ್ರಾಪ್ನೋತ್ಯೇವ ನ ಸಂಶಯಃ ॥೨೮೫॥

ತದುದ್ಧಾರಾಯ ಯತ್ನೋಽಪಿ ಮಯಾ ಕರ್ತುಂ ನ ಶಕ್ಯತೇ ।
ಕೃತೋಽಪಿ ವಿಫಲೋ ಯತ್ನೋ ಭವಿಷ್ಯತಿ ನ ಸಂಶಯಃ ॥೨೮೬॥

ಪತಿತೋ ಯಮಹಸ್ತೇ ಯಃ ಶ್ರೀಮಹಾದೇವನಿಂದಕಃ ।
ನ ತಸ್ಯ ನಿರ್ಗಮಸ್ತಸ್ಮಾತ್ಕಲ್ಪಕೋಟ್ಯರ್ಬುದೈರಪಿ ॥೨೮೭॥

---

ಹೇಗೆ ಸಮನಾದಾನು? ನಮ್ಮ ಮನ್ಮಥನು ಆ ಮಹಾದೇವನನ್ನು ನಮಗೆ ಸಮಾನನೆಂದು ತಿಳಿದ ಪಾಪದಿಂದಲೇ ಅವನು ನರಕದಲ್ಲಿ ಬಿದ್ದು ದುಃಖದಿಂದ ನರಳುತ್ತಿರುವನು. ॥೨೮೨-೨೮೩॥

ಪಾವನಳಾದ ಶ್ರೀದೇವಿಯೇ, ನಾವೆಲ್ಲರೂ ದೇವತಾಪದವಿಯನ್ನು ಯಾವ ಮಹಾದೇವನನ್ನು ಪೂಜೆಮಾಡಿ ಹೊಂದಿರುವೆವೋ ಆ ದೇವದೇವನ ಸಾಮ್ಯವು ನಮ್ಮಲ್ಲಿ ಹೇಗೆತಾನೆ ಉಂಟಾದೀತು? ನೀನೇ ಹೇಳು. ಭ್ರಾಂತಿಯಿಂದಲಾದರೂ ಆ ಮಹೇಶ್ವರನನ್ನು ಇತರ ಸಾಮಾನ್ಯದೇವತೆಗಳಿಗೆ ಸಮಾನನೆಂದು ಹೇಳುವವನು ತಪ್ಪದೇ ಭಯಂಕರವಾದ ನರಕವಾಸವನ್ನು ಹೊಂದುವುದರಲ್ಲಿ ಸಂಶಯವೇ ಇಲ್ಲ. ॥೨೮೪-೨೮೫॥

ಅವನನ್ನು ಉದ್ಧಾರ ಮಾಡುವುದಕ್ಕೋಸ್ಕರ ನಾನು ಯಾವ ಪ್ರಯತ್ನವನ್ನು ಮಾಡಲೂ ಸಾಧ್ಯವಿಲ್ಲ. ಒಂದುವೇಳೆ ಪ್ರಯತ್ನಪಟ್ಟರೂ ಅದು ಸಂಶಯವಿಲ್ಲದೇ ನಿಷ್ಫಲವಾಗುವುದು. ಯಮನ ಕೈಯ್ಯಲ್ಲಿ ಸಿಕ್ಕಿದ ಮಹಾದೇವ ನಿಂದಕನಿಗೆ ಅನೇಕ ಕೋಟಿ ವರ್ಷಗಳಾದರೂ ಬಿಡುಗಡೆಯೇ ಇಲ್ಲ. ॥೨೮೬-೨೮೭॥

ಯಮಸ್ತು ದೇವದೇವಸ್ಯ ಮಹಾದೇವಸ್ಯ ಕಿಂಕರಃ ।
ಸ ಕಿಂ ಮದ್ವಚನಂ ಶ್ರುತ್ವಾ ಯಾತನಾಂ ನ ಕರಿಷ್ಯತಿ ॥೨೮೮॥

ಶಾಸನೀಯಃ ಪ್ರಯತ್ನೇನ ಪುತ್ರೋಽಪಿ ಶಿವನಿಂದಕಃ ।
ಸ ಶಾಸನೀಯ ಏವಾತಃ ಪಾಲನೀಯೋ ನ ತಾದೃಶಃ ॥೨೮೯॥

ತದುದ್ಧಾರಾಯ ಯತ್ನಶ್ಚೇತ್ಕ್ರಿಯತೇಽದ್ಯ ಮಯಾ ಪ್ರಿಯೇ ।
ತದಾ ಮಯಾಪಿ ತೇನೈವ ಸಹ ಸ್ಥೇಯಂ ಭವಿಷ್ಯತಿ ॥೨೯೦॥

ತದುದ್ಧಾರಾರ್ಥಮುದ್ಯುಕ್ತಂ ವಿಷ್ಣುಂ ಮಾಂ ಸ ಯಮಃ ಪ್ರಿಯೇ ।
ಅಶೈವೋಽಯಮಿತಿ ಜ್ಞಾತ್ವಾ ಗ್ರಹೀಷ್ಯತ್ಯೇವ ಸರ್ವಥಾ ॥೨೯೧॥

ಗೃಹೀತ್ವಾ ಸ ತು ಕಾಲೋ ಮಾಂ ಮೋಚಯಿಷ್ಯತಿ ನ ಧ್ರುವಂ ।
ತದ್ಧಸ್ತೇ ಪತಿತಃ ಕೋಽಪಿ ನ ಮುಕ್ತೋಽದ್ಯಾಪಿ ದೃಶ್ಯತೇ ॥೨೯೨॥

---

ಯಮನಾದರೋ ದೇವಾದಿದೇವನಾದ ಆ ಮಹಾದೇವನ ಕಿಂಕರನು. ಆತನು ನನ್ನ ಮಾತನ್ನು ಕೇಳಿ ನಿನ್ನ ಕುಮಾರನಿಗೆ ಯಾತನೆಗಳನ್ನು ಕೊಡದೇ ಇರಬಲ್ಲನೇ ? ಶಿವನಿಂದೆಯನ್ನು ಮಾಡುವವನು ಮಗನೇ ಆಗಿದ್ದರೂ ಅವಶ್ಯವಾಗಿ ಆತನನ್ನು ಶಿಕ್ಷೆ ಮಾಡಲೇಬೇಕು. ಶಿಕ್ಷಾರ್ಹನಾದುದರಿಂದ ಅಂತಹ ಶಿವನಿಂದಕ ನನ್ನು ಎಂದಿಗೂ ರಕ್ಷಣೆ ಮಾಡಬಾರದು. ॥೨೮೮-೨೮೯॥

ಪ್ರಿಯೇ, ಅವನನ್ನು ಉದ್ಧಾರ ಮಾಡುವುದಕ್ಕೋಸ್ಕರ ನಾನು ಈಗ ಪ್ರಯತ್ನಪಡುವುದಾದರೆ ನಾನೂ ಅವನೊಡನೆ ನರಕದಲ್ಲಿಯೇ ಇರಬೇಕಾಗಿ ಬರುವುದು. ಪ್ರೇಯಸಿ, ಅವನ ಉದ್ಧಾರಕ್ಕೋಸ್ಕರ ಪ್ರಯತ್ನಪಡುವ ವಿಷ್ಣುವಾದ ನನ್ನನ್ನೂ, ಆ ಯಮನು ಶಿವಭಕ್ತನಲ್ಲವೆಂದೇ ನಿಶ್ಚಯಿಸಿ ನಿಷ್ಕರುಣೆಯಿಂದ ಹಿಡಿದು ನರಕದಲ್ಲಿ ಹಾಕುವುದರಲ್ಲಿ ಸಂದೇಹವೇ ಇಲ್ಲ. ॥೨೯೦-೨೯೧॥

ಆ ಯಮನು ನನ್ನನ್ನು ಹಿಡಿದುಹಾಕುವನಲ್ಲದೇ ನರಕದಿಂದ ನಿಶ್ಚಯವಾಗಿಯೂ ಬಿಡುವುದಿಲ್ಲ. ಅವನ ಕೈಗೆ ಸಿಕ್ಕಿದವರಾರೂ ಇಲ್ಲಿಯವರೆಗೂ ಬಿಡುಗಡೆ ಹೊಂದಿರುವಂತೆ ಕಾಣಬರುತ್ತಿಲ್ಲ. ಆದ್ದರಿಂದ ಆ ವಿಷಯದಲ್ಲಿ ಪ್ರಯತ್ನವು ಖಂಡಿತ

ಅತಸ್ತತ್ರ ಪ್ರಯತ್ನಸ್ತು ನ ಚಲಿಷ್ಯತಿ ಸರ್ವಥಾ ।
ವಸ ತೂಷ್ಣೀಮಿತಿ ಪ್ರಾಹ ಲಕ್ಷ್ಮೀಂ ಲಕ್ಷ್ಮೀಪತಿಃ ಸ್ವಯಂ ॥೨೯೩॥

ಅತೋ ಮದ್ಧಸ್ತಪತಿತಃ ಸುರೋऽಪಿ ಶಿವನಿಂದಕಃ ।
ಭುಕ್ತ್ವಾ ತಿಷ್ಠತಿ ಘೋರಾಣಿ ನರಕಾಣಿ ನ ಸಂಶಯಃ ॥೨೯೪॥

ಅನಂತಬ್ರಹ್ಮಹತ್ಯಾಭಿರ್ಯಾವದ್ದುಃಖಮವಾಪ್ಯತೇ ।
ತತೋऽಪಿ ದುಃಖಮಧಿಕಂ ಪ್ರಾಪ್ಯತೇ ಶಿವನಿಂದಯಾ ॥೨೯೫॥

ಬ್ರಹ್ಮಹತ್ಯಾ ಕೃತಾ ಯೇನ ತಸ್ಯೈವ ನರಕೇ ಸ್ಥಿತಿಃ ।
ತದ್ವಂಶಜಾನಾಂ ನರಕಸ್ತೇನ ಪಾಪೇನ ನ ಧ್ರುವಂ ॥೨೯೬॥

ಶಿವನಿಂದಾ ಕೃತಾ ಯೇನ ತಸ್ಯೈವ ನರಕಸ್ತು ನ ।
ಕಿಂ ತು ತದ್ವಂಶಜಾನಾಂ ಚ ನರಕೇಷ್ವೇಷು ಸಂಸ್ಥಿತಿಃ ॥೨೯೭॥

ಶಿವನಿಂದಾಸಮಂ ಪಾಪಂ ನ ಭೂತಂ ನ ಭವಿಷ್ಯತಿ ।
ತಯಾ ಯತ್ಪ್ರಾಪ್ಯತೇ ದುಃಖಂ ತದ್ದುಃಖಮತಿದುಃಸಹಂ ॥೨೯೮॥

---

ವಾಗಿಯೂ ನಡೆಯುವುದೇ ಇಲ್ಲ. ದೇವಿ, ಆದಪ್ರಯುಕ್ತ ನೀನು ಸುಮ್ಮನೆ ಇರೆಂದು ಲಕ್ಷ್ಮೀರಮಣನಾದ ವಿಷ್ಣುವು ತನ್ನ ಪ್ರಿಯೆಯಾದ ಲಕ್ಷ್ಮೀದೇವಿಗೆ ಸಮಾಧಾನ ಹೇಳಿದನು. ॥೨೯೨-೨೯೩॥

ಹೀಗಿರುವುದರಿಂದ ನನ್ನ ಕೈಗೆ ಸಿಕ್ಕಿದ ದೇವತೆಯೂ ಸಹ ಶಿವನಿಂದಕನಾಗಿದ್ದರೆ ಘೋರವಾದ ನರಕಗಳನ್ನು ಹೊಂದುವುದರಲ್ಲಿ ಸಂದೇಹವೇ ಇಲ್ಲ. ಅಪಾರವಾದ ಬ್ರಹ್ಮಹತ್ಯೆಗಳನ್ನು ಮಾಡುವುದರಿಂದ ಉಂಟಾಗುವ ದುಃಖಗಳಿಗಿಂತ ಹೆಚ್ಚಾದ ದುಃಖವು ಈ ಶಿವನಿಂದೆಯಿಂದ ದೊರೆಯುವುದು. ॥೨೯೪-೨೯೫॥

ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಮಾತ್ರ ನರಕವಾಸವೇ ಹೊರತು, ಇವನು ಮಾಡಿದ ಪಾಪದಿಂದ ಇವನ ವಂಶದಲ್ಲಿ ಹುಟ್ಟಿದವರಿಗೆಲ್ಲಾ ನಿಶ್ಚಯವಾಗಿ ನರಕವಿಲ್ಲ. ಆದರೆ ಶಿವನಿಂದೆಮಾಡಿದವನಿಗೆ ಮಾತ್ರ ತನಗೂ ತನ್ನ ಕುಲದಲ್ಲಿ ಹುಟ್ಟಿದವರಿಗೂ ಈ ನರಕಗಳಲ್ಲಿ ಅವಶ್ಯವಾಗಿ ವಾಸವೇರ್ಪಟ್ಟಿರುವುದು.॥೨೯೬-೨೯೭॥

ಶಿವನಿಂದೆಗೆ ಸಮಾನವಾದ ಪಾಪವು ಹಿಂದೆ ಯಾವುದೂ ಇರಲಿಲ್ಲ. ಮುಂದೆ ಉಂಟಾಗುವುದೂ ಇಲ್ಲ. ಇದರಿಂದುಂಟಾಗುವ ದುಃಖವು ದುಃಸಹವಾದುದು.

ಶಚೀಪತೇ ಸಮುತ್ಪನ್ನೋ ಯದ್ವಂಶೇ ಶಿವನಿಂದಕಃ ।
ತದ್ವಂಶೋ ನರಕೇ ಘೋರೇ ಪತಿಷ್ಯತ್ಯೇವ ಸರ್ವಥಾ ॥೯೯॥

ನ ಸಂರಕ್ಷತಿ ತದ್ವಂಶಂ ಶಿವನಿಂದಾದವಾನಲಃ ।
ಯದ್ವಂಶೇ ಕಾಲಕೂಟಾಭೋ ಜಾತೋಽಸ್ತಿ ಶಿವನಿಂದಕಃ ॥೧೦೦॥

ಯಸ್ಯ ವಂಶೇ ಸಮುತ್ಪನ್ನಃ ಶಿವನಿಂದಾಪರೋ ನರಃ ।
ತದ್ವಂಶೇ ಜಲಮಪ್ಯಲ್ಪಂ ನ ಗ್ರಾಹ್ಯಂ ಸರ್ವಥಾ ದ್ವಿಜೈಃ ॥೧೦೧॥

ತಚ್ಚಂಡಾಲಕುಲಂ ಜ್ಞೇಯಂ ಯತ್ಕುಲೇ ಶಿವದೂಷಕಃ ।
ತತಸ್ತತ್ರ ತು ನ ಗ್ರಾಹ್ಯಂ ಜಲಾನ್ನಾದಿವಿವೇಕಿಭಿಃ ॥೧೦೨॥

ಶಿವನಿಂದಕವಂಶೇ ಚೇಜ್ಜಲಂ ಪಿಬತಿ ಮೋಹತಃ ।
ತಪ್ತಕೃಚ್ಛ್ರಂ ತದಾ ಕಾರ್ಯಂ ಪ್ರಯತ್ನೇನ ವಿವೇಕಿಭಿಃ ॥೧೦೩॥

---

ಶಚೀರಮಣನಾದ ಇಂದ್ರನೇ, ಶಿವನಿಂದಕನಾದ ಪುರುಷನು ಜನಿಸಿದ ವಂಶವು ಅವಶ್ಯವಾಗಿ ಭಯಂಕರವಾದ ನರಕಗಳಲ್ಲಿ ಬೀಳುವುದರಲ್ಲಿ ಸಂದೇಹವೇ ಇಲ್ಲ. ॥೯೮-೯೯॥

ಕಾಲಕೂಟಮಹಾವಿಷಕ್ಕೆ ಸಮಾನವಾದ ಕಾಂತಿಯುಳ್ಳ ಶಿವನಿಂದಕನು ಹುಟ್ಟಿರುವ ಕುಲವನ್ನು ಆ ಶಿವನಿಂದೆಯೆಂಬ ಕಾಡುಗಿಚ್ಚು ಎಂದಿಗೂ ಕಾಪಾಡಲಾರದು. (ಅಂದರೆ ಸುಟ್ಟು ಭಸ್ಮಮಾಡಿಬಿಡುವುದು.) ಶಿವನಿಂದೆಯಲ್ಲಿಯೇ ತತ್ಪರನಾಗಿರುವ ಮಾನವನು ಹುಟ್ಟಿರುವ ವಂಶದಲ್ಲಿ ಕೊಂಚ ನೀರನ್ನೂ ಬ್ರಾಹ್ಮಣರು ಎಂದಿಗೂ ಸ್ವೀಕರಿಸಬಾರದು. ॥೧೦೦-೧೦೧॥

ಶಿವನನ್ನು ದೂಷಣೆಮಾಡುವನಿದ್ದ ಕುಲವೇ ಚಂಡಾಲಕುಲವೆಂದು ತಿಳಿಯಲ್ಪಡುವುದು. ಆದ್ದರಿಂದ ವಿವೇಕವುಳ್ಳವರು ಅನ್ನ, ನೀರು ಮೊದಲಾದವುಗಳನ್ನು ಸ್ವೀಕರಿಸಬಾರದು. ಒಂದುವೇಳೆ ಶಿವನಿಂದೆ ಮಾಡುವವನ ವಂಶದಲ್ಲಿ ಅಜ್ಞಾನದಿಂದ ನೀರನ್ನು ಕುಡಿಯುವನಾದರೆ ಆಗ ಜ್ಞಾನಿಗಳು ನಿಯಮದಿಂದ ತಪ್ತಕೃಚ್ಛ್ರಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ॥೧೦೨-೧೦೩॥

ತ್ಯಕ್ತಭಸ್ಮತ್ರಿಪುಂಡ್ರಸ್ಯ ಗೃಹೇ ಭುಕ್ತ್ವಾ ತು ಮೋಹತಃ ।
ಪ್ರಾಯಶ್ಚಿತ್ತಂ ತದಾ ಕಾರ್ಯಂ ದ್ವಾದಶಾಬ್ದಂ ಪ್ರಯತ್ನತಃ ॥೩೦೪॥

ತ್ಯಕ್ತಲಿಂಗಾರ್ಚನಗೃಹೇ ಯದಿ ಭುಕ್ತಂ ಭ್ರಮಾದ್ದ್ವಿಜೈಃ ।
ತದಾ ತದ್ದ್ವಿಗುಣಂ ಕಾರ್ಯಂ ಪ್ರಾಯಶ್ಚಿತ್ತಮತಂದ್ರಿತೈಃ ॥೩೦೫॥

ತ್ಯಕ್ತಭಸ್ಮತ್ರಿಪುಂಡ್ರಸ್ಯ ಯದಿ ದೃಷ್ಟಂ ಮುಖಂ ಭ್ರಮಾತ್ ।
ತದಾ ಸೂರ್ಯಂ ವಿಲೋಕ್ಯಾದೌ ಸವಾಸಾ ಜಲಮಾವಿಶೇತ್ ॥೩೦೬॥

ತ್ಯಕ್ತಭಸ್ಮತ್ರಿಪುಂಡ್ರಸ್ಯ ಸ್ಪರ್ಶೋ ಯದಿ ಭವೇದ್ಭ್ರಮಾತ್ ।
ಸ್ನಾತ್ವೋಪವಾಸಃ ಕರ್ತವ್ಯಃ ಶಿವಪೂಜಾಪುರಃಸರಂ ॥೩೦೭॥

ತ್ಯಕ್ತಭಸ್ಮತ್ರಿಪುಂಡ್ರೇಣ ಯದ್ಯಾಲಾಪಃ ಕೃತೋ ಭವೇತ್ ।
ತದೋಪವಾಸಃ ಕರ್ತವ್ಯಸ್ತ್ರ್ಯಹಂ ವೈ ಬ್ರಹ್ಮವಾದಿಭಿಃ ॥೩೦೮॥

ವಿಭೂತಿಧಾರಣಂ ತ್ಯಕ್ತ್ವಾ ಯದಿ ಭುಂಕ್ತೇ ಭ್ರಮಾದ್ದ್ವಿಜಃ ।
ತದಾ ತದನ್ನಂ ನಿಷ್ಕಾಸ್ಯ ಚರೇಚ್ಚಾಂದ್ರಾಯಣಾಷ್ಟಕಂ ॥೩೦೯॥

---

ಭಸ್ಮತ್ರಿಪುಂಡ್ರವನ್ನು ಧಾರಣೆಮಾಡದೆ ಇರುವವನ ಮನೆಯಲ್ಲಿ ಅಜ್ಞಾನದಿಂದ (ತಿಳಿಯದೇ) ಊಟಮಾಡಿದರೆ, ಆಗ ಹನ್ನೆರಡು ವರ್ಷಗಳ ಕಾಲ ನಿಯಮದಿಂದ ಪ್ರಾಯಶ್ಚಿತ್ತಮಾಡಿಕೊಳ್ಳಬೇಕು. ಶಿವಲಿಂಗವನ್ನು ಪೂಜೆಮಾಡದಿರುವವನ ಮನೆಯಲ್ಲಿ ಬ್ರಾಹ್ಮಣರು ಭ್ರಾಂತಿಯಿಂದ ಊಟಮಾಡಿದರೆ ಆಗ ಆಲಸ್ಯವಿಲ್ಲದೆ ಹಿಂದೆ ಹೇಳಿದುದಕ್ಕೆ ಎರಡರಷ್ಟು (ಅಂದರೆ ಇಪ್ಪತ್ತುನಾಲ್ಕು ವರ್ಷಗಳ ಕಾಲ) ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ॥೩೦೪-೩೦೫॥

ಭಸ್ಮತ್ರಿಪುಂಡ್ರವನ್ನು ಧಾರಣೆ ಮಾಡದೇ ಇರುವವನ ಮುಖವನ್ನು ಭ್ರಾಂತಿಯಿಂದ ನೋಡಿದ್ದೇ ಆದರೆ, ಆಗ ಮೊದಲು ಸೂರ್ಯನನ್ನು ನೋಡಿ ಅನಂತರ ಉಟ್ಟ ಬಟ್ಟೆಯೊಡನೆ ನೀರಿನಲ್ಲಿ ಪ್ರವೇಶಿಸಬೇಕು (ಸಚೇಲಸ್ನಾನ ಮಾಡಬೇಕು). ಭಸ್ಮತ್ರಿಪುಂಡ್ರವನ್ನು ಧರಿಸದೇ ಇರುವವನನ್ನು ಒಂದುವೇಳೆ ಮುಟ್ಟಿದ್ದೇ ಆದರೆ ಸ್ನಾನ ಮಾಡಿ ಶಿವಪೂಜೆಮಾಡಿದನಂತರ ಉಪವಾಸವ್ರತವನ್ನಾಚರಿಸಬೇಕು.॥೩೦೬-೩೦೭॥

ಭಸ್ಮತ್ರಿಪುಂಡ್ರವನ್ನು ಧರಿಸದೇ ಶಿವವಿಷಯಕವಾದ ಸಂಭಾಷಣೆ ಮಾಡಿದರೆ ಆಗ ಬ್ರಾಹ್ಮಣರು ಮೂರುದಿನ ಉಪವಾಸ ಮಾಡಬೇಕು. ವಿಭೂತಿಯನ್ನು ಧಾರಣೆ

ಶಿವಪೂಜಾಂ ವಿಹಾಯೈವ ಯದಿ ಭುಂಕ್ತೇ ಭ್ರಮಾದ್ದ್ವಿಜಃ ।
ತದಾ ತದನ್ನಂ ನಿಷ್ಕಾಸ್ಯ ಚರೇಚ್ಚಾಂದ್ರಾಯಣಾಷ್ಟಕಂ ॥೩೧೦॥

ರುದ್ರಾಭಿಷೇಕಪಾನೀಯಮಪೀತ್ವಾ ಯದಿ ಭುಜ್ಯತೇ ।
ತದಾ ತದನ್ನಂ ನಿಷ್ಕಾಸ್ಯ ಚರೇಚ್ಚಾಂದ್ರಾಯಣತ್ರಯಂ ॥೩೧೧॥

ರುದ್ರಾಕ್ಷಧಾರಣಂ ತ್ಯಕ್ತ್ವಾ ಯದಿ ಭುಂಕ್ತೇ ಪ್ರಮಾದತಃ ।
ತದಾ ತದನ್ನಂ ನಿಷ್ಕಾಸ್ಯ ಚರೇಚ್ಚಾಂದ್ರಾಯಣದ್ವಯಂ ॥೩೧೨॥

ಯದ್ಯೈಕದೇವ ತತ್ತ್ಯಕ್ತಂ ಪ್ರಾಯಶ್ಚಿತ್ತಮಿದಂ ತದಾ ।
ತತ್ತ್ಯಾಗಸಂಖ್ಯಯಾ ಕಾರ್ಯಂ ಪ್ರಾಯಶ್ಚಿತ್ತಂ ಯಥೋಚಿತಂ ॥೩೧೩॥

ಯದಿ ಭುಂಕ್ತೇ ಮಾಸಮಾತ್ರಂ ಸಂತ್ಯಕ್ತ್ವಾ ಭಸ್ಮಧಾರಣಂ ।
ತದಾ ತು ಸ ತು ಪಾಪಿಷ್ಠೋ ನ ಪ್ರಾಯಶ್ಚಿತ್ತಮರ್ಹತಿ ॥೩೧೪॥

---

ಮಾಡದೇ ಅಜ್ಞಾನದಿಂದ ಬ್ರಾಹ್ಮಣನಾದವನು ಊಟಮಾಡುವುದಾದರೆ ಆಗ ತಾನು ಊಟಮಾಡುತ್ತಿದ್ದ ಅನ್ನವನ್ನು ತೆಗೆದು ಹೊರಗೆ ಹಾಕಿ, ಅನಂತರ ಎಂಟು ಚಾಂದ್ರಾಯಣ ವ್ರತಗಳನ್ನು ನಡೆಸಬೇಕು. ||೩೦೮-೩೦೯||

ಶಿವಪೂಜೆಯನ್ನು ಮಾಡದೇ ಅಜ್ಞಾನದಿಂದ ಬ್ರಾಹ್ಮಣನು ಊಟಮಾಡಿದರೆ ಮುಂದೆ ಆ ಅನ್ನವನ್ನು ಭುಂಜಿಸದೆ ಎಂಟು ಚಾಂದ್ರಾಯಣ ವ್ರತಗಳನ್ನು ಮಾಡಬೇಕು. ರುದ್ರಾಭಿಷೇಕ ಮಾಡಿದ ನೀರನ್ನು ಕುಡಿಯದೇ ಊಟ ಮಾಡುವುದಾದರೆ ಆಗ ಆ ಅನ್ನವನ್ನು ಬಿಟ್ಟು ಮೂರು ಚಾಂದ್ರಾಯಣ ವ್ರತಗಳನ್ನಾಚರಿಸಬೇಕು. ||೩೧೦-೩೧೧||

ರುದ್ರಾಕ್ಷಿಗಳನ್ನು ಧರಿಸದೇ ಪ್ರಮಾದದಿಂದ ಊಟ ಮಾಡುವುದಾದರೆ, ಆಗ ಆ ಅನ್ನವನ್ನು ಬಿಟ್ಟು ಎರಡು ಚಾಂದ್ರಾಯಣ ವ್ರತವನ್ನು ಆಚರಿಸಬೇಕು. ||೩೧೨||

ಒಂದುವೇಳೆ ಮಾತ್ರ ಹಿಂದೆ ಹೇಳಿದಂತೆ ಶಿವಪೂಜೆ, ಭಸ್ಮಧಾರಣೆ ಮೊದಲಾದುವುಗಳನ್ನು ಬಿಟ್ಟಾಗ ಈ ಪ್ರಾಯಶ್ಚಿತ್ತವನ್ನಾಚರಿಸಬೇಕು. ಒಂದಕ್ಕಿಂತ ಹೆಚ್ಚಾದರೆ ಅದಕ್ಕನುಗುಣವಾದ ಸಂಖ್ಯೆಯನ್ನನುಸರಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಒಂದು ತಿಂಗಳಕಾಲ ಭಸ್ಮಧಾರಣೆ ಮಾಡದೇ ಊಟ ಮಾಡಿದರೆ ಆಗ ಆ ಪಾಪಿಷ್ಠನು ಎಂದಿಗೂ ಪ್ರಾಯಶ್ಚಿತ್ತಕ್ಕೆ ಅರ್ಹನಾಗಲಾರನು. ||೩೧೩-೩೧೪||

ಶಿವಪೂಜಾದಿಕಂ ತ್ಯಕ್ತ್ವಾಸ್ಯೇವಮೇವ ದ್ವಿಜಾಧಮಃ ।
ಪ್ರಾಯಶ್ಚಿತ್ತಾಯುತೇನಾಪಿ ಶುದ್ಧೋ ನ ಭವತಿ ಧ್ರುವಂ ॥೩೧೫॥

ಶಿವಪೂಜಾದಿಕಂ ತ್ಯಕ್ತ್ವಾ ಯೇ ಮೃತಾಃ ಪಾಪಿನೋ ಜನಾಃ ।
ತ ಏವೈಷು ನರಕೇಷ್ವಾನೀಯಾನೀಯ ಪಾತಿತಾಃ ॥೩೧೬॥

ಅತ್ಯಂತಸುಲಭಂ ಪುಣ್ಯಂ ತ್ಯಕ್ತ್ವಾ ಶಂಕರಪೂಜನಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೧೭॥

ಭಸ್ಮೋದ್ಧೂಳನಮಾಯುಷ್ಯಂ ತ್ಯಕ್ತ್ವಾ ಜಾಬಾಲಚೋದಿತಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೧೮॥

ತ್ಯಕ್ತ್ವಾ ತ್ರಿಪುಂಡ್ರಮನಘಂ ಕೇವಲಂ ಶ್ರುತಿಚೋದಿತಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೧೯॥

---

ಶಿವಪೂಜೆಯೇ ಮೊದಲಾದುವುಗಳನ್ನೂ ಪೂರ್ಣವಾಗಿ ಬಿಟ್ಟಿರುವ ಬ್ರಾಹ್ಮಣಾಧಮನು ಹತ್ತುಸಾವಿರ ಪ್ರಾಯಶ್ಚಿತ್ತಗಳಿಂದಲೂ ನಿಶ್ಚಯವಾಗಿ ಶುದ್ಧನಾಗಲಾರನು. ಶಿವಪೂಜಾದಿಗಳನ್ನು ಮಾಡದೇ ಮೃತರಾದ ಪಾಪಿ ಜನಗಳನ್ನೇ ಈ ನರಕಗಳಲ್ಲಿ ಬಲಾತ್ಕಾರದಿಂದ ಎಳೆತಂದು ಕೆಡವಿರುವೆವು. ॥೩೧೫-೩೧೬॥

ವಿಶೇಷ ಪುಣ್ಯಪ್ರದವಾದ ಆ ಶಂಕರನ ಪೂಜೆಯನ್ನೂ ಸಹ ಮಾಡದೇ ಬುದ್ಧಿಹೀನರಾದ ಮಾನವರು ಈ ಭಯಂಕರವಾದ ನರಕಗಳಲ್ಲಿ ಬಂದು ಬೀಳುತ್ತಿರುವರು. ॥೩೧೭॥

ಮನುಷ್ಯನ ಜೀವಮಾನದಲ್ಲಿ ಮುಖ್ಯವಾಗಿರುವ ಜಾಬಾಲ ಮುನಿಗಳಿಂದ ಹೇಳಲ್ಪಟ್ಟಿರುವ ಭಸ್ಮಲೇಪನವನ್ನು ಮಾಡಿಕೊಳ್ಳದೇ ಮೂರ್ಖರಾದ ಜನಗಳು ಈ ಘೋರವಾದ ನರಕಗಳಲ್ಲಿ ಬೀಳುತ್ತಿರುವರು. ವೇದ ಪ್ರತಿಪಾದ್ಯವಾದ ನಿಷ್ಕಲ್ಮಷವಾಗಿರುವ ಭಸ್ಮತ್ರಿಪುಂಡ್ರಗಳನ್ನೂ ಸಹ ಧರಿಸದೆ, ಹೀಗೆಯೇ ದಡ್ಡ ಜನಗಳು ಭಯಂಕರವಾದ ಈ ನರಕಗಳಲ್ಲಿ ಬಿದ್ದು ಸಾಯುತ್ತಿರುವರು. ॥೩೧೮-೩೧೯॥

ರುದ್ರಾಕ್ಷಧಾರಣಂ ತ್ಯಕ್ತ್ವಾ ಪಾಪಾರಣ್ಯದವಾನಲಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೨೦॥

ಶ್ರೀರುದ್ರಾಧ್ಯಯನಂ ತ್ಯಕ್ತ್ವಾ ಪಾಪಾರಣ್ಯದವಾನಲಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೨೧॥

ಪಂಚಾಕ್ಷರಜಪಂ ತ್ಯಕ್ತ್ವಾ ಪಾಪಾರಣ್ಯದವಾನಲಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೨೨॥

ರುದ್ರಾಭಿಷೇಕಪಾನೀಯಪಾನಂ ತ್ಯಕ್ತ್ವಾಘನಾಶಕಂ ।
ಪತಂತಿ ಘೋರನರಕೇಷ್ವೇತೇಷು ಜಡಬುದ್ಧಯಃ ॥೩೨೩॥

ಅತ್ಯಂತಸುಲಭಂ ಪುಣ್ಯಂ ಶಿವ ಇತ್ಯಕ್ಷರದ್ವಯಂ ।
ಮುದಾ ನೋಚ್ಚಾರಿತಂ ತಸ್ಮಾದೇತೇ ನರಕಪಾತಿನಃ ॥೩೨೫॥

ಮುಕ್ತಿಕಾಂತಾವಶ್ಯಹೇತೌ ಶಿವಮಂತ್ರೇ ವಿರಾಜತಿ ।
ಕಥಮೇತೇ ಪತಂತ್ಯತ್ರ ನರಕೇ ಮಹದದ್ಭುತಂ ॥೩೨೬॥

---

ಪಾಪವೆಂಬ ಅಡವಿಗೆ ಕಾಡುಗಿಚ್ಚಿನಂತಿರುವ ರುದ್ರಾಕ್ಷ ಧಾರಣೆಯನ್ನೂ, ಮಂಗಳಕರವಾದ ರುದ್ರಮಂತ್ರಗಳ ಅಧ್ಯಯನವನ್ನೂ ಮತ್ತು ಶಿವಪಂಚಾಕ್ಷರ ಮಹಾಮಂತ್ರ ಜಪವನ್ನೂ ಮಾಡದೇ ಮೂರ್ಖರಾದ ಜನಗಳು ಭಯಂಕರವಾದ ಈ ನರಕಗಳಲ್ಲಿ ಬೀಳುತ್ತಿರುವರು. ॥೩೨೦-೩೨೧-೩೨೨॥

ಸಕಲ ಪಾಪಗಳನ್ನೂ ನಾಶಮಾಡುವ ರುದ್ರಾಭಿಷೇಕ ಮಾಡಿದ, ತೀರ್ಥ ವನ್ನು ಕುಡಿಯದೇ ಈ ಬುದ್ಧಿಹೀನರು ಘೋರವಾದ ನರಕಗಳಲ್ಲಿ ಬಂದು ಬೀಳು ತ್ತಿರುವರು. ॥೩೨೩॥

ಸುಲಭಸಾಧ್ಯವಾದ ಶಿವನೆಂಬ ಎರಡಕ್ಷರವನ್ನು ಪ್ರೀತಿಯಿಂದ ಉಚ್ಚಾರ ಮಾಡದಿರುವುದರಿಂದ ಇವರು ನರಕದಲ್ಲಿ ವಾಸ ಮಾಡುತ್ತಿರುವರು. ಕಾಡಿನಲ್ಲಿ ಮನೋಹರವಾದ ಬಿಲ್ವಪತ್ರೆಗಳು ಯಥೇಚ್ಛವಾಗಿದ್ದರೂ ಇವರು ಅವುಗಳನ್ನು ತಂದು ಈಶ್ವರನಿಗೆ ಪೂಜೆ ಮಾಡದೇ ಇರುವುದರಿಂದ ಇವರು ನರಕದಲ್ಲಿ ವಾಸ ಮಾಡಬೇಕಾಗಿದೆ. ೩೨೪-೩೨೫॥

ಮೋಕ್ಷಾಂಗನೆಯನ್ನು ವಶ ಮಾಡಿಕೊಳ್ಳಲು ಕಾರಣಭೂತವಾಗಿರುವ ಶಿವ ಮಂತ್ರವು ಪ್ರಕಾಶಿಸುತ್ತಿರುವಾಗ ಇವರೆಲ್ಲರೂ ಹೇಗೆ ನರಕದಲ್ಲಿ ಬಿದ್ದು ನರಳು

ಶಿವಮಂತ್ರಜಪೇ ನಿಷ್ಠಾ ಯೇಷಾಂ ನೈವ ಭವಿಷ್ಯತಿ ।
ತೇಷಾಂ ತು ನರಕಾವಾಸೋ ಭವಷ್ಯತ್ಯೇವ ಸರ್ವಥಾ ॥೩೨೭॥

ಶಿವಮಂತ್ರೋಷ್ಣಕಿರಣೋ ನರಕಧ್ವಾಂತನಾಶಕಃ ।
ತಸ್ಮಿನ್ಸತ್ಯಪಿ ತಂ ತ್ಯಕ್ತ್ವಾ ನರಕೇಷು ಪತಂತ್ಯಹೋ ॥೩೨೮॥

ಪುರಾ ಕಶ್ಚಿನ್ನರಾಧೀಶೋ ಮಿತ್ರರಾಡಿತಿ ವಿಶ್ರುತಃ ।
ಯುವಾ ಪುಷ್ಟತನುರ್ಧೀರಃ ಸುಂದರಃ ಕ್ರೂರಶಾಸನಃ ॥೩೨೯॥

ತದ್ರಕ್ಷಿತಗಜಾಶ್ವಾನಾಂ ನ ಸಂಖ್ಯಾ ದೃಶ್ಯತೇ ಮಯಾ ।
ಸರ್ವೇ ಸಾಮಂತಭೂಪಾಲಾಸ್ತದಾಜ್ಞಾಕಾರಿಣಃ ಸದಾ ॥೩೩೦॥

ಏತಾದೃಶಂ ಸ ಭೂಪಾಲಃ ಸ್ವಪತ್ನೀಮತಿಸುಂದರೀಂ ।
ತಿರಸ್ಕೃತಸ್ವರ್ಗನಾರೀಂ ದೃಷ್ಟ್ವಾ ವಚನಮಬ್ರವೀತ್ ॥೩೩೧॥

---

ತ್ತಿರುವರೋ ಅದು ಆಶ್ಚರ್ಯವಾಗಿದೆ. ಶಿವಪಂಚಾಕ್ಷರ ಮಹಾಮಂತ್ರದಲ್ಲಿ ಶ್ರದ್ಧೆಯಿಲ್ಲದವರಿಗೆ ಅವಶ್ಯವಾಗಿ ನರಕವಾಸವುಂಟಾಗುವುದರಲ್ಲಿ ಸಂದೇಹವೇ ಇಲ್ಲ. ॥೩೨೬-೩೨೭॥

ನರಕವೆಂಬ ಅಂಧಕಾರವನ್ನು ನಾಶಮಾಡಲು ಸಮರ್ಥವಾಗಿರುವ ಶಿವಮಂತ್ರವೆಂಬ ಸೂರ್ಯನು ತನ್ನ ಚಂಡಕಿರಣಗಳಿಂದ ಪ್ರಕಾಶಿಸುತ್ತಿದ್ದಾಗ್ಯೂ ಈ ಜನಗಳು ಅಂತಹ ಸನ್ನಿವೇಶವನ್ನುಪಯೋಗಿಸಿಕೊಳ್ಳದೇ ನರಕಗಳಲ್ಲಿ ಬಿದ್ದು ನರಳುತ್ತಿರುವರು. ಅಯ್ಯೋ ಇದೇನಾಶ್ಚರ್ಯ ! ॥೩೨೮॥

ಹಿಂದೆ 'ಮಿತ್ರರಾಟ್' ಎಂದು ಪ್ರಸಿದ್ಧನಾದ ಒಬ್ಬ ರಾಜನಿದ್ದನು. ಅವನು ಯುವಕನೂ, ಪುಷ್ಟವಾದ ಶರೀರವುಳ್ಳವನೂ, ಶುಭ್ರವರ್ಣವುಳ್ಳವನೂ, ಸುಂದರನೂ ಆಗಿ ನಿಷ್ಪಕ್ಷಪಾತದಿಂದ ರಾಜ್ಯಭಾರ ಮಾಡುತ್ತಿದ್ದನು. ಅವನು ಕಾಪಾಡುತ್ತಿದ್ದ ಆನೆ, ಕುದುರೆ ಮೊದಲಾದ ಸೈನ್ಯಗಳಿಗೆ ಗಣನೆಯೇ ಇಲ್ಲವೆಂದು ತೋರುತ್ತಿತ್ತು. ಸಕಲ ಸಾಮಂತರಾಜರೂ ಯಾವಾಗಲೂ ಅವನ ಅಪ್ಪಣೆಯನ್ನು ಮೀರದೇ ನಡೆಸುತ್ತಿದ್ದರು. ॥೩೨೯-೩೩೦॥

ಈ ರೀತಿಯಾದ ಆ ರಾಜನು ಸ್ವರ್ಗಸ್ತ್ರೀಯರನ್ನೂ ತನ್ನ ಸೌಂದರ್ಯದಿಂದ ತಿರಸ್ಕರಿಸುವಂತೆ ಮನೋಹರಳಾಗಿರುವ ತನ್ನ ಹೆಂಡತಿಯನ್ನು ನೋಡಿ ಅವಳೊಡನೆ ಹೀಗೆ ಮಾತನಾಡಿದನು. ॥೩೩೧॥

ಆಯಾಹಿ ಸುಭಗೇ ಭದ್ರೇ ರಾತ್ರಿರ್ಜಾತಾಽದ್ಯ ಭೂಯಸೀ ।
ಮಹ್ಯಮಾಲಿಂಗನಂ ದೇಹಿ ಯೇನ ತುಷ್ಟೋ ಭವಾಮ್ಯಹಂ ॥೩೩೨॥

ತ್ವದಾಲಿಂಗನಮಾತ್ರೇಣ ಸಂತೋಷೋ ಯಾದೃಶೋ ಮಮ ।
ತಾದೃಶೋ ಮಮ ಸಂತೋಷೋ ನಾನ್ಯಸಂಗೇನ ಜಾಯತೇ ॥೩೩೩॥

ಬಹಿಃ ಸ್ಥಿತ್ವಾ ತವೈವೇದಂ ಸೌಂದರ್ಯಮತಿಸುಂದರಂ ।
ಅತಿಸೌಖ್ಯಕರಂ ಚಿತ್ತೇ ಧ್ಯಾಯತೇ ಸರ್ವದಾ ಮಯಾ ॥೩೩೪॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸುಭಗಾ ಸಾ ಮನೋಹರಾ ।
ಜಗಾದ ವಚನಂ ಚಾರು ಸದ್ಯೋ ವೈರಾಗ್ಯಸಾಧಕಂ ॥೩೩೫॥

॥ ಸುಭಗೋವಾಚ ॥

ಶಂಕರಾರ್ಚನಕಾಲೋಽಯಂ ಕ್ರಿಯತೇ ಶಂಕರಾರ್ಚನಂ ।
ಅಯಂ ನ ಭೋಗಕಾಲೋಽತೋ ಮಯಾ ನಾಗಮ್ಯತೇಽಧುನಾ ॥೩೩೬॥

ಕುರು ತ್ವಮಪಿ ರಾಜೇಂದ್ರ ಮಹಾದೇವಸ್ಯ ಪೂಜನಂ ।
ವೃಥಾ ಕಾಲೋ ನ ನೇಯೋಽಯಂ ಪರಲೋಕಾರ್ಥಿಭಿರ್ಯತಃ ॥೩೩೭॥

---

ಸೌಭಾಗ್ಯವತಿಯೂ ಮಂಗಳಾಂಗಿಯೂ ಆದ ಪ್ರೇಯಸಿಯೇ, ಇತ್ತ ಬಾ; ಇದು ರಾತ್ರಿಕಾಲವಾಗಿರುವುದು. ನಿನ್ನ ಆಲಿಂಗನದಿಂದ ನನಗೆ ಸಂತೋಷವನ್ನುಂಟು ಮಾಡುವಳಾಗು. ನಿನ್ನ ಆಲಿಂಗನದಿಂದ ಉಂಟಾಗುವ ಆನಂದವು ನನಗೆ ಮತ್ತಾವ ಸಹವಾಸದಿಂದಲೂ ನಿಜವಾಗಿಯೂ ಆಗಲಾರದು. ॥೩೩೨-೩೩೩॥

ಹೊರಗಡೆಯಲ್ಲಿಯೇ ನಿಂತು ಅತ್ಯಂತ ಮನೋಹರವೂ ಸುಖಪ್ರದವೂ ಆಗಿರುವ ನಿನ್ನ ಸೌಂದರ್ಯವನ್ನು ನಾನು ಯಾವಾಗಲೂ ಮನಸ್ಸಿನಲ್ಲಿ ಧ್ಯಾನ ಮಾಡುತ್ತಿರುವೆನು ಎಂದು ರಾಜನು ಹೇಳಲು, ಅದನ್ನು ಕೇಳಿ ಸೌಭಾಗ್ಯವತಿಯೂ ಮನೋಹರಳೂ ಆದ ಆತನ ಪತ್ನಿಯು ಪತಿಗೆ ವೈರಾಗ್ಯವನ್ನುಂಟುಮಾಡುವಂತೆ ಮನೋಹರವಾಗಿ ಹೀಗೆ ನುಡಿದಳು. ॥೩೩೪-೩೩೫॥

ರಾಜೇಂದ್ರನೇ, ಇದು ಶಂಕರನನ್ನು ಪೂಜೆಮಾಡುವ ಕಾಲವಾಗಿರುವುದರಿಂದ ಈಗ ಅವಶ್ಯವಾಗಿ ಆ ದೇವನನ್ನು ಪೂಜೆಮಾಡಬೇಕು. ಇದು ವಿಹಾರಸಮಯವಲ್ಲ ವಾದ್ದರಿಂದ ನಿನ್ನೊಡನೆ ಉಪಭೋಗಿಸಲು ನಾನು ಬರಲಾರೆನು. ಪತಿದೇವ!

ಉಪೇಂದ್ರೇಂದ್ರಾದಯೋ ದೇವಾ ಗಂಧರ್ವಾ ಮುನಿಸತ್ತಮಾಃ ।
ಅಸ್ಮಿನ್ಕಾಲೇ ಮಹಾದೇವಂ ಪೂಜಯಂತಿ ಪ್ರಯತ್ನತಃ ॥೩೩೮॥

ಯಾ ಜಗಜ್ಜನನೀ ಸಾಕ್ಷಾದ್ಭವಾನೀ ಸಾಪಿ ಶಂಕರಂ ।
ಸಂಪೂಜಯತಿ ಯತ್ನೇನ ಸಾಧನೈರ್ಬಹುಧೈರ್ಮುದಾ ॥೩೩೯॥

ಕುಮಾರಾದ್ಯಾ ಗಣಾಧೀಶಾಃ ಸರ್ವೇಽಪ್ಯತ್ಯಂತಯತ್ನತಃ ।
ಪೂಜಯಂತಿ ಮಹಾದೇವಂ ಬ್ರಹ್ಮವಿಷ್ಣ್ವಾದಿಪೂಜಿತಂ ॥೩೪೦॥

ಗಂಧರ್ವೋರಗಯಕ್ಷಾದ್ಯಾಃ ವಿವಿಧೈಸ್ಸಾಧನೈಃ ಶಿವಂ ।
ಪೂಜಯಂತಿ ಪ್ರಯತ್ನೇನ ಸರ್ವದೇವೋತ್ತಮೋತ್ತಮಂ ॥೩೪೧॥

ಅಯಂ ಸೋಮಾನ್ವಿತಃ ಕಾಲಸ್ತ್ರಯೋದಶ್ಯಾತಿಸಂಯುತಃ ।
ಅತೋಽಧುನಾ ಪೂಜನೀಯೋ ಮಹಾದೇವಃ ಪ್ರಯತ್ನತಃ ॥೩೪೨॥

---

ಪರಲೋಕಾಪೇಕ್ಷಿಗಳಾದವರು ಇಂತಹ ಕಾಲವನ್ನು ವ್ಯರ್ಥವಾಗಿ ಕಳೆಯಬಾರದು. ಆದ್ದರಿಂದ ನೀನೂ ಈ ಪ್ರದೋಷಕಾಲದಲ್ಲಿ ಮಹಾದೇವನನ್ನು ಪೂಜೆಮಾಡು. ॥೩೩೬-೩೩೭॥

ಉಪೇಂದ್ರ (ವಿಷ್ಣು) ದೇವೇಂದ್ರ ಮೊದಲಾದ ದೇವತೆಗಳೂ, ಗಂಧರ್ವರೂ, ಮುನಿಶ್ರೇಷ್ಠರೂ ಈ ಪ್ರದೋಷಕಾಲದಲ್ಲಿ ಮಹಾದೇವನನ್ನು ನಿಯಮದಿಂದ ಪೂಜೆಮಾಡುತ್ತಿರುವರು. ಲೋಕಮಾತೆಯಾದ ಆ ಪಾರ್ವತೀದೇವಿಯೇ ಸಾಕ್ಷಾತ್ತಾಗಿ ನಾನಾ ವಿಧವಾದ ಪೂಜಾಸಾಮಗ್ರಿಗಳನ್ನು ಸಂಗ್ರಹಿಸಿ ಪತಿಯಾದ ಶಂಕರನನ್ನು ಪ್ರೀತಿಯಿಂದ ಪೂಜೆಮಾಡುವಳು. ॥೩೩೮-೩೩೯॥

ಷಣ್ಮುಖಸ್ವಾಮಿಯೇ ಮುಂತಾದ ಗಣಾಧಿಪತಿಗಳೆಲ್ಲರೂ, ಬ್ರಹ್ಮ, ವಿಷ್ಣು ಮುಂತಾದವರಿಂದ ಪೂಜಿಸಲ್ಪಟ್ಟ ಆ ಮಹಾದೇವನನ್ನು ವಿಶೇಷ ನಿಯಮದಿಂದಲೂ ಶ್ರದ್ಧೆಯಿಂದಲೂ ಪೂಜೆಮಾಡುತ್ತಿರುವರು. ಅಲ್ಲದೇ ಗಂಧರ್ವರು, ನಾಗರು, ಯಕ್ಷರೇ ಮೊದಲಾದವರು ನಾನಾ ವಿಧವಾದ ಸಾಧನಗಳಿಂದ ಸಕಲ ದೇವತೆಗಳಲ್ಲಿಯೂ ಉತ್ತಮೋತ್ತಮನೆನಿಸಿರುವ ಆ ಪರಶಿವನನ್ನು ಭಕ್ತಿಪುರಸ್ಸರವಾಗಿ ಪೂಜೆಮಾಡುತ್ತಿರುವರು. ॥೩೪೦-೩೪೧॥

ಈಗ ಸೋಮವಾರ ಮತ್ತು ತ್ರಯೋದಶೀ ಈ ಸನ್ನಿವೇಶದಿಂದ ಕೂಡಿರುವ ಸಮಯವಾಗಿರುವುದರಿಂದ ಮಹಾದೇವನನ್ನು ನಿಯಮದಿಂದ ಪೂಜೆಮಾಡಬೇಕು.

ಅರ್ಧರಾತ್ರಾರ್ಚನಂ ಶಂಭೋಃ ಸೋಮೇ ಪ್ರಿಯಕರಂ ಯತಃ ।
ತತಃ ಪೂಜ್ಯೋಽಧುನಾ ಶಂಭುರ್ಬಿಲ್ವಪತ್ರಾದಿಸಾಧನೈಃ ॥೩೪೩॥

ತ್ವಯಾಽಪಿ ಶಂಕರಃ ಸಮ್ಯಕ್ಪೂಜನೀಯಃ ಪ್ರಯತ್ನತಃ ।
ವಿಲಂಬಂ ಮಾಕುರು ಭ್ರಾಂತ್ಯಾ ಸಾವಧಾನೋ ಭವಾಧುನಾ ॥೩೪೪॥

ಕರಿಷ್ಯಸಿ ಸದಾ ಭಕ್ತ್ಯಾ ಯದಿ ಶಂಕರಪೂಜನಂ ।
ತದಾ ವಿಪುಲಭೋಗಂ ತೇ ಲಭ್ಯೋ ಮೋಕ್ಷಸ್ತ್ವಯಾ ಧ್ರುವಂ ॥೩೪೫॥

ಯಮಭ್ಯರ್ಚ್ಯ ಮಹಾದೇವಂ ವೈಕುಂಠಂ ಪ್ರಾಪ ಕೇಶವಃ ।
ತಮನಾದ್ಯಂತಮೀಶಾನಂ ಶಂಕರಂ ಶರಣಂ ವ್ರಜ ॥೩೪೬॥

ಸರ್ವದೇವೋತ್ತಮಃ ಸಾಂಬಃ ಸರ್ವದೇವಶಿಖಾಮಣಿಃ ।
ಪೂಜನೀಯಃ ಪ್ರಯತ್ನೇನ ಭುಕ್ತಿಮುಕ್ತಿಫಲೇಪ್ಸುಭಿಃ ॥೩೪೭॥

---

ಸೋಮವಾರದಲ್ಲಿ ಅರ್ಧರಾತ್ರಿಯವೇಳೆ ಮಾಡುವ ಪೂಜೆಯು ಶಂಕರನಿಗೆ ಪ್ರೀತಿಕರನಾಗಿರುವುದರಿಂದ ಪರಮ ಶಂಭುವನ್ನು ಬಿಲ್ವಪತ್ರೆ, ಹೂ ಮುಂತಾದ ಪೂಜಾದ್ರವ್ಯಗಳಿಂದ ಅವಶ್ಯವಾಗಿ ಈಗ ಪೂಜೆಮಾಡಬೇಕಾಗಿದೆ. ॥೩೪೨-೩೪೩॥

ನೀನೂ ಕೂಡ ಗೌರಿಶಂಕರನನ್ನು ನಿಯಮಪೂರ್ವಕವಾಗಿ ಚೆನ್ನಾಗಿ ಪೂಜೆಮಾಡು. ಈ ವಿಷಯದಲ್ಲಿ ಭ್ರಾಂತನಾಗಿ ತಡಮಾಡದೇ ಕೂಡಲೇ ಸಿದ್ಧನಾಗು. ಯಾವಾಗಲೂ ಭಕ್ತಿಯಿಂದ ಆ ಶಂಕರನನ್ನು ಪೂಜಿಸುವೆಯಾದರೆ ನಿನಗೆ ಸಮಸ್ತ ಭೋಗಗಳೂ ದೊರೆಯುವುವಲ್ಲದೇ ಕೊನೆಗೆ ಶಾಶ್ವತವಾದ ಮೋಕ್ಷವೂ ಸಹ ತಪ್ಪದೆ ಪ್ರಾಪ್ತವಾಗುವುದು. ॥೩೪೪-೩೪೫॥

ಯಾವ ಮಹಾದೇವನನ್ನು ಪೂಜೆಮಾಡಿ ನಾರಾಯಣನು ವೈಕುಂಠಲೋಕಾಧಿಪತಿಯಾದನೋ ಅಂತಹ ಸಕಲೈಶ್ವರ್ಯಭರಿತನಾದ ಶಂಕರನನ್ನು ನೀನೂ ಮರೆಹೊಗುವನಾಗು ? ಆ ಅಂಬಿಕಾರಮಣನು ಸಕಲ ದೇವತೆಗಳಲ್ಲಿಯೂ ಉತ್ತಮನು, ದೇವತೆಗಳಿಗೆಲ್ಲಾ ಚೂಡಾಮಣಿಪ್ರಾಯನಾಗಿರುವನು. ಇಂತಹ ಮಹಾಮಹಿಮನಾದ ಶಂಕರನನ್ನು, ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಮೋಕ್ಷವನ್ನೂ ಹೊಂದಲಪೇಕ್ಷೆಪಡುವವರು ಅವಶ್ಯವಾಗಿ ಪೂಜೆಮಾಡಲೇಬೇಕು. ॥೩೪೬-೩೪೭॥

ಮಹದ್ಭಾಗ್ಯಂ ತವಾಸ್ತ್ಯದ್ಯ ತಥಾಚ ಬಹುಸಾಧನೈಃ ।
ಪೂಜಯಸ್ವ ಮಹಾದೇವಮಪ್ರಮಾದೇನ ಸರ್ವದಾ ॥೩೪೮॥

ದೀಪಾನ್ಲಕ್ಷಾವಧಿ ಪ್ರೀತ್ಯಾ ಘೃತಕರ್ಪೂರರಾಜಿತಾನ್ ।
ರಚಯಸ್ವಾತಿಯತ್ನೇನ ಮಹಾದೇವಾಲಯೇ ಸದಾ ॥೩೪೯॥

ಲಕ್ಷಪೂಜಾಂ ಕುರು ಪ್ರೀತ್ಯಾ ರತ್ನೈರನ್ವಹಮಾದರಾತ್ ।
ಹೇಮಪುಷ್ಪೈಶ್ಚ ವಿಪುಲೈರ್ಹೇಮಬಿಲ್ವದಲೈರಪಿ ॥೩೫೦॥

ಶತವಾರಂ ಪ್ರಯತ್ನೇನ ದಧಿದುಗ್ಧಾಜ್ಯಮಿಶ್ರಿತಂ ।
ನೈವೇದ್ಯಮತಿಯತ್ನೇನ ಶಂಕರಾಯ ನಿವೇದಯ ॥೩೫೧॥

ಯದ್ಯಸ್ಮಿನ್ ಭಾಗ್ಯಸಮಯೇ ಶಂಕರಂ ನಾರ್ಚಯಿಷ್ಯಸಿ ।
ತದಾ ಕದಾ ವಾ ದೇವೇಶಂ ಶಂಕರಂ ಪೂಜಯಿಷ್ಯಸಿ ॥೩೫೨॥

ರಾಜನ್ನೈಶ್ವರ್ಯಮಖಿಲಂ ತದೇದಂ ಸಫಲಂ ಭವೇತ್ ।
ಯದ್ಯರ್ಚಯಿಷ್ಯಸಿ ಪ್ರೀತ್ಯಾ ದೇವದೇವಂ ಮಹೇಶ್ವರಂ ॥೩೫೩॥

---

ನಿನಗೆ ಅಪಾರವಾದ ಐಶ್ವರ್ಯವಿರುವುದರಿಂದ ನಾನಾ ವಿಧವಾದ ಪೂಜಾಸಾಮಗ್ರಿಗಳಿಂದ ಆ ಮಹಾದೇವನನ್ನು ಪ್ರಮಾದವಿಲ್ಲದೇ ಸದಾ ಪೂಜೆಮಾಡು. ॥೩೪೮॥

ತುಪ್ಪ ಮತ್ತು ಕರ್ಪೂರ ಇವುಗಳಿಂದ ಪ್ರಕಾಶಿಸುತ್ತಿರುವ ದೀಪಗಳನ್ನು ಆ ಮಹಾದೇವನ ಗುಡಿಗಳಲ್ಲಿ ಯಾವಾಗಲೂ ಲಕ್ಷಗಟ್ಟಲೆ ಹತ್ತಿಸುವಂತೆ ಏರ್ಪಾಡುಮಾಡು. ಪ್ರತಿದಿನವೂ ಪ್ರೀತ್ಯಾದರಗಳಿಂದ ರತ್ನಗಳನ್ನು ತೆಗೆದುಕೊಂಡು ಲಕ್ಷಬಾರಿ ಪೂಜೆಮಾಡು. ಅಲ್ಲದೇ ಚಿನ್ನದ ಹೂ, ನಾನಾ ವಿಧವಾದ ಸುವರ್ಣಮಯವಾದ ಬಿಲ್ವಪತ್ರೆ ಇವುಗಳಿಂದಲೂ ಲಕ್ಷ ಪೂಜೆಯನ್ನಾಚರಿಸು. ॥೩೪೯-೩೫೦॥

ಮೊಸರು, ಹಾಲು, ತುಪ್ಪ, ಇವುಗಳಿಂದ ಬೆರೆದ ನೈವೇದ್ಯವನ್ನು ನೂರು ಬಾರಿ ಭಕ್ತಿ ನಿಯಮದಿಂದ ಆ ಶಂಕರನಿಗೆ ಸಮರ್ಪಣೆಮಾಡು. ಐಶ್ವರ್ಯದಿಂದ ಕೂಡಿರುವ ಈ ಸಮಯದಲ್ಲಲ್ಲದೇ ಮತ್ತಾವಾಗ ದೇವೋತ್ತಮನಾದ ಆ ಶಂಕರನನ್ನು ಪೂಜೆಮಾಡುತ್ತೀಯೆ ! ॥೩೫೧-೩೫೨॥

ರಾಜೇಂದ್ರ ! ದೇವದೇವನಾದ ಆ ಮಹೇಶ್ವರನನ್ನು ಪ್ರೀತಿಯಿಂದ ಪೂಜೆ ಮಾಡಿದಾಗ ಮಾತ್ರ ನಿನ್ನ ಈ ಸಕಲೈಶ್ವರ್ಯಗಳೂ ಸಫಲವಾಗುವುವೆಂದು ತಿಳಿ. ॥

ಶಿವಾನರ್ಪಿತರತ್ನಾನಿ ಭವಿಷ್ಯಂತಿ ವೃಥಾ ತವ ।
ತಥಾ ಹೇಮಾದಿವಸ್ತೂನಿ ಭವಿಷ್ಯಂತಿ ವೃಥಾ ಧ್ರುವಂ ॥೩೫೪॥

ಧಿಗ್ಧಿಗ್ಧಿಗ್ಧಿಕ್ತವೈಶ್ವರ್ಯಂ ಯನ್ನೇಶಾರ್ಚನಸಾಧನಂ ।
ಈಶೋಽಪಿ ಶ್ರೀಮಹೇಶಾನ್ಯೋ ನಾಸ್ತಿ ನಾಸ್ತ್ಯೇವ ಸರ್ವಥಾ॥೩೫೫॥

ರಾಜನ್ಮಾ ಕುರು ಭೋಗೇಚ್ಛಾಂ ರಾಜ್ಯೇಚ್ಛಾಮಪಿ ಸಂತ್ಯಜ ।
ಕುರು ಯತ್ನೇನ ಸತತಂ ಶ್ರೀಮಹಾದೇವಪೂಜನಂ ॥೩೫೬॥

ವಿಹಾಯ ಚಂದನಂ ರಾಜನ್ ಭಸ್ಮನಾಂಗಂ ವಿಲೇಪಯ ।
ವಿಹಾಯ ರತ್ನಾಭರಣಂ ಕುರು ರುದ್ರಾಕ್ಷಧಾರಣಂ ॥೩೫೭॥

ಶೃಣು ಶೈವೀಂ ಕಥಾಂ ರಮ್ಯಾಂ ಕಥಾಮನ್ಯಾಂ ತ್ಯಜಾದರಾತ್ ।
ಜಪ ಪಂಚಾಕ್ಷರಂ ಶೈವಂ ಮಹಾಪಾತಕನಾಶಕಂ ॥೩೫೮॥

---

ಪರಶಿವನಿಗೆ ಸಮರ್ಪಣೆ ಮಾಡದೇ ಇರುವ ರತ್ನಗಳೂ ಚಿನ್ನವೇ ಮೊದಲಾದ ವಸ್ತುಗಳೂ ನಿಜವಾಗಿಯೂ ವ್ಯರ್ಥವೆಂದೇ ತಿಳಿ. ॥೩೫೩-೩೫೪॥

ಜಗದೀಶ್ವರನ ಪೂಜೆಗೆ ಉಪಯೋಗಿಸದಿರುವ ಆ ನಿನ್ನ ಐಶ್ವರ್ಯವು ವ್ಯರ್ಥವು. ಅದಕ್ಕೆ ಧಿಕ್ಕಾರವಿರಲಿ. ಆ ಈಶ್ವರನಾದರೋ ಮಹೇಶ್ವರನಿಗಿಂತಲೂ ಬೇರೆಯುವನೆಂದು ಎಂದಿಗೂ ತಿಳಿಯಬೇಡ. ರಾಜೇಂದ್ರ, ವಿಷಯ ಸುಖಗಳ ಅಪೇಕ್ಷೆಯನ್ನೂ ರಾಜ್ಯಸುಖಗಳ ಹಂಬಲನ್ನೂ ಬಿಟ್ಟು, ಅನವರತವೂ ಮಂಗಳಕರನಾದ ಆ ಮಹಾದೇವನನ್ನು ನಿಯಮದಿಂದ ಪೂಜೆಮಾಡು. ॥೩೫೫-೩೫೬॥

ಚಂದನವನ್ನು ದೂರಮಾಡಿ ವಿಭೂತಿಯಿಂದ ಅವಯವಗಳನ್ನು ಲೇಪನ ಮಾಡಿಕೋ. ರತ್ನಾಭರಣಕ್ಕೆ ಬದಲಾಗಿ ರುದ್ರಾಕ್ಷ ಮಾಲೆಗಳನ್ನಲಂಕರಿಸು. ಇತರ ಕಥೆಗಳಲ್ಲಿ ಆಸಕ್ತನಾಗದೇ ಯಾವಾಗಲೂ ಆದರದಿಂದ ಪರಶಿವನ ಸಂಬಂಧವಾದ ಕಥೆಗಳನ್ನೇ ಕೇಳುವನಾಗು. ಅಲ್ಲದೇ ಬ್ರಹ್ಮಹತ್ಯಾದಿ ಮಹಾಪಾಪಗಳನ್ನೂ ನಾಶ ಮಾಡುವ ಆ ಶಿವಪಂಚಾಕ್ಷರ ಮಂತ್ರವನ್ನೇ ಅನವರತವೂ ಜಪಮಾಡು. ॥೩೫೭-೩೫೮॥

ಅನಿತ್ಯಮಿದಮೈಶ್ವರ್ಯಂ ರಾಜ್ಯಾಂತೇ ದುಃಖದಾಯಕಂ ।
ತ್ಯಜೈಶ್ವರ್ಯಮಿದಂ ಶೀಘ್ರಂ ಪೂಜಯಸ್ವ ಮಹೇಶ್ವರಂ ॥೩೫೯॥

ಮಯಿ ಮಾ ಕುರು ರಾಜೇಂದ್ರ ಸ್ನೇಹಂ ದುಃಖೈಕಸಾಧಕಂ ।
ಸ್ತ್ರೀವಶೋ ನಿರಯಂ ಯಾತಿ ಸತ್ಯಮೇವೋಚ್ಯತೇ ಮಯಾ ॥೩೬೦॥

ಮಾಂಸಗ್ರಂಥೀ ಸ್ತನಾವೇತೌ ಕಿಮತ್ರಾಸ್ತಿ ವದಸ್ವ ಮೇ ।
ವಿದಾರಿತೇ ಮಾಂಸಮಾತ್ರಂ ನಿಃಸರಿಷ್ಯತಿ ಸರ್ವಥಾ ॥೩೬೧॥

ಶ್ಲೇಷ್ಮಾಗಾರಂ ಮುಖಂ ಪಶ್ಯ ನೇತ್ರೇ ಚ ನ ವಿನಾಶ್ರಯೇ ।
ವಿವೇಕೀ ಶ್ಲೇಷ್ಮಪಾನಾರ್ಥಂ ಯತತೇ ಕಿಂ ವದಸ್ವ ಮೇ ॥೩೬೨॥

ಮೂತ್ರಾಗಾರೋ ಯೋನಿದೇಶಃ ಸ ತು ದುರ್ಗಂಧಿ ಸರ್ವದಾ ।
ತತ್ರ ಯಃ ಕುರುತೇ ಪ್ರೀತಿಂ ಸ ಏವ ಹಿ ನರಾಧಮಃ ॥೩೬೩॥

ಅತಸ್ತ್ಯಜ ಮಯಿ ಪ್ರೀತಿಂ ಕುರು ಶಂಕರಪೂಜನಂ ।
ಭಜ ನಿತ್ಯಂ ಮಹಾದೇವಂ ಬ್ರಹ್ಮವಿಷ್ಣ್ವಾದಿಸೇವಿತಂ ॥೩೬೪॥

---

ರಾಜ್ಯಾಧಿಕಾರವು ಮುಗಿದಮೇಲೆ ದುಃಖಪ್ರದವಾದ ಈ ನಿನ್ನ ಐಶ್ವರ್ಯವು ಅಶಾಶ್ವತವೆಂದು ತಿಳಿದು ಈ ಐಶ್ವರ್ಯವನ್ನು ತ್ಯಾಗ ಮಾಡುತ್ತಾ ಜಾಗ್ರತೆಯಾಗಿ ಮಹೇಶ್ವರನನ್ನು ಪೂಜೆಮಾಡು. ರಾಜೇಂದ್ರನೇ, ಕೇವಲ ದುಃಖಕ್ಕೆ ಕಾರಣಭೂತವಾಗಿರುವ ಸ್ನೇಹವನ್ನು ನನ್ನಲ್ಲಿ ತೋರಿಸಬೇಡ. ಹೆಂಗಸಿಗೆ ಅಧೀನನಾದವನು ಸತ್ಯವಾಗಿಯೂ ನರಕಕ್ಕೆ ಹೋಗುವನೆಂದು ತಿಳಿ. ॥೩೫೯-೩೬೦॥

ಈ ನನ್ನ ಸ್ತನಗಳು ಕೇವಲ ಮಾಂಸದ ಗಂಟಾಗಿರುವುವು. ಇದರಲ್ಲಿರುವ ಸತ್ವವನ್ನು ನೀನೇ ನೋಡಿ ಹೇಳು. ಈ ಸ್ತನಗಳು ಅಪಾಯಕ್ಕೊಳಗಾದರೆ ಆಗ ಕೇವಲ ಮಾಂಸವೇ ಅದರಿಂದ ಹೊರಬೀಳುವುದು. ಮುಖವಾದರೋ ಶ್ಲೇಷ್ಮಗಳಿಗೆ ನೆಲೆಯಾಗಿರುವುದು. ಕಣ್ಣುಗಳನ್ನು ನೋಡುವುದಾದರೆ ಅವುಗಳಿಗೆ ಆಶ್ರಯವೇ ಇಲ್ಲವು. ಹೀಗಿರುವಾಗ ವಿವೇಕಶಾಲಿಯಾದವನು ಶ್ಲೇಷ್ಮಪಾನ ಮಾಡಲು ಹೇಗೆ ಪ್ರಯತ್ನಿಸುವನು. ನೀನೇ ಹೇಳು. ॥೩೬೧-೩೬೨॥

ಮೂತ್ರಕ್ಕೆ ಮನೆಯಾದ ಯೋನಿಪ್ರದೇಶವು ಯಾವಾಗಲೂ ದುರ್ಗಂಧದಿಂದ ಕೂಡಿರುವುದು. ಇದರಲ್ಲಿ ಪ್ರೀತಿಯುಳ್ಳವನು ಕೇವಲ ಮಾನವಾಧಮನೆಂದು ತಿಳಿ.

ದೇವತಾಸಾರ್ವಭೌಮಸ್ಯ ಮಹಾದೇವಸ್ಯ ಸರ್ವದಾ ।
ವಿಷ್ಣುಬ್ರಹ್ಮಾದಯಃ ಸರ್ವೇ ಪೂಜಾಂ ಕುರ್ವಂತಿ ಯತ್ನತಃ ॥೩೬೫॥

ಯೌವನಭ್ರಾಂತಚಿತ್ತೇನ ತ್ವಯಾ ತ್ಯಕ್ತಂ ಶಿವಾರ್ಚನಂ ।
ತತ್ತ್ಯಾಗೇ ನರಕಾವಾಸೋ ಭವಿಷ್ಯತಿ ನ ಸಂಶಯಃ ॥೩೬೬॥

ರಾಜಂಛಿವಾರ್ಚನತ್ಯಾಗಾತ್ಪತಂತಿ ನರಕೇ ಜನಾಃ ।
ಪ್ರಾಪ್ತಾನಿ ನರಕಾಣ್ಯದ್ಧಾ ಪುರಾ ತ್ಯಕ್ತಶಿವಾರ್ಚನೈಃ ॥೩೬೭॥

ಮಿತ್ರರಾಡಪಿ ತದ್ವಾಕ್ಯಂ ಶ್ರುತ್ವಾ ವಚನಮಬ್ರವೀತ್ ।
ಕಥಂ ಜ್ಞಾತಮಿದಂ ಸರ್ವಂ ವದ ಭದ್ರೇ ಮಮ ಪ್ರಿಯೇ ॥೩೬೮॥

ಏವಂ ಬ್ರುವಾಣಂ ರಾಜಾನಮಿತಿ ಸಾ ತಮುವಾಚ ಚ ।
ಅಹಂ ಪೂರ್ವಭವೇ ರಾಜನ್ ಕಿರಾತಾಧಮಕನ್ಯಕಾ ॥೩೬೯॥

---

ಅಯ್ಯ ರಾಜನೇ, ಆದ್ದರಿಂದ ನನ್ನಲ್ಲಿ ಅನುರಾಗವನ್ನು ದೂರಮಾಡಿ ಶಂಕರನನ್ನು ಪೂಜೆಮಾಡು. ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಂದಲೂ ಸೇವಿಸಲ್ಪಡುತ್ತಿರುವ ಆ ಮಹಾದೇವನನ್ನು ನಿತ್ಯವೂ ತಪ್ಪದೇ ಭಜಿಸುವನಾಗು. ॥೩೬೩-೩೬೪॥

ದೇವತಾಸಾರ್ವಭೌಮನಾದ ಆ ಮಹಾದೇವನನ್ನು ವಿಷ್ಣು, ಬ್ರಹ್ಮ ಮುಂತಾದವರೆಲ್ಲರೂ ಯಾವಾಗಲೂ ನಿಯಮದಿಂದ ಪೂಜೆ ಮಾಡುತ್ತಿರುವರು. ಯೌವನದಿಂದ ಭ್ರಾಂತಿ ಹೊಂದಿದ ಮನಸ್ಸಿನಿಂದ ನೀನು ಶಿವಪೂಜೆಯನ್ನು ಮಾಡದೇ ಅದನ್ನು ದೂರಮಾಡಿರುವೆ. ಇದರಿಂದ ನರಕವಾಸವೊದಗುವುದರಲ್ಲಿ ಸಂದೇಹವೇ ಇಲ್ಲ. ॥೩೬೫-೩೬೬॥

ಶಿವಪೂಜೆಯನ್ನು ಬಿಡುವುದರಿಂದ ಜನಗಳು ನರಕದಲ್ಲಿ ಬೀಳುವರು. ಹಿಂದೆ ಶಿವಪೂಜೆಯನ್ನು ಬಿಟ್ಟದ್ದರಿಂದ ಅನೇಕರು ಘೋರವಾದ ನರಕಗಳನ್ನು ಹೊಂದಿರುವರು" ಎಂದು ತನ್ನ ಪತ್ನಿಯು ಹೇಳಿದುದನ್ನು ಕೇಳಿ ಅವಳನ್ನು ಆಪ್ತಮಿತ್ರಳಂತೆ ಭಾವಿಸಿ ಮಂಗಳಾಂಗಿಯಾದ ಪ್ರೇಯಸಿಯೇ, ಇವೆಲ್ಲವೂ ನಿನಗೆ ಹೇಗೆ ತಿಳಿಯಿತು ವಿಸ್ತಾರವಾಗಿ ಹೇಳೆಂದು ಮಿತ್ರರಾಡೆಂಬ ರಾಜನು ಪ್ರಶ್ನೆ ಮಾಡಿದನು.॥೩೬೭-೩೬೮॥

ಹೀಗೆ ತನ್ನನ್ನು ಪ್ರಶ್ನಿಸಿದ ರಾಜನಿಗೆ, ರಾಣಿಯಾದ ಸುಭಗಾದೇವಿಯು ಇಂತೆಂದಳು. "ರಾಜೇಂದ್ರ, ಹಿಂದಿನ ಜನ್ಮದಲ್ಲಿ ನಾನು ಹೀನಜನ್ಮದ ಬೇಡನ

ಜಾತಂ ಹಿ ಜೀವನಂ ಪೂರ್ವಂ ಕಾಷ್ಠವಿಕ್ರಯಣಾದಿನಾ ।
ನ ಪ್ರಾಪ್ತಮನ್ನಂ ಸಂಪೂರ್ಣಂ ಕದಾಚಿದಪಿ ಸರ್ವಥಾ ॥೩೦॥

ವಸ್ತ್ರಸ್ಯ ವಾರ್ತಾ ಕಾ ತತ್ರ ಪತ್ರಂ ತು ಪರಿಧೀಯತೇ ।
ವನೇ ಗತಂ ಮಯಾ ಪೂರ್ವಂ ಕಾಷ್ಠಾನ್ಯಾಹರ್ತುಮೇಕದಾ ॥೩೧॥

ತತ್ರ ಶೈವೋ ಮಯಾ ದೃಷ್ಟಃ ಶಿವಪೂಜಾವಿಶಾರದಃ ।
ನಾಟ್ಯಂ ಕೃತ್ವಾ ಸ್ಥಿತಂ ತೇನ ಶಂಕರಾಗ್ರೇ ಪ್ರಯತ್ನತಃ ॥೩೨॥

ತಂ ವೀಕ್ಷ್ಯ ಶಂಕರಂ ನತ್ವಾ ಮಯಾ ನಾಟ್ಯಂ ಕೃತಂ ತದಾ ।
ತತೋ ದೈವಾದಭೂತ್ತಸ್ಮಿನ್ನರಣ್ಯೇ ಮರಣಂ ಮಮ ॥೩೩॥

ತದಾನೀಮಾಗತಂ ಮಹ್ಯಂ ಪುಷ್ಪಕಂ ಸ್ವರ್ಗಲೋಕತಃ ।
ತತ್ರ ಗತ್ವಾ ಸ್ವರ್ಗಲೋಕೇ ಬಹುಕಾಲಂ ಸ್ಥಿತಂ ಮಯಾ ॥೩೪॥

---

ಮಗಳಾಗಿದ್ದೆನು. ಸೌದೇ, ಕಡ್ಡೀ, ಮುಂತಾದವುಗಳ ವಿಕ್ರಯದಿಂದ ನಾನು ಜೀವನ ಮಾಡುತ್ತಿದ್ದೆನು. ಇದರಿಂದ ಯಾವಾಗಲೂ ನನಗೆ ಪೂರ್ಣವಾಗಿ ಅನ್ನವೇ ದೊರೆಯುತ್ತಿರಲಿಲ್ಲ. ॥೨೯-೩೦॥

ಹೀಗಿರುವಾಗ ಬಟ್ಟೆಬರೆಗಳ ಸಮಾಚಾರವೇನು ಹೇಳಲಿ. ಕೇವಲ ಮರದ ಎಲೆಗಳನ್ನೇ ಹೊದೆಯುತ್ತಿದ್ದೆನು. ಆಗ ನಾನು ಸೌದೆಗಳನ್ನು ತರಲು ಒಂದುಸಲ ಕಾಡಿಗೆ ಹೋಗಿದ್ದೆನು. ಆಗ ಆ ಕಾಡಿನಲ್ಲಿ ಶಿವಪೂಜಾ ತತ್ಪರನಾದ ಒಬ್ಬ ಶಾಂಭವನ ದರ್ಶನವಾಯಿತು. ಆ ಶೈವನು, ಶಂಕರನ ಮುಂದೆ ನಿಯಮದಿಂದ ನಾಟ್ಯವಾಡುತ್ತಾ ನಿಂತಿದ್ದನು. ॥೩೧-೩೨॥

ಅಂತಹ ಪರಶಿವಭಕ್ತನನ್ನು ನೋಡಿದಮೇಲೆ ನಾನೂ ಶಂಕರನಿಗೆ ನಮಸ್ಕಾರ ಮಾಡಿ ನಾಟ್ಯವಾಡಿದೆನು. ಆಮೇಲೆ ಅದೃಷ್ಟವಶದಿಂದ ನನಗೆ ಆ ಕಾಡಿನಲ್ಲೇ ಮರಣವೊದಗಿತು. ಆ ಸಮಯದಲ್ಲಿ ನನಗೋಸ್ಕರ ಸ್ವರ್ಗಲೋಕದಿಂದಪುಷ್ಪಕ ವಿಮಾನವು ಬಂದಿತು. ನಾನು ಅದರಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಬಹುಕಾಲ ವಾಸಮಾಡಿದೆನು. ॥೩೩-೩೪॥

ತತೋ ನರಾಧಿನಾಥಸ್ಯ ಸಂಭೂತಮುದರೇ ಮಯಾ ।
ರಂಭಾದ್ಯಾಶ್ಚ ಜಿತಾಃ ಸರ್ವಾಃ ಸೌಂದರ್ಯೇಣ ಮಯಾ ಧ್ರುವಂ ॥೩೭೫॥

ಸರ್ವದಾ ಸುಖಮೇವಾಸ್ತಿ ಮಮ ದುಃಖಂ ನ ಕಿಂಚನ ।
ಶಿವಪ್ರಣಾಮನಾಟ್ಯಾಭ್ಯಾಂ ನಿರಂತರಸುಖಂ ಮಯಾ ॥೩೭೬॥

ಪ್ರಾಪ್ತಮಂತೇ ಮಯಾ ಮುಕ್ತಿಃ ಪ್ರಾಪ್ತವ್ಯಾ ಸತ್ಯಮುಚ್ಯತೇ ॥೩೭೭॥

ಅತೀತಾನಾಗತಜ್ಞಾನಂ ಮಹಾದೇವಪ್ರಸಾದತಃ ।
ಮಮ ಜಾತಮತಃ ಸರ್ವಂ ಸ್ಮರ್ಯತೇ ನಾತ್ರ ಸಂಶಯಃ ॥೩೭೮॥

ಸ್ವಮುಖಂ ದೃಶ್ಯತೇ ಸಮ್ಯಗ್ವಿಮಲೇ ದರ್ಪಣೇ ಯಥಾ ।
ತಥಾತೀತಾನಾಗತಾರ್ಥಾಃ ದೃಶ್ಯಂತೇ ಸರ್ವದಾ ಮಯಾ ॥೩೭೯॥

ಪ್ರಣಾಮನರ್ತನಾದೀನಿ ಮಹಾದೇವಸ್ಯ ಪೂಜನಂ ।
ತತಸ್ತತ್ಪೂಜಯಾ ಸರ್ವಂ ಮಯೇದಂ ಜ್ಞಾಯತೇ ಧ್ರುವಂ ॥೩೮೦॥

---

ಅನಂತರ ನಾನು ರಾಜನ ಹೊಟ್ಟೆಯಲ್ಲಿ ಹುಟ್ಟಿದೆನು. ಆಗಿನ ನನ್ನ ಸೌಂದರ್ಯವು ರಂಭಾ, ಊರ್ವಶೀ ಮುಂತಾದ ಅಪ್ಸರೆಯರನ್ನೂ ಜಯಿಸಿದ್ದಿತು. ಯಾವಾಗಲೂ ನನಗೆ ಸುಖವೇ ಹೊರತು ಕೊಂಚವೂ ದುಃಖವೇ ಇರಲಿಲ್ಲ. ಆ ಪರಶಿವನಿಗೆ ನಮಸ್ಕಾರ ಮಾಡುತ್ತಾ ಆ ದೇವದೇವನ ಮುಂದೆ ನಾಟ್ಯವಾಡುತ್ತಿದ್ದರೆ ಅವೆರಡರಿಂದಲೇ ನನಗೆ ಯಾವಾಗಲೂ ಆನಂದವುಂಟಾಗುವುದು. ॥೩೭೫-೩೭೬॥

ಹೀಗೆ ನಿರಂತರವಾದ ಸುಖವುಂಟಾಗುತ್ತಿದ್ದಿತಲ್ಲದೇ ಮುಂದೆ ಸತ್ಯವಾಗಿಯೂ ಮೋಕ್ಷ ಪ್ರಾಪ್ತಿಯಾಗುವುದು. ನನಗೆ ಮಹಾದೇವನ ಅನುಗ್ರಹದಿಂದ ಭೂತ, ಭವಿಷ್ಯ ವೃತ್ತಾಂತವೆಲ್ಲವೂ ನನಗೆ ಸಂದೇಹವೇ ಇಲ್ಲದೇ ಸ್ಮರಣೆಗೆ ಬರುತ್ತಿರುವುವು. ॥೩೭೭-೩೭೮॥

ನಿರ್ಮಲವಾದ (ಕೊಳೆಯಿಲ್ಲದ) ಕನ್ನಡಿಯಲ್ಲಿ ತನ್ನ ಮುಖವು ಚೆನ್ನಾಗಿ ಕಾಣುವಂತೆ ಭೂತ, ಭವಿಷ್ಯದ್ವರ್ತಮಾನ ಸಂಗತಿಗಳೆಲ್ಲವೂ ನನಗೆ ಯಾವಾಗಲೂ ಕಾಣುತ್ತಿರುವುವು. ಆ ಮಹಾದೇವನಿಗೆ ನಮಸ್ಕಾರ ಮತ್ತು ನರ್ತನ ಇವುಗಳನ್ನು ಮಾಡಿ, ಆ ದೇವದೇವನನ್ನು ಪೂಜೆ ಮಾಡಿದುದರಿಂದ ನನಗೆ ನಿಶ್ಚಯವಾಗಿ ಇವೆಲ್ಲವೂ ಈಗ ತಿಳಿಯುತ್ತಿರುವುವು. ॥೩೭೯-೩೮೦॥

ಜಾತಿಸ್ಮರತ್ವಂ ಸೌಭಾಗ್ಯಂ ಮೋಕ್ಷಶ್ಚ ಶಿವಪೂಜಯಾ ।
ಪ್ರಾಪ್ಯತೇ ನಾತ್ರ ಸಂದೇಹಃ ಶ್ರದ್ಧಸ್ವ ಪೃಥಿವೀಪತೇ ॥೩೮೧॥

ಏಕವಾರಂ ನರ್ತನೇನ ಪ್ರಣಾಮೇನ ಚ ಶಂಕರಃ ।
ಸೌಭಾಗ್ಯಮೀದೃಶಂ ಮಹ್ಯಮತಿಕಾರುಣಿಕೋ ದದೌ ॥೩೮೨॥

ಮಯಾ ತ್ವಹರ್ನಿಶಂ ಸಾಂಬಃ ಪೂಜ್ಯತೇ ಬಹುಸಾಧನೈಃ ।
ಇದಾನೀಂ ತು ವಿಶೇಷೇಣ ಪೂಜ್ಯತೇ ಪಾರ್ವತೀಪತಿಃ ॥೩೮೩॥

ಇತ್ಯುದೀರಿತಮಾಕರ್ಣ್ಯ ರೋಮಾಂಚಿತತನುಸ್ತದಾ ।
ಕೋಽಹಂ ಪೂರ್ವಭವೇ ಸರ್ವಂ ವದೇತ್ಯಾಹ ಸ ಭೂಪತಿಃ ॥೩೮೪॥

॥ ಸುಭಗೋವಾಚ ॥

ಶೂದ್ರಸ್ತ್ವಮಸಿ ರಾಜೇಂದ್ರ ಪೂರ್ವಜನ್ಮನಿ ದುರ್ಬಲಃ ।
ಅತಿ ಕುತ್ಸಿತವೃತ್ತ್ಯೈವ ಜಾತಂ ಹಿ ತವ ಜೀವನಂ ॥೩೮೫॥

---

ಅಯ್ಯ ರಾಜನೇ, ಪೂರ್ವಜನ್ಮಸ್ಮರಣೆಯುಂಟಾಗುವುದೂ, ಸಕಲ ಸೌಭಾಗ್ಯಗಳೂ ಮತ್ತು ಮೋಕ್ಷವೂ ಆ ಶಿವಪೂಜೆಯಿಂದಲೇ ದೊರೆಯುವುದೆಂಬುದರಲ್ಲಿ ಸಂದೇಹವೇ ಇಲ್ಲ. ಪರಮದಯಾಳುವಾದ ಆ ಶಂಕರನು ತನಗೆ ಒಂದೇ ಬಾರಿ ನಮಸ್ಕಾರಮಾಡಿ ತನ್ನ ಮುಂದೆ ಒಂದು ಸಲ ನಾಟ್ಯವಾಡಿದವರಿಗೆ ಇಂತಹ ಸೌಭಾಗ್ಯವನ್ನು ಕರುಣಿಸಿರುವನು. ॥೩೮೧-೩೮೨॥

ನಾನು ಆ ಅಂಬಿಕಾರಮಣನನ್ನು ಹಗಲೂರಾತ್ರಿ ಎಡಬಿಡದೇ ಅನೇಕ ಸಲಕರಣೆಗಳಿಂದ ಪೂಜೆಮಾಡುವೆನು. ಈಗಲಾದರೋ ವಿಶೇಷವಾಗಿ ಆ ಪಾರ್ವತೀರಮಣನನ್ನೇ ಪೂಜೆಮಾಡುತ್ತೇನೆಂದು" ರಾಣಿಯು ಹೇಳಿದುದನ್ನು ಕೇಳಿ ರೋಮಾಂಚಹೊಂದಿ ಆ ರಾಜನು 'ಹಿಂದಿನ ಜನ್ಮದಲ್ಲಿ ನಾನಾರಾಗಿದ್ದೆನೆಂಬುದನ್ನು ತಿಳಿಸೆಂದು' ಪುನಃ ಪ್ರಶ್ನಿಸಿದನು. ॥೩೮೩-೩೮೪॥

ಆಗ ಆ ಸುಭಗಾರಾಣಿಯು ; "ರಾಜೇಂದ್ರ, ಹಿಂದಿನ ಜನ್ಮದಲ್ಲಿ ನೀನು ಬಲಹೀನನಾದ ಶೂದ್ರನಾಗಿದ್ದೆ. ಬಹಳ ಹೀನವೃತ್ತಿಯಿಂದ ನಿನ್ನ ಜೀವನ ಸಾಗುತ್ತಿ

ಕ್ರಿಯಾರ್ಥಂ ಬಿಲ್ವಪತ್ರಾಣಿ ಸಮಾನೇತುಂ ತ್ವಯಾ ಪುರಾ ।
ವನಂ ಪ್ರವಿಷ್ಟಂ ಗಹನಂ ಸುಬಿಲ್ವತರುಸಂಶ್ರಿತಂ ॥೩೮೬॥

ತತ್ರೈವ ಬಿಲ್ವಪತ್ರಾಣಿ ತೋಟಿತಾನಿ ತ್ವಯಾ ವನೇ ।
ಬಹೂನಿ ತಾನಿ ಸಂಬದ್ಧ್ವಾ ಪರಾವೃತ್ತಂ ತ್ವಯಾ ವನಾತ್ ॥೩೮೭॥

ಮಧ್ಯೇ ಮಾರ್ಗಂ ತ್ವಯಾ ಚೋರಾ ಬಹವಃ ಸಮುಪಾಗತಾಃ ।
ತದ್ದರ್ಶನೇನ ಭೀತಿಸ್ತೇ ಬಭೂವ ಪ್ರಾಣಹಾರಿಣೀ ॥೩೮೮॥

ಸರ್ವಾಣಿ ಬಿಲ್ವಪತ್ರಾಣಿ ತ್ಯಕ್ತ್ವೈವ ತ್ವರಯಾ ತ್ವಯಾ ।
ಪ್ರಪಲಾಯ್ಯ ಗತಂ ಭೀತ್ಯಾತದ್ಭಯೇನ ಮೃತಂ ತ್ವಯಾ ॥೩೮೯॥

ತ್ಯಕ್ತಾನಿ ಬಿಲ್ವಪತ್ರಾಣಿ ಶಿವಲಿಂಗೇ ತು ನಾರ್ಮದೇ ।
ಪತಿತಾನಿ ತದಾ ತೇನ ಸಂತುಷ್ಟಃ ಪಾರ್ವತೀಪತಿಃ ॥೩೯೦॥

ತತಃ ಪರಂ ಲಿಂಗರೂಪೀ ಸ್ವಯಮೇವ ಮಹೇಶ್ವರಃ ।
ಕೃಪಾಲುಃ ಪಾರ್ವತೀಯುಕ್ತಸ್ತವ ಪ್ರತ್ಯಕ್ಷತಾಂ ಗತಃ ॥೩೯೧॥

---

ದ್ದಿತು. ಒಂದು ಸಲ ನೀನು ಬಿಲ್ವಪತ್ರೆಗಳನ್ನು ತಂದು ಮಾರುವುದಕ್ಕೋಸ್ಕರ ಬಿಲ್ವ ವೃಕ್ಷಗಳಿಂದ ದಟ್ಟವಾಗಿರುವ ಒಂದು ಗಂಭೀರವಾದ ಕಾಡನ್ನು ಪ್ರವೇಶಮಾಡಿದೆ. ॥೩೮೫-೩೮೬॥

ನೀನು ಅದೇ ಕಾಡಿನಲ್ಲಿ ಬಿಲ್ವಪತ್ರೆಗಳನ್ನು ಕೊಯ್ದು ಅವುಗಳನ್ನು ಗಂಟುಕಟ್ಟಿಕೊಂಡು ಅಲ್ಲಿಂದ ಹಿಂತಿರುಗಿದೆ. ದಾರಿಯ ಮಧ್ಯದಲ್ಲಿ ಅನೇಕ ಕಳ್ಳರು ನಿನ್ನ ಎದುರಿಗೆ ಬರಲು, ಅವರನ್ನು ನೋಡಿ ನಿನಗೆ ಪ್ರಾಣಾಪಾಯವಾಗುವುದೆಂಬ ಭಯವುಂಟಾಯಿತು. ॥೩೮೭-೩೮೮॥

ಆಗ ನೀನು ಎಲ್ಲಾ ಬಿಲ್ವಪತ್ರೆಗಳನ್ನೂ ಅಲ್ಲಿಯೇ ಬಿಟ್ಟು ಜಾಗ್ರತೆಯಾಗಿ ಓಡಿ ಆ ಭಯದಿಂದಲೇ ಮರಣಹೊಂದಿದೆ. ನೀನು ಪ್ರಾಣಭಯದಿಂದ ಬಿಟ್ಟುಬಂದ ಬಿಲ್ವಪತ್ರೆಗಳು ನರ್ಮದಾನದಿಯ ತೀರದಲ್ಲಿರುವ ಶಿವಲಿಂಗದ ಮೇಲೆ ಬಿದ್ದವು. ಇದರಿಂದ ಆ ಪಾರ್ವತೀರಮಣನು ತುಂಬಾ ಸಂತೋಷಹೊಂದಿದನು. ॥೩೮೯-೩೯೦॥

ಅನಂತರ ಲಿಂಗ ಸ್ವರೂಪಿಯಾದ ಆ ಮಹೇಶ್ವರನು ದಯಾಳುವಾದ್ದರಿಂದ ಅಲ್ಲಿಯೇ ಪಾರ್ವತಿಯೊಡನೆ ನಿನಗೆ ಪ್ರತ್ಯಕ್ಷನಾದನು. ಆಗ ನೀನು ಆ ಪರಮೇಶ್ವರ

ವರಃ ಪೃಷ್ಟಸ್ತ್ವಯಾ ರಾಜನ್ ಪ್ರತ್ಯಕ್ಷೇ ಪರಮೇಶ್ವರೇ ।
ರಾಜ್ಯಂ ದೇಹಿ ಮಹಾದೇವ ಮುಕ್ತಿಂ ಚೇತಿಪ್ರಣಮ್ಯ ತಂ ॥೩೯೨॥

ತತಃ ಸ ಪಾರ್ವತೀನಾಥಸ್ತಥಾಸ್ತ್ವಿತ್ಯನುಮೋದ್ಯ ಚ ।
ತತ್ರೈವಾಂತರ್ದಧೇ ಲಿಂಗೇ ಬಿಲ್ವಪತ್ರಾಭಿವೇಷ್ಟಿತೇ ॥೩೯೩॥

ತತಃ ಪರಂ ಸಮುತ್ಪನ್ನಂ ತ್ವಯಾ ಕ್ಷೋಣೀಶ್ವರೋದರೇ ।
ಭುಜ್ಯತೇ ರಾಜ್ಯಭೋಗಾದಿ ಶಂಕರಾನುಗ್ರಹಾತ್ಸದಾ ॥೩೯೪॥

ತ್ವಯಾಽಜ್ಞಾತ್ವಾ ಬಿಲ್ವಪತ್ರೈರ್ನ ಮಹೇಶಾರ್ಚನಂ ಕೃತಂ ।
ತಥಾಪಿ ಭಾಗ್ಯಮತುಲಂ ದದೌ ತುಭ್ಯಂ ಸದಾಶಿವಃ ॥೩೯೫॥

ಏತಾದೃಶಃ ಕೃಪಾಸಿಂಧುಸ್ತ್ವಯಾ ನಾಭ್ಯರ್ಚ್ಯತೇ ಶಿವಃ ।
ಯತ್ಪ್ರಸಾದೇನ ಸೌಭಾಗ್ಯಂ ಪ್ರಾಪ್ತಮೇವಂ ತ್ವಯಾಧುನಾ ॥೩೯೬॥

ಮೋಹಂ ತ್ಯಜಾಧುನಾ ರಾಜನ್ಪೂಜಯಸ್ವ ಮಹೇಶ್ವರಂ ।
ನಿತ್ಯಮವ್ಯಭಿಚಾರೇಣ ಶಂಕರಂ ಶರಣಂ ವ್ರಜ ॥೩೯೭॥

---

ನನ್ನ ಮಹಾದೇವ, ನನಗೆ ರಾಜ್ಯವನ್ನೂ ಮತ್ತು ಮೋಕ್ಷವನ್ನೂ ಕರುಣಿಸೆಂದು ನಮಸ್ಕಾರ ಮಾಡಿ ಪ್ರಾರ್ಥಿಸಿದೆ. ॥೩೯೧-೩೯೨॥

ಆಗ ಆ ಪಾರ್ವತೀರಮಣನು ಹಾಗೆಯೇ ಆಗಲೆಂದು ಅನುಮೋದಿಸಿ ಬಿಲ್ವಪತ್ರೆಗಳಿಂದ ಸುತ್ತಲೂ ಪೂಜೆ ಮಾಡಲ್ಪಟ್ಟಿರುವ ಆ ಶಿವಲಿಂಗದಲ್ಲಿಯೇ ಮರೆಯಾದನು. ಅದಾದಮೇಲೆ ನೀನೂ ರಾಜನ ಹೊಟ್ಟೆಯಲ್ಲಿ ಹುಟ್ಟಿ ಆ ಶಂಕರನ ಅನುಗ್ರಹದಿಂದ ರಾಜ್ಯಭೋಗವೇ ಮುಂತಾದವುಗಳನ್ನೆಲ್ಲಾ ಆನಂದದಿಂದ ಅನುಭವಿಸುತ್ತಿರುವೆ. ॥೩೯೩-೩೯೪॥

ತಿಳಿಯದೇ ನೀನು ಬಿಲ್ವಪತ್ರೆಗಳಿಂದ ಆ ಮಹೇಶ್ವರನನ್ನು ಪೂಜೆಮಾಡಿದೆ. ಆದರೂ ಆ ಸದಾಶಿವನು (ನಿತ್ಯಮಂಗಳಸ್ವರೂಪನಾದ ಮಹಾದೇವನು) ಅಪಾರವಾದ ಐಶ್ವರ್ಯವನ್ನು ನಿನಗೆ ಕರುಣಿಸಿರುವನು. ಈರೀತಿಯಾದ ಸಕಲ ಸೌಭಾಗ್ಯಗಳನ್ನೂ ಆ ದೇವನ ಅನುಗ್ರಹದಿಂದ ಪಡೆದರೂ ಆ ದಯಾಸಮುದ್ರನಾದ ಶಿವನನ್ನು ನೀನು ಈಗ ಪೂಜೆಮಾಡುತ್ತಿಲ್ಲವಲ್ಲ. ॥೩೯೫-೩೯೬॥

ಅಯ್ಯಾ ರಾಜನೇ, ಅಜ್ಞಾನವನ್ನು ಬಿಟ್ಟು ಆ ಮಹೇಶ್ವರನನ್ನು ಈಗ

ಇತ್ಯುಕ್ತಃ ಸ ತತೋ ರಾಜಾ ಸಂತ್ಯಕ್ತ್ವಾ ಮೋಹಮುನ್ನಹಂ ।
ಅತ್ಯಂತಂ ಸಾವಧಾನೇನ ಚಕಾರ ಶಿವಪೂಜನಂ ॥೯೮॥

ಶಿವಸ್ಥಾನಾನಿ ಬಹುಧಾ ಕಾರಯಾಮಾಸ ಭೂಪತಿಃ ।
ರತ್ನಪುಷ್ಪೈರ್ಮಹಾದೇವಂ ಪೂಜಯಾಮಾಸ ಯತ್ನತಃ ॥೯೯॥

ಸುವರ್ಣಬಿಲ್ವಪತ್ರೈಶ್ಚ ದಶಲಕ್ಷಮಿತೈರ್ನೃಪಃ ।
ಪೂಜಯಾಮಾಸ ಯತ್ನೇನ ಹೇಮಪದ್ಮೈಶ್ಚ ಸಂತತಂ ॥೪೦೦॥

ಅನ್ಯೈಶ್ಚ ಪುಷ್ಪೈರನಿಶಂ ಸಂಖ್ಯಾಹೀನೈರ್ಮಹೇಶ್ವರಂ ।
ಪೂಜಯಾಮಾಸ ಯತ್ನೇನ ಬಿಲ್ವಪತ್ರೈಶ್ಚ ಕೋಮಲೈಃ ॥೪೦೧॥

ದೀಪಾನ್ಲಕ್ಷಾವಧಿಪ್ರೀತ್ಯಾ ದದಾವನ್ವಹಮಾದರಾತ್ ।
ನೈವೇದ್ಯಾನಿ ಪ್ರಯತ್ನೇನ ಸ ಬಹೂನಿ ದದೌ ನೃಪಃ ॥೪೦೨॥

---

ಪೂಜೆಮಾಡು. ನಿತ್ಯವೂ ತಪ್ಪದೇ ಆ ಶಂಕರನನ್ನೇ ಮರೆಹೊಗು" ಎಂದು ತನ್ನ ಪತ್ನಿಯು ಹೇಳಲು ಆ ರಾಜನು ಆಮೇಲೆ ತನಗುಂಟಾಗಿದ್ದ ಅಜ್ಞಾನವನ್ನೆಲ್ಲಾ ದೂರಮಾಡಿ ತುಂಬಾ ಸಾವಧಾನವಾಗಿ ಶಿವಪೂಜೆ ಮಾಡಿದನು. ॥೯೭-೯೮॥

ಆ ರಾಜನು ಅನೇಕ ಶಿವದೇವಾಲಯುಗಳನ್ನು ನಿರ್ಮಿಸಿದನು. ನಿಯಮ ಪೂರ್ವಕವಾಗಿ ರತ್ನವೆಂಬ ಹೂಗಳಿಂದ ಆ ಮಹಾದೇವನನ್ನು ಪೂಜೆಮಾಡಿದನು. ಅಲ್ಲದೇ ಚಿನ್ನದ ಹತ್ತುಲಕ್ಷ ಬಿಲ್ವಪತ್ರೆಗಳಿಂದಲೂ ಚಿನ್ನದ ಕಮಲಗಳಿಂದಲೂ ಅನವರತವೂ ನಿಯಮಬದ್ಧನಾಗಿ ಆ ಮಹಾದೇವನನ್ನು ಪೂಜೆಮಾಡುತ್ತಿದ್ದನು. ॥೯೯-೪೦೦॥

ಇತರ ಅಸಂಖ್ಯಾತವಾದ ಹೂವು ಮತ್ತು ಮೃದುವಾದ ಬಿಲ್ವಪತ್ರೆ ಇವುಗಳಿಂದಲೂ ಆ ರಾಜನು ನಿಯಮದಿಂದ ಪೂಜೆಮಾಡಿದನು. ಮತ್ತು ಪ್ರತಿನಿತ್ಯವೂ ಲಕ್ಷಗಟ್ಟಲೆ ದೀಪಗಳನ್ನು ಪ್ರೀತಿಯಿಂದ ಹತ್ತಿಸುತ್ತಾ ತುಂಬಾ ನಿಯಮಬದ್ಧನಾಗಿ ನಾನಾವಿಧವಾದ ನೈವೇದ್ಯಗಳನ್ನು ಆ ಪರಶಿವನಿಗೆ ಸಮರ್ಪಣೆಮಾಡಿದನು. ॥೪೦೧-೪೦೨॥

ಏವಂ ಶಿವಾರ್ಥಮಖಿಲಂ ರತ್ನಾಗಾರಂ ನಿವೇದ್ಯ ಸಃ ।
ಶಿವಮೇವ ಸದಾ ಧ್ಯಾತ್ವಾ ಸ್ಥಿತಃ ಶಿವಪರಾಯಣಃ ॥೪೦೩॥

ತತಸ್ತಸ್ಯಾಭವತ್ಪುತ್ರಃ ಶಿವಪೂಜಾಪರಾಯಣಃ ।
ತಸ್ಮಿನ್ನಿಧಾಯ ತದ್ರಾಜ್ಯಂ ಸಪತ್ನೀಕೋ ವನಂ ಯಯೌ ॥೪೦೪॥

ತತ್ರ ತೇನ ಪ್ರಯುಕ್ತೇನ ಬಿಲ್ವಪತ್ರೈರ್ಮಹೇಶ್ವರಃ ।
ಪೂಜಿತಃ ಸತತಂ ಭಕ್ತ್ಯಾ ಸಪತ್ನೀಕೇನ ಸಾದರಂ ॥೪೦೫॥

ನವಾನಿ ಬಿಲ್ವಪತ್ರಾಣಿ ಸಂಪಾದ್ಯ ಗಿರಿಜಾಪತಿಂ ।
ಪೂಜಯಿತ್ವಾ ಪ್ರಣಮ್ಯೇಶಂ ನರ್ತನಂ ಚ ಚಕಾರ ಸಃ ॥೪೦೬॥

ತತಃ ಕದಾಚಿತ್ಸಂಪೂಜ್ಯ ಬಿಲ್ವಪತ್ರೈಃ ಸದಾಶಿವಂ ।
ಪಂಚಾಕ್ಷರಜಪಂ ಕುರ್ವನ್ಸಪತ್ನೀಕೋ ಮೃತೋ ನೃಪಃ ॥೪೦೭॥

---

ಹೀಗೆಯೇ ಆ ರಾಜನು ತನ್ನಲ್ಲಿದ್ದ ಸಮಸ್ತ ರತ್ನಸಮೂಹಗಳನ್ನೂ ಆ ಪರಶಿವನಿಗೋಸ್ಕರವೇ ಸಮರ್ಪಣೆಮಾಡಿ, ಆ ಶಿವನನ್ನೇ ಯಾವಾಗಲೂ ಧ್ಯಾನ ಮಾಡುತ್ತಾ ಶಿವತತ್ಪರನಾಗಿದ್ದನು. ಹೀಗೆಯೇ ಕೆಲವು ದಿನ ಕಳೆಯುಲು ಆ ರಾಜನಿಗೆ ತನ್ನಂತೆಯೇ ಶಿವಪೂಜೆಯಲ್ಲಿ ತತ್ಪರನಾದ ಮಗನೊಬ್ಬನುದಯಿಸಲು, ಆಗ ರಾಜನು ಆತನು ಪ್ರಾಪ್ತವಯಸ್ಸಿನವನಾಗುವವರೆಗೂ ಇದ್ದು ಅನಂತರ ಪುತ್ರನಿಗೆ ತನ್ನ ರಾಜ್ಯವನ್ನೆಲ್ಲಾ ಒಪ್ಪಿಸಿ ಪತ್ನಿಯೊಡನೆ ತಾನು ಕಾಡಿಗೆ ಹೋದನು. ॥೪೦೩-೪೦೪॥

ಆ ಕಾಡಿನಲ್ಲಿ ಪತ್ನೀಸಮೇತನಾದ ಆ ರಾಜನು ತುಂಬಾ ನಿಯಮದಿಂದಲೂ ಮತ್ತು ಆದರದಿಂದಲೂ ಯಾವಾಗಲೂ ಭಕ್ತಿಪುರಸ್ಸರವಾಗಿ ಮಹೇಶ್ವರನನ್ನು ಪೂಜೆಮಾಡುತ್ತಿದ್ದನು. ಹೊಸಹೊಸದಾದ ಬಿಲ್ವಪತ್ರೆಗಳನ್ನು ಸಂಪಾದಿಸಿ ಗಿರಿಜಾ ರಮಣನನ್ನು ಪೂಜೆಮಾಡಿ ನಮಸ್ಕರಿಸಿದನಂತರ ಆ ದೇವದೇವನ ಮುಂದೆ ಸಂತೋಷದಿಂದ ನಾಟ್ಯವಾಡಿದನು. ॥೪೦೫-೪೦೬॥

ಹೀಗೆಯೇ ಕೆಲವು ಕಾಲ ಕಳೆಯುಲು ಒಂದುದಿನ ಆ ರಾಜನು ಬಿಲ್ವಪತ್ರೆ ಗಳಿಂದ ಸದಾಶಿವನನ್ನು ಪೂಜೆಮಾಡಿ ಶಿವಪಂಚಾಕ್ಷರಮಹಾಮಂತ್ರವನ್ನು ಜಪ ಮಾಡುತ್ತಿರುವಾಗಲೇ ತನ್ನ ಪತ್ನಿಯೊಡನೆ ಮರಣಹೊಂದಿದನು. ಆ ಕ್ಷಣದಲ್ಲಿಯೇ

ತದೈವ ಕರುಣಾಸಿಂಧುರ್ಮಹೇಶೋ ವೀಕ್ಷ್ಯ ತಂ ನೃಪಂ ।
ಸಹಸ್ರಂ ಪ್ರೇಷಯಾಮಾಸ ಗಣಾನಾಂ ಪುಷ್ಪಕಾನ್ವಿತಂ ॥೪೦೮॥

ತತಃ ಪುಷ್ಪಕಮಾರುಹ್ಯ ಸಪತ್ನೀಕೋ ನರಾಧಿಪಃ ।
ಅನೇನೈವ ಹಿ ಮಾರ್ಗೇಣ ಗತಃ ಶಂಕರಸಂನಿಧಿಂ ॥೪೦೯॥

ತದಾ ದುಂದುಭಯೋ ನೇದುಃ ಪುಷ್ಪವೃಷ್ಟಿರ್ಬಭೂವ ಚ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋ ಗಣಾಃ ॥೪೧೦॥

ಸ ಪೂಜಿತೋ ಮಯಾ ರಾಜಾ ಪುಷ್ಪೈರ್ನಾನಾವಿಧೈಸ್ತದಾ ।
ತದಾನೀಮೇವಮೇವಾಹ ವಚನಂ ಪ್ರೀತಮಾನಸಂ ॥೪೧೧॥

॥ ರಾಜೋವಾಚ ॥

ಯಮ ಶಾಸಯ ಯತ್ನೇನ ಶಿವಪೂಜಾಪರಾಙ್ಮುಖಾನ್ ।
ಅಶೈವಾನಗ್ನಿಕುಂಡೇಷು ಪಾತಯಸ್ವ ದುರಾಶಯಾನ್ ॥೪೧೨॥

ಭಸ್ಮರುದ್ರಾಕ್ಷವಿಮುಖಾನಗ್ನೌ ಪ್ರಜ್ವಾಲ್ಯ ಯತ್ನತಃ ।
ಬಹುಧೈವಾತಿಯತ್ನೇನ ಸ್ತಂಭೇ ಬದ್ಧ್ವಾಗ್ನಿಶೃಂಖಲೈಃ ॥೪೧೩॥

---

ದಯಾಸಮುದ್ರನಾದ ಮಹೇಶ್ವರನು ಆ ರಾಜನ ಸಮೀಪಕ್ಕೆ ಪುಷ್ಪಕವಿಮಾನದೊಡನೆ ಸಾವಿರಗಣಗಳನ್ನು ಆತನನ್ನು ಕರೆದುಕೊಂಡು ಬರಲು ಕಳುಹಿಸಿದನು. ॥೪೦೭-೪೦೮॥

ಅನಂತರ ಆ ರಾಜನು ತನ್ನ ಪತ್ನಿಯೊಡನೆ ಪುಷ್ಪಕವಿಮಾನವನ್ನೇರಿ ಇದೇ ದಾರಿಯಿಂದ ಆ ಶಂಕರನ ಸಂನಿಧಾನವನ್ನೈದಿದನು. ಆ ಸಂದರ್ಭದಲ್ಲಿ ದುಂದುಭಿವಾದ್ಯಗಳು ಮೊಳಗಿದವು. ಹೂಮಳೆಗರೆಯಿತು. ಅಲ್ಲದೇ ಗಂಧರ್ವಶ್ರೇಷ್ಠರು ಗಾನಮಾಡಿದರು. ಅಪ್ಸರಸ್ತ್ರೀಯರು ನಾಟ್ಯವಾಡಿದರು. ॥೪೦೯-೪೧೦॥

ನಾನೂ ಆ ರಾಜನನ್ನು ನಾನಾವಿಧವಾದ ಹೂವುಗಳಿಂದ ಪೂಜೆಮಾಡಿದೆನು. ಆಗ ಆ ರಾಜನು ಪ್ರೀತಿಪೂರ್ವಕವಾಗಿ ನನ್ನನ್ನು ಕುರಿತು ಹೀಗೆ ಮಾತನಾಡಿದನು. ॥೪೧೧॥

"ಅಯ್ಯ ಯಮನೇ, ಶಿವಪೂಜೆಮಾಡುವುದರಲ್ಲಿ ಹಿಂಜರಿಯುತ್ತಿರುವ ದುಷ್ಟರಾದ ಶಿವದ್ರೋಹಿಗಳನ್ನು ಬಲಾತ್ಕಾರವಾಗಿ ಬೆಂಕಿಯ ಕುಂಡಗಳಲ್ಲಿ ತಳ್ಳು.

ಇತ್ಯುಕ್ತ್ವಾ ಸ ಯಯೌ ಪೂರ್ವಂ ಸೋತ್ಸಾಹಂ ಮುದಿತಾನನಃ ।
ಬಹುಧೈವೇವಮೇವೋಕ್ತಂ ಬಹುಭಿಃಶಾಂಕರೈರ್ಮುದಾ ॥೪೧೪॥

ಯಃ ಶೈವಸ್ತಸ್ಯ ನಿಯಮಾತ್ಪೂಜನಂ ಕ್ರಿಯತೇ ಮಯಾ ।
ಶೈವೇ ದೃಷ್ಟೇ ಮಮೋತ್ಸಾಹೋ ಮಹಾನೇವ ಹಿ ಜಾಯತೇ॥೪೧೫॥

ರುದ್ರಾಕ್ಷಧಾರಣಂ ಶುದ್ಧಂ ಕೇವಲಂ ಭಸ್ಮಧಾರಣಂ ।
ಲಿಂಗಾರ್ಚನಂ ಕೇವಲಂ ಚ ಯಸ್ಯ ಶೈವಃ ಸ ಉಚ್ಯತೇ ॥೪೧೬॥

ತಾದೃಶಸ್ಯ ತು ಶೈವಸ್ಯ ಯಃ ಪೂಜಾಂ ನ ಕರಿಷ್ಯತಿ ।
ಸೋಽಪ್ಯಸ್ಮಿನ್ನರಕೇ ಘೋರೇ ಪತಿತ್ವಾ ತಿಷ್ಠತಿ ಧ್ರುವಂ ॥೪೧೭॥

ಶಂಕರಸ್ಯ ಪ್ರಿಯಃ ಶೈವಸ್ತತಃ ಶೈವಾರ್ಚನಂ ಸದಾ ।
ಪ್ರಯತ್ನೇನೈವ ಕರ್ತವ್ಯಂ ತೇನ ತುಷ್ಯತಿ ಶಂಕರಃ ॥೪೧೮॥

---

ಭಸ್ಮ ಮತ್ತು ರುದ್ರಾಕ್ಷಗಳನ್ನು ಧರಿಸದೇ ಇರುವವರನ್ನು ಅವಶ್ಯವಾಗಿ ಬೆಂಕಿಯಲ್ಲಿ ಚೆನ್ನಾಗಿ ಕಾದ ಸರಪಳಿಗಳಿಂದ ನಾನಾರೀತಿಯಾಗಿ ತೊಂದರೆಪಡಿಸು."॥೪೧೨-೪೧೩॥

ಹಿಂದೆ ಈ ರೀತಿಯಾಗಿ ಹೇಳಿ ಆ ರಾಜನು ಉತ್ಸಾಹದಿಂದಲೂ ನಗುಮೊಗದಿಂದಲೂ ಅಲ್ಲಿಂದ ಹೊರಟುಹೋದನು. ಅಯ್ಯ ದೇವೇಂದ್ರನೇ, ಹೀಗೆಯೇ ಇನ್ನೂ ಅನೇಕ ಮಂದಿ ಶಂಕರಭಕ್ತರು ನನ್ನಲ್ಲಿ ಪ್ರೀತಿಯಿಂದ ಇದೇ ರೀತಿ ಹೇಳಿದ್ದಾರೆ. ಶಿವಭಕ್ತನಾದವನನ್ನು ನಾನು ಅವಶ್ಯವಾಗಿ ಪೂಜೆಮಾಡುವೆನು. ಆ ಶಾಂಭವರನ್ನು ನೋಡಿದ ಮಾತ್ರದಿಂದಲೇ ನನಗೆ ವಿಶೇಷ ಉತ್ಸಾಹವುಂಟಾಗುವುದೆಂದು ತಿಳಿ. ॥೪೧೪-೪೧೫॥

ಶುದ್ಧವಾದ ರುದ್ರಾಕ್ಷಧಾರಣೆ, ಭಸ್ಮತ್ರಿಪುಂಡ್ರಧಾರಣೆ ಮತ್ತು ಶಿವಲಿಂಗಾರ್ಚನೆ ಇವುಗಳು ಪರಶಿವಭಕ್ತನಿಗೆ ಅವಶ್ಯವಾಗಿ ಆಚರಿಸತಕ್ಕ ಕರ್ಮಗಳೆಂದು ಹೇಳಿದೆ. ಅಂತಹ ಭಕ್ತನನ್ನು ಪೂಜೆಮಾಡದಿರುವವನು ಈರೀತಿ ಭಯಂಕರವಾದ ನರಕದಲ್ಲಿ ಬಿದ್ದು ಸಾಯುವುದು ನಿಶ್ಚಯವೆಂದು ತಿಳಿ. ॥೪೧೬-೪೧೭॥

ಈಶ್ವರಭಕ್ತನು ಆ ಶಂಕರನಿಗೆ ಪ್ರೀತಿಪಾತ್ರನಾಗಿರುವುದರಿಂದ ಆ ಶೈವನನ್ನು ಅವಶ್ಯವಾಗಿ ನಾವು ಪೂಜೆಮಾಡಬೇಕು. ಇದರಿಂದ ಆ ಶಂಕರನು ಸಂತುಷ್ಟನಾಗು

ಯಸ್ಯಾಸ್ತಿ ನರಕಾದ್ಭೀತಿಸ್ತೇನ ಕಾರ್ಯಂ ಶಿವಾರ್ಚನಂ ।
ಶೈವಾರ್ಚನಂ ಚ ಕರ್ತವ್ಯಮಪ್ರಮಾದೇನ ಸಾದರಂ ॥೪೧೯॥

ಪಶ್ಯೈನಂ ಮಲಕುಂಡಸ್ಥಂ ಮೂತ್ರಪಂ ಕ್ರಿಮಿಭಕ್ಷಕಂ ।
ಸಂತಪ್ತತೀಕ್ಷ್ಣಶಸ್ತ್ರೌಘೈಸ್ತಾಡ್ಯಮಾನಮಹರ್ನಿಶಂ ॥೪೨೦॥

ಅಯಂ ತು ಬ್ರಾಹ್ಮಣಃ ಪೂರ್ವಂ ವೇದಶಾಸ್ತ್ರವಿಶಾರದಃ ।
ಅನೇನ ಬಹವೋ ಯಾಗಾಃ ಕೃತಾಃ ಸ್ವರ್ಗಾರ್ಥಮಾದರಾತ್ ॥೪೨೧॥

ಅನೇನೈವೈಕದಾ ದೃಷ್ಟಃ ಶೈವಃ ಶಿವಪರಾಯಣಃ ।
ತಂ ದೃಷ್ಟ್ವಾ ಪ್ರಾಹ ವಚನಮಯಮೇವಾತಿಗರ್ಹಿತಂ ॥೪೨೨॥

ಅನೇನ ನಿಯಮೇನೇದಂ ಪೂಜ್ಯತೇ ಭ್ರಾಂತಚೇತಸಾ ।
ಭಸ್ಮನಾಂಗಮಯಂ ಶ್ವೇತಂ ಕರೋತೀತಿ ಭ್ರಮಾತ್ತದಾ ॥೪೨೩॥

---

ತ್ರಾಸೆ. ನರಕದಲ್ಲಿ ಭಯವುಳ್ಳವನು ಆ ಪರಶಿವನನ್ನು ಮತ್ತು ಅವನ ಭಕ್ತನನ್ನೂ ತಪ್ಪದೇ ಆದರದಿಂದ ಪೂಜೆಮಾಡಬೇಕು. ॥೪೧೮-೪೧೯॥

ಅಮೇಧ್ಯಕುಂಡದಲ್ಲಿ ಬಿದ್ದು, ಯಾವಾಗಲೂ ಮೂತ್ರವನ್ನು ಕುಡಿಯುತ್ತಾ ಕ್ರಿಮಿಗಳನ್ನು ತಿನ್ನುತ್ತಾ ಇರುವ ಇವನನ್ನು ನೋಡು. ಇವನನ್ನು ಹಗಲೂ ರಾತ್ರಿ ಚೆನ್ನಾಗಿ ಕಾದ ಹರಿತವಾದ ಆಯುಧಸಮೂಹಗಳಿಂದ ನನ್ನ ದೂತರು ಹೊಡೆದು ತೊಂದರೆಪಡಿಸುತ್ತಿರುವರು. ಹಿಂದೆ ಈತನು ವೇದ ಮತ್ತು ಶಾಸ್ತ್ರಗಳನ್ನು ಚೆನ್ನಾಗಿ ತಿಳಿದ ಬ್ರಾಹ್ಮಣನಾಗಿದ್ದನು. ಸ್ವರ್ಗವನ್ನು ಹೊಂದಬೇಕೆಂದು ಈತನು ಅನೇಕ ಯಾಗಗಳನ್ನು ಆದರದಿಂದ ಮಾಡಿದನು. ಆದರೇನು! ॥೪೨೦-೪೨೧॥

ಈ ಬ್ರಾಹ್ಮಣನು ಒಂದು ಸಲ ಶಿವಪೂಜಾತತ್ಪರನಾದ ಒಬ್ಬ ಶೈವನನ್ನು ನೋಡಿದನು. ಆತನನ್ನು ಕಂಡಾಗ ಈತನು ತುಂಬಾ ತುಚ್ಛವಾಗಿ ಹೀಗೆ ಮಾತನಾಡಿದನು. "ಈ ಮಾನವನು ಸುಮ್ಮನೇ ಭ್ರಾಂತಚಿತ್ತನಾಗಿ ಬಹಳ ನಿಯಮದಿಂದ ಇದನ್ನು ಪೂಜೆಮಾಡುತ್ತಿರುವನು. ಇವನು ಮೈಗೆ ಬಳಿದುಕೊಂಡಿರುವ ಬೂದಿಯು ಕುಷ್ಠಹತ್ತಿದವನಂತೆ ಮಾಡುತ್ತಿರುವುದು" ಎಂದು ಭ್ರಾಂತಿಯಿಂದ ಹೇಳಿದನು. ॥೪೨೨-೪೨೩॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಶೈವೋ ದುಃಖಮವಾಪ ಸಃ ।
ಅನೇನ ಶಿವಲಿಂಗಸ್ಯ ನಾಮ ನೋಚ್ಚಾರಿತಂ ಮುದಾ ॥೫೨೪॥

ಜಗಾದೇದಮಿತಿ ಭ್ರಾಂತ್ಯಾ ಭ್ರಾಂತ್ಯಾ ಸಂಪೂಜ್ಯತೇತಿ ಚ ।
ಶ್ರೀಸದಾಶಿವಲಿಂಗಸ್ಯ ನಾಮಗ್ರಹಣಮಾತ್ರತಃ ॥೪೨೫॥

ನಶ್ಯಂತಿ ಪಾಪಗಿರಯೋ ವಜ್ರಸಂತಾಡಿತಾ ಇವ ।
ಭಸ್ಮನಾಂಗಮಯಂ ಶ್ವೇತಂ ಕರೋತೀತ್ಯುಕ್ತವಾನಯಂ ॥೪೨೬॥

ಸ ವೇತ್ತಿ ಭಸ್ಮಮಾಹಾತ್ಮ್ಯಮಯಂ ಪಾಪಕೃದುತ್ತಮಃ ।
ಇತ್ಯುಕ್ತ್ವಾ ತದ್ವಚಃ ಶ್ರುತ್ವಾ ಶೈವೋ ದುಃಖಮುಪಾಗತಃ ॥೪೨೭॥

ತತೋಽಶ್ರುಪೂರ್ಣನಯನೋ ಹಾಹಾಹೇತಿ ರುರೋದ ಚ ।
ತದಾ ದದರ್ಶ ರಾಜೈನಂ ಶಾಂಭವಂ ಶಿವಸಂಮತಂ ॥೪೨೮॥

---

ಹೀಗೆ ನುಡಿದ ಈ ಬ್ರಾಹ್ಮಣನ ಮಾತುಗಳನ್ನು ಕೇಳಿ ಆ ಶಾಂಭವನು ಬಹಳ ದುಃಖಪಟ್ಟನು. ಇವನು ಶಿವಲಿಂಗದ ಹೆಸರನ್ನು ಸಹ ಪ್ರೀತಿಯಿಂದ ಉಚ್ಚಾರಮಾಡಲಿಲ್ಲ. ಭ್ರಾಂತಿಯಿಂದ ಇದನ್ನು ಪೂಜೆಮಾಡುತ್ತಿರುವನೆಂದು ತಾನೇ ಭ್ರಾಂತನಾಗಿ ನುಡಿದನು. ಆ ಸದಾಶಿವನ ಲಿಂಗದ ಹೆಸರನ್ನುಚ್ಚಾರಮಾಡಿದ ಮಾತ್ರದಿಂದಲೇ ಪಾಪಗಳೆಂಬ ಬೆಟ್ಟಗಳು ವಜ್ರಾಯುಧದಿಂದ ಹೊಡೆಯಲ್ಪಟ್ಟು ಚೂರುಚೂರಾಗಿ ಹೋಗುವಂತೆ ಧ್ವಂಸವಾಗಿಬಿಡುವುವು. ಹೀಗಿರುವಾಗ ಈ ಮೂರ್ಖನು ಭಸ್ಮಧಾರಣೆಯಿಂದ ಇವನು ತನ್ನ ಅವಯವಗಳನ್ನೆಲ್ಲಾ ತೊನ್ನು ಹಿಡಿದವನಂತೆ ಬಿಳುಪಾಗಿ ಮಾಡಿಕೊಳ್ಳುತ್ತಿರುವನೆಂದು ಹೇಳಿದನು. ೪೨೪-೪೨೫-೪೨೬॥

ಪಾಪಿಗಳಲ್ಲಿ ಅಗ್ರಗಣ್ಯನಾದ ಈತನು ವಿಭೂತಿಯ ಮಹಿಮೆಯನ್ನರಿಯನು. ಹೀಗೆ ಆತನಾಡಿದ ಮಾತುಗಳನ್ನು ಕೇಳಿ ಆ ಶೈವನು ದುಃಖಹೊಂದಿದನು. ಅನಂತರ ಕಣ್ಣತುಂಬ ನೀರು ತುಂಬಿಕೊಂಡು ಅಯ್ಯೋ, ಹಾ ಎಂದು ಗೋಳಿಟ್ಟನು. ಆಗ ಆ ರಾಜನು ಈ ಶಾಂಭವನು ಆ ಪರಶಿವನಿಗೆ ಸಂಮತನಾದವನೆಂದು ತಿಳಿದು ಆತನ ದರ್ಶನಮಾಡಿದನು. ॥೪೨೭-೪೨೮॥

ತಾದೃಶಂ ಖಿನ್ನಹೃದಯಂ ತಂ ದೃಷ್ಟ್ವಾ ಶೈವಪುಂಗವಂ ।
ಬಭಾಷೇ ವಚನಂ ರಾಜಾ ದೈವಾತ್ತತ್ರ ಸಮಾಗತಃ ॥೪೨೯॥

॥ ರಾಜೋವಾಚ ॥

ಕಿಮಾಸೀದಧುನಾ ಬ್ರಹ್ಮನ್ಕಿಂ ವಾ ದುಃಖಸ್ಯ ಕಾರಣಂ ।
ದುಃಖಂ ಚೇತ್ತವ ಮದ್ರಾಷ್ಟ್ರೇ ರಾಷ್ಟ್ರಹಾನಿರ್ಭವಿಷ್ಯತಿ ॥೪೩೦॥

ಇತ್ಯುಕ್ತಂ ರಾಜವಚನಂ ಶ್ರುತ್ವಾ ಶೈವೋತ್ತಮಸ್ತದಾ ।
ಪ್ರದರ್ಶ್ಯ ಜನಮನೇನೋಕ್ತಂ ವಚಸ್ತಸ್ಮೈ ನ್ಯವೇದಯತ್ ॥೪೩೧॥

ತತಃ ಸ ರಾಜಾ ಧರ್ಮಜ್ಞಾನಾಹೂಯ ದ್ವಿಜಪುಂಗವಾನ್ ।
ಏತಸ್ಯ ಕೀದೃಶೀ ಶಾಸ್ತಿಃ ಕರ್ತವ್ಯೇತ್ಯಬ್ರವೀತ್ತದಾ ॥೪೩೨॥

ತತಸ್ತೇ ಬ್ರಾಹ್ಮಣಾಃ ಸರ್ವೇ ಧರ್ಮಮಾರ್ಗಪ್ರವರ್ತಕಾಃ ।
ಶೂಲಾರೋಪೋಽಸ್ಯ ಕರ್ತವ್ಯಃ ಶೀಘ್ರಮಿತ್ಯೂಚಿರೇ ತದಾ ॥೪೩೩॥

---

ಈರೀತಿಯಾಗಿ ಖಿನ್ನಮನಸ್ಕನಾಗಿರುವ ಆ ಶಿವಭಕ್ತಾಗ್ರೇಸರನನ್ನು ಕಂಡು ಅದೃಷ್ಟವಶದಿಂದ ಅಲ್ಲಿಗೆ ಬಂದಿದ್ದ ಆ ರಾಜನು ಮುಂದೆ ಹೇಳುವಂತೆ ಮಾತನಾಡಿಸಿದನು. ॥೪೨೯॥

ಅಯ್ಯ ಬ್ರಾಹ್ಮಣನೇ, ಏನು ನಡೆಯಿತು? ನಿನಗೆ ದುಃಖವುಂಟಾಗಲು ಕಾರಣವೇನು? ನಿನಗೆ (ಶಿವಭಕ್ತನಿಗೆ) ದುಃಖವುಂಟಾಗುವುದಾದರೆ ನಮ್ಮ ರಾಜ್ಯಕ್ಕೇ ಹಾನಿಯುಂಟಾಗುವುದು. ಸಮಾಚಾರವೇನೆಂಬುದನ್ನು ತಿಳಿಸಬೇಕೆಂದು ರಾಜನು ಪ್ರಾರ್ಥಿಸಲು, ಆ ನುಡಿಗಳನ್ನು ಕೇಳಿ ಶೈವಶ್ರೇಷ್ಠನು ಆಗ ಈತನನ್ನು ತೋರಿಸಿ ಇವನು ಹೇಳಿದ ಮಾತುಗಳನ್ನೆಲ್ಲಾ ಅವನಿಗೆ ತಿಳಿಸಿದನು. ॥೪೩೦-೪೩೧॥

ಆಗ ಆ ರಾಜನು ಕೂಡಲೇ ಧರ್ಮಸೂಕ್ಷ್ಮವನ್ನರಿತ ಬ್ರಾಹ್ಮಣೋತ್ತಮರನ್ನು ಕರೆಸಿ, ಈತನಿಗೆ ಯಾವರೀತಿ ಶಿಕ್ಷೆಮಾಡಬೇಕೆಂದು ತಿಳಿಸುವಂತೆ ಪ್ರಶ್ನೆಮಾಡಿದನು. ॥೪೩೨॥

ಧರ್ಮಮಾರ್ಗದಲ್ಲಿಯೇ ನಡೆಯುವ ಆ ಬ್ರಾಹ್ಮಣರೆಲ್ಲರೂ ಈತನನ್ನು ಜಾಗ್ರತೆಯಾಗಿ ಶೂಲಕ್ಕೇರಿಸಬೇಕೆಂದು ಹೇಳಲು, ಆಗ ರಾಜನು ಸ್ವತಃ ಧರ್ಮಜ್ಞ

ಇತಿ ತದ್ವಚನಂ ಶ್ರುತ್ವಾ ಧರ್ಮಜ್ಞಃ ಸ ನರಾಧಿಪಃ ।
ತಸ್ಮೈ ಚಕಾರ ಶೀಘ್ರೇಣ ಶೂಲಾರೋಪಂ ಪ್ರಯತ್ನತಃ ॥೪೩೪॥

ಶೈವದುಃಖಪ್ರದೋ ಮರ್ತ್ಯಃ ಶಿವಪೂಜಾಪರಾಙ್ಮುಖಃ ।
ಆತತಾಯೀತಿ ವಿಜ್ಞೇಯಸ್ತತೋ ಹಂತವ್ಯ ಏವ ಸಃ ॥೪೩೫॥

ಯದ್ಯಾತತಾಯಿನಂ ರಾಜಾ ಸ ಹನ್ಯಾದ್ಧರ್ಮವಿತ್ತಮಃ ।
ಯಾತ್ಯೇವ ನರಕಂ ಘೋರಂ ಯಾವದಾಚಂದ್ರತಾರಕಂ ॥೪೩೬॥

ಅತ ಏವ ಹಿ ಧರ್ಮಜ್ಞಾಃ ಲೋಭಮೋಹವಿವರ್ಜಿತಾಃ ।
ಅಶೈವಾನಾಂ ಪ್ರಯತ್ನೇನ ಕುರ್ವಂತ್ಯೇವ ಹಿ ಶಾಸನಂ ॥೪೩೭॥

ತದಾ ದುಃಖಮಯಂ ಭುಕ್ತ್ವಾ ತಥಾತ್ರಾಪಿ ಸಮಾಗತಃ ।
ಏತಸ್ಯ ಬಹುಧಾನ್ಯಾಪಿ ಭವಿಷ್ಯತ್ಯೇವ ಯಾತನಾ ॥೪೩೮॥

---

ನಾಗಿದ್ದುದರಿಂದ ಆ ಮಾತನ್ನು ಸರಿಯೆಂದು ತಿಳಿದು ಕೂಡಲೇ ಬಲಾತ್ಕಾರದಿಂದ ಆತನನ್ನು ಶೂಲಕ್ಕೇರಿಸಿಬಿಟ್ಟನು. ||೪೩೩-೪೩೪||

ಶಿವಪೂಜೆಮಾಡದೇ ಶಿವಭಕ್ತರಿಗೆ ದುಃಖವನ್ನೂ ಉಂಟುಮಾಡುವ ಮಾನವನು ಸಾಯಲು ಸಿದ್ಧನಾಗಿರುವನೆಂದೇ ತಿಳಿದು ಆತನನ್ನು ಅವಶ್ಯವಾಗಿ ಕೊಲ್ಲಬೇಕು. ಈರೀತಿಯಾದ ತಪ್ಪುಮಾಡಿ ಮರಣಹೊಂದಲು ಸಿದ್ಧನಾಗಿದ್ದಾಗ್ಯೂ ಧರ್ಮಜ್ಞರಲ್ಲಿ ಶ್ರೇಷ್ಠನಾದ ರಾಜನು ಆತನನ್ನು ಸಂಹಾರಮಾಡದೇ ಹೋದರೆ ಸೂರ್ಯಚಂದ್ರರಿರುವವರೆಗೂ ಆತನು ಭಯಂಕರವಾದ ನರಕವನ್ನು ಹೊಂದಿ ಅಲ್ಲಿ ನರಳುತ್ತಾನೆ. ||೪೩೫-೪೩೬||

ಆದ್ದರಿಂದಲೇ ಧರ್ಮವನ್ನರಿತವರು ಲೋಭ (ಆಸೆ) ಮೋಹ (ಅಜ್ಞಾನ) ಇವುಗಳನ್ನು ತೊರೆದು ನಿಯಮಪೂರ್ವಕವಾಗಿ ಶಿವದ್ರೋಹಿಗಳನ್ನು ಶಿಕ್ಷೆಮಾಡುತ್ತಲೇ ಇರುವರು. ಈತನು ಆ ಕಾಲದಲ್ಲಿ ಆ ರೀತಿಯಾಗಿ ದುಃಖಗಳನ್ನನುಭವಿಸಿದುದಲ್ಲದೇ ಇಲ್ಲಿಗೂ ಬಂದಿರುವನು. ಇಲ್ಲಿ ಇವನು ಈಗ ಅನುಭವಿಸಿರುವುದಲ್ಲದೇ ಇನ್ನೂ ಅನೇಕ ನರಕಯಾತನೆಗಳನ್ನು ಇವನು ಮುಂದೆ ಅನುಭವಿಸುವನು. ||೪೩೭-೪೩೮||

ಕಲ್ಪಕೋಟ್ಯಯುತಂ ಘೋರಂ ರೌರವಂ ಸಮುಪಾಶ್ರಿತಃ ।
ತತೋಽಯಂ ಪುಲ್ಕಸೋ ಭೂತ್ವಾ ಚಂಡಾಲೋಽಪಿ ಭವಿಷ್ಯತಿ॥೪೯॥

ಅಲೋಕಯೈತಾನ್ಸಂತಪ್ತಾಂಸ್ತಾಡ್ಯಮಾನಾನಯೋಘನೈಃ ।
ತಪ್ತಸ್ತಂಭಾಂ ಸಮಾಲಿಂಗ್ಯ ಸಂಸ್ಥಿತಾನ್ದುಃಖಿತಾಂತ್ಸದಾ ॥೫೦॥

ಉಪಹಾಸಾಃ ಕೃತಾ ಹ್ಯೇತೈಃ ಶೈವಸ್ಯ ಬಲತಃ ಪಥಿ ।
ತೇನ ದುಃಖಮಿದಂ ಭುಕ್ತ್ವಾ ತಿಷ್ಠಂತ್ಯೇತೇ ಹಿ ಸರ್ವದಾ ॥೫೧॥

ಭಿಂಡಿಪಾಲೈಸ್ತಾಡ್ಯಮಾನಾನ್ಪಶ್ಯೈತಾಂತ್ಸಾವಧಾನತಃ ।
ಏತೈಸ್ತು ಶೈವಧಿಕ್ಕಾರಃ ಕೃತೋ ಮೋಹೇನ ಸತ್ವರಂ ॥೫೨॥

ಸಂತಪ್ತಾಂಗಾರಶಕಟೇ ಸ್ಥಿತಾನೇತಾನ್ವಿಲೋಕಯ ।
ಏತೈರ್ಗರ್ವೇಣ ನ ಕೃತಂ ಶೈವಾನಾಂ ಮದನಂ ಮುದಾ ॥೫೩॥

ವಿದಾರ್ಯಮಾಣಾನ್ಕ್ರಕಚೈಃ ಪಶ್ಯೈತಾನ್ಸಾವಧಾನತಃ ।
ಅಭ್ಯುತ್ಥಾನಾದಿಕಂ ನೈತೈಃ ಕೃತಂ ಶೈವಾಯ ಭಕ್ತಿತಃ ॥೫೪॥

---

ಕೋಟ್ಯಂತರ ಕಲ್ಪಕಾಲಗಳವರೆಗೂ ಇವನು ಈ ಘೋರವಾದ ರೌರವನರಕ ದಲ್ಲೇ ಬಿದ್ದು ನರಳುತ್ತಾ ಅನಂತರ ಪುಲ್ಕಸಜಾತಿಯುವನಾಗುವನು.

ಹಾಗೆಯೇ ಚಂಡಾಲ ಜನ್ಮವನ್ನೂ ಪಡೆಯುವನು. ಗಟ್ಟಿಯಾದ ಕಬ್ಬಿಣದ ಸರಳುಗಳನ್ನು ಕಾಸಿ ಅವುಗಳಿಂದ ಚೆನ್ನಾಗಿ ಹೊಡಯಲ್ಪಡುತ್ತಿರುವ ಇವರನ್ನು ನೋಡು! ಕಾದ ಕಂಬಗಳನ್ನೇ ತಬ್ಬಿಕೊಂಡು ಬಹಳ ದುಃಖದಿಂದ ಹೇಗೆ ಸದಾ ನಿಂತಿರುವರು ನೋಡು. ॥೪೯-೫೦॥

ಇವರು ದಾರಿಯಲ್ಲಿ ಬರುತ್ತಿರುವಾಗ ಬಲಾತ್ಕಾರವಾಗಿ ಈಶ್ವರಭಕ್ತನನ್ನು ಹಾಸ್ಯಮಾಡಿದರು. ಆದರಿಂದ ಇವರು ಯಾವಾಗಲೂ ಈರೀತಿಯಾದ ದುಃಖವನ್ನನು ಭವಿಸುತ್ತಾ ನಿಂತಿರುವರು. ಭಿಂಡಿಪಾಲವೆಂಬ ಆಯುಧಗಳಿಂದ ಹೊಡೆಯಲ್ಪಡುತ್ತಿರುವ ಇವರನ್ನು ಸಾವಧಾನವಾಗಿ ನೋಡುವನಾಗು? ಇವರೆಲ್ಲರೂ ಅಜ್ಞಾನದಿಂದ ಶಿವಭಕ್ತರನ್ನು ಧಿಕ್ಕಾರಮಾಡಿರುವರು. ॥೫೧-೫೨॥

ಚೆನ್ನಾಗಿ ಕಾದ ಬೆಂಕಿಯ ಬಂಡಿಯಲ್ಲಿ ಕುಳಿತಿರುವ ಇವರನ್ನು ನೋಡು. ಅಹಂಕಾರದಿಂದ ಇವರು ಶಿವಭಕ್ತರ ಮನಸ್ಸು ಸಂತೋಷದಿಂದಿರುವಂತೆ ಮಾಡಲಿಲ್ಲ.

ಪಶ್ಯೈತಾನ್ ಶ್ಲೇಷ್ಮಕುಂಡೇಷು ಸ್ಥಿತಾನೇತಾನ್ಸುದುರಾತ್ಮನಃ ।
ಅನ್ಯತುಲ್ಯತಯಾ ಜ್ಞಾತಃ ಶೈವಃ ಶಿವಪರಾಯಣಃ ॥೪೪೩॥

ಪಶ್ಯೈತಾನ್ಮಲಕುಂಡಸ್ಥಾನೂರ್ಧ್ವಪುಂಡ್ರಧರಾನ್ಮುದಾ ।
ಪಶ್ಯೈತಾನ್ಕಾಲಕುಂಡಸ್ಥಾಂಸ್ತಪ್ತಚಕ್ರಾಂಕಿತಾನ್ಮುದಾ ॥೪೪೬॥

ಪಶ್ಯೈತಾನ್ಪೂಯಕುಂಡಸ್ಥಾನೇತೈರೇವ ದುರಾತ್ಮಭಿಃ ।
ಶಂಕರಾಯಾನಿವೇದ್ಯೈವ ಜಲಂ ಪೀತಂ ಪ್ರಮಾದತಃ ॥೪೪೭॥

ಪಶ್ಯೈತಾನ್ಮಲಕುಂಡಸ್ಥಾನೇತೈರೇವ ದುರಾತ್ಮಭಿಃ ।
ಶಿವಾನರ್ಪಿತಮೇವಾನ್ನಂ ಭುಕ್ತಂ ಯತ್ನಪುರಃಸರಂ ॥೪೪೮॥

ಪಶ್ಯೈತಾನ್ಮೂತ್ರಕುಂಡಸ್ಥಾನೇತೈರೇವ ದುರಾತ್ಮಭಿಃ ।
ಶಿವಾಯಾನರ್ಪಿತಂ ದುಗ್ಧಂ ಸಾಜ್ಯಂ ಪೀತಂ ಪ್ರಯತ್ನತಃ ॥೪೪೯॥

---

ಶಿವಭಕ್ತರು ಬಂದಾಗ ಎದ್ದುನಿಂತು ನಮಸ್ಕಾರಾದಿಗಳನ್ನು ಭಕ್ತಿಯಿಂದ ಮಾಡದೇ ಇದ್ದುದರಿಂದ ಇವರನ್ನು ಗರಗಸಗಳಿಂದ ಕುಯ್ಯುತ್ತಾ ಒಡೆಯುತ್ತಿರುವುದನ್ನು ಸಾವಧಾನವಾಗಿ ನೋಡು. ॥೪೪೩-೪೪೪॥

ಶ್ಲೇಷ್ಮ ಕುಂಡಗಳಲ್ಲಿ ಬಿದ್ದಿರುವ ಈ ದುಷ್ಟರು, ಶಿವಪೂಜಾ ತತ್ಪರನಾದ ಭಕ್ತನನ್ನು ಸಾಮಾನ್ಯರಿಗೆ ಸಮನೆಂದು ತಿಳಿದು ಇಲ್ಲಿ ನರಳುತ್ತಿರುವರು. ಊರ್ಧ್ವ ಪುಂಡ್ರಗಳನ್ನು ಪ್ರೀತಿಯಿಂದ ಧರಿಸಿದುದರಿಂದ ಅಮೇಧ್ಯಕುಂಡಗಳಲ್ಲಿ ಇವರು ಬಿದ್ದು ಗೋಳಾಡುತ್ತಿರುವರು. ಇತ್ತ ನೋಡು, ಕಾಲಕೂಟ ವಿಷಗಳ ಕುಂಡ ಗಳಲ್ಲಿರುವ ಇವರು ಹಿಂದೆ ಕಾದ ಚಕ್ರಗಳಿಂದ ಮುದ್ರಾಂಕನಮಾಡಿಸಿಕೊಂಡವರು. ॥೪೪೫-೪೪೬॥

ಇತ್ತ ನೋಡು, ಕೀವಿನ ಕುಂಡಗಳಲ್ಲಿ ಬಿದ್ದಿರುವ ಈ ದುಷ್ಟರು ಶಂಕರನಿಗೆ ಸಮರ್ಪಿಸದೇ ಅಜ್ಞಾನದಿಂದ ನೀರನ್ನು ಕುಡಿದರು. ಅಮೇಧ್ಯಕುಂಡಗಳಲ್ಲಿ ಬಿದ್ದಿ ರುವ ದುರಾತ್ಮರಾದ ಇವರು ಆ ಪರಶಿವನಿಗೆ ನಿವೇದನ ಮಾಡದೇ ಬಲವಂತದಿಂದ ಅನ್ನವನ್ನು ಊಟ ಮಾಡಿದರು. ॥೪೪೭-೪೪೮॥

ಮೂತ್ರ ಕುಂಡಗಳಲ್ಲಿ ಬಿದ್ದಿರುವ ಈ ದುಷ್ಟರು ಶಿವನಿಗೆ ಸಮರ್ಪಣೆಮಾಡದೇ ತುಪ್ಪದಿಂದ ಬೆರೆದ ಹಾಲನ್ನು ಸ್ವೇಚ್ಛೆಯಿಂದ ಕುಡಿದರು. ಇತ್ತ ನೋಡು, ಪರ

ಪಶ್ಯೈತಾನ್ಮಲಕುಂಡಸ್ಥಾನೇತೈರೇವ ದುರಾತ್ಮಭಿಃ ।
ಶಿವತೀರ್ಥಮಪೀತ್ವೈವ ಭುಕ್ತಂ ಯತ್ನಪುರಸ್ಸರಂ ॥೪೫೦॥

ಪಶ್ಯ ಸಂತಪ್ತಶಸ್ತ್ರಾಗ್ರೇ ಭ್ರಮಂತಮತಿದಾರುಣೇ ।
ಅನೇನ ನ ಕೃತಾಃ ಪೂರ್ವಂ ಶಂಕರಾಯ ಪ್ರದಕ್ಷಿಣಾಃ ॥೪೫೧॥

ಪಶ್ಯೈತಾನ್ಪಾತಿತಾನ್ತಪ್ತೇ ಲೋಹಸ್ತಂಭೇ ಭಯಪ್ರದೇ ।
ಶಿವಾಯ ನ ಕೃತಾ ಹ್ಯೇತೇ ಸಾಷ್ಟಾಂಗಂ ನಯತೋ ಭ್ರಮಾತ್ ॥೪೫೨॥

ಪಶ್ಯೈತಾನ್ಮಲಕುಂಡಸ್ಥಾನ್ಸಮೂತ್ರಮಲಭಕ್ಷಕಾನ್ ।
ಏತೈಃ ಪುರಾ ದಿವಾಭುಕ್ತಂ ಸರ್ವದಾ ಸೋಮವಾಸರೇ ॥೪೫೩॥

ಮೂತ್ರಗರ್ತಸ್ಥಿತಾನ್ಪಶ್ಯ ನಿತ್ಯಂ ಸಂತಪ್ತಮೂತ್ರಪಾನ್ ।
ತ್ರಿಪುಂಡ್ರಧಾರಣಂ ತ್ಯಕ್ತ್ವಾ ಭುಕ್ತಮೇತೈರ್ದುರಾತ್ಮಭಿಃ ॥೪೫೪॥

ಪಶ್ಯೈತಾನ್ಮಲಕುಂಡಸ್ಥಾನ್ಸಮೂತ್ರಂ ಮಲಪೂಯಪಾನ್ ।
ಶಿವಾರ್ಚನಂ ವಿಹಾಯೈವ ಭುಕ್ತಮೇತೈರ್ದುರಾತ್ಮಭಿಃ ॥೪೫೫॥

---

ಶಿವನ ತೀರ್ಥವನ್ನು ಪಾನಮಾಡದೇ ಕೊಬ್ಬಿನಿಂದ ಊಟ ಮಾಡಿದ ಈ ದುರುಳರು ಇಲ್ಲಿ ಅಮೇಧ್ಯಕುಂಡಗಳಲ್ಲಿ ಬಿದ್ದಿರುವರು. ॥೪೪೯-೪೫೦॥

ವಿಶೇಷ ಭಯಂಕರವಾಗಿರುವ ಚೆನ್ನಾಗಿ ಕಾದ ಶಸ್ತ್ರಗಳ ತುದಿಯಲ್ಲಿ ಸಿಕ್ಕಿ ಅಲೆಯುತ್ತಿರುವ ಇವನು ಹಿಂದೆ ಆ ಶಂಕರನಿಗೆ ಪ್ರದಕ್ಷಿಣೆ ಮಾಡಲಿಲ್ಲ. ಇಲ್ಲಿ ನೋಡು, ಭಯವನ್ನುಂಟುಮಾಡುತ್ತಿರುವ ಕಾದ ಕಬ್ಬಿಣದ ಕಂಬದಲ್ಲಿ ಬಿದ್ದಿರುವ ಇವರು ಹಿಂದೆ ಆ ಪರಶಿವನಿಗೆ ಭ್ರಾಂತಿಯಿಂದ ಸಾಷ್ಟಾಂಗಪ್ರಣಾಮ ಮಾಡಲಿಲ್ಲ. ॥೪೫೧-೪೫೨॥

ಅಮೇಧ್ಯಕುಂಡಗಳಲ್ಲಿ ಬಿದ್ದು ಮೂತ್ರವನ್ನೂ ಅಮೇಧ್ಯವನ್ನೂ ತಿನ್ನುತ್ತಿರುವ ಇವರು ಯಾವಾಗಲೂ ಸೋಮವಾರದ ದಿವಸ ಹಗಲುಹೊತ್ತು ಊಟ ಮಾಡುತ್ತಿರುವರು. ಮೂತ್ರಕುಂಡಗಳಲ್ಲಿ ಬಿದ್ದು ನಿತ್ಯವೂ ಕಾದ ಮೂತ್ರಗಳನ್ನು ಕುಡಿಯುತ್ತಿರುವ ಇವರನ್ನು ನೋಡು. ಭಸ್ಮತ್ರಿಪುಂಡ್ರವನ್ನು ಧರಿಸದೇ ಹಿಂದೆ ಈ ದುಷ್ಟರೆಲ್ಲರೂ ಊಟಮಾಡಿದವರು. ॥೪೫೩-೪೫೪॥

ಅಮೇಧ್ಯಕುಂಡಗಳಲ್ಲಿ ಬಿದ್ದು ಮೂತ್ರವನ್ನೂ ಕೀವುಗಳನ್ನೂ ಕುಡಿಯುತ್ತಿರುವ ಇವರನ್ನು ನೋಡು. ಶಿವಪೂಜೆ ಮಾಡದೇ ಊಟಮಾಡಿದ ದುಷ್ಟರಿವರೆಂದು

ಪಶ್ಯೈತಾನ್ ಕ್ರಿಮಿಕುಂಡಸ್ಥಾನ್ ಕ್ರಿಮಿಭಕ್ಷಣತತ್ಪರಾನ್ ।
ರುದ್ರಾಕ್ಷಧಾರಣಂ ತ್ಯಕ್ತ್ವಾ ಭುಕ್ತವೋತ್ತೈರ್ದುರಾತ್ಮಭಿಃ ॥೪೫೬॥

ಅಗ್ನಿಕುಂಡಾದಿಕುಂಡಸ್ಥಾನಶ್ಚೈವಾನ್ಪಶ್ಯ ಸಾದರಂ ।
ಶೂಲಾದಿಭಿಸ್ತಾಡ್ಯಮಾನಾಂತ್ಸರ್ವದಾ ದುಃಖಬೃಂಹಿತಾನ್ ॥೪೫೭॥

ಅಶೈವಾಃ ಸಂತಿ ಯಾವಂತಃ ಪಾತಾಲೇ ಪೃಥಿವೀತಲೇ ।
ತಾವಂತೋಽಪ್ಯೇಷು ತಿಷ್ಠಂತಿ ನರಕೇಷು ವಿಲೋಕಯ ॥೪೫೮॥

ಅಶೈವಾ ಬಹವೋ ಭೂಮೌ ಭವಿಷ್ಯಂತಿ ಕಲೌ ಯುಗೇ ।
ತೇ ಪಾತನೀಯಾ ಯತ್ನೇನ ನರಕೇಷು ಯಥಾ ಧ್ರುವಂ ॥೪೫೯॥

ಅನ್ಯಾಮರಸಮಂ ಜ್ಞಾತ್ವಾ ಯೇ ತಿಷ್ಠಂತಿ ಮಹೇಶ್ವರಂ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೦॥

---

ತಿಳಿ. ಕ್ರಿಮಿಕುಂಡಗಳಲ್ಲಿ ಬಿದ್ದು ಯಾವಾಗಲೂ ಕ್ರಿಮಿಗಳನ್ನೇ ತಿನ್ನುತ್ತಿರುವ ಇವರು ರುದ್ರಾಕ್ಷಗಳನ್ನು ಧರಿಸದೆ ಊಟಮಾಡಿದ ದುಷ್ಟರೆಂದು ತಿಳಿ.||೪೫೫-೪೫೬||

ಅಗ್ನಿಕುಂಡವೇ ಮೊದಲಾದ ಇತರ ಕುಂಡಗಳಲ್ಲಿರುವ ಈ ಶಿವದ್ರೋಹಿಗಳನ್ನು ನೋಡು. ಶೂಲಾಯುಧವೇ ಮುಂತಾದ ಆಯುಧಗಳಿಂದ ಯಾವಾಗಲೂ ಹೊಡೆಯಲ್ಪಡುತ್ತಾ ದುಃಖಕ್ಕೊಳಗಾಗಿ ಇವರು ಗೋಳಿಡುತ್ತಿರುವರು. ಪಾತಾಳ ಮತ್ತು ಭೂಮಿ ಇವುಗಳಲ್ಲಿರುವಷ್ಟುಮಂದಿ ಶಿವದ್ರೋಹಿಗಳೆಲ್ಲರೂ ಈ ನರಕಗಳಲ್ಲಿ ಬಿದ್ದಿರುವುದನ್ನು ನೋಡು. ||೪೫೭-೪೫೮||

ಕಲಿಯುಗದಲ್ಲಿ ಈ ಭೂಲೋಕದಲ್ಲಿ ಅನೇಕಮಂದಿ ಶಿವದ್ರೋಹಿಗಳಾಗುತ್ತಾರೆ. ಅವರೆಲ್ಲರನ್ನೂ ನಿಶ್ಚಯವಾಗಿ ಬಲಾತ್ಕಾರದಿಂದ ನರಕಗಳಿಗೆ ಹಾಕಬೇಕು. ಆ ಮಹೇಶ್ವರನನ್ನು ಇತರ ವಿಷ್ಣ್ವಾದಿ ದೇವತೆಗಳಿಗೆ ಸರಿಸಮಾನನೆಂದು ಹೇಳುತ್ತಿರುವರೆಲ್ಲರೂ ಶಿವದ್ರೋಹಿಗಳೆನಿಸಿ ಭಯಂಕರವಾದ ನರಕವನ್ನು ಹೊಂದುತ್ತಾರೆ. ||೪೫೯-೪೬೦||

ಶಿವಾರ್ಚನಂ ವಿಹಾಯಾನ್ಯಂ ಯೇಽರ್ಚಯಂತಿ ನರಾಧಮಾಃ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೧॥

ಶಿವಮೇವಾತಿಯತ್ನೇನ ಯೇ ನ ಪಶ್ಯಂತಿ ಸಾದರಂ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೨॥

ಯೇ ನ ಕುರ್ವಂತಿ ಯತ್ನೇನ ತ್ರಿಕಾಲಂ ಶಂಕರಾರ್ಚನಂ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೩॥

ಶಿವಾಸ್ಯಮತಿಯತ್ನೇನ ಯೇ ನ ಪಶ್ಯಂತಿ ಸಾದರಂ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೪॥

ಯೇ ನ ಕುರ್ವಂತಿ ಯತ್ನೇನ ಪ್ರದಕ್ಷಿಣಮುಮಾಪತೇಃ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೫॥

ಶಿವಮೇವಾತಿಯತ್ನೇನ ನಾಭಿಧ್ಯಾಯಂತಿ ಯೇ ಸದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಸರ್ವೇ ನರಕಾಶ್ರಯಾಃ ॥೪೬೬॥

---

ಶಿವನನ್ನು ಬಿಟ್ಟು ಉಳಿದ ದೇವತೆಗಳನ್ನು ಪೂಜೆಮಾಡುವ ಮಾನವಾಧಮರೂ ವಿಶೇಷ ನಿಯಮದಿಂದ ಆ ಪರಶಿವನನ್ನು ಆದರಪೂರ್ವಕವಾಗಿ ದರ್ಶನಮಾಡದವರೂ ಶಿವದ್ರೋಹಿಗಳೆನಿಸುವರಲ್ಲದೇ ಭಯಂಕರವಾದ ನರಕಕ್ಕೆ ಭಾಗಿಗಳಾಗುವರು. ॥೪೬೧-೪೬೨॥

ನಿಯಮಬದ್ಧನಾಗಿ ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಆ ಶಂಕರನನ್ನು ಪೂಜೆಮಾಡದಿರುವವರೂ, ಆ ಪರಶಿವನ ಮುಖವನ್ನೇ ಆದರದಿಂದ ನೋಡದವರೂ ಶಿವದ್ರೋಹಿಗಳೆನಿಸಿ ಭಯಂಕರವಾದ ನರಕಕ್ಕೆ ಗುರಿಯಾಗುವರು. ॥೪೬೩-೪೬೪॥

ಆ ಉಮಾರಮಣನಿಗೆ ನಿಯಮದಿಂದ ಪ್ರದಕ್ಷಿಣೆಮಾಡದವನೂ, ಆ ಪರಶಿವನನ್ನೇ ಶ್ರದ್ಧಾನಿಯಮದಿಂದ ಸದಾ ಧ್ಯಾನಮಾಡದವನೂ, ಶಿವದ್ರೋಹಿಯೆನಿಸಿ ಘೋರ ನರಕಕ್ಕೊಳಗಾಗುವರು. ॥೪೬೫-೪೬೬॥

ಶಿವಮೇವಾತಿಯತ್ನೇನ ನ ಸ್ಮರಿಷ್ಯಂತಿ ಯೇ ಸದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೭॥

ಶಿವಸ್ಯೈವ ಕಥಾಂ ಶುದ್ಧಾಂ ಯೇ ನ ಶೃಣ್ವಂತಿ ಭಕ್ತಿತಃ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೮॥

ಶಿವಸ್ಯೈವಾತಿಯತ್ನೇನ ನಾಮ ನೋಚ್ಚಾರಯಂತಿ ಯೇ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೬೯॥

ಸರ್ವದಾ ಸರ್ವಭಾವೇನ ಶಿವನಿಷ್ಠಾ ನ ಯೇ ಮುದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೦॥

ಯೇ ನ ಕುರ್ವಂತಿ ಸತತಂ ಗಲೇ ರುದ್ರಾಕ್ಷಧಾರಣಂ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೧॥

ಯೇ ನ ಕುರ್ವಂತಿ ಸತತಂ ರುದ್ರಾಧ್ಯಾಯಜಪಂ ಸದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೨॥

---

ಯಾವಾಗಲೂ ನಿಯಮದಿಂದ ಶಿವನನ್ನೇ ಸ್ಮರಣೆಮಾಡದಿರುವವರೂ ಪರಿಶುದ್ಧವಾದ ಆ ಪರಶಿವನ ಕಥೆಯನ್ನು ಭಕ್ತಿಯಿಂದ ಕೇಳದವರೂ ಶಿವದ್ರೋಹಿಗಳೆನಿಸಿ ಭಯಂಕರವಾದ ನರಕಗಳಿಗೆ ಗುರಿಯಾಗುವರು. ॥೪೬೭-೪೬೮॥

ವಿಶೇಷ ನಿಯಮಬದ್ಧರಾಗಿ ಆ ಶಿವನ ದಿವ್ಯನಾಮಗಳನ್ನುಚ್ಚಾರಮಾಡದವರೂ, ಆ ಶಿವನನ್ನೇ ಹೆಚ್ಚು ವಿಶ್ವಾಸದಿಂದ ಯಾವಾಗಲೂ ಸ್ತೋತ್ರಮಾಡದವರೂ ಶಿವದ್ರೋಹಿಗಳೆನಿಸಿ ಭಯಂಕರವಾದ ನರಕದ ಪಾಲಾಗುವರು. ॥೪೬೯-೪೭೦॥

ಅನವರತವೂ ಕೊರಳಲ್ಲಿ ರುದ್ರಾಕ್ಷಮಾಲೆಗಳನ್ನು ಧರಿಸದವರೂ, ಯಾವಾಗಲೂ ರುದ್ರಾಧ್ಯಾಯಮಂತ್ರವನ್ನು ಜಪಮಾಡದವರೂ ಸಹ ಶಿವದ್ರೋಹಿಗಳೆನಿಸಿ ಭಯಂಕರ ನರಕಕ್ಕೆ ಹೋಗುವರು. ॥೪೭೧-೪೭೨॥

ಯೇ ನ ಕುರ್ವಂತಿ ಸತತಂ ಭಸ್ಮೋದ್ಧೂಳನಂ ಮುದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೩॥

ಯೇ ನ ಕುರ್ವಂತಿ ಸತತಂ ಕೇವಲಂ ಭಸ್ಮಧಾರಣಂ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೪॥

ಯೇ ನ ಕುರ್ವಂತಿ ಸತತಂ ಪಂಚಾಕ್ಷರಜಪಂ ಸದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೫॥

ದತ್ತಂ ಜಪ್ತಂ ಹುತಂ ತಪ್ತಂ ನ ಶಿವಾಯಾರ್ಪಯಂತಿ ಯೇ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೬॥

ಯೇ ನ ಕುರ್ವಂತ್ಯಹರಹಃ ಶಿವಾಗ್ರೇ ನರ್ತನಂ ಮುದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೭॥

ಯೇ ಭುಂಜತೇ ಫಲಾನ್ನಾದಿ ಶಂಕರಾನರ್ಪಿತಂ ಸದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೮॥

---

ಯಾವಾಗಲೂ ಸಂತೋಷದಿಂದ ಭಸ್ಮೋದ್ಧೂಳನಮಾಡಿಕೊಳ್ಳದವರೂ ಕೇವಲ ಭಸ್ಮತ್ರಿಪುಂಡ್ರವನ್ನಲಂಕರಿಸದವರೂ ಶಿವದ್ರೋಹಿಗಳೆಂದು ಪರಿಗಣಿಸಲ್ಪಟ್ಟು ಭಯಂಕರವಾದ ನರಕಕ್ಕೆ ತೆರಳುವರು. ॥೪೭೩-೪೭೪॥

ಯಾವಾಗಲೂ ಶಿವಪಂಚಾಕ್ಷರ ಜಪಮಾಡದವರೂ, ದಾನ, ಜಪ, ಹೋಮ, ಮತ್ತು ತಪಸ್ಸುಗಳನ್ನು ಆ ಪರಶಿವನಿಗೆ ಸಮರ್ಪಣೆಮಾಡದಿರುವವರೂ ಶಿವದ್ರೋಹಿಗಳೆನಿಸಿ ಭಯಂಕರವಾದ ನರಕಕ್ಕೆ ಭಾಗಿಗಳಾಗುವರು. ॥೪೭೫-೪೭೬॥

ಪ್ರೀತಿಯಿಂದ ಪ್ರತಿದಿನವೂ ಆ ಶಿವನ ಮುಂದೆ ನಾಟ್ಯವಾಡದಿರುವವರೂ, ಆ ಶಂಕರನಿಗೆ ಸಮರ್ಪಣೆ ಮಾಡದೇ ಹಣ್ಣುಹಂಪಲು ಮತ್ತು ಅನ್ನ ಮುಂತಾದುವುಗಳನ್ನು ಯಾವಾಗಲೂ ಊಟಮಾಡುವವರೂ ಶಿವದ್ರೋಹಿಗಳೆನಿಸಿ ಭಯಂಕರವಾದ ನರಕವನ್ನೈದುವರು. ॥೪೭೭-೪೭೮॥

ನಿತ್ಯಮವ್ಯಭಿಚಾರೇಣ ಶಿವಭಕ್ತ್ಯಾ ನ ಯೇ ಮುದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೭೯॥

ಸರ್ವದಾ ಸರ್ವಭಾವೇನ ಶಿವನಿಷ್ಠಾ ನ ಯೇ ಮುದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೦॥

ಶಿವಾಭಿಷೇಕಪಾನೀಯಂ ನ ಪಿಬಂತಿ ಮುದಾ ತು ಯೇ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೧॥

ನ ಭೋಜಯಂತಿ ಯೇ ಶೈವಂ ಕ್ಷೀರಾಜ್ಯಾದಿಭಿರಾದರಾತ್ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೨॥

ನ ತೋಷಯಂತಿ ಯೇ ಶೈವಾನ್ಸ್ವಶಕ್ತ್ಯಾ ದ್ರವ್ಯದಾನತಃ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೩॥

ಅತ್ಯುತ್ಕೃಷ್ಟಂ ಶಿವಕ್ಷೇತ್ರಂ ಯೇಽನ್ಯಕ್ಷೇತ್ರಸಮಂ ವಿದುಃ ।
ಅಶೈವ್ಯಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೪॥

---

ನಿತ್ಯವೂ ತಪ್ಪದೆ ಆ ಶಿವನಲ್ಲಿ ಪ್ರೀತಿಯಿಂದ ಭಕ್ತಿಯಿಡದವರೂ, ಯಾವಾಗಲೂ ಎಲ್ಲಾ ರೀತಿಯಿಂದಲೂ ಆ ಶಿವನಲ್ಲಿಯೇ ಸಂತೋಷದಿಂದ ನೆಟ್ಟ ಮನಸ್ಸಿಲ್ಲದವರೂ, ಶಿವದ್ರೋಹಿಗಳೆನಿಸಿ ಭಯಂಕರವಾದ ನರಕಕ್ಕೆ ಭಾಗಿಗಳಾಗುವರು. ॥೪೭೯-೪೮೦॥

ಶಿವನಿಗೆ ಅಭಿಷೇಕ ಮಾಡಿದ ನೀರನ್ನು ಪ್ರೀತಿಯಿಂದ ಕುಡಿಯದವರೂ ಶಿವಭಕ್ತರಿಗೆ ಹಾಲು, ತುಪ್ಪ ಮೊದಲಾದುವುಗಳನ್ನು ಆದರದಿಂದ ಸಮರ್ಪಿಸಿ ಭೋಜನ ಮಾಡಿಸದವರೂ, ಶಿವದ್ರೋಹಿಗಳೆಂದು ಎಣಿಸಲ್ಪಟ್ಟು ಭಯಂಕರವಾದ ನರಕಗಳಿಗೆ ಭಾಗಿಗಳಾಗುತ್ತಾರೆ. ॥೪೮೧-೪೮೨॥

ತನ್ನ ಯೋಗ್ಯತಾನುಸಾರ ದ್ರವ್ಯದಾನ ಮಾಡಿ ಶಿವಭಕ್ತರಿಗೆ ಸಂತೋಷ ವುಂಟುಮಾಡದವರೂ, ಅತ್ಯಂತ ಉತ್ಕೃಷ್ಟವೆನಿಸಿರುವ ಶಿವಕ್ಷೇತ್ರಗಳನ್ನು ಇತರ ಕ್ಷೇತ್ರಗಳಿಗೆ ಸಮಾನವೆಂದು ತಿಳಿಯುವವರೂ ಶಿವದ್ರೋಹಿಗಳೆಂದು ಪರಿಗಣಿಸಲ್ಪಟ್ಟು ಭಯಂಕರವಾದ ನರಕಕ್ಕೆ ಗುರಿಯಾಗುವರು. ॥೪೮೩-೪೮೪॥

ಶಿವಯಾತ್ರಾಂ ವಿಹಾಯಾನ್ಯಾಂ ಯಾತ್ರಾಂ ಕುರ್ವಂತಿ ಯೇ ಮುದಾ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೫॥

ಶಿವೈಕಶರಣಾ ಯೇ ನ ಮನೋವಾಕ್ಕಾಯಕರ್ಮಭಿಃ ।
ಅಶೈವಾಸ್ತ ಇತಿ ಜ್ಞೇಯಾಸ್ತೇ ಘೋರನರಕಾಶ್ರಯಾಃ ॥೪೮೬॥

ಈದೃಶಾನಾಮಶೈವಾನಾಂ ನರಕೇಭ್ಯೋ ನ ನಿರ್ಗತಿಃ ।
ಅನೇಕಬ್ರಹ್ಮಕಲ್ಪೇಷು ಗತೇಷ್ವಪಿ ನ ಸಂಶಯಃ ॥೪೮೭॥

ಏತೇಷಾಂ ಕೋಟಿಶೋ ಜಾತಾ ಬ್ರಹ್ಮಕಲ್ಪಾಸ್ತಥಾಪ್ಯಮೀ ।
ನ ನಿರ್ಗಚ್ಛಂತಿ ಘೋರೇಭ್ಯೋ ನರಕೇಭ್ಯೋ ನ ಸಂಶಯಃ ॥೪೮೮॥

ಧ್ವಸ್ತ ಏವ ಘಟೋ ಭೂಯೋ ಯದಿ ಕರ್ಮಕ್ಷಮೋ ಭವೇತ್ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೮೯॥

ಭಸ್ಮನಾ ದಗ್ಧಮೇವಾನ್ನಂ ಯದಿ ಪುಷ್ಟಿಕರಂ ಭವೇತ್ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೦॥

---

ಶಿವತೀರ್ಥಯಾತ್ರೆಗಳನ್ನು ಬಿಟ್ಟು ಇತರ ತೀರ್ಥಯಾತ್ರೆಗಳನ್ನು ಪ್ರೀತಿಯಿಂದ ಮಾಡುವವರೂ, ಮನಸ್ಸು, ಮಾತು, ಶರೀರ ಮತ್ತು ಕೆಲಸ ಈ ನಾಲ್ಕುರೀತಿಯಿಂದಲೂ ಆ ಪರಶಿವನೊಬ್ಬನನ್ನೇ ಮರೆಹೋಗದಿರುವವರೂ ಶಿವದ್ರೋಹಿಗಳೆನಿಸಿ ಘೋರವಾದ ನರಕಗಳನ್ನೈದುವರು. ॥೪೮೫-೪೮೬॥

ಈರೀತಿಯಾದ ಶಿವದ್ರೋಹಿಗಳಿಗೆ ಅನೇಕ ಬ್ರಹ್ಮಕಲ್ಪಗಳು ಕಳೆದರೂ ಎಂದಿಗೂ ನರಕಗಳಿಂದ ಬಿಡುಗಡೆಯಿಲ್ಲ. ಇವರಿಗೆ ನರಕ ವಾಸವೇರ್ಪಟ್ಟು ಕೋಟ್ಯಂತರ ಬ್ರಹ್ಮಕಲ್ಪಗಳೇರ್ಪಟ್ಟಿರುವುವಾದರೂ ಘೋರವಾದ ನರಕಗಳಿಂದ ಮಾತ್ರ ಇನ್ನೂ ಬಿಡುಗಡೆಯೇ ಇಲ್ಲ. ಇದರಲ್ಲಿ ಸಂದೇಹ ಪಡಬೇಡ. ॥೪೮೭-೪೮೮॥

ಒಡೆದುಹೋದ ಗಡಿಗೆಯು ತಿರುಗಿ ಕೆಲಸಕ್ಕೆ ಬರುವುದಾದರೂ, ಭಸ್ಮದಿಂದ ಬೆರೆದ ಅನ್ನವು ಪುಷ್ಟಿಕರವಾಗುವುದಾದರೂ ಶಿವದ್ರೋಹಿಗಳಿಗೆ ಈ ನರಕಗಳಿಂದ ಬಿಡುಗಡೆಯಿಲ್ಲ. ॥೪೮೯-೪೯೦॥

ಮೃತೋ ದಗ್ಧೋ ಭಸ್ಮಪೂತೋ ಯದಿ ಜೀವತಿ ಮಾನವಃ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೧॥

ಸುಗಂಧಂ ಪುಷ್ಪಮುತ್ಕೃಷ್ಟಂ ಗಗನೇ ಯದಿ ಜಾಯತೇ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೨॥

ಯದಿ ಸ್ವಭಾವತೋ ವಹ್ನಿರ್ಭವತ್ಯತ್ಯಂತಶೀತಲಃ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೩॥

ಯದಿ ಸ್ವಭಾವತಃ ಶೈತ್ಯಂ ಜಲಂ ತ್ಯಜತಿ ಸರ್ವಥಾ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೪॥

ಪಶ್ಚಿಮಾಯಾಂ ದಿಶಿ ಸ್ವೇಚ್ಛಂ ಯದಿ ಭಾನುರುದೇಷ್ಯತಿ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೫॥

ಯದ್ಯಯಂ ದೇವನಿಲಯಃ ಸುಮೇರುರ್ದಕ್ಷಿಣಾದಿಶಿ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೬॥

---

ಸತ್ತು ಸುಟ್ಟು ಬೂದಿಯಾದ ಮನುಷ್ಯನು ಮತ್ತೆ ಬದುಕುವುದಾದರೂ, ಸುವಾಸನೆಯುಳ್ಳ ಉತ್ಕೃಷ್ಟವಾದ ಹೂವು ಆಕಾಶದಲ್ಲಿಯೇ ಹುಟ್ಟುವುದಾದರೂ ಶಿವದ್ರೋಹಿಗಳಿಗೆ ಈ ನರಕದಿಂದ ಎಂದೆಂದಿಗೂ ಬಿಡುಗಡೆಯಿಲ್ಲ. ॥೪೯೧-೪೯೨॥

ಬೆಂಕಿಯು ಸ್ವಭಾವವಾಗಿ ತುಂಬಾ ತಣ್ಣಗಿರುವುದಾದರೂ, ನೀರು ತನ್ನ ಶೈತ್ಯವನ್ನು ಸ್ವಭಾವನಾಗಿ ಬಿಡುವುದಾದರೂ ಶಿವದ್ರೋಹಿಗಳಿಗೆ ಈ ನರಕಗಳಿಂದ ಎಂದಿಗೂ ಬಿಡುಗಡೆಯಿಲ್ಲ. ॥೪೯೩-೪೯೪॥

ಈ ಸೂರ್ಯನು ಸ್ವೇಚ್ಛೆಯಾಗಿ ಪಶ್ಚಿಮ ದಿಕ್ಕಿನಲ್ಲಿ ಹುಟ್ಟುವುದಾದರೂ, ದೇವತೆಗಳಿಗೆ ಆಶ್ರಯವಾಗಿರುವ ಈ ಸುಮೇರು ಪರ್ವತವೇ ಒಂದುವೇಳೆ ದಕ್ಷಿಣ ದಿಕ್ಕಿನಲ್ಲಿ ನೆಲಸುವುದಾದರೂ ಈ ಶಿವದ್ರೋಹಿಗಳು ಈ ನರಕವನ್ನು ಬಿಟ್ಟು ಹೋಗಲಾರರು. ॥೪೯೫-೪೯೬॥

ಕ್ಷೀರಾಬ್ಧಿಪ್ರಮುಖಾಃ ಸರ್ವೇ ಸಮುದ್ರಾ ಯದಿ ಸಂಗತಾಃ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೭॥

ಪಾತಾಲೋ ಯದಿ ಭೂಮೌ ಸ್ಯಾದ್ಭೂಮಿಃ ಪಾತಲಗಾ ಯದಿ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೮॥

ಜಲಂ ವಹ್ನಿರ್ಯದಿ ಭವೇದ್ವಹ್ನಿರ್ಯದಿ ಜಲಂ ಭವೇತ್ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೪೯೯॥

ಯದಿ ವಾಯುರ್ಭವೇತ್ತೇಜೋ ಯದ್ಯಾಕಾಶೋ ಜಲಂ ಭವೇತ್ ।
ಅಶೈವಾನಾಂ ತದಾಪ್ಯೇಭ್ಯೋ ನರಕೇಭ್ಯೋ ನ ನಿರ್ಗತಿಃ ॥೫೦೦॥

ಬಹುನೋಕ್ತೇನ ಕಿಂ ವಾಕ್ಯಮೇಕಂ ಸತ್ಯಮುದೀರ್ಯತೇ ।
ಅಶೈವಾನಾಮಘೋರೇಭ್ಯೋ ನರಕೇಭ್ಯೋ ನ ನಿರ್ಗಮಃ ॥೫೦೧॥

ಅತಃ ಪ್ರಯತ್ನತೋ ನಿತ್ಯಂ ಕರ್ತವ್ಯಂ ಶಂಕರಾರ್ಚನಂ ।
ಶೈವೋ ಭೂತ್ವಾ ಶಿವೋ ನಿತ್ಯಂ ಭಜನೀಯಃ ಪ್ರಯತ್ನತಃ ॥೫೦೨॥

---

ಕ್ಷೀರಸಮುದ್ರ, ದಧಿಸಮುದ್ರ ಮುಂತಾದ ಏಳು ಸಮುದ್ರಗಳೂ ಒಟ್ಟಿಗೆ ಸೇರಿದರೂ ಪಾತಾಳಲೋಕವು ಭೂಮಿಗೆ ಬಂದು ಈ ಭೂಮಿಯೇ ಪಾತಾಳಕ್ಕೆ ಹೋದರೂ ಈ ಶಿವದ್ರೋಹಿಗಳಿಗೆ ಈ ನರಕವಾಸ ತಪ್ಪುವುದಿಲ್ಲ. ॥೪೯೭-೪೯೮॥

ನೀರು ಬೆಂಕಿಯಾಗಿಯೂ, ಬೆಂಕಿಯು ನೀರಾಗಿಯೂ, ವಾಯುವು ತೇಜಸ್ಸಾಗಿಯೂ, ಆಕಾಶವು ನೀರಾಗಿಯೂ ಆಗುವುದಾದರೂ ಶಿವದ್ರೋಹಿಗಳಿಗೆ ಈ ನರಕಗಳಿಂದ ಬಿಡುಗಡೆಯಿಲ್ಲ. ॥೪೯೯-೫೦೦॥

ಹೆಚ್ಚು ಮಾತಿನಿಂದ ಪ್ರಯೋಜನವೇನು. ಸತ್ಯವಾದ ಒಂದೇ ವಾಕ್ಯವನ್ನು ಹೇಳುವೆನು ಕೇಳು. ಶಿವದ್ರೋಹಿಗಳಿಗೆ ಭಯಂಕರವಾದ ನರಕಗಳಿಂದ ಎಂದೆಂದಿಗೂ ಬಿಡುಗಡೆಯೇ ಇಲ್ಲ. ಆದುದರಿಂದ ನಿಯಮಪುರಸ್ಸರವಾಗಿ ನಿತ್ಯವೂ ಆ ಶಂಕರನನ್ನು ಪೂಜೆಮಾಡಬೇಕು. ಶಿವನೇ ತನ್ನ ಭಕ್ತನ ರೂಪದಲ್ಲಿರುವುದರಿಂದ ಅವನನ್ನೂ ಅವಶ್ಯವಾಗಿ ಪೂಜೆಮಾಡಲೇಬೇಕು. ॥೫೦೧-೫೦೨॥

ಆರ್ಯಾವರ್ತೇ ಪುರಾ ಕಶ್ಚಿದ್ವೇದವೇದಾಂತಪಾರಗಃ ।
ಶಿವೈಕಶರಣೋ ನಿತ್ಯಂ ಶಿವಪೂಜಾಪರಾಯಣಃ ॥೫೦೩॥

ರುದ್ರಾಕ್ಷಮಾಲಾಭರಣೋ ಭಸ್ಮೋದ್ಧೂಳಿತವಿಗ್ರಹಃ ।
ಭಸ್ಮತ್ರಿಪುಂಡ್ರನಿಟಿಲಃ ಶಿವಧ್ಯಾನಪರಃ ಸ್ಥಿತಃ ॥೫೦೪॥

ಏತಾದೃಶಂ ದ್ವಿಜಶ್ರೇಷ್ಠಂ ಕಶ್ಚಿತ್ಷೋಡಶವಾರ್ಷಿಕಃ ।
ವೇದಾಧ್ಯಯನಸಂಪನ್ನೋ ದದರ್ಶ ವನಮಧ್ಯಗಂ ॥೫೦೫॥

ತದಾನೀಂ ತದ್ದ್ವಿಜಂ ದೃಷ್ಟ್ವಾ ಶಿವಪೂಜಾರತಂ ಮುದಾ ।
ಪ್ರಣಮ್ಯ ವಿನಯಾದ್ವಾಚಮುವಾಚ ಸಕೃತಾಂಜಲಿಃ ॥೫೦೬॥

ಸ್ವಾಮಿನ್ಸರ್ವಜ್ಞ ವಿಪ್ರೇಂದ್ರ ಮೋಕ್ಷೋಪಾಯಂ ವದಸ್ವ ಮೇ ।
ಪ್ರಪನ್ನೋಽಸ್ಮಿ ಕೃಪಾಸಿಂಧೋ ಶಿಕ್ಷಯಸ್ವ ಯಥೋಚಿತಂ ॥೫೦೭॥

ಇತಿ ತದ್ವಚನಂ ಶ್ರುತ್ವಾ ಶಿವಪೂಜಾಂ ಸಮಾಪ್ಯ ಸಃ ।
ಉವಾಚ ವಚನಂ ಚಾರು ಸರ್ವಲೋಕಹಿತಾವಹಂ ॥೫೦೮॥

---

ಹಿಂದೆ ಈ ಭರತಖಂಡದಲ್ಲಿ ಒಬ್ಬ ವೇದವೇದಾಂತಪಾರಂಗತನಾಗಿ ಯಾವಾಗಲೂ ಶಿವನಧ್ಯಾನ ಮತ್ತು ಪೂಜಾದಿಗಳಲ್ಲಿಯೇ ತತ್ಪರನಾಗಿರುವ ಬ್ರಾಹ್ಮಣ ನಿದ್ದನು. ಆತನು ರುದ್ರಾಕ್ಷಮಾಲೆಗಳನ್ನಲಂಕರಿಸಿಕೊಂಡು ಭಸ್ಮತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸಿ ಮೈಗೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡು ಸದಾ ಆ ಶಿವ ನನ್ನೇ ಧ್ಯಾನಮಾಡುತ್ತಿದ್ದನು. ||೫೦೩-೫೦೪||

ಇಂತಹ ಬ್ರಾಹ್ಮಣೋತ್ತಮನನ್ನು ಹದಿನಾರು ವರ್ಷ ವಯಸ್ಸಿನ ವೇದಾಧ್ಯ ಯನ ಸಂಪನ್ನನಾದ ಮತ್ತೊಬ್ಬ ಬ್ರಾಹ್ಮಣನು ಕಾಡಿನ ಮಧ್ಯದಲ್ಲಿದ್ದಾಗ ಕಂಡನು. ಆತನು ಆಗ ಶಿವಪೂಜಾನಿರತನಾಗಿರುವ ಆ ಬ್ರಾಹ್ಮಣನನ್ನು ನೋಡಿ ಸಂತೋಷ ದಿಂದ ಆತನಿಗೆ ನಮಸ್ಕಾರಮಾಡಿ ವಿನಯದಿಂದ ಕೈಜೋಡಿಸಿ ಹೀಗೆಂದನು. ||೫೦೫ -೫೦೬||

ಸರ್ವಜ್ಞನಾದ ಸ್ವಾಮಿಯೇ, ನನಗೆ ಮೋಕ್ಷ ದೊರೆಯುವ ಉಪಾಯವನ್ನು ತಿಳಿಸು. ಎಲೈ ದಯಾಸಮುದ್ರನೇ! ಈಗ ನಿನ್ನ ಮರೆಹೊಕ್ಕಿರುವೆನು. ಉಚಿತ ವಾದ ರೀತಿಯಲ್ಲಿ ನನ್ನನ್ನು ಉದ್ಧರಿಸು; ಎಂದು ಕೇಳಿದ ಆ ಬ್ರಾಹ್ಮಣಕುಮಾರನ

ಬ್ರಾಹ್ಮಣ ಶೃಣು ಮದ್ವಾಕ್ಯಮಪ್ರಮಾದೇನ ಸಾದರಂ ।
ಶ್ರುತಿಸಿದ್ಧಂ ವದಿಷ್ಯೇಽಹಂ ಮೋಕ್ಷೋಪಾಯಮನಾಕುಲಂ ॥೫೯॥

ಯಾಮಿನೀಪಶ್ಚಿಮೇ ಯಾಮೇ ಕುರು ಶಂಕರಚಿಂತನಂ ।
ತತಃ ಶೌಚಾದಿಕಂ ಕೃತ್ವಾ ಕುರು ಸ್ನಾನಂ ಪ್ರಯತ್ನತಃ ॥೬೦॥

ಸ್ನಾನಕಾಲೇ ಮಹಾದೇವಂ ಸ್ಮರ ಸಾಂಬಮತಂದ್ರಿತಃ ।
ಪರಿಧಾಯ ತತೋ ವಸ್ತ್ರಂ ಭಸ್ಮನೋದ್ಧೂಳನಂ ಕುರು ॥೬೧॥

ತತಃ ಶಿರೋ ಲಲಾಟಾದೌ ಯಥಾಮಂತ್ರಂ ಯಥಾಕ್ರಮಂ ।
ತ್ರಿಪುಂಡ್ರಧಾರಣಂ ಶ್ರೌತಂ ಕುರು ಕೇವಲಮಾದರಾತ್ ॥೬೨॥

ತ್ರಿಪುಂಡ್ರಧಾರಣಾತ್ಪೂರ್ವಂ ತದನಂತರಮಾದರಾತ್ ।
ವಿಪ್ರ ಮೃಚ್ಚಂದನಾದೀನಿ ಲಲಾಟಾದೌ ನ ಲೇಪಯ ॥೬೩॥

---

ಮಾತುಗಳನ್ನು ಕೇಳಿ ಆ ಶಾಂಭವನು ತಾನು ಮಾಡುತ್ತಿದ್ದ ಶಿವಪೂಜೆಯನ್ನು ಮುಗಿಸಿ, ಸಕಲ ಜನಗಳಿಗೂ ಹಿತವನ್ನುಂಟುಮಾಡುವಂತಿರುವ ಮನೋಹರವಾದ ಮಾತುಗಳನ್ನಾಡಿದನು. ॥೫೭-೫೮॥

ಪ್ರಮಾದವಿಲ್ಲದೇ ನಾನು ಹೇಳುವ ವಾಕ್ಯಗಳನ್ನು ಆದರದಿಂದ ಲಾಲಿಸು. ಅಯ್ಯ ಬ್ರಾಹ್ಮಣನೇ! ವೇದಪ್ರಸಿದ್ಧವಾಗಿಯೂ ವಿಪತ್ತುಗಳಿಂದ ದೂರವಾಗಿಯೂ ಆದ ಮೋಕ್ಷೋಪಾಯವನ್ನು ಹೇಳುವೆನು ಕೇಳು. ರಾತ್ರಿಯ ಕೊನೆಯ ಜಾವದಲ್ಲಿ ಆ ಶಂಕರನನ್ನು ಧ್ಯಾನಿಸಿ ಅನಂತರ ಶೌಚಾದಿಗಳನ್ನು ನೆರವೇರಿಸಿಕೊಂಡು ಆಮೇಲೆ ನಿಯಮದಿಂದ ಸ್ನಾನಮಾಡು. ॥೫೯-೬೦॥

ಸ್ನಾನಮಾಡುವಾಗ ಅಂಬಿಕಾರಮಣನೆನಿಸಿದ ಆ ಮಹಾದೇವನನ್ನು ಆಲಸ್ಯವಿಲ್ಲದೇ ಸ್ಮರಣೆಮಾಡುತ್ತಾ, ಸ್ನಾನ ಮುಗಿದಮೇಲೆ ವಸ್ತ್ರವನ್ನು ಧರಿಸಿ ವಿಭೂತಿಯಿಂದ ಮೈಗೆಲ್ಲಾ ಲೇಪನಮಾಡಿಕೋ. ಅನಂತರ ಹಣೆಯೇ ಮೊದಲಾದ ಜಾಗಗಳಲ್ಲಿ ಮಂತ್ರಪೂರ್ವಕವಾಗಿ ವಿಧಿಯನ್ನನುಸರಿಸಿ ಶ್ರುತಿಪ್ರಸಿದ್ಧವಾದ ಭಸ್ಮತ್ರಿಪುಂಡ್ರಗಳನ್ನು ಆದರದಿಂದ ಧರಿಸುವನಾಗು. ॥೬೧-೬೨॥

ಭಸ್ಮತ್ರಿಪುಂಡ್ರವನ್ನು ಧರಿಸುವುದಕ್ಕೆ ಮೊದಲೂ ಅಥವಾ ಆಮೇಲಾದರೂ ಮಣ್ಣು (ನಾಮ) ಗೋಪೀಚಂದನ ಮುಂತಾದವುಗಳನ್ನು ಪ್ರೀತಿಯಿಂದ ಹಣೆಯೇ

ವಿಪ್ರ ಜಾಬಾಲಮಾರ್ಗೇಣ ಕುರು ರುದ್ರಾಕ್ಷಧಾರಣಂ ।
ತತಃ ಕುರು ಯಥಾಯೋಗ್ಯಂ ಸಂಧ್ಯಾಂ ದೇವೀಂ ತತೋ ಜಪ ॥೫೧೪॥

ತತಃ ಕುರು ಯಥಾಯೋಗ್ಯಂ ಹೋಮಮಾಜ್ಯಾದಿಸಾಧನೈಃ ।
ತತೋ ಯತ್ನೇನ ವಿಧಿವನ್ಮಹಾದೇವಾರ್ಚನಂ ಕುರು ॥೫೧೫॥

ಮಹಾದೇವಸ್ಯ ಪೂಜಾಯಾಂ ಸಾವಧಾನಃ ಸದಾ ಭವ ।
ರುದ್ರಾಧ್ಯಾಯೇನ ಸತತಮಭಿಷೇಕಂ ಕುರು ಪ್ರಭೋ ॥೫೧೬॥

ಬಿಲ್ವಪತ್ರೈರ್ಮಹಾದೇವಂ ಪೂಜಯಸ್ವಾತಿಭಕ್ತಿತಃ ।
ಶಂಭೋಃ ಪಂಚಾಕ್ಷರೇಣೈವ ಬಿಲ್ವಪತ್ರಾರ್ಚನಂ ಕುರು ॥೫೧೭॥

ಪಂಚಾಕ್ಷರೋ ಮಹಾಮಂತ್ರಃ ಸರ್ವಮಂತ್ರಶಿರೋಮಣಿಃ ।
ತೇನ ಸಂಪೂಜಿತಃ ಶಂಭುಃ ಭುಕ್ತಿಂ ಮುಕ್ತಿಂ ಚ ಯಚ್ಛತಿ ॥೫೧೮॥

---

ಮೊದಲಾದ ಪ್ರದೇಶಗಳಲ್ಲಿ ಲೇಪನಮಾಡಿಕೊಳ್ಳಬೇಡ. ಅಯ್ಯ ಬ್ರಾಹ್ಮಣನೇ, ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ರೀತಿಯಲ್ಲಿ ರುದ್ರಾಕ್ಷಧಾರಣೆಮಾಡು. ಅನಂತರ ನಿನ್ನ ಯೋಗ್ಯತಾನುಸಾರವಾಗಿ ಸಂಧ್ಯಾವಂದನೆ ಮತ್ತು ಗಾಯತ್ರೀ ಜಪಗಳನ್ನಾಚರಿಸು. ॥೫೧೩-೫೧೪॥

ಆಮೇಲೆ ತುಪ್ಪವೇ ಮೊದಲಾದ ಸಾಮಗ್ರಿಗಳಿಂದ ಯೋಗ್ಯತೆಯನ್ನನುಸರಿಸಿ ಹೋಮಮಾಡು. ಅನಂತರ ನಿಯಮದಿಂದ ವಿಧಿಪ್ರಕಾರವಾಗಿ ಆ ಮಹಾದೇವನನ್ನು ಪೂಜೆಮಾಡು. ಯಾವಾಗಲೂ ಆ ಮಹಾದೇವನನ್ನು ಪೂಜೆಮಾಡುವಾಗ ಸಾವಧಾನವಾಗಿರು. ಆ ಪ್ರಭುವಿಗೆ ಯಾವಾಗಲೂ ರುದ್ರಾಧ್ಯಾಯಮಂತ್ರವನ್ನುಚ್ಚರಿಸುತ್ತಾ ಅಭಿಷೇಕಮಾಡು. ॥೫೧೫-೫೧೬॥

ಆ ಮಹಾದೇವನನ್ನು ಬಿಲ್ವಪತ್ರೆಗಳಿಂದ ವಿಶೇಷ ಭಕ್ತಿಪುರಸ್ಸರವಾಗಿ ಪೂಜಿಸುತ್ತಾ ಶಂಭುವಿಗೆ ಶಿವಪಂಚಾಕ್ಷರ ಮಂತ್ರಗಳಿಂದಲೇ ಬಿಲ್ವಪತ್ರೆಗಳನ್ನು ಸಮರ್ಪಣೆ ಮಾಡು. ಶಿವಪಂಚಾಕ್ಷರ ಮಹಾಮಂತ್ರವು ಎಲ್ಲಾ ಮಂತ್ರಗಳಿಗೂ ಚೂಡಾಮಣಿಯಂತಿರುವುದು. ಈ ಮಂತ್ರದಿಂದಲೇ ಶಂಭುವಿಗೆ ಪೂಜೆಮಾಡಿದರೆ ಆ ದೇವನು ಇಹದಲ್ಲಿ ಸಕಲ ಭೋಗಗಳನ್ನು ಪರದಲ್ಲಿ ಮೋಕ್ಷವನ್ನೂ ಕರುಣಿಸುವನು. ॥೫೧೭-೫೧೮॥

ವೈದಿಕೋಽಯಂ ಮಹಾಮಂತ್ರಸ್ತತೋ ವೈದಿಕಪೂಜನಂ ।
ಶಿವಪ್ರಿಯಕರಂ ಯಸ್ಮಾತ್ತೇನ ಪೂಜಯ ಶಂಕರಂ ॥೫೧೯॥

ಫಲೇನಾನ್ನೇನ ವಾ ಶಂಭೋಃ ಕುರು ನೈವೇದ್ಯಮಾದರಾತ್ ।
ಪ್ರದಕ್ಷಿಣವಿಧಾನೇನ ಕುರು ಸಮ್ಯಕ್ಪ್ರದಕ್ಷಿಣಾಃ ॥೫೨೦॥

ಸಾಷ್ಟಾಂಗಾನ್ಕುರು ಯತ್ನೇನ ಪ್ರಣಾಮಾಂಛ್ರೀಮಹೇಶಿತುಃ ।
ಶಂಕರಾಗ್ರೇ ಪ್ರಯತ್ನೇನ ಕುರು ನರ್ತನಮಾದರಾತ್ ॥೫೨೧॥

ಪಶ್ಯ ನಿತ್ಯಂ ಪ್ರಯತ್ನೇನ ಪೂಜಿತಂ ಸಾಂಬಮೀಶ್ವರಂ ।
ಪಿಬ ಯತ್ನೇನ ಸತತಂ ಶಿವನಿರ್ಣೇಜನೋದಕಂ ॥೫೨೨॥

ಏವಮೇವ ಪ್ರಯತ್ನೇನ ಮಧ್ಯಾಹ್ನೇಽಪಿ ಮಹೇಶ್ವರಂ ।
ಬಿಲ್ವಪತ್ರಾದಿಭಿಃ ಸಮ್ಯಕ್ಪೂಜಯಸ್ವಾತಿಯತ್ನತಃ ॥೫೨೩॥

---

ಈ ಶಿವಪಂಚಾಕ್ಷರಮಹಾಮಂತ್ರವು ವೇದೋಕ್ತವಾಗಿರುವುದರಿಂದ ಇದರಿಂದ ಮಾಡುವ ಪೂಜೆಯೂ ವೈದಿಕಪೂಜೆಯೆನಿಸುವುದು. ಈ ಪೂಜೆಯು ಶಿವನಿಗೆ ಬಹಳ ಪ್ರೀತಿಕರವಾಗಿರುವುದರಿಂದ ನೀನು ಆದರವಿಟ್ಟು ಆ ದೇವದೇವನನ್ನು ಈ ಮಂತ್ರದಿಂದಲೇ ಪೂಜೆಮಾಡು. ಗೌರೀಶಂಕರನಿಗೆ ಹಣ್ಣು ಹಂಪಲುಗಳನ್ನೂ ಅನ್ನವನ್ನೂ ನಿವೇದನಮಾಡು. ವಿಧಿಪ್ರಕಾರ ಆ ದೇವದೇವನಿಗೆ ಪ್ರದಕ್ಷಿಣೆಗಳನ್ನು ಮಾಡುವನಾಗು. ॥೫೧೯-೫೨೦॥

ಶ್ರೀ ಮಹೇಶ್ವರನಿಗೆ ನಿಯಮದಿಂದ ಸಾಷ್ಟಾಂಗನಮಸ್ಕಾರ ಮಾಡು. ಆಮೇಲೆ ಆದರದಿಂದ ಆ ಶಂಕರನ ಮುಂದೆ ನರ್ತನಮಾಡು. ಪ್ರತಿದಿನವೂ ಪೂಜೆಮಾಡಿದ ಮೇಲೆ ಅಂಬಿಕಾಪತಿಯಾದ ಈಶ್ವರನನ್ನು ದರ್ಶನಮಾಡು. ಆ ಶಂಕರನಿಗೆ ಅಭಿಷೇಕಮಾಡಿದ ನೀರನ್ನು ನಿಯಮದಿಂದ ಯಾವಾಗಲೂ ಕುಡಿಯುತ್ತಿರು. ॥೫೨೧-೫೨೨॥

ಹೀಗೆಯೇ ನಿಯಮದಿಂದ ಮಧ್ಯಾಹ್ನಕಾಲದಲ್ಲಿಯೂ ಆ ಮಹೇಶ್ವರನನ್ನು ಬಿಲ್ವಪತ್ರೆಯೇ ಮುಂತಾದ ಸಾಧನಗಳಿಂದ ಚೆನ್ನಾಗಿ ಪೂಜೆಮಾಡು. ಸಾಯಂಕಾಲಗಳಲ್ಲಿಯೂ ಹೀಗೆಯೇ ಪರಮೇಶ್ವರನನ್ನು ನಿಯಮದಿಂದ ಪೂಜೆ

ಸಾಯಂಕಾಲೇಽಪಿ ಯತ್ನೇನ ಪೂಜಯಸ್ವೈವಮೀಶ್ವರಂ ।
ಪೂಜಾಂ ಪ್ರದೋಷಕಾಲೀನಾಂ ದೃಷ್ಟ್ವಾ ಹೃಷ್ಟೋಭವ ದ್ವಿಜ ॥೫೨೪॥

ಶೈವಂ ಪಂಚಾಕ್ಷರಂ ಶುದ್ಧಂ ಜಪ ಯತ್ನಪುರಸ್ಸರಂ ।
ನಿವೇದ್ಯ ಶಂಕರಾಯಾನ್ನಂ ತತೋ ಭುಂಕ್ಷ್ವ ಯಥೋಚಿತಂ ॥೫೨೫॥

ಶೃಣು ಯತ್ನೇನ ಸತತಂ ಮಹೇಶ್ವರಕಥಾಃ ಶುಭಾಃ ।
ನಿರಂತರಮತಿಪ್ರೀತ್ಯಾ ಕುರು ಶೈವಾಭಿವಂದನಂ ॥೫೨೬॥

ಸ್ವಶಕ್ತ್ಯಾ ಪತ್ರಪುಷ್ಪಾದ್ಯೈಃ ಶೈವಾನಾಂ ಪೂಜನಂ ಕುರು ।
ದೂರೇಽಪಿ ಯದಿ ತಿಷ್ಠಂತಿ ಶೈವಾಃ ಶಂಕರಪೂಜಕಾಃ ॥೫೨೭॥

ತತ್ರಾಪಿ ಗತ್ವಾಯತ್ನೇನ ಕುರು ಶಾಂಕರಪೂಜನಂ ।
ಕುರು ಸಂಲಾಪಮನಿಶಂ ಶಾಂಕರೈಃ ಸಹ ಸರ್ವದಾ ॥೫೨೮॥

ಮಾಸಂ ತ್ಯಜ ಭ್ರಮೇಣಾಪಿ ದ್ವಿಜ ಶಾಂಕರಸಂನಿಧಿಂ ।
ಕುರು ಪ್ರೀತಿಂ ಪ್ರಯತ್ನೇನ ಶಾಂಕರೇಷ್ವೇವ ಸಾದರಂ ॥೫೨೯॥

---

ಮಾಡು. ಪ್ರದೋಷಕಾಲಗಳಲ್ಲಿ ಮಾಡುವ ಪೂಜೆಯನ್ನು ನೋಡಿ ಸಂತುಷ್ಟನಾಗು. ||೫೨೩-೫೨೪||

ಶುದ್ಧವಾದ ಶಿವಪಂಚಾಕ್ಷರಮಹಾಮಂತ್ರವನ್ನು ನಿಯಮದಿಂದ ಜಪಿಸು. ಅನಂತರ ಆ ಶಂಕರನಿಗೆ ಅನ್ನವನ್ನು ನಿವೇದನಮಾಡಿ ಯೋಗ್ಯತಾನುಸಾರವಾಗಿ ಊಟಮಾಡು. ಪ್ರಯತ್ನಪೂರ್ವಕವಾಗಿ ಶುಭಕರವಾದ ಮಹೇಶ್ವರನ ಕಥೆಗಳನ್ನು ಯಾವಾಗಲೂ ಕೇಳುತ್ತಿರು. ಅನವರತವೂ ತುಂಬಾ ಪ್ರೀತಿಯಿಂದ ಈಶ್ವರಭಕ್ತರಿಗೆ ನಮಸ್ಕಾರಮಾಡು. ||೫೨೫-೫೨೬||

ತನ್ನ ಶಕ್ತ್ಯನುಸಾರವಾಗಿ ಪತ್ರ, ಪುಷ್ಪ ಮೊದಲಾದವುಗಳಿಂದ ಈಶ್ವರಭಕ್ತರನ್ನು ಪೂಜೆಮಾಡು. ಶಂಕರನನ್ನು ಪೂಜೆಮಾಡುವ ಶೈವರು ದೂರದಲ್ಲಿದ್ದರೂ ಅಲ್ಲಿಗೇ ಹೋಗಿ ಆ ಶಂಕರನ ಭಕ್ತರನ್ನು ನಿಯಮದಿಂದ ಪೂಜೆಮಾಡು. ಅವರೊಡನೆಯೇ ಅನವರತವೂ ಸಲ್ಲಾಪಮಾಡುತ್ತಿರು. ||೫೨೭-೫೨೮||

ಭ್ರಾಂತಿಯಿಂದಲಾದರೂ ಆ ಶಂಕರನ ಸಂನಿಧಾನವನ್ನು ಎಂದಿಗೂ ಬಿಡಬೇಡ. ಅಯ್ಯಾ ಬ್ರಾಹ್ಮಣನೇ, ಶಂಕರನ ಭಕ್ತರುಗಳಲ್ಲಿಯೇ ಪ್ರಯತ್ನಪೂರ್ವಕವಾಗಿ

ಸದಾಶಿವಕೃತಾಂ ಶಿಕ್ಷಾಂ ಶಿರಸಾ ಸ್ವೀಕುರು ದ್ವಿಜ ।
ಶಿವಬುದ್ಧಿಂ ಕುರುಪ್ರೀತ್ಯಾ ಶೈವೇಷು ಸತತಂ ದ್ವಿಜ ॥೫೩೦॥

ಸಹಸಾ ಶಾಂಕರಾಸ್ತುಭ್ಯಂ ತಥಾ ನೋಪದಿಶಂತಿ ತೇ ।
ತಥಾಪಿ ಶೈವವಾರ್ತಾ ಯಾ ಸೈವ ಪಾಪಾಪನೋದಿನೀ ॥೫೩೧॥

ಶೈವಾಃ ಶಂಕರತತ್ವಜ್ಞಾಃ ವಸ್ತುತೋ ದುರ್ಲಭಾ ಭುವಿ ।
ತಾದೃಶಾನ್ಸಾವಧಾನೇನ ಪೂಜಯಸ್ವ ಸ್ವಶಕ್ತಿತಃ ॥೫೩೨॥

ಅಶೈವಾ ಯತ್ರ ತಿಷ್ಠಂತಿ ತತ್ರ ಮಾವಸ ಮಾವಸ ।
ಅಶೈವಸಂಗಮೋ ದುಷ್ಟೋ ನರಕಾವಾಸಸಾಧನಂ ॥೫೩೩॥

ಅಶೈವಂ ಪಥಿ ವಾನ್ಯತ್ರ ಕದಾಚಿದ್ಯದಿ ಪಶ್ಯಸಿ ।
ತದಾ ತು ಭಸ್ಮನಾಂಗಾನಿ ಸಂಮೃಜ್ಯಾರ್ಕಂ ವಿಲೋಕಯ ॥೫೩೪॥

ಸಾಯಮುದ್ಧೂಳನಂ ಕೃತ್ವಾ ಕುರು ಶಂಕರಪೂಜನಂ ।
ಪ್ರದಕ್ಷಿಣನಮಸ್ಕಾರನರ್ತನಾನಿ ಕುರು ಪ್ರಿಯಾನ್ ॥೫೩೫॥

---

ಪ್ರೀತಿಯಿಡು. ಆ ಪರಶಿವನು ಮಾಡಿದ ಉಪದೇಶವನ್ನು ಯಾವಾಗಲೂ ಸ್ವೀಕರಿಸುವನಾಗು. ಬ್ರಾಹ್ಮಣನೇ, ಶಿವಭಕ್ತರಲ್ಲಿಯೂ ಆ ಪರಶಿವನಂತೆಯೇ ಭಕ್ತಿಯಿಡು. ॥೫೨೯-೫೩೦॥

ಶಾಂಭವರಾದರು ಜಾಗ್ರತೆ ನಿನಗೆ ಉಪದೇಶಮಾಡುವುದಿಲ್ಲ. ಹಾಗಾದರೂ ಆ ಶೈವರ ಸಮಾಚಾರವು ಸಕಲಪಾಪಗಳನ್ನೂ ಹೋಗಲಾಡಿಸುವುದು. ವಸ್ತುತಃ ಶಂಕರನ ತತ್ವವನ್ನರಿತ ಶೈವಶ್ರೇಷ್ಠರು ಈ ಭೂಮಿಯಲ್ಲಿ ದೊರೆಯುವುದು ಕಷ್ಟ. ಅಂತಹವರು ದೊರೆತಾಗ ಸಾವಧಾನದಿಂದ ಅವರನ್ನು ನಿನ್ನ ಯೋಗ್ಯತಾನುಸಾರ ಪೂಜೆಮಾಡು. ॥೫೩೧-೫೩೨॥

ಶಿವದ್ರೋಹಿಗಳಿರುವ ಕಡೆಗಳಲ್ಲಿ ಎಂದಿಗೂ ವಾಸಮಾಡಬೇಡ. ಶಿವದ್ರೋಹಿಗಳ ಸಹವಾಸವು ದೋಷಯುಕ್ತವೂ ನರಕವಾಸಕ್ಕೆ ಕಾರಣವೂ ಆಗಿರುವುದು. ದಾರಿಯಲ್ಲಾಗಲೀ ಅಥವಾ ಇನ್ನೆಲ್ಲಿಯಾಗಲೀ ಅವರನ್ನು ಕಂಡರೆ ವಿಭೂತಿಯನ್ನು ಅವಯವಗಳಿಗೆಲ್ಲಾ ಹಚ್ಚಿಕೊಂಡು ಸೂರ್ಯನನ್ನು ನೋಡು. ॥೫೩೩-೫೩೪॥

ಸಾಯಂಕಾಲದಲ್ಲಿ ವಿಭೂತಿಯನ್ನು ಲೇಪನಮಾಡಿಕೊಂಡು ಆ ಶಂಕರನನ್ನು ಪೂಜೆಮಾಡು. ಅನಂತರ ಆ ದೇವನಿಗೆ ಪ್ರದಕ್ಷಿಣೆ ನಮಸ್ಕಾರ ಮತ್ತು ನರ್ತನ

ಜಪ ಪಂಚಾಕ್ಷರಂ ನಿತ್ಯಂ ರಾತ್ರಾವಪ್ಯತಿಯತ್ನತಃ ।
ಶಿವಸ್ಯ ಸನ್ನಿಧಾನೇನ ಶಯನಂ ಕುರು ಸಾದರಂ ॥೫೩೬॥

ಉದ್ಧೂಳನಂ ತ್ರಿಪುಂಡ್ರಂ ಚ ಕೃತ್ವೈವ ಶಯನಂ ಕುರು ।
ಯಜ್ಞೋಪವೀತವನ್ನಿತ್ಯಂ ಕುರು ರುದ್ರಾಕ್ಷಧಾರಣಂ ॥೫೩೭॥

ಉದ್ಧೂಳನಂ ವಿಹಾಯಾಂಬು ತೃಷಿತೋಽಪಿ ನ ಸಂಪಿಬ ।
ಉದ್ಧೂಳನಂ ವಿಹಾಯಾನ್ನಂ ಮಾಮಾಭುಂಕ್ಷ್ವ ದ್ವಿಜೋತ್ತಮ ॥೫೩೮॥

ಉದ್ಧೂಳನಂ ತ್ರಿಪುಂಡ್ರಂಚ ತಥಾ ರುದ್ರಾಕ್ಷಧಾರಣಂ ।
ಲಿಂಗಾರ್ಚನಂ ಚ ವಿಧಿವತ್ಕೃತ್ವಾ ದ್ವಿಜ ಜಲಂ ಪಿಬ ॥೫೩೯॥

ಸರ್ವದಾ ಸಾವಧಾನೇನ ಕುರು ಶಂಕರಚಿಂತನಂ ।
ಕರ್ಮಣಾ ಮನಸಾ ವಾಚಾ ಶಂಕರಂ ಶರಣಂ ವ್ರಜ ॥೫೪೦॥

---

ಮುಂತಾದವುಗಳನ್ನು ಹಿತಕರವಾಗುವಂತೆ ಮಾಡು. ನಿತ್ಯವೂ ರಾತ್ರಿವೇಳೆ ವಿಶೇಷ ನಿಯಮದಿಂದ ಶಿವಪಂಚಾಕ್ಷರಮಹಾಮಂತ್ರವನ್ನು ಜಪಮಾಡುತ್ತಾ ಆ ಶಿವನ ಸನ್ನಿಧಿಯಲ್ಲಿಯೇ ಆದರದಿಂದ ಮಲಗಿಕೊ. ॥೫೩೫-೫೩೬॥

ಭಸ್ಮೋದ್ಧೂಳನ ಮತ್ತು ಭಸ್ಮತ್ರಿಪುಂಡ್ರಧಾರಣೆಗಳನ್ನು ಮಾಡಿಕೊಂಡು ಮಲಗಿಕೊ. ನಿತ್ಯವೂ ಜನಿವಾರದಂತೆಯೇ ನಿಯಮದಿಂದ ರುದ್ರಾಕ್ಷಗಳನ್ನು ಧರಿಸು. ಅಯ್ಯ ಬ್ರಾಹ್ಮಣೋತ್ತಮನೇ! ಭಸ್ಮೋದ್ಧೂಳನಮಾಡಿಕೊಳ್ಳದೇ ಬಾಯಾರಿದ್ದರೂ, ಹಸಿವೇ ಆಗಿದ್ದರೂ, ನೀರನ್ನಾಗಲೀ ಅನ್ನವನ್ನಾಗಲೀ ತೆಗೆದು ಕೊಳ್ಳಬೇಡ. ॥೫೩೭-೫೩೮॥

ಭಸ್ಮೋದ್ಧೂಳನ, ಭಸ್ಮತ್ರಿಪುಂಡ್ರಧಾರಣ ಮತ್ತು ರುದ್ರಾಕ್ಷಧಾರಣ, ಅಲ್ಲದೇ ಶಿವಲಿಂಗಾರ್ಚನ ಇವುಗಳನ್ನು ವಿಧಿಪೂರ್ವಕವಾಗಿ ಮಾಡಿದ ಮೇಲೆ ನೀರನ್ನು ಕುಡಿ. ಯಾವಾಗಲೂ ಸಾವಧಾನವಾಗಿ ಶಂಕರನನ್ನೇ ಧ್ಯಾನಮಾಡುತ್ತಾ ಮನಸ್ಸು, ಮಾತು ಮತ್ತು ಕೆಲಸ ಇವೆಲ್ಲದರಿಂದಲೂ ಆ ಶಂಕರನನ್ನೇ ಮರೆಹೊಗು. ॥೫೩೯-೫೪೦॥

ಶಂಕರಪ್ರಣವೋ ಯಸ್ತು ಮನೋವಾಕ್ಕಾಯಕರ್ಮಭಿಃ ।
ಸ ತರತ್ಯೇವ ಸಂಸಾರಮನಾಯಾಸೇನ ಸರ್ವಥಾ ॥೫೪೧॥

ಶಂಕರಂ ಶರಣಂ ಗತ್ವಾ ಸರ್ವದೇವಶಿಖಾಮಣಿಂ ।
ಸಂಸಾರಸಾಗರೇಘೋರೇ ನ ಪತಿಷ್ಯಂತಿ ಮಾನವಾಃ ॥೫೪೨॥

ಸಂಸಾರತರಣೋಪಾಯಃ ಶ್ರೀಮಹಾದೇವಪೂಜನಂ ।
ನ ತಸ್ಮಾದಧಿಕೋಪಾಯಃ ಸತ್ಯಂ ಸತ್ಯಂ ವದಾಮ್ಯಹಂ ॥೫೪೩॥

ಮೋಕ್ಷಮಿಚ್ಛತಿ ಯೋ ಮರ್ತ್ಯಃ ಶಂಕರಾಭ್ಯರ್ಚನಂ ವಿನಾ ।
ಸ ಮೂರ್ಖ ಇತಿ ವಿಜ್ಞೇಯಃ ಸ ತು ಸಂಭಾಷ್ಯ ಏವ ನಃ ॥೫೪೪॥

ಶಂಕರಾಭ್ಯರ್ಚನಂ ನಿತ್ಯಂ ತತ್ತು ಸರ್ವಶ್ರುತಿಶ್ರುತಂ ।
ತತ್ತ್ಯಾಗೇ ರೌರವೇ ಘೋರೇ ಭವತ್ಯೇವ ಹಿ ಸಂಸ್ಥಿತಿಃ ॥೫೪೫॥

ಮಹಾದೇವಾರ್ಚನಾದೇವ ಮುಕ್ತಿಃ ಸಂಪ್ರಾಪ್ಯತೇ ಜನೈಃ ।
ಬಹವೋ ಮೋಕ್ಷಮಾಪನ್ನಾಃ ಪೂರ್ವಂ ಶಂಕರಪೂಜಯಾ ॥೫೪೬॥

---

ಮನಸ್ಸು, ಮಾತು ಮತ್ತು ಕೆಲಸ ಇವುಗಳಿಂದ ಒಟ್ಟಾಗಿ ಭಕ್ತಿಯಿಟ್ಟು ಶಂಕರನಿಗೆ ನಮಸ್ಕಾರಮಾಡಿದರೆ ಅದು ಅನಾಯಾಸವಾಗಿ ಈ ಸಂಸಾರವನ್ನೇ ದಾಟಿಸುವುದು. ಸಕಲ ದೇವತೆಗಳಲ್ಲಿಯೂ ಚೂಡಾಮಣಿ ಪ್ರಾಯನಾಗಿರುವ ಆ ಶಂಕರನನ್ನು ಮರೆಹೊಕ್ಕ ಮಾನವರು ಈ ಭಯಂಕರವಾದ ಸಂಸಾರದಲ್ಲಿ ಎಂದಿಗೂ ಬೀಳುವುದಿಲ್ಲ. ॥೫೪೧-೫೪೨॥

ಈ ಸಂಸಾರದಿಂದ ಉದ್ಧಾರವಾಗುವ ಉಪಾಯವೆಂದರೆ ಆ ಮಹಾದೇವನ ಪೂಜೆಯೊಂದೇ ಎಂದು ತಿಳಿ. ಇದಕ್ಕಿಂತಲೂ ಹೆಚ್ಚಾದ ಉಪಾಯವು ಸತ್ಯವಾಗಿಯೂ ಇಲ್ಲವೆಂದೇ ನಾನು ಹೇಳುವೆನು. ಆ ಶಂಕರನನ್ನು ಪೂಜೆಮಾಡದೇ ಮೋಕ್ಷವನ್ನಪೇಕ್ಷಿಸುವ ಮಾನವನು ನಿಜವಾಗಿಯೂ ಮೂರ್ಖನೆಂದೇ ಹೇಳಲ್ಪಡುವನು. ಆತನೊಡನೆ ಸಂಭಾಷಣೆಯನ್ನು ಸಹ ಮಾಡಬಾರದು. ॥೫೪೩-೫೪೪॥

ನಿತ್ಯವೂ ಶಂಕರನನ್ನು ಪೂಜಿಸುವುದು ಸಕಲ ಶ್ರುತಿಗಳಲ್ಲಿಯೂ ಪ್ರಸಿದ್ಧ ಮಾತಾಗಿರುವುದು. ಇದನ್ನು ಬಿಟ್ಟರೆ ಭಯಂಕರವಾದ ರೌರವನರಕಗಳಲ್ಲಿ

ಕುರು ನಿತ್ಯಂ ಮಹಾದೇವೇ ಭಕ್ತಿಮವ್ಯಭಿಚಾರಿಣೀಂ ।
ಶಿವಮವ್ಯಭಿಚಾರೇಣ ಪೂಜಯಸ್ವ ಪ್ರಯತ್ನತಃ ॥೫೪೭॥

ಶಿವಮವ್ಯಭಿಚಾರೇಣ ಯೋಽನ್ವಹಂ ಪೂಜಯಿಷ್ಯತಿ ।
ನ ತಸ್ಯ ನರಕಾವಾಸಃ ಸರ್ವಥೇತ್ಯಸ್ತಿ ಹಿ ಶ್ರುತಿಃ ॥೫೪೮॥

ಯಥಾ ಪತಿವ್ರತಾನಾಂ ಚ ಪತಿಸೇವಾ ಪರಾ ತಥಾ ।
ಶಿವಮೇವ ಭಜ ಪ್ರೀತ್ಯಾ ಮನೋವಾಕ್ಕಾಯಕರ್ಮಭಿಃ ॥೫೪೯॥

ಮಹಾಪದ್ಯಪಿ ಘೋರಾಯಾಂ ಮಾ ವಿಸ್ಮರ ಮಹೇಶ್ವರಂ ।
ನಾಯಾಸ್ಯಂತ್ಯಾಪದಃ ಪುಂಸಾಂ ಶಂಕರಸ್ಮರಣೇ ಕೃತೇ ॥೫೫೦॥

ಶಂಕರಸ್ಮರಣಾದೇವ ಮಹಾಪಾತಕಕೋಟಯಃ ।
ವಿನಶ್ಯಂತಿ ಕ್ಷಣಾರ್ಧೇನ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೫೫೧॥

---

ವಾಸಮಾಡಬೇಕಾಗುವುದು. ಜನಗಳಿಗೆ ಆ ಮಹಾದೇವನ ಪೂಜೆಯಿಂದಲೇ ಮೋಕ್ಷವುಂಟಾಗುವುದು. ಹಿಂದೆ ಅನೇಕಮಂದಿ ಭಕ್ತರು ಶಂಕರನನ್ನು ಪೂಜೆಮಾಡಿ ಮುಕ್ತಿಯನ್ನು ಪಡೆದಿರುವರು. ॥೫೪೫-೫೪೬॥

ಆ ಮಹಾದೇವನಲ್ಲಿ ನಿತ್ಯವೂ ತಪ್ಪದೇ ಭಕ್ತಿಯಿಡು. ಅಲ್ಲದೇ ಆ ದೇವ ದೇವನನ್ನು ಮರೆಯದೇ ನಿತ್ಯವೂ ನಿಯಮದಿಂದ ಪೂಜೆಮಾಡು. ಆ ಶಿವನನ್ನು ಬಿಡದೆ ಅನವರತವೂ ಪೂಜೆಮಾಡುವವರಿಗೆ ಎಂದಿಗೂ ನರಕವಾಸವುಂಟಾಗುವುದಿಲ್ಲವೆಂದು ವೇದಗಳು ಸಾರುತ್ತಿರುವುವು. ॥೫೪೭-೫೪೮॥

ಪತಿವ್ರತೆಯರಿಗೆ ಪತಿಸೇವೆಯಂತೆ ಪುರುಷರಿಗೆ ಮಹಾದೇವನ ಪೂಜೆಯೇ ಸರ್ವೋತ್ಕೃಷ್ಟವಾಗಿರುವುದರಿಂದ ನೀನು ಮನೋವಾಕ್ಕಾಯ ಕರ್ಮಗಳಿಂದಲೂ ಆ ಶಿವನನ್ನೇ ಪ್ರೀತಿಯಿಂದ ಸೇವೆಮಾಡು. ಭಯಂಕರವಾದ ಆಪತ್ತುಗಳೇ ಸಂಭವಿಸಿದಾಗ್ಯೂ ಮಹೇಶ್ವರನನ್ನು ಮರೆಯಬೇಡ. ಶಂಕರನ ಸ್ಮರಣೆಮಾಡಿದರೆ ಪುರುಷರಿಗೆ ಎಂದೆಂದಿಗೂ ವಿಪತ್ತುಗಳೇ ಸಂಭವಿಸಲಾರವು. ॥೫೪೯-೫೫೦॥

ಶಂಕರನ ಸ್ಮರಣೆಮಾತ್ರದಿಂದಲೇ ದೊಡ್ಡ ದೊಡ್ಡ ಪಾಪಗಳ ಸಮೂಹವೂ ಅರ್ಧಕ್ಷಣಮಾತ್ರದಲ್ಲಿಯೇ ಸತ್ಯವಾಗಿಯೂ ನಾಶವಾಗಿಬಿಡುವುದೆಂದು ಶ್ರುತಿಯಿರು

ತತಃ ಪ್ರಯತ್ನತೋ ನಿತ್ಯಂ ಶಂಕರಂ ಪೂಜಯ ಪ್ರಭುಂ ।
ಮಹಾದೇವಾರ್ಚನಾದೇವ ಮೋಕ್ಷ ಇತ್ಯಸ್ತಿ ಹಿ ಶ್ರುತಿಃ ॥೫೫೨॥

ಕುರು ಸರ್ವಪ್ರಯತ್ನೇನ ರತ್ನವದ್ಭಸ್ಮಸಂಗ್ರಹಂ ।
ಕ್ಷಣಾರ್ಧಮಪಿ ನ ಸ್ಥೇಯಂ ಭಸ್ಮಯೋಗಂ ವಿನಾ ದ್ವಿಜ ॥೫೫೩॥

ಸ್ವೇದಾದಿನಾ ಕದಾಚಿಚ್ಚೇದ್ಭಸ್ಮ ನಿರ್ಯಾತಿ ತತ್ಕ್ಷಣೇ ।
ಕುರು ಜಾಬಾಲವಿಧಿನಾ ಭಸ್ಮನೋದ್ಧೂಳನಂ ದ್ವಿಜ ॥೫೫೪॥

ಸಿತಕೇವಲಭಸ್ಮಾಂಗಂ ತ್ರಿಪುಂಡ್ರಾಂಕಿತಮಸ್ತಕಂ ।
ಶಿವಲಿಂಗೈಕನಿರತಂ ನಮಂತಿ ಖಲು ದೈವತಾಃ ॥೫೫೫॥

ಶಿವಮವ್ಯಭಿಚಾರೇಣ ಶರಣಂ ಯದಿ ಯಾಸ್ಯಸಿ ।
ತದಾ ವಿಷ್ಣುಪ್ರಭೃತಿಭಿಃ ಪೂಜನೀಯೋ ಭವಿಷ್ಯಸಿ ॥೫೫೬॥

---

ವುದು. ಆದುದರಿಂದ ಸರ್ವಸಮರ್ಥನಾದ ಆ ಶಂಕರನನ್ನು ನಿಯಮದಿಂದ ಪ್ರತಿನಿತ್ಯವೂ ಪೂಜೆಮಾಡು. ಮಹಾದೇವನ ಪೂಜೆಯಿಂದಲೇ ಮೋಕ್ಷವೆಂದೂ ವೇದದಲ್ಲಿ ಹೇಳಿದೆ. ॥೫೫೧-೫೫೨॥

ಬಹಳ ಪ್ರಯತ್ನಪಟ್ಟು ರತ್ನಗಳಂತೆ ಭಸ್ಮವನ್ನು ಸಂಗ್ರಹಿಸು. ಅಯ್ಯ ಬ್ರಾಹ್ಮಣನೇ! ವಿಭೂತಿಯಿಲ್ಲದೇ ಒಂದು ಅರ್ಧಕ್ಷಣವೂ ಇರಬೇಡ. ಬೆವರು ಮುಂತಾದುವುಗಳಿಂದ ಒಂದುವೇಳೆ ವಿಭೂತಿಯು ಅಳಿಸಿಹೋದರೆ ಆ ಕೂಡಲೇ ಜಾಬಾಲಮುನಿಯು ಹೇಳಿರುವಂತೆ ಪುನಃ ಭಸ್ಮೋದ್ಧೂಳನಮಾಡಿಕೋ. ॥೫೫೩-೫೫೪॥

ಶರೀರದಲ್ಲಿ ಶುಭ್ರವಾದ ಭಸ್ಮವೂ ಹಣೆಯಲ್ಲಿ ಭಸ್ಮತ್ರಿಪುಂಡ್ರವೂ ಇದ್ದು ಆ ಪರಶಿವನ ಲಿಂಗಪೂಜಾ ಮತ್ತು ಧ್ಯಾನಗಳಲ್ಲಿ ನಿರತನಾಗಿರುವವನನ್ನು ದೇವತೆಗಳು ನೋಡಿ ನಮಸ್ಕಾರಮಾಡುವರು. ಆ ಶಿವನನ್ನು ತಪ್ಪದೇ ನೀನು ಮರೆಹೊಗುವೆಯಾದರೆ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಂದಲೂ ನೀನು ಪೂಜಿಸಲ್ಪಡುವೆ. ॥೫೫೫-೫೫೬॥

ಭೂರಿಪುಣ್ಯವತಾಂ ಪುಂಸಾಂ ಶಿವ ಏವೇಷ್ಟದೈವತಂ ।
ಅನ್ಯೇಷಾಮಲ್ಪಪುಣ್ಯಾನಾಂ ದೈವತಂ ಸ್ಯಾಚ್ಛಿವೇತರಃ ॥೫೫೭॥

ಶಿವೈಕದೇವಾ ಯೇ ತೇಷಾಂ ಶಿವಂ ಭವತಿ ಸರ್ವದಾ ।
ಶಿವಾನ್ಯದೇವಾ ಯೇ ತೇಷಾಮಶಿವಂ ಸರ್ವದಾ ಭವೇತ್ ॥೫೫೮॥

ಭಜಂತ್ಯಭಾಗ್ಯಾಃ ಪಾಪಿಷ್ಠಾಃ ಶಿವಾನ್ಯಮಶಿವಾರ್ಥಿನಃ ।
ತೇಷಾಂ ತು ಘೋರಸಂಸಾರಾನ್ನಿರ್ಗಮೋ ನ ಕದಾಚನ ॥೫೫೯॥

ಅಶಿವಂ ಯಸ್ಯ ನಿಟಲೇ ತಸ್ಯೈವಾಶಿವದೈವತಂ ।
ಶಿವಂ ಯಸ್ಯ ಲಲಾಟೇಽಸ್ತಿ ತಸ್ಯ ಸ್ಯಾದ್ದೈವತಂ ಶಿವಃ ॥೫೬೦॥

ಭಜ ತ್ವಮಪಿ ಯತ್ನೇನ ಶಂಕರಂ ಲೋಕಶಂಕರಂ ।
ನಿತ್ಯಮವ್ಯಭಿಚಾರೇಣ ಶರಣಂ ಯಾಹಿ ಶಂಕರಂ ॥೫೬೧॥

ಸಂಸಾರತರಣೋಪಾಯಃ ಶಂಕರಸ್ಯೈವ ಪೂಜನಂ ।
ಸತ್ಯಂ ಸತ್ಯಮಿದಂ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೫೬೨॥

---

ಪೂರ್ಣ ಭಾಗ್ಯಶಾಲಿಗಳಿಗೆ ಮಾತ್ರ ಶಿವನು ಇಷ್ಟದೇವರಾಗಿರುವನು. ಇತರರಿಗಾದರೆ ಶಿವನಿಗಿಂತಲೂ ಬೇರೆಯವರೇ ಪುಣ್ಯಹೀನರಾದುದರಿಂದ ದೇವತೆಗಳೆನಿಸುವರು. ಆ ಶಿವನೊಬ್ಬನನ್ನೇ ದೇವತೆಯೆಂದು ನಂಬಿರುವರಿಗೆ ಯಾವಾಗಲೂ ಮಂಗಳವೇ ಉಂಟಾಗುವುದು. ಶಿವಾತಿರಿಕ್ತವಾದ ದೇವತೆಗಳನ್ನು ನಂಬಿರುವರಿಗೆ ಸದಾ ಅಮಂಗಳವೇ ಲಭಿಸುವುದು. ॥೫೫೭-೫೫೮॥

ನಿರ್ಭಾಗ್ಯರಾದ ಪಾಪಿಷ್ಠರು ಅಮಂಗಳವನ್ನು ಕೋರುವರಾದ್ದರಿಂದ ಶಿವನನ್ನು ಬಿಟ್ಟು ಇತರ ದೇವತೆಗಳನ್ನೇ ಸೇವಿಸುತ್ತಾರೆ. ಅವರಿಗೆ ಈ ಭಯಂಕರವಾದ ಸಂಸಾರದಿಂದ ಎಂದೆಂದಿಗೂ ಬಿಡುಗಡೆಯೇ ಇಲ್ಲ. ಯಾರ ಹಣೆಯಲ್ಲಿ ಅಮಂಗಳವೇ ಬರೆದಿರುವುದೋ ಅವರಿಗೆ ಇತರ ದೇವತೆಗಳೇ ದೇವರಾಗುವರು. ಮಂಗಳಪ್ರಾಪ್ತಿಯು ಹಣೆಯಲ್ಲಿ ಬರೆದಿರುವವರಿಗೆ ಮಾತ್ರ ಆ ಶಿವನೊಬ್ಬನೇ ದೇವರೆಂದು ತಿಳಿ. ॥೫೫೯-೫೬೦॥

ಅಯ್ಯ ಬ್ರಾಹ್ಮಣನೇ, ನೀನೂ ಆ ಜಗನ್ಮಂಗಳಕರನಾದ ಶಂಕರನನ್ನೇ ಸೇವಿಸು. ನಿತ್ಯವೂ ತಪ್ಪದೇ ಆ ಶಂಕರನನ್ನೇ ಮರೆಹೊಗು. ಆ ಶಂಕರನ ಪೂಜೆ

ಸಂಸಾರಸರ್ಪದಷ್ಟಸ್ಯ ಶಿವಪೂಜನಮೌಷಧಂ ।
ತದನ್ಯದೌಷಧಂ ಕ್ವಾಪಿ ನಾಸ್ತಿ ನಾಸ್ತ್ಯೇವ ಸರ್ವಥಾ ॥೫೬೩॥

ಯೇ ಮಗ್ನಾಃ ಸಂತಿ ಸತತಂ ಘೋರಸಂಸಾರಸಾಗರೇ ।
ತೈರನ್ವಹಂ ಪ್ರಯತ್ನೇನ ನಾರಾಧಿ ಗಿರಿಜಾಪತಿಃ ॥೫೬೪॥

ತತಸ್ತ್ವಂ ಸರ್ವಭಾವೇನ ಪೂಜಯಸ್ವ ಮಹೇಶ್ವರಂ ।
ಸಂಸಾರಸಾಗರಾದ್ಘೋರಾದ್ಯದಿ ಸಂತರ್ತುಮಿಚ್ಛಸಿ ॥೫೬೫॥

॥ ಯಮ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸಂತುಷ್ಟಹೃದಯಸ್ತದಾ ।
ಸರ್ವಮನ್ಯತ್ಪರಿತ್ಯಜ್ಯ ಶಿವಪೂಜಾಪರೋಽಭವತ್ ॥೫೬೬॥

ತತಃ ಸಬಾಲಕಸ್ತತ್ರ ಬಿಲ್ವಪತ್ರೈರ್ಮನೋಹರೈಃ ।
ಸಮರ್ಚಯನ್ಮಹಾದೇವಮುವಾಸ ಪ್ರೀತಮಾನಸಃ ॥೫೬೭॥

---

ಯೊಂದೇ ಈ ಸಂಸಾರದಿಂದ ದಾಟಲು ಉಪಾಯವಾಗಿರುವುದು. ಇದು ಸತ್ಯವೆಂದು ಪದೇಪದೇ ಭುಜವೆತ್ತಿ ಹೇಳುತ್ತೇನೆ. ॥೫೬೧-೫೬೨॥

ಈ ಸಂಸಾರವೆಂಬ ಹಾವಿನಿಂದ ಕಚ್ಚಲ್ಪಟ್ಟವನಿಗೆ ಶಿವಪೂಜೆಯೇ ಔಷಧವಾಗಿರುವುದು. ಬೇರೆ ವಿಧವಾದ ಔಷಧಿಯು ಎಲ್ಲಿಯೂ ಎಂದಿಗೂ ಇಲ್ಲವೇಇಲ್ಲವೆಂದು ತಿಳಿ. ಭಯಂಕರವಾದ ಈ ಸಂಸಾರವೆಂಬ ಸಾಗರದಲ್ಲಿ ಮಗ್ನರಾಗಿರುವವರು ಪ್ರತಿದಿನವೂ ಆ ಗಿರಿಜಾರಮಣನನ್ನು ನಿಯಮದಿಂದ ಪೂಜೆಮಾಡುತ್ತಿಲ್ಲ. ॥೫೬೩-೫೬೪॥

ಅಯ್ಯಾ ಬ್ರಾಹ್ಮಣನೇ, ಈ ಭಯಂಕರವಾದ ಸಂಸಾರಸಾಗರದಿಂದ ನೀನು ಉದ್ಧಾರವಾಗಬೇಕೆಂದು ಬಯಸುವುದಾದರೆ (ನೀನು) ಎಲ್ಲಾರೀತಿಯಿಂದಲೂ ಆ ಮಹೇಶ್ವರನನ್ನು ಪೂಜೆಮಾಡು. ॥೫೬೫॥

ಹೀಗೆ ನುಡಿದ ಪರಶಿವಭಕ್ತನ ಮಾತುಗಳನ್ನು ಕೇಳಿ ಆ ಬ್ರಾಹ್ಮಣ ಬಾಲಕನು ಸಂತೋಷಭರಿತನಾಗಿ ಎಲ್ಲವನ್ನೂ ತ್ಯಾಗಮಾಡಿ ಕೇವಲ ಶಿವಪೂಜಾ ನಿರತನಾದನು. ಅನಂತರ ಆ ಹುಡುಗನು ಮನೋಹರವಾದ ಬಿಲ್ವಪತ್ರೆಗಳನ್ನು

ಉದ್ಧೂಳನ ತ್ರಿಪುಂಡ್ರಾಭ್ಯಾಮಲಂಕೃತತನುರ್ದ್ವಿಜಃ ।
ಶಿವಪೂಜಾಂ ಪ್ರಕುರ್ವಾಣಃ ಕೃತಾರ್ಥಂ ಸ್ವಯಮನ್ಯತ ॥೫೬೮॥

ಅಮ್ಲಾನಬಿಲ್ವೈ ರಾತಾಮ್ರೈರಸಂಖ್ಯಾತೈರ್ಮಹೇಶ್ವರಂ ।
ಪೂಜಯಾಮಾಸ ಯತ್ನೇನ ಪ್ರತ್ಯಹಂ ಮುದಿತಾನನಃ ॥೫೬೯॥

ಆಸ್ವೇದಮತಿಯತ್ನೇನ ಪ್ರಣಾಮಾನ್ಸಚಕಾರ ಚ ।
ಚಕಾರ ನರ್ತನಂ ನಿತ್ಯಂ ಶಂಕರಾಗ್ರೇ ಪ್ರಯತ್ನತಃ ॥೫೭೦॥

ಸ ಶಂಕರೈಕಶರಣಃ ಸರ್ವದಾ ಶಂಕರಾರ್ಚಕಃ ।
ಶಂಕರಂ ಪೂಜಯನ್ನೇವ ಜಹೌ ಪ್ರಾಣಾನ್ಕದಾಚನ ॥೫೭೧॥

ತತಸ್ತಸ್ಮೈ ಮಹೇಶೇನ ವಿಮಾನಂ ಪ್ರೇಷಿತಂ ಮುದಾ ।
ಸ ವಿಮಾನಂ ಸಮಾರುಹ್ಯ ಗತಃ ಶಂಕರಸಂನಿಧಿಂ ॥೫೭೨॥

ಅನೇನೈವ ಹಿ ಮಾರ್ಗೇಣ ಸ ಗತಃ ಶೈವಪುಂಗವಃ ।
ತದಾ ತಸ್ಮೈ ಮಯಾ ಪೂಜಾ ಕೃತಾ ಶಕ್ತ್ಯನುರೋಧತಃ ॥೫೭೩॥

---

ತಂದು ಆ ಮಹಾದೇವನನ್ನು ಪೂಜೆಮಾಡುತ್ತಾ ಪ್ರೀತಿಯಿಂದ ವಾಸಮಾಡುತ್ತಿದ್ದನು. ॥೫೬೬-೫೬೭॥

ಭಸ್ಮೋದ್ಧೂಳನ ಮತ್ತು ಭಸ್ಮತ್ರಿಪುಂಡ್ರಧಾರಣೆಯಿಂದ ಅಲಂಕೃತನಾಗಿ ಆ ಬ್ರಾಹ್ಮಣನು ನಿತ್ಯವೂ ಶಿವಪೂಜೆಯನ್ನು ಮಾಡುತ್ತಾ ತನ್ನನ್ನು ಕೃತಕೃತ್ಯನೆಂದು ಭಾವಿಸಿದನು. ಬಾಡದೇ ಕೆಂಪಾಗಿರುವ ಅಪಾರ ಬಿಲ್ವಪತ್ರೆಗಳಿಂದ ಆ ಮಹೇಶ್ವರನನ್ನು ಪ್ರತಿನಿತ್ಯವೂ ಹಸನ್ಮುಖನಾಗಿ ಪೂಜೆಮಾಡುತ್ತಿದ್ದನು. ॥೫೬೮-೫೬೯॥

ಬೆವರು ಬರುವವರೆಗೂ ತುಂಬಾ ನಿಯಮದಿಂದ ಆ ಶಂಕರನಿಗೆ ನಮಸ್ಕಾರಗಳನ್ನು ಮಾಡಿ ಆ ದೇವದೇವನ ಮುಂದೆ ನಿತ್ಯವೂ ಅವಶ್ಯವಾಗಿ ನಾಟ್ಯಮಾಡುತ್ತಿದ್ದನು. ಯಾವಾಗಲೂ ಆ ಶಂಕರನನ್ನೇ ಪೂಜಿಸುತ್ತಾ ಆ ಶಂಕರನನ್ನೇ ಮರೆಹೊಕ್ಕಿರುವ ಬ್ರಾಹ್ಮಣ ಬಾಲಕನು ಶಂಕರನನ್ನು ಪೂಜೆಮಾಡುತ್ತಲೇ ಒಂದು ದಿನ ಪ್ರಾಣಬಿಟ್ಟನು. ॥೫೭೦-೫೭೧॥

ಅನಂತರ ಮಹೇಶ್ವರನು ಅವನಿಗೆ ಪ್ರೀತಿಯಿಂದ ಒಂದು ವಿಮಾನವನ್ನು ಕಳುಹಿಸಿಕೊಡಲು ಆತನು ಅದನ್ನೇರಿ ಆ ಶಂಕರನ ಸಂನಿಧಾನಕ್ಕೆ ತೆರಳಿದನು. ಆ

ತದಾ ಸ ಮಾಮುವಾಚೇದಂ ಪ್ರಹಸನ್ನ ಸತಾನನಃ ।
ಶಿವಪೂಜಾಪುಣ್ಯಪುಂಜೋ ಮಂಜುಲಂ ಮಂಜುವಾಙ್ಮುದಾ ॥೫೭೪॥

ಯಮ ಕಿಂ ಕ್ರಿಯತೇ ನಿತ್ಯಂ ಸರ್ವದಾ ಸಾವಧಾನತಃ ।
ಅಶೈವಾಸ್ತಪ್ತಶಸ್ತ್ರೌಘೈಃ ಶಾಸ್ಯಂತೇ ಖಲು ಸತ್ವರಂ ॥೫೭೫॥

ಅಶೈವೇಷು ತ್ವಯಾ ಕಾಲ ಕೃಪಾ ನ ಕ್ರಿಯತೇ ಖಲು ।
ಅಶೈವಾಃ ಖಲು ಪಾತ್ಯಂತೇ ನರಕೇಷು ಯಥಾಯಥಂ ॥೫೭೬॥

ಅಶೈವಾನಗ್ನಿಕುಂಡೇಷು ಪಾತಯಸ್ವ ಪ್ರಯತ್ನತಃ ।
ವಿದಾರಯಸ್ವ ಕ್ರಕಚೈರಗ್ನಿತಪ್ತೈರಶಂಕರಾನ್ ॥೫೭೭॥

ಇತ್ಯುಕ್ತಃ ಸ ಯಯೌ ಶೈವಃ ಶಿವಾರಾಧನತತ್ಪರಃ ।
ಇಂದ್ರೋಪೇಂದ್ರಾದಿಭಿಃ ಸಮ್ಯಕ್ಪೂಜಿತಃ ಶಂಕರಾಲಯಂ ॥೫೭೮॥

ಮಯಾ ಲಬ್ಧೋಽಧಿಕಾರೋಽಯಂ ಯಥಾ ಸಾಂಬಾನ್ಮಹೇಶ್ವರಾತ್ ।
ತದೈವಮಾಹ ವಚನಂ ಶಂಕರಃ ಸುರಸತ್ತಮಃ ॥೫೭೯॥

---

ಶಿವಭಕ್ತ ಶ್ರೇಷ್ಠನೂ ಇದೇ ದಾರಿಯಲ್ಲಿ ಹೋದವನಾದುದರಿಂದ ಆಗ ನಾನು ನನ್ನ ಯೋಗ್ಯತಾನುಸಾರವಾಗಿ ಆತನಿಗೆ ಪೂಜೆಮಾಡಿದೆನು. ॥೫೭೨-೫೭೩॥

ಆಗ ಶಿವಪೂಜೆಯ ಪುಣ್ಯಸಮೂಹವೆಂಬಂತಿರುವ ಆತನು ನಗುತ್ತಾ ತಲೆಬಾಗಿ ಮನೋಹರವಾಗಿ ನುಡಿಯುತ್ತಾ ಸಂತೋಷದಿಂದ ಹೀಗೆ ಹೇಳಿದನು. ಅಯ್ಯಾ ಯಮನೇ, ನಿತ್ಯವೂ ನೀನು ಸಾವಧಾನವಾಗಿ ಮಾಡುವ ಕಾರ್ಯವಾವುದು? ಶಿವದ್ರೋಹಿಗಳನ್ನು ಕಾದ ಆಯುಧಸಮೂಹಗಳಿಂದ ಕೂಡಲೇ ಶಿಕ್ಷೆಮಾಡುತ್ತಿರುವೆಯೋ ಹೇಗೆ? ॥೫೭೪-೫೭೫॥

ಅಯ್ಯಾ ಯಮರಾಜ, ಶಿವದ್ರೋಹಿಗಳಲ್ಲಿ ನೀನು ದಯೆತೋರಿಸುತ್ತಿಲ್ಲವಷ್ಟೆ! ಅವರನ್ನು ಅವರವರ ಯೋಗ್ಯತಾನುಸಾರವಾಗಿ ನರಕಗಳಲ್ಲಿ ತಳ್ಳುತ್ತಿರುವೆಯಲ್ಲವೆ! ಆ ಶಿವದ್ರೋಹಿಗಳನ್ನು ಬಲಾತ್ಕಾರವಾಗಿ ಅಗ್ನಿಕುಂಡಗಳಲ್ಲಿ ತಳ್ಳಿ, ಬೆಂಕಿಯಿಂದ ಕಾದ ಗರಗಸಗಳಿಂದ ಕುಯ್ದು ಸೀಳಿಹಾಕು. ॥೫೭೬-೫೭೭॥

ಶಿವಪೂಜಾನಿರತನಾದ ಆ ಶೈವನು ಹೀಗೆ ಹೇಳಿ, ಇಂದ್ರ, ವಿಷ್ಣು ಮುಂತಾದವರಿಂದ ಚೆನ್ನಾಗಿ ಪೂಜಿಸಲ್ಪಡುತ್ತಾ ಆ ಶಂಕರನ ಸನ್ನಿಧಿಯನ್ನೈದಿದನು.

॥ ಶ್ರೀಮಹಾದೇವ ಉವಾಚ ॥

ರೇ ರೇ ಯಮ ತ್ವಯಾ ನಿತ್ಯಂ ಯತ್ಕರ್ತವ್ಯಂ ತದುಚ್ಯತೇ ।
ಶೃಣುಷ್ವ ಸಾವಧಾನೇನ ಚಿತ್ತಮನ್ಯತ್ರ ಮಾಕುರು ॥೫೮೦॥

ಯೇ ಮಾಮವ್ಯಭಿಚಾರೇಣ ಪೂಜಯಿಷ್ಯಂತಿ ಶಂಕರಂ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೧॥

ಅನನ್ಯಚಿತ್ತಾಃ ಸತತಂ ಯೇ ಮದ್ಭಕ್ತಿಂ ಪ್ರಕುರ್ವತೇ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೨॥

ಯೇ ಮಾಮನನ್ಯಾಃ ಸತತಂ ಪ್ರಣಮಂತಿ ಸ್ತುವಂತಿ ಚ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೩॥

ಯೇ ಮದರ್ಪಿತಕರ್ಮಾಣೋ ಮದೇಕಶರಣಾಃ ಸದಾ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೪॥

---

ಅಯ್ಯ ಇಂದ್ರನೇ, ಅಂಬಿಕಾಸಮೇತನಾದ ಆ ಮಹೇಶ್ವರನಿಂದ ನನಗೆ ಈ ರೀತಿಯಾದ ಅಧಿಕಾರವುಂಟಾಗಿದೆ. ದೇವೋತ್ತಮನಾದ ಶಂಕರನು ನನಗೆ ತಿಳಿಸಿರುವುದನ್ನು ಹೇಳುವೆನು ಕೇಳೆಂದು ಯಮನು ಅದೇ ವಿಷಯವನ್ನು ಮುಂದುವರಿಸಿದನು. ॥೫೭೮-೫೭೯॥

ಎಲೈ ಯಮನೇ, ನೀನು ನಿತ್ಯವೂ ಅವಶ್ಯವಾಗಿ ಮಾಡಬೇಕಾದುದನ್ನು ಹೇಳುವೆನು. ಸಾವಧಾನದಿಂದ ಮತ್ತೆಲ್ಲಿಯೂ ಗಮನವಿಡದೇ ಲಾಲಿಸು. ತಪ್ಪದೇ ಶಂಕರನೆನಿಸಿದ ನನ್ನನ್ನು ಪೂಜಿಸುವರನ್ನು ಭಕ್ತಿಯಿಂದ ಹೂವು, ಬಿಲ್ವಪತ್ರೆಗಳನ್ನು ತಂದು ಅನವರತವೂ ನೀನು ಪೂಜೆಮಾಡು. ॥೫೮೦-೫೮೧॥

ಅನ್ಯರಲ್ಲಿ ನೆಲಸದ ಮನಸ್ಸಿನಿಂದ ಅನವರತವೂ ನನ್ನಲ್ಲಿಯೇ ಭಕ್ತಿಯನ್ನಿಡುವವರನ್ನೂ, ನನ್ನೊಬ್ಬನನ್ನೇ ಯಾವಾಗಲೂ ನಮಸ್ಕಾರಮಾಡಿ, ಸ್ತೋತ್ರಮಾಡುವವರನ್ನೂ ಅನವರತವೂ ಭಕ್ತಿಪುರಸ್ಸರವಾಗಿ ಹೂ, ಬಿಲ್ವಪತ್ರೆ ಮುಂತಾದವುಗಳಿಂದ ನೀನೂ ಪೂಜೆಮಾಡು. ॥೫೮೨-೫೮೩॥

ಸಕಲ ಕರ್ಮಗಳನ್ನೂ ನನಗೆ ಸಮರ್ಪಿಸಿ, ನನ್ನನ್ನೇ ಯಾವಾಗಲೂ ಮರೆಹೊಕ್ಕಿರುವರನ್ನೂ, ನಿಯಮಪೂರ್ವಕವಾಗಿ ಯಾವಾಗಲೂ ವಿಭೂತಿಯನ್ನು

ಯೇ ಕುರ್ವಂತಿ ಪ್ರಯತ್ನೇನ ಭಸ್ಮನೋದ್ಧೂಳನಂ ಸದಾ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೫॥

ತ್ರಿಪುಂಡ್ರಮಾತ್ರನಿಟಿಲಾ ರುದ್ರಾಕ್ಷಾಭರಣಾಶ್ಚ ಯೇ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪದಲ್ವದಲಾದಿಭಿಃ ॥೫೮೬॥

ರುದ್ರಾಧ್ಯಾಯಜಪಾಸಕ್ತಾಃ ಪಂಚಾಕ್ಷರಪರಾಶ್ಚ ಯೇ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೭॥

ನಿತ್ಯಂ ಶಿವಕಥಾಸಕ್ತಾಃ ಶಿವನಾಮಪರಾಶ್ಚ ಯೇ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೮॥

ಶಿವಲಿಂಗಂ ಸಮಭ್ಯರ್ಚ್ಯ ಯೇಽಭಿನಂದಂತಿ ಸರ್ವದಾ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೮೯॥

ಯೇ ಮಾಂ ಸರ್ವೋತ್ತಮತ್ವೇನ ಜ್ಞಾತ್ವಾ ತಿಷ್ಠಂತಿ ಸರ್ವದಾ ।
ತಾನರ್ಚಯಾನಿಶಂ ಭಕ್ತ್ಯಾ ಪುಷ್ಪಬಿಲ್ವದಲಾದಿಭಿಃ ॥೫೯೦॥

---

ಲೇಪನ ಮಾಡಿಕೊಳ್ಳುವರನ್ನೂ ಅನವರತವೂ ಭಕ್ತಿಯಿಂದ ಹೂ, ಬಿಲ್ವಪತ್ರೆ ಮುಂತಾದುವುಗಳಿಂದ ಪೂಜೆಮಾಡು. ॥೫೮೪-೫೮೫॥

ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿ, ರುದ್ರಾಕ್ಷಾಭರಣವನ್ನಲಂಕರಿಸಿಕೊಂಡಿರುವರನ್ನೂ, ಯಾವಾಗಲೂ ರುದ್ರಾಧ್ಯಾಯ ಮಂತ್ರ ಮತ್ತು ಶಿವಪಂಚಾಕ್ಷರ ಮಂತ್ರ ಇವುಗಳನ್ನು ಜಪಿಸುವುದರಲ್ಲಿ ತತ್ಪರರಾಗಿರುವರನ್ನೂ ಅನವರತವೂ ನೀನು ಭಕ್ತಿಪುರಸ್ಸರವಾಗಿ ಹೂ, ಬಿಲ್ವಪತ್ರೆ ಮುಂತಾದ ಸಾಧನಗಳಿಂದ ಪೂಜಿಸು. ॥೫೮೬-೫೮೭॥

ನಿತ್ಯವೂ ಶಿವಕಥೆಗಳನ್ನು ಕೇಳುವುದರಲ್ಲಿಯೇ ಆಸಕ್ತರಾಗಿ ಶಿವನಾಮಜಪದಲ್ಲಿಯೇ ನಿರತರಾಗಿರುವರನ್ನೂ, ಯಾವಾಗಲೂ ಶಿವಲಿಂಗವನ್ನು ಪೂಜಿಸಿ ಸಂತೋಷಪಡುವರನ್ನೂ, ನೀನು ಹೂ, ಪತ್ರೆ ಮುಂತಾದ ಸಾಧನಗಳಿಂದ ಅನವರತವೂ ಭಕ್ತಿಪೂರ್ವಕವಾಗಿ ಪೂಜೆಮಾಡು. ॥೫೮೮-೫೮೯॥

ನನ್ನನ್ನು ಎಲ್ಲರಿಗಿಂತಲೂ ಉತ್ತಮನೆಂದು ತಿಳಿದು ಯಾವಾಗಲೂ ನನ್ನ ಧ್ಯಾನ ಮಾಡುವವರನ್ನು ಹೂ, ಪತ್ರೆ ಮುಂತಾದ ಸಲಕರಣೆಗಳನ್ನು ತಂದು ಭಕ್ತಿ

ಉಕ್ತಲಕ್ಷಣಸಂಪನ್ನಃ ಶೈವ ಇತ್ಯವಗಮ್ಯತಾಂ ।
ಏತಾದೃಶಾನಾಂ ಶೈವಾನಾಂ ಪೂಜಯಾ ಪೂಜಿತೋಽಸ್ಮ್ಯಹಂ ॥೫೧॥

ಉಕ್ತಲಕ್ಷಣಸಂಪನ್ನಾ ನ ಭವಿಷ್ಯಂತಿ ಯೇ ಜನಾಃ ।
ಅಶೈವಾಸ್ತೇ ತತಸ್ತೇಷಾಂ ಕುರು ಶಾಸನಮನ್ವಹಂ ॥೫೨॥

ಅಶೈವಾ ಘೋರನರಕೇಷ್ವಶೇಷೇಷು ಪ್ರಯತ್ನತಃ ।
ಪಾತನೀಯಾಃ ಸರ್ವಥೈವ ಮಾಮಾಕುರು ಕೃಪಾಂ ಮಮ ॥೫೩॥

ಅಶೈವೇಷು ಪ್ರಮಾದಾದ್ವಾ ಕೃಪಾಂ ಯದಿ ಕರಿಷ್ಯಸಿ ।
ತದಾ ತು ಪಾತಯಿಷ್ಯಾಮಿ ಭವಂತಂ ನರಕೇಷ್ವಹಂ ॥೫೪॥

ಯೇ ಶಿವದ್ರೋಹಿಣಸ್ತೇ ತು ಶಾಸನೀಯಾಸ್ತ್ವಯಾನ್ವಹಂ ।
ಅನ್ಯಥಾ ತ್ವಧಿಕಾರೋಽಯಮನ್ಯಸ್ಮೈ ದೀಯತೇ ಮಯಾ ॥೫೫॥

ಇತ್ಯುಕ್ತೋಽಹಂ ಮಹೇಶೇನ ಪ್ರೇಷಿತೋಽಸ್ಮಿ ಶಚೀಪತೇ ।
ತದಾ ಪ್ರಭೃತಿ ಯತ್ನೇನ ಮಯಾತ್ರ ಸ್ಥೀಯತೇ ಧ್ರುವಂ ॥೫೬॥

---

ಯಿಂದ ನೀನು ಅನವರತವೂ ಪೂಜೆಮಾಡು. ಈಗ ಹೇಳಿದ ಲಕ್ಷಣಗಳಿಂದ ಕೂಡಿದವನೇ ಶೈವನೆಂದು ತಿಳಿ. ಇಂತಹ ಶಿವಭಕ್ತರ ಪೂಜೆಯಿಂದ ನಾನು ಪೂಜೆಮಾಡಲ್ಪಟ್ಟಂತೆಯೇ ಎಂದು ತಿಳಿ. ೫೦-೫೧॥

ಹಿಂದೆ ಹೇಳಿದ ಲಕ್ಷಣಗಳಿಗೊಳಗಾಗದ ಜನಗಳನ್ನು ಶಿವದ್ರೋಹಿಗಳೆಂದು ತಿಳಿದು ಪ್ರತಿದಿನವೂ ಅವರನ್ನು ಶಿಕ್ಷೆಮಾಡು. ಆ ಶಿವದ್ರೋಹಿಗಳಲ್ಲಿ ಕೊಂಚವೂ ದಯೆಯನ್ನೇ ತೋರಿಸದೇ ಎಲ್ಲಾ ಭಯಂಕರವಾದ ನರಕಗಳಲ್ಲಿಯೂ ಬಲಾತ್ಕಾರವಾಗಿ ತಳ್ಳು. ॥೫೨-೫೩॥

ಪ್ರಮಾದಕ್ಕೊಳಗಾಗಿ ಒಂದುವೇಳೆ ಆ ಶಿವದ್ರೋಹಿಗಳಲ್ಲಿ ನೀನು ದಯೆ ತೋರಿಸುವುದಾದರೆ ಆಗ ನಾನು ನಿನ್ನನ್ನೇ ನರಕಕ್ಕೆ ತಳ್ಳುವೆನು. ಶಿವದ್ರೋಹಿಗಳಾದವರನ್ನು ಅವಶ್ಯವಾಗಿ ನೀನು ಪ್ರತಿನಿತ್ಯವೂ ಶಿಕ್ಷೆ ಮಾಡಬೇಕು. - ಇದಕ್ಕೆ ತಪ್ಪಿದರೆ ನಿನ್ನ ಈ ಅಧಿಕಾರವನ್ನು ಮತ್ತೊಬ್ಬರಿಗೆ ಕೊಡುವೆನು. ॥೫೪-೫೫॥

ಎಂದು ಮಹೇಶ್ವರನಿಂದ ನನಗೆ ಅಪ್ಪಣೆಯಾಗಿದೆ. ಅವನೇ ಇಲ್ಲಿಗೆ ನನ್ನನ್ನು ಕಳುಹಿಸಿಕೊಟ್ಟಿರುವನು. ಅಯ್ಯ ಶಚೀರಮಣನಾದ ಇಂದ್ರನೇ, ಅದು ಮೊದಲು ನಾನು ನಿಯಮಪಾಲನೆಮಾಡುತ್ತಾ ಇಲ್ಲಿ ನೆಲಸಿರುವೆನು. ॥೫೬॥

|| ಶ್ರೀಸದಾಶಿವ ಉವಾಚ ||

ಇತಿ ಕಾಲವಚಃ ಶ್ರುತ್ವಾ ಶಚೀನಾಥಸ್ತದಾ ಶಿವೇ ।
ರೋಮಾಂಚಿತತನುರ್ಜಾತೋ ಬಾಷ್ಪಪೂರಿತಲೋಚನಃ ||೨೯೭||

ಏತಸ್ಮಿನ್ನಂತರೇ ದೇವಿ ಬ್ರಹ್ಮಲೋಕನಿವಾಸಿನಃ ।
ಕೋಟಿಶಃ ಪಾತಿತಾ ವಿಪ್ರಾ ನಿಷ್ಪ್ರಭಾ ನರಕಾರ್ಣವೇ ||೨೯೮||

ನರಕೇ ಪತಿತಾನ್ ದೃಷ್ಟ್ವಾ ತಾನಿಂದ್ರೋ ಯಮಮಬ್ರವೀತ್ ।
ಕಂಪಮಾನೋ ಗಲದ್ಬಾಷ್ಪೋ ಯಮಂ ದೃಷ್ಟ್ವಾ ಭಯಾನಕಂ||೨೯೯||

|| ಇಂದ್ರ ಉವಾಚ ||

ಏತೇ ಕೇ ಕಿಂ ಕೃತಂ ಕರ್ಮ ಸ್ಥಿತಂ ಕುತ್ರ ಪುರಾಯಮ ।
ಕೀದೃಗ್ವಿಧೇಷು ನರಕೇಷ್ವೇತೇ ಸ್ಥಾಸ್ಯಂತಿ ತದ್ವದ ||೩೦೦||

ನ ಭೂಲೋಕಾತ್ಸಮಾಯಾತಮೇತೈಃ ಕಿಂ ತೂರ್ಧ್ವಲೋಕತಃ ।
ಸಮಾಗತಮತಃ ಕಾಲ ಕಿಮೇತನ್ಮಾದ್ಭುತಂ ವದ ||೩೦೧||

---

ದೇವಿ, ಹೀಗೆ ಯಮನಾಡಿದ ಮಾತುಗಳನ್ನು ಕೇಳಿ ದೇವೇಂದ್ರನು ರೋಮಾಂಚವನ್ನು ಹೊಂದಿ ಕಣ್ಣು ತುಂಬಾ ನೀರು ತುಂಬಿದವನಾದನು. ಎಲೌ ಮಂಗಳಾಂಗಿಯೇ, ಇದೇ ಸಂದರ್ಭದಲ್ಲಿ ಬ್ರಹ್ಮಲೋಕದಲ್ಲಿ ವಾಸಮಾಡುತ್ತಿದ್ದ ಕೋಟ್ಯಂತರ ಬ್ರಾಹ್ಮಣರು ಕಾಂತಿಹೀನರಾಗಿ ಸಮುದ್ರದಂತೆ ಅಪಾರವಾದ ನರಕದಲ್ಲಿ ಬಂದು ಬಿದ್ದರು. ||೨೯೭-೨೯೮||

ಈ ರೀತಿ ನರಕದಲ್ಲಿ ಬಂದುಬಿದ್ದ ಅವರನ್ನು ನೋಡಿ ದೇವೇಂದ್ರನು ನಡುಗುತ್ತಾ ಕಣ್ಣೀರು ಸುರಿಸುವವನಾಗಿ ಭಯಂಕರವಾದ ವೇಷದಿಂದ ತೋರುತ್ತಿರುವ ಯಮನನ್ನು ಕಂಡು ಇಂತೆಂದನು. ||೨೯೯||

"ಅಯ್ಯ ಯಮನೇ, ಇವರು ಯಾರು ? ಹಿಂದೆ ಯಾವ ವಿಧವಾದ ಪಾಪ ಕೆಲಸಗಳನ್ನು ಮಾಡಿದ್ದರು. ಮುಂದೆ ಇವರು ಎಂತಹ ನರಕಗಳಲ್ಲಿ ವಾಸಮಾಡುವರೆಂಬುದನ್ನು ನನಗೆ ಹೇಳು ! ಇವರು ಭೂಲೋಕದಿಂದ ಬರದೇ ಮೇಲಿನ ಸತ್ಯಲೋಕದಿಂದ ಇಲ್ಲಿಗೆ ಬಂದಿರುವರು. ಇದೇನಾಶ್ಚರ್ಯ ! ದಯವಿಟ್ಟು ನನಗೆಸಮಾಚಾರವನ್ನೆಲ್ಲಾ ತಿಳಿಸು ಎಂದು" ಇಂದ್ರನು ಯಮನನ್ನು ಕೇಳಿದನು. ||೩೦೦-೩೦೧||

|| ಯಮ ಉವಾಚ ||

ಇಂದ್ರ ವಕ್ಷ್ಯದ್ಭುತಂ ವೃತ್ತಂ ವೃತ್ತಾಂತಂ ಶೃಣು ಸಾದರಂ ।
ಯದ್ವೃತ್ತಾಂತಸ್ಯ ಕಥನಂ ಶ್ರವಣಂ ಚ ಭಯಪ್ರದಂ ||೬೦೨||

ಏತತ್ಕುಲಸಮುತ್ಪನ್ನಃ ಕಾಶೀಂ ಪ್ರಾಪ ವಿಧಾನತಃ ।
ಕಾಶ್ಯಾಂ ಪಿಂಡಪ್ರದಾನಾನಿ ಚಕಾರ ವಿಧಿಪೂರ್ವಕಂ ||೬೦೩||

ಏತೇ ತೇನೈವ ಪುಣ್ಯೇನ ಬ್ರಹ್ಮಲೋಕಮುಪಾಗತಾಃ ।
ಪುರಾ ತು ಸ್ಥಿತಮತ್ರೈವ ನರಕೇಷ್ವತಿದುಃಖಿತೈಃ ||೬೦೪||

ಏತತ್ಕುಲಸಮುತ್ಪನ್ನಃ ಕಾಶ್ಯಾಂ ಸ್ಥಿತ್ವಾ ಯದಾ ಯದಾ ।
ಚಕಾರ ತರ್ಪಣಂ ತೇನ ಪ್ರೀತ್ಯಾ ಹ್ಯೇತೇ ತದಾ ತದಾ ||೬೦೫||

ಸುಧಾಪಾನೇನ ಯಾ ಪ್ರೀತಿರ್ದೇವಾನಾಮಭವತ್ಸದಾ ।
ತತೋಽಪ್ಯತ್ಯುತ್ತಮಾ ಪ್ರೀತಿರೇತೈರಾಪ್ತಾ ಶಚೀಪತೇ ||೬೦೬||

ಕಾಶೀಸಲಿಲದಾನೇನ ಪಿತೃತೃಪ್ತಿರ್ಯಥಾ ತಥಾ ।
ಸುಧಾಪಾನೇಪಿ ನ ಪ್ರೀತಿಃ ಸತ್ಯಮತ್ರ ನ ಸಂಶಯಃ ||೬೦೭||

---

ದೇವೇಂದ್ರನೇ, ನೀನು ಕೇಳಿದ ಅದ್ಭುತಸಮಾಚಾರವನ್ನು ತಿಳಿಸುವೆನು ಆದರದಿಂದ ಲಾಲಿಸು. ಈ ವೃತ್ತಾಂತವಾದರೋ ಕೇವಲ ಶ್ರವಣಮಾತ್ರದಿಂದಲೇ ಭಯವನ್ನುಂಟುಮಾಡುವಂತಿರುವುದು. ಈ ಜನಗಳ ವಂಶದಲ್ಲಿ ಹುಟ್ಟಿದ ಒಬ್ಬನು ವಿಧಿಪ್ರಕಾರ ಕಾಶೀಪಟ್ಟಣಕ್ಕೆ ಹೋಗಿ ಅಲ್ಲಿ ನಿಯಮವನ್ನನುಸರಿಸಿ ಪಿಂಡಪ್ರದಾನ ಮಾಡಿದನು. ||೬೦೨-೬೦೩||

ಅಯ್ಯ ಇಂದ್ರನೇ, ಇವರು ಆ ಪುಣ್ಯದಿಂದಲೇ ಬ್ರಹ್ಮಲೋಕವನ್ನು ಹೊಂದಿದ್ದರು. ಹಿಂದೆ ಇವರೇ ಈ ನರಕಗಳಲ್ಲಿ ತುಂಬಾ ದುಃಖಕ್ಕೊಳಗಾಗಿದ್ದರು. ಇದೇ ವಂಶದಲ್ಲಿ ಹುಟ್ಟಿದವನೊಬ್ಬನು ಹಿಂದೆ ಕಾಶಿಯಲ್ಲಿದ್ದುಕೊಂಡು ಪ್ರೀತಿಯಿಂದ ತನ್ನ ಪಿತೃಗಳಿಗೆ ತರ್ಪಣ ಮಾಡುತ್ತಿದ್ದಾಗಲೆಲ್ಲಾ ಇವರಿಗೆ, ದೇವತೆಗಳಿಗೆ ಯಾವಾಗಲೂ ಅಮೃತಪಾನ ಮಾಡುವುದರಿಂದುಂಟಾಗುವ ಪ್ರೀತಿಗಿಂತಲೂ ಹೆಚ್ಚಿನ ಸಂತೋಷವುಂಟಾಗುತ್ತಿದ್ದಿತು. ||೬೦೪-೬೦೫-೬೦೬||

ಕಾಶಿಯ ಗಂಗಾನೀರನ್ನು ಸ್ವೀಕರಿಸುವುದರಿಂದಾಗುವಷ್ಟು ಪ್ರೀತಿಯು

ಕಾಶೀಸ್ಥಂ ಸಲಿಲಂ ತೋಯಂ ಪಿತೃಭ್ಯೋ ದತ್ತಮಸ್ತಿ ಯತ್ ।
ತತ್ಪಿತೃಭ್ಯೋಽಮೃತಂ ಭೂತ್ವಾ ಸಂಪ್ರೀಣಯತಿ ತತ್ಪಿತೄನ್ ॥೬೦೮॥

ಮಣಿಕರ್ಣೀಜಲಂ ಯೇನ ಪಿತೃಭ್ಯೋ ದತ್ತಮಾದರಾತ್ ।
ತೇನ ದತ್ತಃ ಸುಧಾಸಿಂಧುಃ ಪಿತೃಭ್ಯೋ ನಾತ್ರ ಸಂಶಯಃ ॥೬೦೯॥

ಪಿತೄನುದ್ದಿಶ್ಯ ಸಲಿಲಂ ಕ್ಷೀರಾನ್ನಂ ಮಧುಸಂಯುತಂ ।
ಮಣಿಕರ್ಣ್ಯಾಂ ಯೇನ ದತ್ತಂ ಸ ಪಿತೄಂಸ್ತಾರಯಿಷ್ಯತಿ ॥೬೧೦॥

ಅಮಾಂ ಸೋಮವತೀಂ ಪ್ರಾಪ್ಯ ಕಾಶ್ಯಾಂ ಶ್ರೀವೃಷಭಧ್ವಜೇ ।
ಯಃ ಕರೋತಿ ಪಿತೃಶ್ರಾದ್ಧಂ ಸ ಪಿತೄಂಸ್ತಾರಯಿಷ್ಯತಿ ॥೬೧೧॥

ಅಮಾಂ ಸೋಮವತೀಂ ಪ್ರಾಪ್ಯ ಪುರೈತದ್ವಂಶಸಂಭವಃ ।
ಶ್ರಾದ್ಧಂ ಚಕಾರ ಯತ್ನೇನ ವೃಷಭಧ್ವಜಸಂನಿಧೌ ॥೬೧೨॥

---

ಪಿತೃಗಳಿಗೆ ಅಮೃತಪಾನದಿಂದಲೂ ಆಗಲಾರದೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲ. ಕಾಶಿಯಲ್ಲಿ ಎಳ್ಳಿನೊಡನೆ ಬೆರೆದ ನೀರನ್ನು ನಾವು ಪಿತೃಗಳಿಗೆ ತರ್ಪಣರೂಪವಾಗಿ ಕೊಟ್ಟರೆ ಅದೇ ಪಿತೃಗಳಿಗೆ ಅಮೃತವಾಗಿ ಅವರನ್ನು ಸಂತೋಷಪಡಿಸುತ್ತದೆ. ॥೬೦೭-೬೦೮॥

ಕಾಶಿಯಲ್ಲಿರುವ ಮಣಿಕರ್ಣಿಕಾ ಕ್ಷೇತ್ರದ ನೀರಿನಿಂದ ಪಿತೃಗಳಿಗೆ ಆದರಪೂರ್ವಕವಾಗಿ ತರ್ಪಣ ಮಾಡಿದರೆ, ಅಮೃತದ ಸಮುದ್ರವನ್ನೇ ಅವರಿಗೆ ದಾನ ಮಾಡಿದಂತಾಗುವುದರಲ್ಲಿ ಸಂಶಯವೇ ಇಲ್ಲ. ಎಳ್ಳು, ಜೇನು ಇವುಗಳಿಂದ ಬೆರೆದ ಹಾಲನ್ನವನ್ನು ಮಣಿಕರ್ಣಿಕಾ ಕ್ಷೇತ್ರದಲ್ಲಿ ಪಿತೃಗಳನ್ನುದ್ದೇಶ ಮಾಡಿ ಕೊಟ್ಟವನು ತನ್ನ ಪಿತೃಗಳನ್ನು ಅವಶ್ಯವಾಗಿ ಉದ್ಧಾರಮಾಡಿಯೇ ಮಾಡುವನು. ॥೬೦೯-೬೧೦॥

ಸೋಮವಾರ ಅಮಾವಾಸ್ಯೆಯ ದಿವಸ ಕಾಶಿಯಲ್ಲಿ ವೃಷಭಧ್ವಜ ಕ್ಷೇತ್ರದಲ್ಲಿ ತನ್ನ ಪಿತೃಗಳಿಗೆ ಶ್ರಾದ್ಧ ಮಾಡುವವನು ತನ್ನ ಪಿತೃಗಳನ್ನು ಉದ್ಧಾರಮಾಡುತ್ತಾನೆ. ಹಿಂದೆ ಇದೇ ವಂಶದಲ್ಲಿ ಜನಿಸಿದವನೊಬ್ಬನು ವೃಷಭಧ್ವಜನೆಂದು ಪ್ರಸಿದ್ಧನಾದ ಆ ಮಹಾದೇವನ ಸಂನಿಧಾನದಲ್ಲಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಮಾಡಿದನು. ॥೬೧೧-೬೧೨॥

ಅಥರ್ವಶಿರಸಂ ಯತ್ನಾಚ್ಛ್ರಾದ್ಧಕಾಲೇ ಸ ಭಕ್ತಿಮಾನ್ ।
ಬ್ರಾಹ್ಮಣಾಂಛ್ರಾವಯಾಮಾಸ ಶ್ರಾದ್ಧಭೋಜನತತ್ಪರಾನ್ ॥೬೧೩॥

ಪಠನ್ನಥರ್ವಶಿರಸಂ ಯಃ ಕುರ್ಯಾಚ್ಛ್ರಾದ್ಧಮಾದರಾತ್ ।
ಸ ಪಿತೄಂಸ್ತಾರಯತ್ಯೇವ ವಾರಾಣಸ್ಯಾಂ ವಿಶೇಷತಃ ॥೬೧೪॥

ತೇನ ಪುಣ್ಯಪ್ರಭಾವೇನ ಪೂರ್ವೈತೇ ಮುದಿತಾನನಾಃ ।
ತಿರಸ್ಕೃತ್ಯಾಽಮೃತಂ ಹಸ್ತೇ ಪೂಜಿತಾ ಬ್ರಹ್ಮಣಾ ಪುರಾ ॥೬೧೫॥

ನಿತ್ಯಂ ಬ್ರಹ್ಮಸಭಾಸದ್ಭಿಃ ಬ್ರಹ್ಮಣಾಪಿ ಸಮರ್ಚಿತಾಃ ।
ಅತಿಸಂತೋಷಮಾಸಾದ್ಯ ಬ್ರಹ್ಮಲೋಕೇ ಸ್ಥಿತಾ ಧ್ರುವಂ ॥೬೧೬॥

ಅದ್ಯೈವ ಘಟಿಕಾತ್ಪೂರ್ವಂ ಕಾಶ್ಯಾಮೇತತ್ಕುಲೋದ್ಭವಃ ।
ಶ್ರೀಮದಂತರ್ಗೃಹೇ ರಮ್ಯೇ ಚಕ್ರೇ ಮೂತ್ರವಿಸರ್ಜನಂ ॥೬೧೭॥

ತೇನೈವ ಪಾತಕೇನೈವ ಸರ್ವೇ ತೇ ಪಿತರೋಽಧುನಾ ।
ಪ್ರಚ್ಯುತಾ ಬ್ರಹ್ಮಸದನಾತ್ಪತಿತಾ ನರಕಾರ್ಣವೇ ॥೬೧೮॥

---

ಆ ಬ್ರಾಹ್ಮಣನು ಶ್ರಾದ್ಧಭೋಜನದಲ್ಲಿ ನಿರತರಾಗಿರುವ ಬ್ರಾಹ್ಮಣರಿಗೆ ಭಕ್ತಿನಿಯಮಗಳಿಂದ ಅಥರ್ವಶಿರಸ್ಸೆಂಬ ಮಂತ್ರವು ಕೇಳುವಂತೆ ಪಾರಾಯಣಮಾಡಿಸಿದನು. ಕಾಶೀಕ್ಷೇತ್ರದಲ್ಲಿ ಈ ಅಥರ್ವಶಿರಸ್ಸನ್ನು ಆದರದಿಂದ ಪಠನಮಾಡುತ್ತಾ ಶ್ರಾದ್ಧಮಾಡುವವನು ತನ್ನ ಪಿತೃಗಳನ್ನು ಖಂಡಿತ ಉದ್ಧಾರಮಾಡಿಯೇ ಮಾಡುತ್ತಾನೆ. ॥೬೧೩-೬೧೪॥

ಆ ಪುಣ್ಯಮಹಿಮೆಯಿಂದಲೇ ಇವರು ಹಿಂದೆ ಸಂತೋಷವನ್ನು ಹೊರಸೂಸುವ ಮುಖವುಳ್ಳವರಾಗಿ, ಅಮೃತವನ್ನೂ ತಿರಸ್ಕರಿಸಿ, ಬ್ರಹ್ಮನಿಂದಲೂ ಪೂಜಿಸಲ್ಪಡುತ್ತಾ ಆ ಬ್ರಹ್ಮಲೋಕದಲ್ಲಿದ್ದರು. ಬ್ರಹ್ಮನ ಸಭೆಯಲ್ಲಿ ಬ್ರಹ್ಮ ಮತ್ತು ಅವನ ಅನುಯಾಯಿಗಳು ಇವರೆಲ್ಲರಿಂದಲೂ ನಿತ್ಯವೂ ಪೂಜಿಸಲ್ಪಡುತ್ತಾ ಸಂತುಷ್ಟರಾಗಿ ವಾಸಿಸುತ್ತಿದ್ದರು. ॥೬೧೫-೬೧೬॥

ಈಗತಾನೇ ಒಂದುಗಳಿಗೆ ಹಿಂದೆ ಕಾಶಿಯಲ್ಲಿ ಇವರ ವಂಶದಲ್ಲಿ ಹುಟ್ಟಿದವನೊಬ್ಬನು ವಿಶ್ವೇಶ್ವರಸ್ವಾಮಿಯ ಮನೋಹರವಾದ ಒಳಮನೆಯಲ್ಲಿ (ಅಂತರ್ಗೃಹ)

ಅತಃ ಪರಂ ತಪ್ತಶಸ್ತ್ರೈರೇತೇ ಸಂತಾಡಿತಾಸ್ತತಃ ।
ಪತಿಷ್ಯಂತ್ಯಗ್ನಿಕುಂಡೇಷು ಘೋರೇಷು ವಿವಿಧೇಷ್ವಪಿ ॥೬೧೯॥

ತತಃ ಪರಂ ಮೂತ್ರಕುಂಡೇ ಪತಿಷ್ಯಂತ್ಯತಿದಾರುಣೇ ।
ತತಃ ಪುರೀಷಕುಂಡೇಷು ಪತಿಷ್ಯಂತ್ಯತಿದಾರುಣೇ ॥೬೨೦॥

ತತಸ್ತಪ್ತಕಟಾಹೇಷು ತಪ್ತತೈಲಾಪ್ಲುತೇಷ್ವಪಿ ।
ಪತಿತ್ವಾ ವಹ್ನಿಕುಂಡೇಷು ಪತಿಷ್ಯಂತಿ ತತಃ ಪರಂ ॥೬೨೧॥

ತತಸ್ತಪ್ತಾಯಸೇ ಸ್ತಂಭೇಷ್ವೇತೇ ಬದ್ಧಾಃ ಪ್ರಯತ್ನತಃ ।
ತಾಡನೀಯಾಸ್ತಪ್ತಶಸ್ತ್ರೈರಾಕಲ್ಪಂ ನಾತ್ರ ಸಂಶಯಃ ॥೬೨೨॥

ಅನಂತಬ್ರಹ್ಮಕಲ್ಪಾಂತೇಪ್ಯೇತೇ ನರಕಲೋಕತಃ ।
ನಿರ್ಗತಾ ನ ಭವಿಷ್ಯಂತಿ ಸತ್ಯಂ ಸತ್ಯಂ ಶಚೀಪತೇ ॥೬೨೩॥

---

ಮೂತ್ರವಿಸರ್ಜನೆಮಾಡಿದನು. ಈ ಪಾಪದಿಂದಲೇ ಈತನ ಪಿತೃಗಳೆಲ್ಲರೂ ಈಗ ಬ್ರಹ್ಮಲೋಕದಿಂದ ಈ ಘೋರನರಕವೆಂಬ ಸಮುದ್ರಕ್ಕೆ ಜಾರಿಬಿದ್ದಿರುವರು. ॥೬೧೭-೬೧೮॥

ಅನಂತರ ಇವರನ್ನು ಕಾದ ಆಯುಧಗಳಿಂದ ಚೆನ್ನಾಗಿ ಹೊಡೆದು ಘೋರವಾದ ನಾನಾ ಅಗ್ನಿಕುಂಡಗಳಲ್ಲಿ ನನ್ನ ದೂತರು ಇವರನ್ನು ತಳ್ಳುವರು. ಆಮೇಲೆ ಅತಿ ಭಯಂಕರವಾದ ಮೂತ್ರಕುಂಡದಲ್ಲಿಯೂ ಅದಾದ ಮೇಲೆ ಅಮೇಧ್ಯಕುಂಡಗಳಲ್ಲಿಯೂ ಇವರು ಬಿದ್ದು ನರಳುವರು. ॥೬೧೯-೬೨೦॥

ಅನಂತರ ಕಾದ ಎಣ್ಣೆಯ ಕಡಾಯಗಳಲ್ಲಿಯೂ ಬೆಂಕಿಯ ಕುಂಡಗಳಲ್ಲಿಯೂ ಬೀಳುವರು. ಆ ಮೇಲೆ ಇವರನ್ನು ಕಾದ ಕಬ್ಬಿಣದ ಕಂಬದಲ್ಲಿ ಬಲಾತ್ಕಾರವಾಗಿ ಕಟ್ಟಿ ಕಲ್ಪದ ಕೊನೆಯವರೆವಿಗೂ ನಾನಾವಿಧವಾದ ಶಸ್ತ್ರಗಳಿಂದ ನನ್ನ ಭಟರು ಹೊಡೆಯುತ್ತಾರೆ. ಇದರಲ್ಲಿ ಸಂಶಯವಿಲ್ಲವೆಂದು ತಿಳಿ. ॥೬೨೧-೬೨೨॥

ಇಂದ್ರನೇ, ಅಪಾರಪರಿಮಿತಿಯುಳ್ಳ ಬ್ರಹ್ಮಕಲ್ಪದ ಕೊನೆಯಲ್ಲಿ ಸಹ ಇವರು ಈ ನರಕಲೋಕದಿಂದ ಸತ್ಯವಾಗಿಯೂ ಬಿಡುಗಡೆ ಹೊಂದುವುದಿಲ್ಲವೆಂದೂ ತಿಳಿ. ॥೬೨೩॥

॥ ಶಿವ ಉವಾಚ ॥

ಇತ್ಯುಕ್ತ್ವಾ ಪ್ರೇರಯಾಮಾಸ ದೂತಾಂಸ್ತತ್ತಾಡನಾಯ ಸಃ ।
ತತಸ್ತಸ್ತಾಯಸಾಸ್ತ್ರಾಗ್ರ್ಯೈಸ್ತಾಡಿತಾಃ ಪಿತರಃ ಶಿವೇ ॥೬೨೪॥

॥ ಪಾರ್ವತ್ಯುವಾಚ ॥

ಅಂತರ್ಗೃಹೇ ಕೃತೋ ಯೇನ ಮೂತ್ರೋತ್ಸರ್ಗೋ ದುರಾತ್ಮನಾ ।
ಸ ಗತಃ ಕುತ್ರ ತದ್ವಾರ್ತಾಂ ವದ ಶಂಭೋ ದಯಾನಿಧೇ ॥೬೨೫॥

॥ಶ್ರೀ ಶಿವ ಉವಾಚ॥

ಅಂತರ್ಗೃಹೇ ಸ ಮೋಹೇನ ಕೃತ್ವಾ ಮೂತ್ರವಿಸರ್ಜನಂ ।
ಹಾ ಹತೋಽಸ್ಮೀತಿ ದುಃಖೇನ ರುರೋದ ಬಹುಧಾ ಶಿವೇ ॥೬೨೬॥

ಸ ಯದಾಂತರ್ಗೃಹೇ ಮೋಹಾಚ್ಚಕ್ರೇ ಮೂತ್ರವಿಸರ್ಜನಂ ।
ತದಾ ತಂ ದದೃಶೇ ವಿಪ್ರಾ ಜಾಬಾಲಶ್ರುತಿಪಾರಗಾಃ ॥೬೨೭॥

---

ಎಲೌ ಮಂಗಳಾಂಗಿಯಾದ ಗಿರಿಜೆಯೇ, ಯಮನು ಈ ರೀತಿ ಇಂದ್ರನಿಗೆ ಹೇಳಿ, ಅವರನ್ನು ಹೊಡೆದು ಶಿಕ್ಷಿಸುವುದಕ್ಕೋಸ್ಕರ ತನ್ನ ದೂತರನ್ನು ಪ್ರೇರಿಸಲು, ಅವರು ಸ್ವಾಮಿಯ ಅಪ್ಪಣೆಯಂತೆ ಕಾದ ಕಬ್ಬಿಣದಾಯುಧಗಳ ತುದಿಗಳಿಂದ ಆ ಪಿತೃಗಳನ್ನು ಚೆನ್ನಾಗಿ ಹೊಡೆದರೆಂದು ಶಿವನು ದೇವಿಗೆ ಹೇಳಿದನು. ॥೬೨೪॥

ದಯಾಸಮುದ್ರನಾದ ಶಂಭುವೇ, ಅಂತರ್ಗೃಹದಲ್ಲಿ ಮೂತ್ರವನ್ನು ವಿಸರ್ಜಿಸಿದ ಆ ದುಷ್ಟನೆಲ್ಲಿಹೋದನು? ಅವನ ಸಮಾಚಾರವೇನೆಂಬುದನ್ನು ದಯವಿಟ್ಟು ನನಗೆ ತಿಳಿಸೆಂದು ಪಾರ್ವತಿಯು ತನ್ನ ಪತಿಯನ್ನು ಪುನಃ ಪ್ರಾರ್ಥಿಸಿದಳು. ಆಗ ಶಂಕರ ನಿಂತೆಂದನು. ॥೬೨೫॥

ದೇವಿ, ಅಜ್ಞಾನದಿಂದ ಆ ಅಂತರ್ಗೃಹದಲ್ಲಿ ಮೂತ್ರ ವಿಸರ್ಜನೆ ಮಾಡಿದ ಮೇಲೆ ಆ ಪಾಪಿಯು, ಅಯ್ಯೋ ಕೆಟ್ಟೆನು, ಎಂದು ತುಂಬಾ ದುಃಖದಿಂದ ಬಹಳ ವಾಗಿ ಗೋಳಿಟ್ಟನು. ಆ ದುರಾತ್ಮನು ಅಜ್ಞಾನದಿಂದ ಮೂತ್ರವಿಸರ್ಜನೆ ಮಾಡಿದಾಗ ಜಾಬಾಲಶ್ರುತಿಯನ್ನು ಚೆನ್ನಾಗಿ ತಿಳಿದಿರುವ ಬ್ರಾಹ್ಮಣರೆಲ್ಲರೂ ಅವನನ್ನು ನೋಡಿ ಕೋಪಗೊಂಡರು. ॥೬೨೬-೬೨೭॥

ದೃಷ್ಟ್ವಾ ತಮೂಚುಃ ಸರ್ವೇಽಪಿ ಕ್ರೋಧತಾಮ್ರವಿಲೋಚನಾಃ ।
ಪಾಷಾಣೈಸ್ತಾಡಯಂತಸ್ತೇ ತೃಣಹಸ್ತಾ ವರಾನನೇ ॥೬೨೮॥

॥ವಿಪ್ರಾ ಊಚುಃ॥

ರೇ ವಿಪ್ರ ಶಂಕರಾಗಾರೇ ಶ್ರೀಮದಂತರ್ಗೃಹೇ ತ್ವಯಾ ।
ಮೂತ್ರೋತ್ಸರ್ಗಃ ಕೃತೋ ಮೋಹಾತ್ತೇನ ದುಃಖಮವಾಪ್ಸ್ಯಸಿ ॥೬೨೯॥

ಸರ್ಷಪಾ ಇವ ಲಿಂಗಾನಿ ಶ್ರೀಮದಂತರ್ಗೃಹೇ ಸದಾ ।
ತಿಷ್ಠಂತಿ ತೇಷು ಪತಿತಂ ಮೂತ್ರಮೇತತ್ತ್ವಯಾಧುನಾ ॥೬೩೦॥

ಅನೇನ ಮೂತ್ರಪಾತೇನ ಯಾವತ್ಪಾತಕಮಾರ್ಜಿತಂ ।
ತಾವತ್ಪಾಪಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಚಾರ್ಜಿತಂ ॥೬೩೧॥

ಅನಂತಬ್ರಹ್ಮಹತ್ಯಾದಿಪಾತಕಾನಿ ಕದಾಚನ ।
ವಿನಶ್ಯಂತೀದೃಶಂ ಪಾಪಂ ಕದಾಪಿ ನ ವಿನಶ್ಯತಿ ॥೬೩೨॥

---

ಸುಂದರಮುಖಿಯಾದ ದೇವಿಯೇ, ಆ ಬ್ರಾಹ್ಮಣೋತ್ತಮರೆಲ್ಲರೂ ಇವನನ್ನು ನೋಡಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಕಲ್ಲುಗಳಿಂದ ಅವನನ್ನು ಹೊಡೆಯುತ್ತಾ ಕೈಯ್ಯಲ್ಲಿ ಹುಲ್ಲುಕಡ್ಡಿಗಳನ್ನು ಹಿಡಿದುಕೊಂಡು ಇಂತೆಂದರು.॥೬೨೮॥

"ಏ ಬ್ರಾಹ್ಮಣಾಧಮನೇ, ಶಂಕರನ ಆವಾಸಸ್ಥಾನವಾಗಿರುವ ಶ್ರೀ ಮಹಾದೇವನ ಅಂತರ್ಗೃಹದಲ್ಲಿ ನೀನು ಅಜ್ಞಾನದಿಂದ ಮೂತ್ರವಿಸರ್ಜನೆ ಮಾಡಿದುದರಿಂದ ನಿನಗೆ ವಿಶೇಷ ದುಃಖವುಂಟಾಗುವುದೆಂದು ತಿಳಿ. ಸಾಸುವೆ ಕಾಳುಗಳಂತೆ ಆ ಅಂತರ್ಗೃಹದಲ್ಲಿ ಅಸಂಖ್ಯಾತಗಳಾದ ಶಿವಲಿಂಗಗಳು ನೆಲಸಿರುವುವು. ಅಂತಹ ದಿವ್ಯಸ್ಥಳದಲ್ಲಿ ಈಗ ನಿನ್ನ ಮೂತ್ರವು ಬಿದ್ದಿತಲ್ಲಾ! ॥೬೨೯-೬೩೦॥

ಕೋಟ್ಯಂತರ ಬ್ರಹ್ಮಹತ್ಯೆ ಮಾಡಿದರೂ ಈಗ ನೀನು ಆ ಅಂತರ್ಗೃಹದಲ್ಲಿ ಮಾಡಿದ ಪಾಪದಷ್ಟು ಆಗಲಾರದು. ಅಪಾರವಾದ ಬ್ರಹ್ಮಹತ್ಯೆ ಮುಂತಾದ ಮಹಾಪಾಪಗಳೂ ಒಂದುವೇಳೆ ನಾಶವಾಗುವುದಾದರೂ ನೀನು ಮಾಡಿದ ಇಂತಹ ಪಾತಕವು ಮಾತ್ರ ಎಂದೆಂದಿಗೂ ಹೋಗಲಾರದೆಂದು ತಿಳಿ. ॥೬೩೧-೬೩೨॥

ಅಂತರ್ಗೃಹೇ ಪ್ರವೇಶಸ್ತು ಸುರಾಣಾಮಪಿ ದುರ್ಲಭಃ ।
ಈದೃಶೇಂತರ್ಗೃಹೇ ಶೈವೇ ಮೂತ್ರೋತ್ಸರ್ಗಃ ಕಥಂ ಕೃತಃ ॥೬೩॥

ಯಥಾಕಥಂ ಚಿದ್ಯಾತ್ರಾರ್ಥಮಂತರ್ಗೇಹಃ ಪ್ರವಿಶ್ಯತೇ ।
ಶಂಕರಾನುಗ್ರಹಾನ್ನೋ ಚೇತ್ಪ್ರವೇಶೋಽಪ್ಯತಿದುರ್ಲಭಃ ॥೬೪॥

ಅಂತರ್ಗೃಹಂ ಪೂಜಯಂತಿ ದೇವಾ ಬಿಲ್ವದಲಾದಿಭಿಃ ।
ಸ್ತುವಂತ್ಯಂತರ್ಗೃಹಂ ದೇವಾಃ ಕೃತಾಂಜಲಿಪುಟಾಃ ಸದಾ ॥೬೫॥

ಯಸ್ಮಿನ್ನಂತರ್ಗೃಹೇ ಸಾಂಬೋ ವಿಶ್ವೇಶೋ ದೇವತೋತ್ತಮಃ ।
ತದಂತರ್ಗೃಹಮುತ್ಕೃಷ್ಟಂ ಕೋವಾ ನಾರಾಧಯಿಷ್ಯತಿ ॥೬೬॥

ಅಂತರ್ಗೃಹಂ ಪೂಜಯಂತಿ ಯೇ ಬಿಲ್ವಕುಸುಮಾದಿಭಿಃ ।
ತಾನರ್ಚಯಂತಿ ಯತ್ನೇನ ದೇವಾ ವಿಷ್ಣುಪುರೋಗಮಾಃ ॥೬೭॥

ಅಂತರ್ಗೃಹಸ್ಯ ಮಾಹಾತ್ಮ್ಯಂ ಶಿವೋ ವೇದಾಮರಾಧಿಪಃ ।
ತದನ್ಯೇ ನೈವ ಜಾನಂತಿ ಸತ್ಯಂ ಸತ್ಯಂ ನ ಸಂಶಯಃ ॥೬೮॥

---

ದೇವತೆಗಳಿಗೂ ಪ್ರವೇಶಮಾಡಲು ದುರ್ಲಭವಾಗಿರುವ ಈ ಶಿವನ ಅಂತರ್ಗೃಹದಲ್ಲಿ ನೀನು ಹೀಗೆ ಮೂತ್ರೋತ್ಸರ್ಜನ ಮಾಡಿದೆ. ಶಂಕರನ ಅನುಗ್ರಹದಿಂದ ಬಹಳ ಕಷ್ಟಪಟ್ಟು ಯಾತ್ರಾರ್ಥಿಯಾದವನಿಗೆ ಈ ಪರಶಿವನ ಅಂತರ್ಗೃಹಪ್ರವೇಶವು ದೊರೆಯುತ್ತದೆ. ಆ ಶಂಕರನ ಅನುಗ್ರಹವಿಲ್ಲದಿದ್ದರೆ ಮಾತ್ರ ಇದನ್ನು ಪ್ರವೇಶಿಸುವುದೂ ಕಷ್ಟಸಾಧ್ಯವೆಂದೇ ಭಾವಿಸು. ॥೬೩-೬೪॥

ದೇವತೆಗಳು ಈ ಅಂತರ್ಗೃಹವನ್ನು ಬಿಲ್ವಪತ್ರೆ ಮುಂತಾದವುಗಳಿಂದ ಪೂಜೆಮಾಡಿ ಕೈಜೋಡಿಸಿ ಯಾವಾಗಲೂ ಸ್ತೋತ್ರಮಾಡುತ್ತಿರುವರು. ಅಂಬಿಕಾ ಸಮೇತನಾಗಿ ದೇವತೋತ್ತಮನೂ ಜಗದೊಡೆಯನೂ ಆದ ಆ ಮಹೇಶ್ವರನು ನೆಲಸಿರುವುದರಿಂದ ಉತ್ಕೃಷ್ಟವೆನಿಸಿರುವ ಆ ಶಂಕರನ ಅಂತರ್ಗೃಹವನ್ನು ಯಾರು ತಾನೇ ಪೂಜೆಮಾಡುವುದಿಲ್ಲ? ॥೬೫-೬೬॥

.ಬಿಲ್ವಪತ್ರೆ ಹೂವು ಮುಂತಾದವುಗಳಿಂದ ಈ ಅಂತರ್ಗೃಹವನ್ನು ಪೂಜೆ ಮಾಡುವವರನ್ನು ವಿಷ್ಣುವೇ ಮುಂತಾದ ದೇವತೆಗಳು ನಿಯಮದಿಂದ ಪೂಜೆಮಾಡ

ಅನಂತಶಾಖೋ ವೇದೋ ವಾ ಶೇಷೋ ವಾ ಮುನಯೋಽಪಿ ವಾ ।
ಅಂತರ್ಗೃಹಸ್ಯ ಮಾಹಾತ್ಮ್ಯಂ ನ ಜಾನಂತ್ಯೇವ ವಸ್ತುತಃ ॥೬೩೯॥

ಏತಾದೃಶೇ ಶಿವಾಗಾರೇ ಶ್ರೀಮದಂತರ್ಗೃಹೇ ತ್ವಯಾ ।
ಕಥಂ ಕೃತಂ ದುರಾಚಾರ ಮೂತ್ರಸ್ಯೋತ್ಸರ್ಜನಂ ವದ ॥೬೪೦॥

ನ ತ್ವದನ್ಯೋ ಮಹಾಪಾಪೀ ಪಾಪರಾಶಿಸ್ತ್ವಮೀದೃಶಃ ।
ತವೇದೃಶಸ್ಯ ದುಷ್ಟಸ್ಯ ಮುಕ್ತಿರತ್ಯಂತದುರ್ಲಭಾ ॥೬೪೧॥

ನರಕೇಷು ಪತಿಷ್ಯಂತಿ ಪಿತರಸ್ತವ ಸರ್ವಥಾ ।
ತವಾಪಿ ಯಾತನಾಘೋರಾ ಭವಿಷ್ಯತಿ ನ ಸಂಶಯಃ ॥೬೪೨॥

ತವ ತು ಬ್ರಹ್ಮಕಲ್ಪಾಂತೇ ಪ್ಯನಲ್ಪಾ ಯಾತನಾ ದ್ವಿಜ ।
ಭವಿಷ್ಯತಿ ನ ಸಂದೇಹೋ ವೇದಾ ಏವಾತ್ರ ಸಾಕ್ಷಿಣಃ ॥೬೪೩॥

---

ತ್ತಾರೆ. ದೇವತೆಗಳಿಗೆಲ್ಲಾ ಒಡೆಯನಾದ ಆ ಪರಶಿವನೊಬ್ಬನೇ ಈ ಅಂತರ್ಗೃಹದ ಮಹಿಮೆಯನ್ನರಿತಿರುವನೇ ಹೊರತು ಇತರರಾರೂ ತಿಳಿದಿಲ್ಲವೆಂಬುದರಲ್ಲಿ ಸತ್ಯವಾಗಿಯೂ ಸಂಶಯವೇ ಇಲ್ಲ. ॥೬೩೭-೬೩೮॥

ಅಪಾರವಾದ ಶಾಖೆಗಳುಳ್ಳ ವೇದಗಳೂ, ಆದಿಶೇಷನೂ, ಮುನಿಗಳೂ ಸಹ ಈ ಅಂತರ್ಗೃಹದ ಮಹಿಮೆಯನ್ನು ನಿಜವಾಗಿ ತಿಳಿಯಲಾರರು. ಇಂತಹ ಮಹಾ ಮಹಿಮೆಯುಳ್ಳ ಈ ಶಿವಾಲಯವಾದ ಅಂತರ್ಗೃಹದಲ್ಲಿ ದುಷ್ಟನಾದ ನೀನು ಹೇಗೆ ಮೂತ್ರವನ್ನು ತ್ಯಜಿಸಿದೆ ಹೇಳು. ॥೬೩೯-೬೪೦॥

ನಿನ್ನಂತಹ ಮಹಾಪಾಪಿಯು ಮತ್ತಾರೂ ಇಲ್ಲ. ಪಾಪಗಳ ಸಮೂಹವೇ ನೀನಾಗಿರುವೆ. ಇಂತಹ ದುಷ್ಟನಾದ ನಿನಗೆ ಮೋಕ್ಷಪ್ರಾಪ್ತಿಯು ತುಂಬಾ ದುರ್ಲಭವೆಂದೇ ತಿಳಿ. ಇದರಿಂದ ನಿನ್ನ ಪಿತೃಗಳು ಸಹ ನಿಶ್ಚಯವಾಗಿ ನರಕದಲ್ಲಿ ಬೀಳುವುದು ಖಂಡಿತ. ಅಲ್ಲದೇ ನಿನಗೂ ಭಯಂಕರವಾದ ನರಕಯಾತನೆಯುಂಟಾಗುವುದರಲ್ಲಿ ಸಂದೇಹವೇ ಇಲ್ಲ. ॥೬೪೧-೬೪೨॥

ಓ ಬ್ರಾಹ್ಮಣನೇ, ಬ್ರಹ್ಮಕಲ್ಪದ ಕೊನೆಯಲ್ಲಿಯೂ ಸಹ ನಿನಗೆ ವಿಶೇಷ ಯಾತನೆಗಳುಂಟೆಂದು ತಿಳಿ. ವೇದಗಳೇ ಈ ವಿಷಯದಲ್ಲಿ ಸಾಕ್ಷಿಗಳಾಗಿರುವುವು.

ಯದ್ಯತ್ರ ತೇ ತನುತ್ಯಾಗಸ್ತದಾ ಭೈರವಯಾತನಾ ।
ಅನ್ಯತ್ರಾಪಿ ತನುತ್ಯಾಗೋ ಘೋರಾಸ್ತೇ ಯಮಯಾತನಾಃ ॥೬೪೪॥

ಅನಂತಕಲ್ಪಪರ್ಯಂತಂ ಭವಿಷ್ಯತಿ ನ ಸಂಶಯಃ ।
ಪಿತೃಭಿಃ ಸಹ ದುಃಖಾನಿ ಯಮಲೋಕೇ ತ್ವಯಾ ದ್ವಿಜ ॥೬೪೫।

ಭೋಕ್ತವ್ಯಾನ್ಯತಿಘೋರಾಣಿ ನ ತಸ್ಮಾತ್ಪ್ರಚ್ಯುತಿಸ್ತವ ।
ತಪೋಭಿರುಗ್ರೈರ್ದಾನೈರ್ವಾ ಯಾಗೈರ್ವಾ ಬಹುದಕ್ಷಿಣೈಃ ॥೬೪೬॥

ತ್ವತ್ಕೃತಸ್ಯಾಸ್ಯ ಪಾಪಸ್ಯ ವಿನಾಶೋ ನ ಭವಿಷ್ಯತಿ ।
ಸಂತಪ್ತಲೋಹಸ್ತಂಭಾಗ್ರೇ ಬದ್ಧ್ವಾ ಸಂತಪ್ತಶೃಂಖಲೈಃ ॥೬೪೭॥

ಭವಂತಂ ತಾಡಯಿಷ್ಯಂತಿ ಯಮದೂತಾಃ ಶರೋತ್ಕರೈಃ ।
ಸಂತಪ್ತಮೂತ್ರಕುಂಡೇಷು ತವ ವಾಸೋ ಭವಿಷ್ಯತಿ ॥೬೪೮॥

---

ಈ ಕಾಶಿಯಲ್ಲಿನ ಅಂತರ್ಗೃಹದಲ್ಲೇ ನೀನು ಶರೀರತ್ಯಾಗಮಾಡಿದರೆ ಇನ್ನೂ ಸಹಿಸಲಸಾಧ್ಯವಾದ ಯಾತನೆಗೆ ಗುರಿಯಾಗುತ್ತೀಯೆ. ಒಂದುವೇಳೆ ಬೇರೆ ಎಲ್ಲಾದರೂ ಪ್ರಾಣಬಿಟ್ಟರೆ ಆಗ ಭಯಂಕರವಾದ ಯಮನ ಹಿಂಸೆಗಳನ್ನು ನೀನು ಹೊಂದುವೆ. ॥೬೪೩-೬೪೪॥

ಎಲೈ ಬ್ರಾಹ್ಮಣನೇ, ಅಪಾರ ಕಲ್ಪಗಳವರೆಗೂ ನೀನು ಪಿತೃಗಳೊಡನೆ ಯಮಲೋಕದಲ್ಲಿ ಅತ್ಯಂತ ದುಃಖವನ್ನನುಭವಿಸಬೇಕೆಂಬುದರಲ್ಲಿ ಸಂಶಯವಿಲ್ಲ. ಇಂತಹ ಭಯಂಕರ ಯಮಯಾತನೆಗಳನ್ನನುಭವಿಸಿದರೂ ನಿನಗೆ ಮಾತ್ರ ಆ ನರಕಗಳಿಂದ ಬಿಡುಗಡೆಯಿಲ್ಲವೆಂದು ತಿಳಿ. ಉಗ್ರವಾದ ತಪಸ್ಸುಗಳು, ದಾನ, ಅಪಾರವಾದ ದಕ್ಷಿಣೆಗಳಿಂದ ಕೂಡಿದ ಯಾಗಗಳು, ಇವು ನಿನ್ನ ಪಾಪಗಳನ್ನು ಹೋಗಲಾಡಿಸಲಾರವು. ॥೬೪೫-೬೪೬॥

ನೀನು ಮಾಡಿದ ಪಾಪಕ್ಕೆ ನಾಶವೇ ಇಲ್ಲವಾಗಿದೆ. ನಿನ್ನನ್ನು ಆ ಯಮನ ದೂತರು ಚೆನ್ನಾಗಿ ಕಾದ ಕಬ್ಬಿಣದ ಕಂಬಕ್ಕೆ ಕಟ್ಟಿ, ಕಾದ ಸರಪಳಿಗಳಿಂದಲೂ ಬಾಣಸಮೂಹಗಳಿಂದಲೂ ಬಲವಾಗಿ ಹೊಡೆಯುತ್ತಾರೆ. ಇದಾದಮೇಲೆ ನೀನು ಕಾದ ಮೂತ್ರಕುಂಡಗಳಲ್ಲಿ ವಾಸಮಾಡಬೇಕಾಗಿ ಬರುವುದು. ॥೬೪೭-೬೪೮॥

ತತಃ ಪುರೀಷಕುಂಡೇಷು ವಾಸಸ್ತವ ಭವಿಷ್ಯತಿ ।
ತತಸ್ತಪ್ತಾಯಸೈಃ ಪಿಂಡೈಃ ಭವಂತಂ ತಾಡಯಂತಿ ತೇ ॥೬೪೯॥
ತಾಡಯಿತ್ವಾ ತಪ್ತಶಸ್ತ್ರೈಸ್ತಾಡಯಿಷ್ಯಂತಿ ಸಂತತಂ ॥೬೫೦॥

॥ಶಿವ ಉವಾಚ॥

ಇತ್ಯುಕ್ತ್ವಾ ತೇ ತತೋ ವಿಪ್ರಾಃ ಭರ್ತ್ಸಯಿತ್ವಾ ತು ತಂ ದ್ವಿಜಂ ।
ಯಯುರ್ಯಾತ್ರಾರ್ಥಮುದ್ಯುಕ್ತಾ ಮನ್ನಾಮಸ್ಮೃತಿಪೂರ್ವಕಂ ॥೬೫೧॥

ತತಃ ಸ ಭರ್ತ್ಸಿತೋ ವಿಪ್ರೈರ್ಬಹುಭಿರ್ನಿಂದಿತೋ ಮುಹುಃ ।
ಜಹೌ ಕಾಶೀಮಿಮಾಂ ಪುಣ್ಯಾಂ ಶಿವೇ ಸರ್ವಶ್ರುತಿಶ್ರುತಾಂ ॥೬೫೨॥

ತತಃ ಸ ದುಃಖಿತೋ ವಿಪ್ರಃ ಕಾಶೀಂ ತ್ಯಕ್ತ್ವಾ ತೃಷಾತುರಃ ।
ಜಹೌ ಪ್ರಾಣಾಂಸ್ತತೋ ನೀತಸ್ಸ ದುಷ್ಟೋ ಯಮಕಿಂಕರೈಃ ॥೬೫೩॥

ತತಃ ಸ ಪಾತಿತೋ ವಿಪ್ರೋ ಯಮಾಗ್ರೇ ಕ್ರೂರಶಾಸನೈಃ ।
ತಂ ದೃಷ್ಟ್ವಾ ಪ್ರಾಹ ಶಮನಶ್ಚಿತ್ರಗುಪ್ತಂ ವಿಶಾರದಂ ॥೬೫೪॥

---

ಆಮೇಲೆ ಅಮೇಧ್ಯಕುಂಡಗಳಲ್ಲಿ ನೀನು ವಾಸ ಮಾಡಬೇಕಾಗುವುದು. ಅನಂತರ ಕಾದ ಕಬ್ಬಿಣದ ಗುಂಡುಗಳಿಂದ ನಿನ್ನನ್ನು ಆ ಯಮದೂತರು ಹೊಡೆದು, ಪುನಃ ಕಾದ ಕತ್ತಿಗಳ ತುದಿಯಿಂದ ಚುಚ್ಚಿ ಯಾವಾಗಲೂ ಹಿಂಸೆಪಡಿಸುತ್ತಾರೆ." ॥೬೪೯-೬೫೦॥

ಎಂದು ಹೇಳಿ ಆ ಬ್ರಾಹ್ಮಣರೆಲ್ಲರೂ ಆ ಬ್ರಾಹ್ಮಣಾಧಮನನ್ನು ನಿಂದೆಮಾಡಿ ನನ್ನ ನಾಮವನ್ನು ಸ್ಮರಣೆ ಮಾಡುತ್ತಾ ಮುಂದಕ್ಕೆ ಯಾತ್ರೆಗೆ ಸಿದ್ಧರಾದರು. ಆಗ ಅನೇಕಮಂದಿ ಬ್ರಾಹ್ಮಣರಿಂದ ಹೀಗೆ ಗದರಿಸಲ್ಪಟ್ಟು ಪದೇಪದೇ ಅವರ ನಿಂದೆಗೆ ಗುರಿಯಾದ ಈ ಬ್ರಾಹ್ಮಣನು, ಸಕಲ ವೇದಗಳಲ್ಲಿಯೂ ಪ್ರಸಿದ್ಧವಾಗಿರುವ ಈ ಪುಣ್ಯಕರವಾದ ಕಾಶೀಕ್ಷೇತ್ರವನ್ನು ಬಿಟ್ಟು ಹೊರಟನು. ॥೬೫೧-೬೫೨॥

ಅನಂತರ ದುಃಖಕ್ಕೊಳಗಾದ ಆ ಬ್ರಾಹ್ಮಣನು ಕಾಶಿಯನ್ನು ಬಿಟ್ಟುಹೊರಟು ಹಸಿವಿನಿಂದ ಬಳಲಿ ಹಾಗೆಯೇ ಪ್ರಾಣಬಿಟ್ಟನು. ಆಗ ಆ ದುಷ್ಟನನ್ನು , ಕ್ರೂರವಾಗಿ

ಚಿತ್ರಗುಪ್ತಾಯಮಾನೀತೋ ಮದೀಯೈಃ ಕಿಂಕರೈರಿಹ ।
ಅನೇನ ಕಿಂ ಕೃತಂ ಕರ್ಮ ತದ್ವದಸ್ವ ಯಥಾರ್ಥತಃ ॥೬೫೫॥

॥ಯಮ ಉವಾಚ॥

ಇತ್ಯುಕ್ತಶ್ಚಿತ್ರಗುಪ್ತೋಽಪಿ ಯಮೇನ ಯಮಮಾಹ ತಂ ।
ತತ್ಕೃತಂ ದುಷ್ಕೃತಂ ಕರ್ಮ ವಿಚಾರ್ಯಾದರಪೂರ್ವಕಂ ॥೬೫೬॥

॥ ಚಿತ್ರಗುಪ್ತ ಉವಾಚ ॥

ಅಯಂ ಕಾಶ್ಯಾಂ ಶಿವಾಗಾರೇ ಶ್ರೀಮದಂತರ್ಗೃಹೇ ಯಮ ।
ಭ್ರಮಾನ್ಮೂತ್ರಂ ವಿಸೃಜ್ಯಾದೌ ತತಃ ಕಾಶೀಬಹಿರ್ಮೃತಃ ॥೬೫೭॥

ಕಾಶ್ಯಾಮಂತರ್ಗೃಹೇ ಯೇನ ಕೃತಂ ಮೂತ್ರವಿಸರ್ಜನಂ ।
ತೇನ ಘೋರಾಣಿ ದುಃಖಾನಿ ಪ್ರಾಪ್ತವ್ಯಾನಿ ನ ಸಂಶಯಃ ॥೬೫೮॥

---

ಶಿಕ್ಷೆಮಾಡುವ ಯಮಕಿಂಕರರು ತೆಗೆದುಕೊಂಡುಹೋಗಿ ಯಮನ ಮುಂದೆ ಕೆಡವಿದರು. ಆಗ ಯಮನು ಇವನನ್ನು ನೋಡಿ ಪಕ್ಕದಲ್ಲಿದ್ದ ಚತುರನಾದ ಚಿತ್ರಗುಪ್ತನನ್ನು ಕರೆದು ಹೀಗೆ ನುಡಿದನು. ॥೬೫೩-೬೫೪॥

"ಅಯ್ಯ ಚಿತ್ರಗುಪ್ತನೇ, ನನ್ನ ಭಟರು ಇಲ್ಲಿಗೆ ತಂದಿರುವ ಈತನು ಮಾಡಿದ ಪಾಪಕೆಲಸಗಳಾವುವೆಂಬುದನ್ನು ಚೆನ್ನಾಗಿ ವಿಚಾರಮಾಡಿ ಹೇಳು" ಎಂದು ಯಮನು ಕೇಳಲು ಆಗ ಚಿತ್ರಗುಪ್ತನು, ಅವನ ಪಾಪಕೆಲಸಗಳನ್ನೆಲ್ಲಾ ಚೆನ್ನಾಗಿ ವಿಚಾರಿಸಿ (ಆಲೋಚಿಸಿ) ಆದರ ಪೂರ್ವಕವಾಗಿ ಯಮನೊಡನೆ ಇಂತೆಂದನು. ॥೬೫೫-೬೫೬॥

ಯಮರಾಜ, ಇವನು ಕಾಶಿಯಲ್ಲಿ ಪರಶಿವನ ಆವಾಸಸ್ಥಳವಾದ ಕಾಂತಿಯುಕ್ತವಾಗಿರುವ ಅಂತರ್ಗೃಹದಲ್ಲಿ ಭ್ರಾಂತಿಯಿಂದ ಮೂತ್ರವಿಸರ್ಜನೆಮಾಡಿ ಅನಂತರ ಕಾಶೀಪಟ್ಟಣದಿಂದ ಹೊರಹೊರಟು ಬೇರೆಕಡೆ ಮೃತನಾದನು. ಕಾಶೀಪಟ್ಟಣದ ಅಂತರ್ಗೃಹದಲ್ಲಿ ಮೂತ್ರವಿಸರ್ಜನೆಮಾಡಿದವರು ಭಯಂಕರವಾದ ದುಃಖಗಳನ್ನನುಭವಿಸುವುದರಲ್ಲಿ ಸಂದೇಹವೇ ಇಲ್ಲ. ॥೬೫೭-೬೫೮॥

ಯಮಸ್ತಮತಿವೇಗೇನ ತಾಡಯಿತ್ವಾಯಸೈಃ ಶರೈಃ ।
ಶ್ರಾಂತೋ ಭಟಾನುವಾಚೇದಂ ತಾಡಯಂತ್ವಿತಿ ಸತ್ವರಂ ॥೬೫॥

ತತೋಽಯುತಂ ಯಮಭಟಾ ಯಮೇನ ಪ್ರೇರಿತಾಃ ಶಿವೇ ।
ತಂ ದ್ವಿಜಂ ತಾಡಯಾಮಾಸುಸ್ತಪ್ತಾಸ್ತ್ರೈರತಿದಾರುಣೈಃ ॥೬೬೦॥

ತತಃ ಸ ಪಾತಿತೋ ವಿಪ್ರಸ್ತಪ್ತಮೂತ್ರಹ್ರದೇ ಭಟೈಃ ।
ತತಃ ಸ ಪಾತಿತೋ ವಿಪ್ರೋ ವಹ್ನಿತಪ್ತಮಲಹ್ರದೇ ॥೬೬೧॥

ಪ್ರತಪ್ತಲೋಹಸ್ತಂಭಾಗ್ರೇ ಸಂಬದ್ಧಸ್ತಪ್ತಶೃಂಖಲೈಃ ।
ತಾಡಿತಸ್ತಪ್ತಶಸ್ತ್ರೌಘೈರ್ಭಿಂಡಿಪಾಲೈಶ್ಚ ತಾಡಿತಃ ॥೬೬೨॥

ತಪ್ತತೈಲಕಟಾಹೇಷು ಪಾತಿತಃ ಸ ತತೋ ಭಟೈಃ ।
ಪ್ರಜ್ವಲದ್ವಹ್ನಿಕುಂಡೇಷು ಪಾತಿತಃ ಸ ತತಃ ಪರಂ ॥೬೬೩॥

ಏವಂ ಪ್ರಾಪ್ಯ ಸ್ಥಿತೋ ವಿಪ್ರಃ ಪಿತೃಭಿಃ ಸಹಯಾತನಾಂ ।
ಅನಂತದುಃಖದಾಂ ದೇವಿ ಪುನರಾವೃತ್ತಿ ದುರ್ಲಭಾಂ ॥೬೬೪॥

---

ಆಗ ಯಮನು ಆ ಬ್ರಾಹ್ಮಣಾಧಮನನ್ನು ತುಂಬಾ ವೇಗದಿಂದ ಕಬ್ಬಿಣದ ಬಾಣಗಳನ್ನು ತೆಗೆದುಕೊಂಡು ಬಲವಾಗಿ ಹೊಡೆದು ಬಳಲಿ ಅನಂತರ ತನ್ನ ಭಟರನ್ನು ಕುರಿತು, ಕೂಡಲೇ ಈ ಪಾಪಿಯನ್ನು ಬಡಿಯಿರೆಂದು ಹೇಳಲು, ಕೂಡಲೇ ಹತ್ತು ಸಾವಿರ ಯಮಭಟರು ಆ ಯಮನಿಂದ ಪ್ರೇರಿತರಾಗಿ ತುಂಬಾ ಭಯಂಕರವಾದ ಕಾದ ಆಯುಧಗಳಿಂದ ಹೊಡೆಯಲು ಪ್ರಾರಂಭಿಸಿದರು. ॥೬೫೯-೬೬೦॥

ಹಾಗೆ ಹೊಡೆದಮೇಲೆ ಆ ಯಮಭಟರು ಕಾದ ಮೂತ್ರದ ಗುಂಡಿಯಲ್ಲಿ ಅವನನ್ನು ತಳ್ಳಿದರು. ಆಮೇಲೆ ಬೆಂಕಿಯಿಂದ ಕಾದ ಅಮೇಧ್ಯಕುಂಡದಲ್ಲಿ ನೂಕಿದರು. ಅನಂತರ ಕಾದ ಕಬ್ಬಿಣದ ಕಂಬದ ತುದಿಯಲ್ಲಿ ಕಟ್ಟಿ ಕೆಂಪಗೆ ಕಾದ ಸರಪಣಿಗಳಿಂದಲೂ ಕಾದ ಕತ್ತಿ, ಭಿಂಡಿಪಾಲ ಮುಂತಾದ ಆಯುಧಗಳಿಂದಲೂ ಚೆನ್ನಾಗಿ ಹೊಡೆದರು. ॥೬೬೧-೬೬೨॥

ದೇವಿ, ಅನಂತರ ಕಾದ ಎಣ್ಣೆಯ ಕೊಪ್ಪರಿಗೆಗಳಲ್ಲಿಯೂ ಆಮೇಲೆ ಉರಿಯುತ್ತಿರುವ ಬೆಂಕಿಯ ಕುಂಡಗಳಲ್ಲಿಯೂ ತಳ್ಳಲ್ಪಟ್ಟು ಆ ಬ್ರಾಹ್ಮಣನು ಹೀಗೆ ತನ್ನ

ಯೇ ಕಾಶ್ಯಾಂ ಮಾಮನಭ್ಯರ್ಚ್ಯ ಸ್ಥಿತ್ವಾ ಕಾಶೀಬಹಿರ್ಮೃತಾಃ ।
ತೇಷಾಮಪಿ ಭವತ್ಯೇವಂ ಘೋರಾ ನರಕಯಾತನಾ ॥೬೬೫॥

ಯೇ ಕಾಶ್ಯಾಂ ಮತ್ಕಥಾಂ ತ್ಯಕ್ತ್ವಾ ಸ್ಥಿತ್ವಾ ಕಾಶೀಬಹಿರ್ಮೃತಾಃ ।
ತೇಷಾಮಪಿ ಭವತ್ಯೇವಂ ಘೋರಾ ನರಕಯಾತನಾ ॥೬೬೬॥

ಕಾಶ್ಯಾಮನ್ಯತ್ರ ವಾ ಯೇ ತು ಭಕ್ತ್ಯಾ ನಾರಾಧಯಂತಿ ಮಾಂ ।
ತೇಷಾಮಪಿ ಭವತ್ಯೇವಂ ಘೋರಾ ನರಕಯಾತನಾ ॥೬೬೭॥

ವಿಭೂತಿಧಾರಣಾದೀನಿ ತ್ಯಕ್ತ್ವಾ ತಿಷ್ಠಂತಿ ಯೇ ನರಾಃ ।
ತೇಷಾಮಪಿ ಭವತ್ಯೇವಂ ಘೋರಾ ನರಕಯಾತನಾ ॥೬೬೮॥

ಸೋಮವಾರವ್ರತಂ ಶೈವಂ ನ ಕರಿಷ್ಯಂತಿ ಯೇ ಜಡಾಃ ।
ತೇಷಾಮಪಿ ಭವತ್ಯೇವಂ ಘೋರಾ ನರಕಯಾತನಾ ॥೬೬೯॥

ಏವಂ ಯಮಭಟೈಃ ಕ್ರೂರೈಃ ಶಾಸ್ಯಮಾನಂ ದ್ವಿಜಾಧಮಂ ।
ತಂ ದೃಷ್ಟ್ವಾ ಪ್ರಾಹ ವಚನಂ ಶಚೀಪತಿರಕಲ್ಮಷಃ ॥೬೭೦॥

---

ಪಿತೃಗಳೊಡನೆ ಘೋರವಾದ ನರಕಯಾತನೆಗಳನ್ನನುಭವಿಸುತ್ತಾ ಪುನಃ ಬಿಡುಗಡೆ ಯಿಲ್ಲದಂತೆ ನರಕದಲ್ಲೇ ನರಳುತ್ತಿದ್ದನು. ॥೬೬೩-೬೬೪॥

ಆ ಕಾಶೀ ಪಟ್ಟಣದಲ್ಲಿ ನನ್ನನ್ನು ಪೂಜೆ ಮಾಡದೇ ಕಾಶಿಯ ಹೊರಗಡೆ ಮೃತರಾದವರೂ, ನನ್ನ ಕಥೆಯನ್ನು ಕೇಳದೇ ಕಾಶಿಯಲ್ಲೇ ವಾಸ ಮಾಡುತ್ತಿದ್ದು ಹೊರಗಡೆ ಪ್ರಾಣ ಬಿಟ್ಟವರೂ ಭಯಂಕರವಾದ ನರಕಯಾತನೆಗಳನ್ನು ಹೊಂದು ವರು. ॥೬೬೫-೬೬೬॥

ಕಾಶಿಯಲ್ಲಾಗಲೀ ಹೊರಗಡೆಯಲ್ಲಿಯಾಗಲೀ ನನ್ನನ್ನು ಭಕ್ತಿಯಿಂದ ಪೂಜೆಮಾಡದವರೂ, ವಿಭೂತಿ, ರುದ್ರಾಕ್ಷ ಮುಂತಾದವುಗಳನ್ನು ಧರಿಸದೇ ಇರುವವರೂ ಸಹ ಭಯಂಕರವಾದ ಈ ಯಮಯಾತನೆಗಳಿಗೆ ಭಾಗಿಗಳಾಗುವರು. ॥೬೬೭-೬೬೮॥

ಶಿವನಿಗೆ ತುಂಬಾ ಪ್ರೀತಿಕರವೆನಿಸಿರುವ ಸೋಮವಾರ ವ್ರತವನ್ನು ಮಾಡ ದಿರುವ ಮೂರ್ಖರಿಗೂ ಈ ರೀತಿ ಭಯಂಕರವಾದ ನರಕಯಾತನೆಗಳು ಖಂಡಿತ ಉಂಟಾಗುವುವು. ಹೀಗೆ ಕ್ರೂರವಾದ ಯಮಭಟರು ಶಿಕ್ಷೆಮಾಡುತ್ತಿರುವ ಬ್ರಾಹ್ಮಣಾ

|| ಇಂದ್ರ ಉವಾಚ ||

ಯಮೇದಮೇವ ತೇ ಕಾರ್ಯಮನ್ಯತ್ಕಾರ್ಯಂ ನ ಕಿಂಚನ ।
ಕಾರ್ಯಾಂತರಂ ಯದಿ ಭವೇತ್ತದ್ವದಸ್ವ ಮಮಾಧುನಾ ||೬೭೧||

|| ಯಮ ಉವಾಚ ||

ಅಶೈವಶಿಕ್ಷಣಾದನ್ಯದತ್ರ ನಾಸ್ತಿ ಪ್ರಯೋಜನಂ ।
ಅಶೈವಾನ್ಪತಿತಾನ್ಪಶ್ಯ ನರಕೇಷು ಯಥಾಕ್ರಮಂ ||೬೭೨||

ಯಾವದ್ದುಃಖಮಿಹ ಪ್ರಾಪ್ಯಮನುದ್ಧೂಳಿತಭಸ್ಮನಾ ।
ತಾವದ್ದುಃಖಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಲಭ್ಯತೇ ||೬೭೩||

ಯಾವದ್ದುಃಖಮಿಹ ಪ್ರಾಪ್ಯಂ ತ್ಯಕ್ತಭಸ್ಮತ್ರಿಪುಂಡ್ರಕೈಃ ।
ತಾವದ್ದುಃಖಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಜಾಯತೇ ||೬೭೪||

ಯಾವದ್ದುಃಖಮಿಹ ಪ್ರಾಪ್ಯಂ ತ್ಯಕ್ತರುದ್ರಾಕ್ಷಧಾರಣೈಃ ।
ತಾವದ್ದುಃಖಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಜಾಯತೇ ||೬೭೫||

---

ಯಮನನ್ನು ನೋಡಿ ಶಚೀಪತಿಯಾದ ಆ ದೇವೇಂದ್ರನು ಕಲ್ಮಷರಹಿತವಾದ ಮನಸ್ಸಿನಿಂದ ಯಮನೊಡನೆ ಹೀಗೆ ಮಾತನಾಡಿದನು. ||೬೬೯-೬೭೦||

ಅಯ್ಯ ಯಮನೇ, ನಿನಗೆ ಇದೊಂದೇ ಕೆಲಸವೋ ಅಥವಾ ಬೇರೆ ಯಾವುದಾದರೂ ಕಾರ್ಯವಿರುವುದೋ? ಹಾಗೆ ಒಂದುವೇಳೆ ಇದ್ದರೆ ಅದಾವುದೆಂಬುದನ್ನು ನನಗೆ ಈಗ ಹೇಳೆಂದು ಇಂದ್ರನು ಯಮನನ್ನು ಪ್ರಶ್ನೆ ಮಾಡಿದನು. ||೬೭೧||

ಆಗ ಯಮನು ಇಂದ್ರನನ್ನು ಕುರಿತು, ಅಯ್ಯ ಶಚೀಪತೇ, ನನಗೆ ಶಿವದ್ರೋಹಿಗಳನ್ನು ಶಿಕ್ಷಿಸುವುದನ್ನು ಬಿಟ್ಟು ಬೇರೆ ಯಾವ ವಿಧವಾದ ಇತರ ಕಾರ್ಯಗಳೂ ಇಲ್ಲಿಲ್ಲ. ಶಿವದ್ರೋಹಿಗಳೆಲ್ಲಾ ಕ್ರಮವಾಗಿ ನರಕಗಳಲ್ಲಿ ಬಿದ್ದಿರುವುದನ್ನು ನೋಡು! ಭಸ್ಮವನ್ನು ಲೇಪನಮಾಡಿಕೊಳ್ಳದೇ ಇರುವುದರಿಂದ ಬರುವಷ್ಟು ದುಃಖವು ಕೋಟ್ಯಂತರ ಬ್ರಹ್ಮಹತ್ಯೆಗಳಿಂದಲೂ ಸಹ ಬರಲಾರದೆಂದು ತಿಳಿ. ||೬೭೨-೬೭೩||

ಭಸ್ಮತ್ರಿಪುಂಡ್ರಗಳನ್ನಲಂಕರಿಸದೇ ರುದ್ರಾಕ್ಷಗಳನ್ನು ಧರಿಸುವುದನ್ನೂ ಬಿಟ್ಟಿರುವುದರಿಂದ ಬರುವಷ್ಟು ದುಃಖವು ಕೋಟ್ಯಂತರ ಬ್ರಹ್ಮಹತ್ಯೆಗಳಿಂದಲೂ ಬರಲಾರದೆಂದು ತಿಳಿ. ||೬೭೪-೬೭೫||

ಯಾವದ್ದುಃಖಮಿಹ ಪ್ರಾಪ್ಯಂ ತ್ಯಕ್ತಶಂಕರಪೂಜನೈಃ ।
ತಾವದ್ದುಃಖಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಜಾಯತೇ ॥೬೭೬॥

ಯಾವದ್ದುಃಖಮಿಹ ಪ್ರಾಪ್ಯಂ ಶಿವಾನುತ್ಕರ್ಷವಾದಿಭಿಃ ।
ತಾವದ್ದುಃಖಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಜಾಯತೇ ॥೬೭೭॥

ಯಾವದ್ದುಃಖಮಿಹ ಪ್ರಾಪ್ಯಂ ಶೈವದುಃಖಪ್ರದೈರ್ನರೈಃ ।
ತಾವದ್ದುಃಖಂ ಬ್ರಹ್ಮಹತ್ಯಾಕೋಟಿಭಿಶ್ಚ ನ ಜಾಯತೇ ॥೬೭೮॥

ತ್ರಿಪುಂಡ್ರೋದ್ಧೂಳನಾದೀನಿ ನ ಕರಿಷ್ಯಂತಿ ಯೇ ದ್ವಿಜಾಃ ।
ತೇಷಾಮಘೋರನರಕೇಷ್ವಶೇಷೇಷ್ವಹಂ ಸ್ಥಿತಿಃ ॥೬೭೯॥

ಇದಂ ವಿಚಾರ್ಯ ಬಹವಃ ಕುರ್ವಂತ್ಯುದ್ಧೂಳನಾದಿಕಂ ।
ಉದ್ಧೂಳನಾದಿ ಸಂಸಕ್ತಾ ನ ಪಶ್ಯಂತ್ಯೇವ ಯಾತನಾಂ ॥೬೮೦॥

ಯಸ್ಯ ಭಾಲಂ ಮಹದ್ಭಾಗ್ಯಾದ್ಭಸ್ಮರೇಖಾವಿರಾಜಿತಂ ।
ಸ ಘೋರತರಸಂಸಾರಂ ತದಿಷ್ಯತ್ಯೇವ ಸರ್ವಥಾ ॥೬೮೧॥

---

ಶಿವಪೂಜೆಯನ್ನು ಮಾಡದವರೂ, ಶಿವನು ಉತ್ಕೃಷ್ಟನೆಂದು ಹೇಳದವರೂ ಶಿವಭಕ್ತರಿಗೆ ತುಂಬಾ ದುಃಖವನ್ನುಂಟುಮಾಡುವವರೂ ಅನುಭವಿಸುವಷ್ಟು ದುಃಖವು ಕೋಟ್ಯಂತರ ಬ್ರಹ್ಮಹತ್ಯೆಗಳನ್ನೇ ಮಾಡಿದಾಗ್ಯೂ ಉಂಟಾಗಲಾರದು. ॥೬೭೬-೬೭೭-೬೭೮॥

ಭಸ್ಮತ್ರಿಪುಂಡ್ರಧಾರಣ, ಭಸ್ಮೋದ್ಧೂಳನ ಮುಂತಾದ ಶೈವಕರ್ಮಗಳನ್ನಾಚರಿಸದ ಬ್ರಾಹ್ಮಣರಿಗೆ ಈ ಭಯಂಕರವಾದ ನರಕಗಳಲ್ಲಿ ಪ್ರತಿದಿನವೂ ವಾಸವೇರ್ಪಟ್ಟಿರುವುದು. ಇದನ್ನು ಚೆನ್ನಾಗಿ ಆಲೋಚಿಸಿ ಅನೇಕರು ಭಸ್ಮೋದ್ಧೂಳನಾದಿಗಳನ್ನು ತಪ್ಪದೇ ಮಾಡುತ್ತಿರುವರು. ಭಸ್ಮಲೇಪನ, ಭಸ್ಮತ್ರಿಪುಂಡ್ರಧಾರಣ ಮುಂತಾದವುಗಳಲ್ಲಿ ಆಸಕ್ತರಾಗಿರುವರು, ಈ ನರಕಯಾತನೆಗಳನ್ನು ಎಂದಿಗೂ ಅನುಭವಿಸಲಾರರು. ॥೬೭೯-೬೮೦॥

ಅದೃಷ್ಟವಶದಿಂದ ವಿಭೂತಿರೇಖೆಗಳು ಹಣೆಯಲ್ಲಿ ಪ್ರಕಾಶಿಸುತ್ತಿದ್ದರೆ ಆತನು ಅತ್ಯಂತ ಭಯಂಕರವಾದ ಸಂಸಾರವನ್ನು ಖಂಡಿತವಾಗಿಯೂ ದಾಟಿಯೇ

ಮುಕ್ತಿಕಾರಣಮಿತ್ಯಾಹುಃ ಕೇವಲಂ ಭಸ್ಮಧಾರಣಂ ।
ತತ್ರಾಪಿ ಶಿವಭಕ್ತಿಶ್ಚೇತ್ಕಿಂ ವಕ್ತವ್ಯಮತಃ ಪರಂ ॥೬೮೩॥

ಭಾಗ್ಯೇನ ಭೂಷಿತಂ ಭೂಯಾದ್ಭಾಲಂ ಕೇವಲಭಸ್ಮನಾ ।
ತಸ್ಮಾನುಮೀಯತೇ ಭಾಗ್ಯಂ ಭಾಲಭಾಸಿತಭಸ್ಮನಾ ॥೬೮೪॥

ಕಿಮತ್ರ ಬಹುನೋಕ್ತೇನ ಸಾರಮೇಕಂ ವಚಃ ಶೃಣು ।
ಅಶೈವದುಃಖದಾನಾರ್ಥಂ ಶಿವೇನ ಪ್ರೇರಿತೋಽಸ್ಮ್ಯಹಂ ॥೬೮೫॥

ವೈಕುಂಠಸತ್ಯಸ್ವರ್ಗೇಭ್ಯೋಽಪ್ಯಶೈವಾನಾನಯಾಮ್ಯಹಂ ।
ಪಾತಯಾಮಿ ಪ್ರಯತ್ನೇನ ನರಕೇಷು ಯಥೇಚ್ಛಯಾ ॥೬೮೬॥

ಭೂಪಾತಾಲಕಲಾದಿಭ್ಯೋಽಪ್ಯಶೈವಾನಾನಯಾಮ್ಯಹಂ ।
ಪಾತಯಾಮಿ ಪ್ರಯತ್ನೇನ ನರಕೇಷು ಯಥೇಚ್ಛಯಾ ॥೬೮೭॥

ಶ್ವೇತದ್ವೀಪಾದಪಿ ಸ್ವೇಚ್ಛಾದಶೈವಾನಾನಯಾಮ್ಯಹಂ ।
ಪಾತಯಾಮಿ ಪ್ರಯತ್ನೇನ ನರಕೇಷು ಯಥೇಚ್ಛಯಾ ॥೬೮೮॥

---

ತೀರುವನು. ಭಸ್ಮಧಾರಣವೊಂದೇ ಮೋಕ್ಷಕಾರಣವೆಂದು ಹೇಳುತ್ತಿರುವಾಗ ಅದರಲ್ಲಿಯೂ ಆ ಶಿವನಲ್ಲಿ ಭಕ್ತಿಯೂ ಇದ್ದರೆ ಹೇಳಬೇಕಾದ್ದೇನು! ॥೬೮೧-೬೮೩॥

ಹಣೆಯಲ್ಲಿ ಭಸ್ಮವು ಅಲಂಕರಿಸಲ್ಪಡಬೇಕಾದರೆ ಭಾಗ್ಯವಶದಿಂದ ಮಾತ್ರ ಸಾಧ್ಯವಾದೀತು. ಆದ್ದರಿಂದ ಮನುಷ್ಯರ ಹಣೆಯಲ್ಲಿ ಪ್ರಕಾಶಿಸುತ್ತಿರುವ ವಿಭೂತಿ ರೇಖೆಯನ್ನು ನೋಡಿ ಅವನವನ ಭಾಗ್ಯವು ಊಹಿಸಲ್ಪಡುತ್ತದೆ. ಅಯ್ಯ ದೇವೇಂದ್ರನೇ, ಹೆಚ್ಚು ಮಾತಿನಿಂದೇನು ಪ್ರಯೋಜನ? ಶಿವದ್ರೋಹಿಗಳಿಗೆ ದುಃಖವನ್ನುಂಟುಮಾಡುವುದಕ್ಕಾಗಿಯೇ ನಾನು ಆ ಶಂಕರನಿಂದ ನಿಯಮಿಸಲ್ಪಟ್ಟಿದ್ದೇನೆಂದು ತಿಳಿ.. ॥೬೮೪-೬೮೫॥

ವೈಕುಂಠ, ಸತ್ಯಲೋಕ, ಭೂಲೋಕ ಮತ್ತು ಪಾತಾಲ ಮುಂತಾದ ಲೋಕಗಳಿಂದಲೂ ಶಿವದ್ರೋಹಿಗಳನ್ನು ಬಲಾತ್ಕಾರವಾಗಿ ಎಳೆತಂದು ನನ್ನ ಮನಸ್ಸು ತೋರಿದಂತೆ ನರಕಗಳಲ್ಲಿ ನಾನು ತಳ್ಳುತ್ತೇನೆ. ॥೬೮೬-೬೮೭॥

ಶ್ವೇತದ್ವೀಪ, ಕ್ಷೀರಸಮುದ್ರ ಮುಂತಾದ ದ್ವೀಪಗಳಿಂದಲೂ ಸಮುದ್ರ

ಕ್ಷೀರಾಬ್ಧಿಪ್ರಮುಖಾದಿಭ್ಯೋಽಪ್ಯಶೈವಾನಾನಯಾಮ್ಯಹಂ ।
ಪಾತಯಾಮಿ ಪ್ರಯತ್ನೇನ ನರಕೇಷು ಯಥೇಚ್ಛಯಾ ॥೬೮॥

ಹಿಮವತ್ಪರ್ವತಾದಿಭ್ಯೋಽಪ್ಯಶೈವಾನಾನಯಾಮ್ಯಹಂ ।
ಪಾತಯಾಮಿ ಪ್ರಯತ್ನೇನ ನರಕೇಷು ಯಥೇಚ್ಛಯಾ ॥೬೯॥

ಅಶೈವೇಷು ಮುಕುಂದೋಽಪಿ ಪಕ್ಷಪಾತೀ ಭವೇದ್ಯದಿ ।
ಮುಕುಂದಮಪಿ ಘೋರೇಽಸ್ಮಿನ್ನರಕೇ ಪಾತಯಾಮ್ಯಹಂ ॥೭೦॥

ಅಶೈವಜನತೂಲಾದ್ರೇಃ ಪ್ರಲಯಾಗ್ನಿರಹಂ ಯಮಃ ।
ಮತ್ಕೋಪಾನಲದಗ್ಧಾಂಗಾನಶೈವಾನ್ಪಶ್ಯ ಸಾದರಂ ॥೭೧॥

ಮತ್ಕೃತಾ ಯಾತನಾ ಸಹ್ಯಾ ನ ಭವಿಷ್ಯತಿ ಸರ್ವಥಾ ।
ಅಶೈವೇಷು ಕೃಪಾಲೇಶೋಽಸ್ಯ ಮೇ ನ ಭವಿಷ್ಯತಿ ॥೭೨॥

ಅಶೈವಮಾತ್ರದಾಹಾರ್ಥಂ ಸೃಷ್ಟೋಽಹಮತ ಏವ ಮಾಂ ।
ಅಶೈವದಾಹಕಃ ಕಾಲೋ ಯಮ ಇತ್ಯಾಹುರಾಸ್ತಿಕಾಃ ॥೭೩॥

---

ಗಳಿಂದಲೂ, ಸ್ವೇಚ್ಛೆಯಿಂದ ಶಿವದ್ರೋಹಿಗಳನ್ನೆಳತಂದು ನರಕಗಳಲ್ಲಿ ನನ್ನ ಮನಸ್ಸಿಗೆ ತೋರಿದಂತೆ ತಳ್ಳಿಸುವೆನು. ॥೬೭-೬೮॥

ಹಿಮಾಲಯ ಮುಂತಾದ ಪರ್ವತಗಳಿಂದಲೂ ಶಿವದ್ರೋಹಿಗಳನ್ನೆಳತಂದು ಬಲಾತ್ಕಾರವಾಗಿ ಅವರನ್ನು ಸ್ವೇಚ್ಛೆಯಿಂದ ನರಕಗಳಲ್ಲಿ ಹಾಕುವೆನು. ಶಿವದ್ರೋಹಿಗಳಲ್ಲಿ ಆ ಮಹಾವಿಷ್ಣುವೇ ತಪ್ಪಿತಸ್ಥನಾದರೂ ಅವನನ್ನೇ ಘೋರವಾದ ಈ ನರಕದಲ್ಲಿ ನಾನು ತಳ್ಳಿಬಿಡುತ್ತೇನೆಂದು ತಿಳಿ. ॥೬೯-೭೦॥

ಶಿವದ್ರೋಹಿಗಳೆನಿಸಿರುವ ಜನಗಳೆಂಬ ಹತ್ತಿಯ ಪರ್ವತಕ್ಕೆ ಯಮನೆನಿಸಿರುವ ನಾನು ಪ್ರಳಯಕಾಲದ ಅಗ್ನಿಯಂತಿರುವೆನು. ನನ್ನ ಕೋಪಾಗ್ನಿಯಿಂದ ಸುಟ್ಟ ಅವಯವವುಳ್ಳ ಈ ಶಿವದ್ರೋಹಿಗಳನ್ನು ಆದರದಿಂದ ನೋಡು. ನಾನು ಕೊಡುವ ಯಾತನೆಗಳು ನಿಶ್ಚಯವಾಗಿಯೂ ಸಹಿಸಲಸಾಧ್ಯವಾಗಿರುವುವು. ಆ ಶಿವದ್ರೋಹಿಗಳ ವಿಷಯದಲ್ಲಿ ಈ ನನಗೆ ಕೊಂಚವೂ ದಯೆಯೇ ಉಂಟಾಗುವುದಿಲ್ಲ. ॥೭೧-೭೨॥

ನಾನು ಆ ಶಿವದ್ರೋಹಿಗಳನ್ನು ಮಾತ್ರ ಸುಡಲು ಸೃಷ್ಟಿಮಾಡಲ್ಪಟ್ಟಿರುವೆನಾದ್ದರಿಂದ ನನ್ನನ್ನು ಆಸ್ತಿಕ ಜನರು ಕಾಲಸ್ವರೂಪನಾದ ಈ ಯಮನು ಶಿವ

ಅಶೈವಾಃ ಸಂತಿ ಯಾವಂತಸ್ತಾವಂತಃ ಶತ್ರವೋ ಮಮ ।
ಅತ ಏವ ಹಿ ಘೋರೇಷು ತಿಷ್ಠಂತಿ ನರಕೇಷು ತೇ ॥೬೯೪॥

ಅತ ಏವ ಶಚೀನಾಥ ಯದಿ ತೇ ನರಕಾದ್ಭಯಂ ।
ತದಾ ಭಜಸ್ವ ಸತತಂ ದೇವದೇವೋತ್ತಮಂ ಶಿವಂ ॥೬೯೫॥

ಇದಂ ಮತ್ವೈವ ಸತತಂ ವಿಷ್ಣುಃ ಶಂಕರಪೂಜನಂ ।
ಕರೋತಿ ಸಾವಧಾನೇನ ಬಿಲ್ವಪತ್ರಾದಿಸಾಧನೈಃ ॥೬೯೬॥

ಬ್ರಹ್ಮಾಪಿ ಪ್ರತ್ಯಹಂ ಸಾಂಬಂ ಶಿವಂ ಲಿಂಗಸ್ವರೂಪಿಣಂ ।
ಪೂಜಯತ್ಯತಿಯತ್ನೇನ ಯಾತನಾಭೀರುರಾದರಾತ್ ॥೬೯೭॥

ಕಶ್ಯಪಾತ್ರಿವಸಿಷ್ಠಾದ್ಯಾ ಋಷಯಃ ಶೈವಪುಂಗವಾಃ ।
ಪೂಜಯಂತಿ ಮಹಾದೇವಂ ಸಾವಧಾನೇನ ಸರ್ವದಾ ॥೬೯೮॥

---

ದ್ರೋಹಿಗಳನ್ನು ಸುಟ್ಟುಹಾಕುವನೆಂದು ಹೇಳುವರು. ಶಿವದ್ರೋಹಿಗಳಾಗಿರುವಷ್ಟು ಮಂದಿಯೂ ನನಗೆ ಶತ್ರುಗಳೇ ಆಗಿರುವರು. ಆದರಿಂದಲೇ ಅವರೆಲ್ಲರೂ ಘೋರವಾದ ನರಕಗಳಲ್ಲಿ ಬಿದ್ದು ನರಳುವರೆಂದು ನಂಬು. ॥೬೯೩-೬೯೪॥

ಅಯ್ಯ ಶಚೀಕಾಂತನಾದ ದೇವೇಂದ್ರನೇ, ಆದ್ದರಿಂದಲೇ ನಿನಗೂ ಒಂದು ವೇಳೆ ಈ ನರಕದಿಂದ ಭಯವುಂಟಾಗುವುದಾದರೆ ಯಾವಾಗಲೂ ದೇವದೇವೋತ್ತಮನಾದ ಆ ಶಿವನನ್ನು ಸೇವಿಸು. ಇದನ್ನು ತಿಳಿದೇ ಆ ವಿಷ್ಣುವು ಯಾವಾಗಲೂ ಬಿಲ್ವಪತ್ರೆ, ಹೂ ಮುಂತಾದ ಪೂಜಾಸಾಧನಗಳನ್ನು ಸಂಗ್ರಹಿಸಿ ಸಾವಧಾನ ಮನಸ್ಸುಳ್ಳವನಾಗಿ ಆ ಶಂಕರನನ್ನು ಭಕ್ತಿಯಿಂದ ಪೂಜೆಮಾಡುತ್ತಿರುವನು. ॥೬೯೫-೬೯೬॥

ಈ ನರಕಯಾತನೆಗಳಲ್ಲಿ ಭಯಗೊಂಡು ಆ ಬ್ರಹ್ಮನೂ ಆದರದಿಂದ ಪ್ರತಿನಿತ್ಯವೂ ವಿಶೇಷ ನಿಯಮದಿಂದ ಲಿಂಗಸ್ವರೂಪಿಯೂ ಅಂಬಿಕಾ ಸಮೇತನೂ ಆದ ಆ ಶಿವನನ್ನು ಪೂಜೆ ಮಾಡುತ್ತಿರುವನು. ಕಶ್ಯಪ, ಅತ್ರಿ, ವಸಿಷ್ಠ ಮುಂತಾದ ಋಷಿಗಳೆಲ್ಲರೂ ಇತರ ಶಿವಭಕ್ತಾಗ್ರಣಿಗಳೂ ಕೂಡ ಯಾವಾಗಲೂ ಸಾವಧಾನಚಿತ್ತದಿಂದ ಮಹಾದೇವನನ್ನು ಪೂಜೆ ಮಾಡುತ್ತಿರುವರು. ॥೬೯೭-೬೯೮॥

ಗಂಧರ್ವೋರಗಯಕ್ಷಾದ್ಯಾಃ ಸರ್ವೇಽಪಿ ಗಿರಿಜಾಪತಿಂ ।
ಪೂಜಯಂತಿ ಪ್ರಯತ್ನೇನ ಪ್ರತ್ಯಹಂ ವಿಧಿಪೂರ್ವಕಂ ॥೧೯೯॥

॥ ಶ್ರೀ ಶಿವ ಉವಾಚ ॥

ಇತ್ಯುಕ್ತಃ ಸ ಶಚೀನಾಥೋ ಯಮಂ ಸಂಪೂಜ್ಯ ಸಾದರಂ ।
ಯಮಾಜ್ಞಯಾ ಸ್ವರ್ಗಲೋಕಂ ಸ ಗುರುಃ ಸಾನುಗೋ ಯಯೌ ॥೨೦೦॥

ಯಮೋಕ್ತಂ ಪ್ರತಿಸಂಧಾಯ ವಿಸ್ಮಿತಃ ಸ ಶಚೀಪತಿಃ ।
ತದಾ ಪ್ರಭೃತಿ ಯತ್ನೇನ ಶಿವಪೂಜಾಪರೋಽಭವತ್ ॥೨೦೧॥

ಬೃಹಸ್ಪತಿಶ್ಚ ಯತ್ನೇನ ಶಿವಲಿಂಗಸ್ವರೂಪಿಣಂ ।
ಮಾಮರ್ಚಯತ್ಯಹರಹರ್ಬಿಲ್ವಪತ್ರಾದಿಸಾಧನೈಃ ॥೨೦೨॥

ಪುರಾ ವಿಪ್ರಸತೀ ಕಾಚಿದಾರ್ಯಾವರ್ತೇ ಸ್ಥಿತಾ ನಿಶಿ ।
ಕಾಮಾತುರಂ ಪತಿಂ ಪ್ರಾಹ ಸ್ವಯಂ ಮತ್ಪೂಜನೇ ರತಾ ॥೨೦೩॥

---

ಗಂಧರ್ವರೂ, ನಾಗರೂ, ಯಕ್ಷರೇ ಮುಂತಾದವರೆಲ್ಲರೂ ಆ ಗಿರಿಜಾರಮಣನನ್ನು ತುಂಬಾ ನಿಯಮದಿಂದ ಪ್ರತಿದಿನವೂ ವಿಧಿಪೂರ್ವಕವಾಗಿ ಪೂಜೆ ಮಾಡುತ್ತಿರುವರು. ॥೧೯೯॥

ಯಮನಿಂದ ಹೀಗೆ ಹೇಳಲ್ಪಟ್ಟ ಆ ಶಚೀಪತಿಯಾದ ದೇವೇಂದ್ರನು ಆಗ ಯಮನನ್ನು ಆದರದಿಂದ ಪೂಜೆಮಾಡಿ, ಅವನ ಅಪ್ಪಣೆ ಪಡೆದು ಬೃಹಸ್ಪತ್ಯಾಚಾರ್ಯರ ಜತೆಯಲ್ಲಿಯೂ ತನ್ನ ಪರಿವಾರದೊಡನೆಯೂ ಸ್ವರ್ಗಲೋಕಕ್ಕೆ ತೆರಳಿದನು. ॥೨೦೦॥

ಯಮನು ಹೇಳಿದುದನ್ನು ಮನಸ್ಸಿನಲ್ಲಿ ಯೋಚಿಸಿಕೊಂಡು ಆಶ್ಚರ್ಯಯುಕ್ತನಾದ ಆ ಇಂದ್ರನು ಅದುಮೊದಲುಗೊಂಡು ಶಿವಪೂಜಾ ತತ್ಪರನಾದನು. ಬೃಹಸ್ಪತ್ಯಾಚಾರ್ಯನೂ ಸಹ ಶಿವಲಿಂಗರೂಪಿಯಾಗಿರುವ ನನ್ನನ್ನು ಬಿಲ್ವಪತ್ರೆ ಮುಂತಾದ ಸಲಕರಣೆಗಳಿಂದ ಯಾವಾಗಲೂ ನಿಯಮದಿಂದ ಪೂಜೆ ಮಾಡುತ್ತಿರುವನು. ॥೨೦೧-೨೦೨॥

ಹಿಂದೆ ಈ ಆರ್ಯಾವರ್ತದಲ್ಲಿದ್ದ ಒಬ್ಬ ಬ್ರಾಹ್ಮಣನ ಪತ್ನಿಯು ರಾತ್ರಿಯಲ್ಲಿ ಕಾಮಾತುರನಾಗಿರುವ ತನ್ನ ಗಂಡನನ್ನು ಕುರಿತು ಸ್ವತಃ ತಾನು ನನ್ನ ಪೂಜೆಯಲ್ಲಿ ತತ್ಪರಳಾಗಿದ್ದಾಗ ಇಂತೆಂದಳು. ॥೨೦೩॥

॥ ವಿಪ್ರಪತ್ನ್ಯುವಾಚ ॥

ಬಾಲ್ಯೇ ನಾರಾಧಿತಃ ಶಂಭುರಜ್ಞಾನೇನ ತ್ವಯಾಽಧುನಾ ।
ಕಾಮಾತುರೇಣ ನಾರಾಧಿ ಭಗವಾನ್ ಗಿರಿಜಾಪತಿಃ ॥೨೦೪॥

ಅಧುನಾಂಗಾನಿ ಸರ್ವಾಣಿ ತಿಷ್ಠಂತ್ಯತಿಪಟೂನಿ ತೇ ।
ಅದ್ಯ ಚೇನ್ನಾರ್ಚಿತಃ ಶಂಭುರರ್ಚನೀಯಃ ಕದಾ ತ್ವಯಾ ॥೨೦೫॥

ಗತ್ವಾರಣ್ಯೇ ಬಿಲ್ವಪತ್ರೈಃ ಕೋಮಲೈರ್ಬಹುಭಿರ್ನವೈಃ ।
ಕೃತ್ವಾ ಪಾರ್ಥಿವಲಿಂಗಾನಿ ಪೂಜಯಸ್ವ ಯಥಾವಿಧಿ ॥೨೦೬॥

ಕುಶಪುಷ್ಪೈಃ ಕಾಶಪುಷ್ಪೈಃ ಪಲಾಶಕುಸುಮೈರಪಿ ।
ಪೂಜಯಸ್ವ ಮಹಾದೇವಂ ಸ್ವರ್ಗಲೋಕಾಧಿಪತ್ಯದಂ ॥೨೦೭॥

ನೀಲೋತ್ಪಲಕೃತಾಂ ಮಾಲಾಂ ಕೃತ್ವಾ ಯತ್ನಪುರಃಸರಂ ।
ಲಿಂಗರೂಪಾಯ ಸಾಂಬಾಯ ಮಹೇಶಾಯ ಸಮರ್ಪಯ ॥೨೦೮॥

ನವಬಿಲ್ವಕುಶಾಂ ಮಾಲಾಂ ತಥಾ ಧತ್ತೂರಮಾಲಿಕಾಂ ।
ಲಿಂಗರೂಪಾಯ ಸಾಂಬಾಯ ಮಹೇಶಾಯ ಸಮರ್ಪಯಃ ॥೨೦೯॥

---

ಸ್ವಾಮಿ, ನೀನು ಅಜ್ಞಾನವಶದಿಂದ ಬಾಲ್ಯಾವಸ್ಥೆಯಲ್ಲಿ ಆ ಶಂಭುವನ್ನು ಪೂಜೆ ಮಾಡಲಿಲ್ಲ. ಪ್ರಾಯ ಬಂದಿರುವ ಈ ಯೌವನಾವಸ್ಥೆಯಲ್ಲಿಯೂ ಕಾಮಾತುರನಾಗಿ ಭಗವಂತನಾದ ಆ ಗಿರಿಜಾರಮಣನನ್ನು ಪೂಜೆ ಮಾಡಲಿಲ್ಲ. ಈಗಲೂ ನಿನ್ನ ಅವಯವಗಳೆಲ್ಲಾ ಇನ್ನೂ ಪಟುವಾಗಿರುವುವು. ಈಗ ನೀನು ಶಂಭುವನ್ನು ಪೂಜೆ ಮಾಡದೇಹೋದರೆ ಮತ್ತಾವಾಗತಾನೇ ಆ ದೇವದೇವನನ್ನು ಪೂಜೆಮಾಡುತ್ತೀಯೆ? ॥೨೦೪-೨೦೫॥

ಕಾಡಿಗೆ ಹೋಗಿ ಕೋಮಲವಾಗಿರುವ ಅನೇಕ ಬಿಲ್ವಪತ್ರೆಗಳನ್ನು ತಂದು ಮಣ್ಣಿನಿಂದ ಶಿವಲಿಂಗಗಳನ್ನು ಮಾಡಿ ಆ ಮಹಾದೇವನನ್ನು ವಿಧಿಪೂರ್ವಕವಾಗಿ ಆವಾಹಿಸಿ ಪೂಜೆಮಾಡು. ದರ್ಭೆ, ಹೂವು, ಕಾಶಪುಷ್ಪ, ಮುತ್ತುಗದ ಹೂ ಮುಂತಾದವುಗಳಿಂದ ಸ್ವರ್ಗಲೋಕ ಪದವಿಯನ್ನೇ ಕೊಡುವಂತಹ ಆ ಮಹಾದೇವನನ್ನು ಪೂಜೆಮಾಡು. ॥೨೦೬-೨೦೭॥

ಕನ್ನೈದಿಲೆ, ಹೊಸದಾದ ಬಿಲ್ವಪತ್ರೆ ಮತ್ತು ದತ್ತೂರೀಹೂ ಇವುಗಳನ್ನು

ಪುಣ್ಯೋ ವೈಶಾಖಮಾಸೋಽಯಮಸ್ಮಿನ್ಮಾಸ್ಯರುಣೋದಯೇ ।
ಸ್ನಾತ್ವಾ ಪೂಜಯ ಗೌರೀಶಂ ಬಹುಭಿರ್ಬಿಲ್ವಪಲ್ಲವೈಃ ॥೨೧೦॥

ಅಸ್ಮಿನ್ಮಾಸಿ ಮಹೇಶಾಯ ಜಲಧಾರಾಂ ಪ್ರಕಲ್ಪಯ ।
ಶಿವಾಲಯಂ ಜಲೈಃ ಶುದ್ಧೈಃ ಪರಿಪೂರಯ ಸಾದರಂ ॥೨೧೧॥

ಚಂದನಂ ದೇಹಿ ದೇವಾಯ ಸಕರ್ಪೂರಂ ಸುಶೀತಲಂ ।
ತತೋ ನವ್ಯೈರ್ಬಿಲ್ವಪತ್ರೈಃ ಪೂಜಯಸ್ವ ಸದಾಶಿವಂ ॥೨೧೨॥

ಧೂಪಯಸ್ವ ಮಹಾದೇವಂ ಗುಗ್ಗುಲೇನ ಯಥಾವಿಧಿ ।
ದೀಪಯಸ್ವ ಮಹಾದೇವಂ ದೀಪೈಃ ಕರ್ಪೂರಸಂಭವೈಃ ॥೨೧೩॥

ದಧ್ಯನ್ನೇನ ಮಹೇಶಾಯ ನೈವೇದ್ಯಂ ಕಲ್ಪಯಾದರಾತ್ ।
ಪುನರ್ಧೂಪಾದಿಕಂ ಕೃತ್ವಾ ಚಾಮರೈರ್ವೀಜಯೇಶ್ವರಂ ॥೨೧೪॥

---

ತಂದು ಶ್ರದ್ಧೆಯಿಂದ ಮಾಲೆಮಾಡಿ ಶಿವಲಿಂಗಸ್ವರೂಪಿಯಾಗಿರುವ ಆ ಮಹೇಶ್ವರನಿಗೆ ಸಮರ್ಪಣೆಮಾಡು. ॥೨೦೮-೨೦೯॥

ಈಗ ಪುಣ್ಯಕರವಾಗಿರುವ ವೈಶಾಖಮಾಸವಾಗಿರುವುದು. ಈ ತಿಂಗಳು ಬೆಳಗ್ಗೆ ಅರುಣೋದಯ ಸಮಯದಲ್ಲಿ ಸ್ನಾನಮಾಡಿ, ನಾನಾವಿಧವಾದ ಬಿಲ್ವಪತ್ರೆಗಳಿಂದ ಆ ಗೌರೀರಮಣನನ್ನು ಪೂಜೆಮಾಡು. ಈ ತಿಂಗಳಿನಲ್ಲಿ ಮಹೇಶ್ವರನ ಮೇಲೆ ಶುದ್ಧವಾದ ನೀರಿನ ಧಾರೆಯು ಬೀಳುವಂತೆ ಮಾಡಿಸು. ಅಲ್ಲದೆ ಶಿವದೇವಾಲಯಗಳನ್ನೆಲ್ಲಾ ಶುದ್ಧವಾದ ನೀರಿನಿಂದ ಆದರಪೂರ್ವಕವಾಗಿ ತೊಳೆಸುವನಾಗು. ॥೨೧೦-೨೧೧॥

ಆ ಮಹಾದೇವನಿಗೆ ಅತ್ಯಂತ ತಣ್ಣಗಿರುವ ಕರ್ಪೂರಮಿಶ್ರಿತವಾದ ಚಂದನವನ್ನು ಸಮರ್ಪಿಸಿ, ಹೊಸ ಹೊಸ ಬಿಲ್ವದಳಗಳಿಂದ ಆ ಸದಾಶಿವನನ್ನು ಪೂಜೆಮಾಡು. ಆಮೇಲೆ ಮಹಾದೇವನಿಗೆ ವಿಧಿಪೂರ್ವಕವಾಗಿ ಗುಗ್ಗುಲದಿಂದ ಧೂಪಹಾಕಿ, ಕರ್ಪೂರದೀಪಗಳನ್ನು ನಿಯಮದಿಂದ ಹತ್ತಿಸುವವನಾಗು. ॥೨೧೨-೨೧೩॥

ಅದಾದಮೇಲೆ ಮೊಸರನ್ನವನ್ನು ಮಹೇಶ್ವರನಿಗೆ ಆದರಪೂರ್ವಕವಾಗಿ ನೈವೇದ್ಯ ಮಾಡಿ ಪುನಃ ಧೂಪದೀಪಾದಿಗಳನ್ನು ಸಮರ್ಪಿಸಿ ಅನಂತರ ಚಾಮರಗಳಿಂದ

ತತಃ ಶಿವಪ್ರಸಾದಾರ್ಥಂ ಶೈವಾನ್ಯತ್ನಪುರಃಸರಂ ।
ಭೋಜಯಸ್ವಾಜ್ಯಪಥ್ಯನ್ನೈರ್ಭಕ್ತಿಶ್ರದ್ಧಾಸಮನ್ವಿತಃ ॥೭೧೫॥

ಏವಮಾರಾಧಯಾರಾಧ್ಯಂ ಮಹಾದೇವಂ ಕೃಪಾನಿಧಿಂ ।
ಸುಪ್ರಸನ್ನೋ ಮಹಾದೇವೋ ಭುಕ್ತಿಂ ಮುಕ್ತಿಂ ಪ್ರಯಚ್ಛತಿ॥೭೧೬॥

ನ ಯೌವನಂ ಸ್ಥಿರಂ ವಿದ್ವನ್ನೈಶ್ವರ್ಯಮಪಿ ಚಂಚಲಂ ।
ಇದಮೇವ ವಿದಿತ್ವೈವ ಪೂಜಯಸ್ವ ಮಹೇಶ್ವರಂ ॥೭೧೭॥

ಅಧುನಾ ಯೌವನಾಂಧಸ್ಯ ತವ ದೇವೋತ್ತಮೇ ಶಿವೇ ।
ನೋದೇತಿ ಭಕ್ತಿರಮಲಾ ಭುಕ್ತಿಮುಕ್ತಿಫಲಪ್ರದಾ ॥೭೧೮॥

ಅಹೋ ಮೋಹಸ್ಯ ಮಾಹಾತ್ಮ್ಯಮೀದೃಶಂ ದುರತಿಕ್ರಮಂ ।
ಯೇನ ಮೋಹೇನ ವಿಶ್ವೇಶಪೂಜನಂ ವಿಸ್ಮೃತಂ ತ್ವಯಾ ॥೭೧೯॥

---

ಆ ಈಶ್ವರನನ್ನು ಬೇಸುವನಾಗು. ಅನಂತರ ಪರಶಿವನ ಅನುಗ್ರಹವನ್ನು ಸಂಪಾದಿಸುವುದಕ್ಕೋಸ್ಕರ ಶಿವಭಕ್ತರನ್ನು ಆಹ್ವಾನಿಸಿ ನಿಯಮದಿಂದ ಶ್ರದ್ಧಾಭಕ್ತಿಯುಳ್ಳವನಾಗಿ ಅವರಿಗೆ ಮೊಸರನ್ನದಿಂದ ಭೋಜನಮಾಡಿಸು. ॥೭೧೪-೭೧೫॥

ಪೂಜಾರ್ಹನೂ ದಯಾನಿಧಿಯೂ ಆದ ಆ ಮಹಾದೇವನನ್ನು ಹೀಗೆ ಪೂಜೆಮಾಡು! ಇದರಿಂದ ಆ ಮಹಾದೇವನು ಪ್ರಸನ್ನನಾಗಿ ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಶಾಶ್ವತವಾದ ಮೋಕ್ಷವನ್ನೂ ಕರುಣಿಸುವನು. ವಿದ್ವಾಂಸನಾದ ಸ್ವಾಮಿಯೇ! ಈ ಯುವ್ವನವೂ ಐಶ್ವರ್ಯವೂ ಎಂದಿಗೂ ಸ್ಥಿರವಲ್ಲ. ಎಲ್ಲಾ ಚಂಚಲವೆಂದು ತಿಳಿದು ಆ ಮಹೇಶ್ವರನನ್ನು ಭಕ್ತಿಯಿಂದ ಪೂಜೆಮಾಡು. ॥೭೧೬-೭೧೭॥

ಯೌವ್ವನಮದದಿಂದ ಕುರುಡನಾಗಿರುವ ನಿನಗೆ ಈಗ ಭೋಗಗಳೂ ಮೋಕ್ಷವೂ ಸಹ ದೊರೆಯುವಂತಹ ಆ ಪರಶಿವನ ಭಕ್ತಿಯುಂಟಾಗುತ್ತಿಲ್ಲ. ಅಯ್ಯೋ! ಯಾರಿಂದಲೂ ಮೀರಲಸಾಧ್ಯವಾದ ಆ ಮೋಹದ ಮಹಿಮೆಯೆಷ್ಟಿರುವುದು! ಈ ಮೋಹದ ಪ್ರಭಾವದಿಂದಲೇ ಆ ಜಗದೊಡೆಯನ ಪೂಜೆಯನ್ನೂ ಸಹ ನೀನು ಮರೆತಿರುವೆ. ॥೭೧೮-೭೧೯॥

ವಿಶ್ವೇಶಃ ಕರುಣಾಸಿಂಧುಃ ಸರ್ವದೇವಶಿಖಾಮಣಿಃ ।
ಯೇನ ನಾರಾಧ್ಯತೇ ನಿತ್ಯಂ ತಸ್ಯ ಜನ್ಮ ನಿರರ್ಥಕಂ ॥೭೨೦॥

ವಿಶ್ವೇಶಪೂಜನಂ ಕರ್ತುಂ ನಿರ್ಮಿತಂ ಯತ್ಕರದ್ವಯಂ ।
ತೇನ ಚೇನ್ನಾರ್ಚಿತಃ ಶಂಭುಸ್ತದ್ವ್ಯೃಥಾ ದಗ್ಧಕಾಷ್ಠವತ್ ॥೭೨೧॥

ವಿಶ್ವೇಶ ಪೂಜನಂ ದ್ರಷ್ಟುಂ ನಿರ್ಮಿತಂ ನಯನದ್ವಯಂ ।
ತೇನ ಚೇನ್ನೇಕ್ಷಿ ವಿಶ್ವೇಶಸ್ತದ್ವ್ಯೃಥಾ ನಯನದ್ವಯಂ ॥೭೨೨॥

ಶ್ರೋತ್ರೇ ಶಿವಕಥಾಂ ಶ್ರೋತುಂ ನಿರ್ಮಿತೇ ಸಾ ಕಥಾ ಮುದಾ ।
ತಾಭ್ಯಾಂ ಚೇನ್ನ ಶ್ರುತಾ ಶ್ರೋತ್ರೇ ವ್ಯರ್ಥೇ ನಾತ್ರಾಸ್ತಿಸಂಶಯಃ ॥೭೨೩॥

ಶಿವನಾಮಜಪಂ ಕರ್ತುಂ ಸೃಷ್ಟಾ ಜಿಹ್ವಾ ತಯಾ ಯದಿ ।
ಸ ಜಪ್ಯತೇ ಮನುಃ ಶೈವಃ ಸಾ ಜಿಹ್ವಾ ಚರ್ಮವದ್ವ್ಯೃಥಾ ॥೭೨೪॥

---

ದಯಾಸಮುದ್ರನೂ ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನೂ ಆಗಿರುವ ಆ ವಿಶ್ವೇಶ್ವರನನ್ನು ನಿತ್ಯವೂ ಪೂಜೆಮಾಡದಿರುವವನ ಜನ್ಮವು ಕೇವಲ ವ್ಯರ್ಥವೇ ಸರಿ. ॥೭೨೦॥

ವಿಶ್ವೇಶ್ವರಲಿಂಗದ ಪೂಜೆಯನ್ನು ಮಾಡುವುದಕ್ಕೋಸ್ಕರವೇ ನಿರ್ಮಿಸಲ್ಪಟ್ಟಿರುವ ಕೈಗಳೆರಡೂ ಆ ದೇವನನ್ನು ಪೂಜಿಸದಿದ್ದರೆ ಅವು ಕೇವಲ ಉರಿದ ಸೌದೆಯ ತುಂಡಿನಂತೆ ವ್ಯರ್ಥವೇ ಸರಿ. ಹಾಗೆಯೇ ವಿಶ್ವೇಶ್ವರನ ಪೂಜೆಯನ್ನು ನೋಡುವುದಕ್ಕೋಸ್ಕರವೇ ನಿರ್ಮಿಸಲ್ಪಟ್ಟಿರುವ ಈ ಕಣ್ಣುಗಳೆರಡೂ ತಮ್ಮ ಕೆಲಸವನ್ನು ಮಾಡದಿದ್ದರೆ ವ್ಯರ್ಥವೇ ಅಲ್ಲವೇ. ॥೭೨೧-೭೨೨॥

ಶಿವಕಥೆಗಳನ್ನು ಕೇಳುವುದಕ್ಕೋಸ್ಕರವೇ ಕಿವಿಗಳೂ, ಶಿವನಾಮಜಪಮಾಡುವುದಕ್ಕೋಸ್ಕರವೇ ನಾಲಿಗೆಯೂ ನಿರ್ಮಿಸಲ್ಪಟ್ಟಿರುವುದರಿಂದ ಅವು ಶಿವಕಥೆಗಳನ್ನೂ ಕೇಳದೇ, ಶಿವನಾಮಜಪವನ್ನೂ ಮಾಡದಿದ್ದರೆ ಕೇವಲ ಚರ್ಮದಂತೇ ವ್ಯರ್ಥವೇ ಎಂಬುದರಲ್ಲಿ ಸಂದೇಹವೇ ಇಲ್ಲ. ॥೭೨೩-೭೨೪॥

ಯೇನ ಚಿತ್ತೇನ ನ ಧ್ಯಾತೋ ಭಗವಾನ್ ಪಾರ್ವತೀಪತಿಃ ।
ತಚ್ಚಿತ್ತಂ ಪಿತ್ತವನ್ನಿತ್ಯಂ ನ ಬಾಧಯತಿ ಕಿಂ ವದ ॥೭೨೫॥

ದಂಡವತ್ಪ್ರಣಿಪತ್ಯೇಶಂ ಸ್ವತನುಂ ಸಾರ್ಥಕಾಂ ಕುರು ।
ಅನ್ಯಥಾ ತನುರೇಷಾ ತೇ ಸಂದಗ್ಧತನುವದ್ವ್ಯಥಾ ॥೭೨೬॥

ಪ್ರಣಮಂತಿ ಮಹಾದೇವಂ ದಂಡವಚ್ಚೇ ಯದಾ ತದಾ ।
ಪತಂತಿ ಪಾಪಗಿರಯೋ ವಜ್ರಸಂತಾಡಿತಾ ಇವ ॥೭೨೭॥

ನಿತ್ಯಂ ಶಿವಶಿವೇತ್ಯೇವ ಶಿವಂ ಯಜ ಶಿವಂ ಜಪ ।
ವಿಹಿತಂ ಯತ್ಕೃತಂ ಕರ್ಮ ತತ್ಕುರುಷ್ವ ಶಿವಾರ್ಪಣಂ ॥೭೨೮॥

ಪರಲೋಕಸ್ಯ ಪಾಥೇಯಂ ಮೋಕ್ಷೋಪಾಯಮನಾಮಯಂ ।
ಪುಣ್ಯಸಂಘೈಕನಿಲಯಂ ಶಿವ ಇತ್ಯಕ್ಷರದ್ವಯಂ ॥೭೨೯॥

---

ಭಗವಂತನಾದ ಪಾರ್ವತೀರಮಣನನ್ನು ಧ್ಯಾನಮಾಡದೇ ಇರುವ ಮನಸ್ಸು ಪಿತ್ತದಂತೆ ನಿತ್ಯವೂ ಬಾಧಿಸುವುದಿಲ್ಲವೇ! ನೀನೇ ಹೇಳು! ಈಶ್ವರನಿಗೆ ದಂಡ ಪ್ರಣಾಮಮಾಡಿ (ಕಡ್ಡಿಯಂತೆ ಉದ್ದಕ್ಕೆ ಅಡ್ಡಬಿದ್ದು) ನಿನ್ನ ಈ ಶರೀರವನ್ನು ಸಾರ್ಥಕಮಾಡಿಕೋ. ಇಲ್ಲದಿದ್ದರೆ ಈ ಶರೀರವು ಕೇವಲ ಉರಿದ ಕಟ್ಟಿಗೆಯಂತೆ ವ್ಯರ್ಥವಾಗುವುದು. ॥೭೨೫-೭೨೬॥

ಈ ಮಹಾದೇವನಿಗೆ ದಂಡದಂತೆ ಜನಗಳು ನಮಸ್ಕಾರಮಾಡಿದಾಗಲೆಲ್ಲಾ ಪಾಪಗಳೆಂಬ ಬೆಟ್ಟಗಳು ವಜ್ರಾಯುಧದಿಂದ ಹೊಡೆಯಲ್ಪಟ್ಟವುಗಳೋ ಎಂಬಂತೆ ಪುಡಿಯಾಗಿ ಬೀಳುವುವು. ಸ್ವಾಮಿಯೇ! ಪ್ರತಿದಿನವೂ ಶಿವ! ಶಿವ! ಎಂದು ಆ ಪರಶಿವನನ್ನೇ ಪೂಜಿಸುತ್ತಾ ಜಪಮಾಡು. ವಿಧಿಪೂರ್ವಕವಾಗಿ ನೀನು ಮಾಡಿದ ಕೆಲಸಗಳನ್ನೆಲ್ಲಾ ಆ ಶಿವನಿಗೆ ಸಮರ್ಪಣೆಮಾಡು. ॥೭೨೭-೭೨೮॥

ಈ 'ಶಿವ' ಎಂಬೆರಡಕ್ಷರಗಳು ಪರಲೋಕಕ್ಕೆ ಪ್ರಯಾಣ ಹೊರಟಾಗಿನ ಬುತ್ತಿಯೂ, ಆರೋಗ್ಯಪ್ರದವೂ, ಸಕಲ ಪುಣ್ಯಸಮೂಹಗಳಿಗೂ ಮುಖ್ಯವಾದ ಆಶ್ರಯಸ್ಥಾನವೂ ಸಹ ಆಗಿರುವುದೆಂದು ತಿಳಿ. ॥೭೨೯॥

॥ ಶ್ರೀಶಿವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಕಥಂ ಜ್ಞಾತಮಿದಂ ತ್ವಯಾ ।
ತದ್ವದಸ್ವೇತಿ ತಾಮಾಹ ಸಾ ತಮಾಹ ತತಃ ಶಿವೇ ॥೭೩೦॥

॥ ಸತ್ಯುವಾಚ ॥

ಪೂರ್ವಜನ್ಮನ್ಯಹಂ ವಿಪ್ರ ಕನ್ಯಾ ವಿಪ್ರಸ್ಯ ಮೇಧಸಃ ।
ಅಸ್ಮದ್ಗೃಹಪ್ರಾಂತದೇಶೇ ಕಶ್ಚಿದ್ಬಿಲ್ವತರುಃ ಸ್ಥಿತಃ ॥೭೩೧॥

ಬಿಲ್ವಾಯಾಚ್ಛಂ ಜಲಂ ದತ್ತಂ ಕದಾಚಿದ್ಯತ್ನತೋ ಮಯಾ ।
ತೇನ ಪಲ್ಲವಿತೋ ವೃಕ್ಷಸ್ತದ್ಬಿಲ್ವತರುಪಲ್ಲವೈಃ ॥೭೩೨॥

ಮತ್ಪಿತಾ ಪೂಜಯಾಮಾಸ ಮಹಾದೇವಮುಮಾಪತಿಂ ।
ಶಿವಂ ಸಂಛಾದಯಾಮಾಸ ತದ್ಬಿಲ್ವತರುಪಲ್ಲವೈಃ ॥೭೩೩॥

ತೇನ ಪುಣ್ಯಪ್ರಭಾವೇನ ಜನ್ಮನಾಂ ಮೇ ಶತತ್ರಯಂ ।
ಮಯಾ ವಿಜ್ಞಾಯತೇ ವಿದ್ವನ್ಮುಕ್ತ್ಯುಪಾಯೋಽಪಿ ತತ್ವತಃ ॥೭೩೪॥

---

ಮಂಗಳಾಂಗಿಯಾದ ಪಾರ್ವತಿಯೇ, ತನ್ನ ಸತಿಯ ಆ ಮಾತುಗಳನ್ನು ಕೇಳಿ ಬ್ರಾಹ್ಮಣನು ಪ್ರಿಯೆ, ನಿನಗೆ ಈ ವಿಷಯವೆಲ್ಲಾ ಹೇಗೆ ಗೊತ್ತಾಯಿತೆಂಬುದನ್ನು ನನಗೆ ತಿಳಿಸುವಳಾಗೆಂದು ಕೇಳಲು, ಆಗ ಬ್ರಾಹ್ಮಣ ಸ್ತ್ರೀಯು ಹೀಗೆ ನುಡಿದಳು. ॥೭೩೦॥

ಪತಿದೇವನೇ, ಹಿಂದಿನ ಜನ್ಮದಲ್ಲಿ ನಾನು ಮೇಧಸ್ಸೆಂಬ ಬ್ರಾಹ್ಮಣನ ಮಗಳಾಗಿದ್ದೆನು. ನನ್ನ ಮನೆಯ ಪಕ್ಕದ ಪ್ರದೇಶದಲ್ಲಿ ಒಂದು ಬಿಲ್ವವೃಕ್ಷವಿತ್ತು. ಒಂದು ದಿನ ನಾನು ಶ್ರದ್ಧೆಯಿಂದ ಆ ಬಿಲ್ವಮರಕ್ಕೆ ಸ್ವಚ್ಛವಾದ ನೀರನ್ನು ಹಾಕಿದೆ. ಆ ನೀರಿನಿಂದ ಆ ಬಿಲ್ವವೃಕ್ಷವು ಚಿಗುರಿ ಸೊಂಪಾಗಿ ಕಾಣತೊಡಗಿತು. ॥೭೩೧-೭೩೨॥

ನನ್ನ ತಂದೆಯು ಆ ಬಿಲ್ವವೃಕ್ಷದ ಪತ್ರೆಗಳನ್ನು ತಂದು ಉಮಾರಮಣನನ್ನು ಚೆನ್ನಾಗಿ ಮುಚ್ಚುವಂತೆ ಪೂಜೆಮಾಡಿದನು. ಆ ಪುಣ್ಯಮಹಿಮೆಯಿಂದ ಮುನ್ನೂರು ಜನ್ಮಗಳವರೆಗೆ ಮೋಕ್ಷಪ್ರಾಪ್ತಿಯ ರಹಸ್ಯವು ತಿಳಿಯುತ್ತಾ ಇರುತ್ತದೆಯೆಂದು ತಿಳಿ. ॥೭೩೩-೭೩೪॥

॥ ಶ್ರೀಮಹಾದೇವ ಉವಾಚ ॥

ಇತಿ ತದ್ವಚನಂ ಶ್ರುತ್ವಾ ತ್ಯಕ್ತ್ವಾ ಸ ಮದನವ್ಯಥಾಂ ।
ಶಿವಾರ್ಚನಪರೋ ಜಾತೋ ಮುಕ್ತಶ್ಚ ತದನಂತರಂ ॥೭೩೫॥

ಮಾಮುಪಾಶ್ರಿತ್ಯ ಯೋ ಭಕ್ತ್ಯಾ ಮಾಮಾರಾಧಯತಿ ಪ್ರಿಯೇ ।
ಸ ಮುಕ್ತಿಂ ಲಭತೇ ನೂನಂ ಸತ್ಯಂ ಸತ್ಯಂ ನ ಸಂಶಯಃ ॥೭೩೬॥

ಶಿವೇ ಮದರ್ಚನೇ ಪ್ರೀತಿರ್ಮಹದ್ಭಾಗ್ಯಫಲಂ ತತಃ ।
ಮದರ್ಚನಂ ಪ್ರಯತ್ನೇನ ಕರ್ತವ್ಯಂ ವಿಧಿವತ್ಸದಾ ॥೭೩೭॥

ತಾರಕಃ ಸರ್ವಲೋಕಾನಾಮಹಮೇವ ತತಃ ಸದಾ ।
ಪೂಜನೀಯಃ ಪ್ರಯತ್ನೇನ ಸರ್ವೋಪಾಯೈರ್ಯಥಾವಿಧಿ ॥೭೩೮॥

ಸರ್ವೇಷಾಮೇವ ವೇದಾನಾಂ ಸಾರಭೂತಮಿದಂ ವಚಃ ।
ಮದರ್ಚನಂ ಸದಾ ಕಾರ್ಯಮುದ್ಧೃತ್ಯ ಭುಜಮುಚ್ಯತೇ ॥೭೩೯॥

ಜಪನೀಯೋಽಹಮನಿಶಂ ಪೂಜನೀಯೋಽಹಮನ್ವಹಂ ।
ಸತ್ಯಮೇತತ್ಸತ್ಯಮೇತದುದ್ಧೃತ್ಯ ಭುಜಮುಚ್ಯತೇ ॥೭೪೦॥

---

ಆ ಮಾತುಗಳನ್ನು ಕೇಳಿ ಆ ಬ್ರಾಹ್ಮಣನು ಮನ್ಮಥವಿಕಾರವನ್ನು ತೊರೆದು ಶಿವಪೂಜಾತತ್ಪರನಾಗಿ ಕೊನೆಗೆ ಮೋಕ್ಷಪಡೆದನು. ಪ್ರಿಯೆ, ನನ್ನನ್ನೇ ಆಶ್ರಯಿಸಿ ನನ್ನನ್ನು ಭಕ್ತಿಯಿಂದ ಪೂಜೆಮಾಡುವವರು ಸತ್ಯವಾಗಿಯೂ ಮೋಕ್ಷವನ್ನು ಹೊಂದುವುದರಲ್ಲಿ ಕೊಂಚವೂ ಸಂಶಯವೇ ಇಲ್ಲವೆಂದು ಭಾವಿಸು. ॥೭೩೫-೭೩೬॥

ಸರ್ವಮಂಗಳೇ, ನನ್ನ ಪೂಜೆಯಲ್ಲಿ ಪ್ರೀತಿಯುಂಟಾಗುವುದು ಮಹಾ ಭಾಗ್ಯದ ಫಲವೆಂದು ತಿಳಿ. ಆದ್ದರಿಂದ ನನ್ನನ್ನು ಯಾವಾಗಲೂ ವಿಧಿಪೂರ್ವಕವಾಗಿ ನಿಯಮದಿಂದ ಪೂಜೆಮಾಡಬೇಕು. ಸಕಲ ಲೋಕಗಳನ್ನುದ್ಧಾರಮಾಡುವವನೂ ನಾನೇ ಎಂದು ತಿಳಿದು ಸಕಲ ರೀತಿಯಿಂದಲೂ ನನ್ನನ್ನೇ ಅವಶ್ಯವಾಗಿ ವಿಧಿಯನ್ನನುಸರಿಸಿ ಪೂಜೆಮಾಡಬೇಕು. ॥೭೩೭-೭೩೮॥

ಸಕಲ ವೇದಗಳ ಸಾರವೂ ನನ್ನ ಪೂಜೆಯನ್ನೇ ಯಾವಾಗಲೂ ಮಾಡಬೇಕು ಎಂಬ ಅಂಶವಾಗಿದೆ. ಇದನ್ನು ನಾನು ಭುಜವನ್ನೆತ್ತಿ ದೃಢವಾಗಿ ಹೇಳುವೆನು.

ಜಪನೀಯೋಽಹಮನಿಶಂ ಪೂಜನೀಯೋಽಹಮನ್ವಹಂ ।
ಮುಕ್ತಿದಾತಾಽಹಮೇವಾಸ್ಮಿ ಸರ್ವಸ್ಯ ಜಗತಃ ಶಿವೇ ॥೭೪೧॥

ತತಃ ಸರ್ವಂ ಪರಿತ್ಯಜ್ಯ ಪೂಜನೀಯೋಽಹಮಾಸ್ತಿಕೈಃ ।
ಸರ್ವೋತ್ತಮಃ ಸರ್ವವಂದ್ಯಃ ಸರ್ವಪೂಜ್ಯೋಽಹಮಂಬಿಕೇ ॥೭೪೨॥

ಅಯಮರ್ಥಸ್ತು ವಿವಿಧೈರ್ವೇದೈರೇವೋಚ್ಯತೇ ಮಯಾ ।
ಸರ್ವಭಾವೇನ ಸತತಂ ಪೂಜನೀಯೋಽಹಮಂಬಿಕೇ ॥೭೪೩॥

ಮದರ್ಚನಾದ್ಭುಕ್ತಿಮುಕ್ತೀ ಸಂಪ್ರಾಪ್ಯೇ ಸತ್ಯಮುಚ್ಯತೇ ।
ಸಂಸಾರಪಾಶನಾಶಾರ್ಥಂ ಮಾಮೇವ ಮುನಿಪುಂಗವಾಃ ॥೭೪೪॥

ಪೂಜಯಂತ್ಯತಿಯತ್ನೇನ ಭಸ್ಮೋದ್ಧೂಳಿತವಿಗ್ರಹಾಃ ।
ವಿಚಾರ್ಯ ವೇದವೇದಾಂತಮಿದಂ ನಿಷ್ಪಾದಿತಂ ಬುಧೈಃ ॥೭೩೫॥

---

ಅನವರತವೂ ಜಪ ಮತ್ತು ಪೂಜೆಯನ್ನು ಹೊಂದಲು ಯೋಗ್ಯನಾಗಿರುವನು ನಾನೇ ಎಂಬುದು ಸತ್ಯವೆಂದು ಪುನಃ ತೋಳೆತ್ತಿ ಸಾರುವೆನು. ॥೭೩೯-೭೪೦॥

ಜಪಯೋಗ್ಯನೂ, ಪೂಜಾರ್ಹನೂ ಮುಕ್ತಿಯನ್ನು ಕರುಣಿಸುವವನೂ ಸಕಲ ಜಗತ್ತುಗಳಿಗೂ ನಾನೇ ಎಂದು ತಿಳಿ. ಆದ್ದರಿಂದ ಎಲ್ಲವನ್ನೂ ಬಿಟ್ಟು ಆಸ್ತಿಕರಾದವರು ನನ್ನನ್ನೇ ಪೂಜೆಮಾಡಬೇಕು. ಎಲೌ ಅಂಬಿಕೇ, ಸರ್ವೋತ್ತಮನೂ ಎಲ್ಲರಿಂದಲೂ ನಮಸ್ಕಾರಾರ್ಹನೂ ಸಕಲರಿಂದಲೂ ಪೂಜೆಮಾಡಲು ಯೋಗ್ಯನೂ ನಾನೇ ಆಗಿರುತ್ತೇನೆಂದು ತಿಳಿ. ॥೭೪೧-೭೪೨॥

ಈ ವಿಷಯುವನ್ನೇ ನಾನು ಅನೇಕ ವೇದಗಳ ಮುಖಾಂತರ ಹೇಳಿಸುತ್ತಿದ್ದೇನೆ. ಎಲೌ ಅಂಬಿಕೆ, ಸಕಲ ಪ್ರಕಾರದಿಂದಲೂ ನನ್ನನ್ನೇ ಯಾವಾಗಲೂ ಪೂಜೆಮಾಡಬೇಕು. ಸತ್ಯವಾಗಿಯೂ ನನ್ನ ಪೂಜೆಯಿಂದ ಸಕಲ ಭೋಗಗಳೂ ಮೋಕ್ಷವೂ ದೊರೆಯುವುವು. ಈ ಸಂಸಾರವೆಂಬ ಪಾಶವನ್ನು ಹೋಗಲಾಡಿಸುವುದಕ್ಕೋಸ್ಕರ ಮುನಿಶ್ರೇಷ್ಠರು ನನ್ನನ್ನೇ ಯಾವಾಗಲೂ ಭಸ್ಮೋದ್ಧೂಳನ ಮಾಡಿಕೊಂಡು ಪೂಜೆಮಾಡುತ್ತಿರುವರು. ॥೭೪೩-೭೪೪॥

ಸಕಲ ವೇದಗಳನ್ನೂ ಚೆನ್ನಾಗಿ ವಿಚಾರಮಾಡಿ ಪಂಡಿತರು ಹೀಗೆ ಹೇಳಿರುವರು. ಮೋಕ್ಷಾಪೇಕ್ಷಿಗಳಾದವರು ಯಾವಾಗಲೂ ಆ ಶಿವನನ್ನೇ ಧ್ಯಾನಮಾಡ

ಶಿವ ಏವ ಸದಾ ಧ್ಯೇಯೋ ಮುಕ್ತಿಕಾಮ್ಯೈರಿತಿ ಧ್ರುವಂ ।
ಮುಕ್ತಿಸ್ತು ಸರ್ವಥಾ ನಾಸ್ತಿ ಶಂಕರಾರಾಧನಂ ವಿನಾ ॥೭೪೬॥

ಸತ್ಯಂ ಸತ್ಯಂ ಪುನಃ ಸತ್ಯಮಿತಿ ವೇದೋಽಪಿ ವರ್ತತೇ ।
ಅತೋಽನ್ನಹಂ ಪ್ರಯತ್ನೇನ ಪೂಜನೀಯೋಽಹಮಂಬಿಕೇ ॥೭೪೭॥

ಬಿಲ್ವಪತ್ರಾದಿಭಿಃ ಸಮ್ಯಕ್ಚತುರ್ವರ್ಗಫಲಾರ್ಥಿಭಿಃ
ಮದರ್ಚನಪರಾ ಧೀರಾ ಮದೇಕಪರದೇವತಾಃ ।
ನಿರ್ದಗ್ಧಕಲ್ಮಷಾ ದೇವಿ ಪ್ರವಿಶಂತಿ ಮಯಿ ಧ್ರುವಂ ॥೭೪೮॥

ವಿಶ್ವಾಧಿಕೋಽಹಮಜರೋ ನಿಷ್ಕಲೋ ನಿರ್ಗುಣೋಽಂಬಿಕೇ ।
ಮಯಿ ಪ್ರವಿಷ್ಟೋ ಭೂಯೋಽನ್ಯಂ ನ ವಿಶತ್ಯೇವ ಸರ್ವಥಾ ॥೭೪೯॥

ಯೇ ಮಾಮನನ್ಯಶರಣಾಃ ಸಿತಭಸ್ಮಫಾಲಾಃ
ರುದ್ರಾಕ್ಷಕಂಕಣಲಸತ್ಕರದಂಡಯುಗ್ಮಾಃ ।

---

ಬೇಕು. ಆ ಶಂಕರನ ಪೂಜೆಯಿಲ್ಲದೇ ಖಂಡಿತ ಮೋಕ್ಷಪ್ರಾಪ್ತಿಯಾಗಲಾರದು. ॥೭೪೫-೭೪೬॥

ಈ ವಿಷಯವು ಸತ್ಯವೆಂದು ಪುನಃ ಪುನಃ ವೇದಗಳೂ ಹೇಳುತ್ತಿರುವುವು. ಎಲೌ ಅಂಬಿಕೆ, ಆದ್ದರಿಂದ ಪ್ರತಿನಿತ್ಯವೂ ನಿಯಮದಿಂದ ನನ್ನನ್ನು ಪೂಜೆಮಾಡಬೇಕು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವರ್ಗ ಫಲಗಳನ್ನಪೇಕ್ಷಿಸುವವರು ಬಿಲ್ವಪತ್ರೆಗಳೇ ಮುಂತಾದ ಸಾಧನಗಳಿಂದ ಯಾವಾಗಲೂ ನನ್ನನ್ನೇ ಪೂಜೆಮಾಡುತ್ತಾ ಬರಬೇಕು. ಹೀಗೆ ನನ್ನೊಬ್ಬನನ್ನೇ ಉತ್ಕೃಷ್ಟ ದೈವವೆಂದು ಭಾವಿಸಿರುವ ಧೀರರು, ಪಾಪರಹಿತರಾಗಿ ನನ್ನ ಸಾನ್ನಿಧ್ಯವನ್ನು ಸೇರುವರು. ॥೭೪೭-೭೪೮॥

ಪ್ರಪಂಚದಲ್ಲೆಲ್ಲಾ ಶ್ರೇಷ್ಠನೂ ಮುಪ್ಪಿಲ್ಲದವನೂ, ಕಲಂಕಶೂನ್ಯನೂ ಗುಣರಹಿತನೂ ನಾನೇ ಆಗಿರುವೆ. ಅಂಬಿಕೇ! ನನ್ನಲ್ಲಿ ಪ್ರವೇಶಮಾಡಿದವನು ತಿರುಗಿ ಮತ್ತೊಬ್ಬನಲ್ಲಿ ಎಂದೆಂದಿಗೂ ಪ್ರವೇಶಮಾಡುವುದಿಲ್ಲವೆಂದು ತಿಳಿ. ॥೭೪೯॥

ಮತ್ತಾರನ್ನೂ ಮರೆಹೋಗದೇ ಶುಭ್ರವಾದ ವಿಭೂತಿಯನ್ನು ಹಣೆಯಲ್ಲಿ ಧರಿಸಿ, ರುದ್ರಾಕ್ಷಗಳನ್ನೇ ಕಂಕಣವನ್ನಾಗಿ ಮಾಡಿಕೊಂಡು(ಪ್ರಕಾಶಿಸುತ್ತಿರುವ)ದಂಡ

ಸಂಪೂಜಯಂತ್ಯಹರಹಃ ಶ್ರುತಿತತ್ವಭೂತಂ
ತಾನೇವ ಘೋರನರಕಾದಹಮುದ್ಧರಿಷ್ಯೇ ॥೭೫೦॥

ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಪೂರ್ವಾರ್ಧೇ
ಅಷ್ಟಾದಶೋಽಧ್ಯಾಯಃ

---

ದಂತಿರುವ ತಮ್ಮ ಎರಡು ಕೈಗಳಿಂದಲೂ ಶೋಭಿಸುತ್ತಾ ಯಾವಾಗಲೂ ವೇದಗಳ ತತ್ವಸ್ವರೂಪನಾಗಿರುವ ನನ್ನನ್ನು ಎಡಬಿಡದೇ ಪೂಜೆಮಾಡುತ್ತಿರುವರನ್ನೇ ನಾನು ತಪ್ಪದೇ ಉದ್ಧಾರಮಾಡುವೆನು. ಎಂದು ಮಹೇಶ್ವರನು ಪ್ರಿಯಪತ್ನಿಯಾದ ಪಾರ್ವತಿಯೊಡನೆ ಪ್ರತಿಜ್ಞಾಪೂರ್ವಕವಾಗಿ ನುಡಿದನು. ॥೭೫೦॥

ಇತಿ ಶ್ರೀಶಿವರಹಸ್ಯೇ ಉಗ್ರಾಖ್ಯೇ ಸಪ್ತಮಾಂಶೇ ಪೂರ್ವಾರ್ಧೇ
ಅಷ್ಟಾದಶೋಽಧ್ಯಾಯಃ

॥ ಶ್ರೀಃ ॥

ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಪೂರ್ವಾರ್ಧೇ

## ಏಕೋನವಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಶಿವೇ ದಕ್ಷಿಣಕೈಲಾಸೇ ವಿಲಾಸಸ್ಯಾಶ್ರಯೋ ಮಮ ।
ಸ ಯಥೋತ್ತರಕೈಲಾಸಸ್ತಥೈವ ಸುಖದಃ ಸದಾ ॥೧॥

ಸುವರ್ಣಮುಖರೀನಾಮನದೀ ತತ್ರಾಸ್ತಿ ಶೋಭನಾ ।
ಯಜ್ಜಲಸ್ನಾನಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ॥೨॥

ತತ್ತೀರೇ ಕೋಟಿಶಃ ಸಂತಿ ಬಿಲ್ವವೃಕ್ಷಾ ಮನೋಹರಾಃ ।
ಅಖಂಡಬಿಲ್ವಪತ್ರಾಣಿ ತೇಷು ತಿಷ್ಠಂತಿ ಕೋಟಿಶಃ ॥೩॥

---

## ಹತ್ತೊಂಬತ್ತನೆಯ ಅಧ್ಯಾಯ

ಮಂಗಳಾಂಗಿಯಾದ ದೇವಿಯೇ! ದಕ್ಷಿಣ ಕೈಲಾಸಕ್ಷೇತ್ರವು ನನ್ನ ವಿಲಾಸಗಳಿಗೆ ಆಶ್ರಯವಾಗಿರುವುದು. ಉತ್ತರಕೈಲಾಸದಂತೆ ಇದೂ ನನಗೆ ಯಾವಾಗಲೂ ಸುಖಪ್ರದವೇ ಆಗಿರುವುದು. ಅಲ್ಲಿ ಸುವರ್ಣಮುಖರೀ ಎಂಬ ಮಂಗಳಕರವಾದ ನದಿಯೊಂದು ಹರಿಯುತ್ತಿರುವುದು. ಆ ನದಿಯ ನೀರಿನಲ್ಲಿ ಸ್ನಾನಮಾಡಿದ ಮಾತ್ರದಿಂದ ಸಕಲ ಪಾಪಗಳೂ ತೊಲಗುವುವು. ಎಂದು ಶಂಕರನು ಮತ್ತೆ ಪಾರ್ವತಿಗೆ ಶೈವಧರ್ಮಸ್ವರೂಪವನ್ನು ವಿವರಿಸತೊಡಗಿದನು. ॥೧-೨॥

ಆ ನದಿಯ ದಡದಲ್ಲಿ ಕೋಟ್ಯಂತರ ಮನೋಹರವಾದ ಬಿಲ್ವವೃಕ್ಷಗಳಿರುವುವು. ಅವುಗಳಲ್ಲಿ ಯಾವಾಗಲೂ ಅಸಂಖ್ಯಾತವಾದ ಬಿಲ್ವಪತ್ರೆಗಳು ಸ್ವಲ್ಪವೂ ತುಂಡಾಗದೇ ಇರುವುವು. ಆ ಸುವರ್ಣಮುಖರೀನದಿಯ ದಡದಲ್ಲಿ ಅನೇಕ ಮಂದಿ ನನ್ನ ಭಕ್ತರು

ಸುವರ್ಣಮುಖರೀತೀರೇ ಕೋಟಿಶಃ ಸಂತಿ ಶಾಂಕರಾಃ ।
ತೇ ಸರ್ವೇ ನಿಯತಾಹಾರಾ ಭಸ್ಮೋದ್ಧೂಳಿತವಿಗ್ರಹಾಃ ॥೪॥

ತ್ರಿಪುಂಡ್ರಮಾತ್ರವಿಲಸದ್ಭಾಲಾದ್ಯಂಗಾತಿಶೋಭನಾಃ ।
ರುದ್ರಾಕ್ಷಮಾಲಾಭರಣಾ ಜಟಾಮಂಡಲಮಂಡಿತಾಃ ॥೫॥

ಶಿವಪೂಜೈಕನಿರತಾ ನಿರೀಹಾ ನಿರ್ಮಲಾಶಯಾಃ ।
ಶಿವನಾಮೈಕನಿರತಾಸ್ತ್ಯಕ್ತಭೋಗಾ ನಿರಾಕುಲಾಃ ॥೬॥

ಸ್ವಪ್ನೇಽಪ್ಯನನ್ಯಶರಣಾಃ ಮದೇಕಪರದೇವತಾಃ ।
ಮನ್ನಾಮಮಾತ್ರಪೀಯೂಷಾ ಮದೇಕಶರಣಾ ಮುದಾ ॥೭॥

ಶಿವಲಿಂಗಾರ್ಚನೇ ನಿತ್ಯಂ ಸರ್ವದಾ ಸಕ್ತಮಾನಸಾಃ ।
ಧ್ಯಾಯಂತಿ ತೇ ಮಹಾದೇವಂ ಮಾಮನಾದ್ಯಂತಮವ್ಯಯಂ ॥೮॥

---

ವಾಸಿಸುತ್ತಾ ಯಾವಾಗಲೂ ನಿಯತವಾದ ಆಹಾರವುಳ್ಳವರಾಗಿ ಭಸ್ಮೋದ್ಧೂಳನದಿಂದ ಶೋಭಿಸುತ್ತಿರುವ ಶರೀರದಿಂದ ವಿರಾಜಿಸುತ್ತಿರುವರು. ॥೩-೪॥

ಭಸ್ಮತ್ರಿಪುಂಡ್ರಮಾತ್ರದಿಂದ ಶೋಭಿಸುತ್ತಿರುವ ಹಣೆ ಮುಂತಾದ ಅವಯವಗಳಿಂದ ತೇಜಸ್ವಿಗಳಾಗಿರುವರು. ಮತ್ತು ರುದ್ರಾಕ್ಷಮಾಲೆಗಳನ್ನೇ ಆಭರಣವಾಗಿ ಹೊಂದಿರುವವರೂ ಜಡೆಗಳ ಸಮೂಹದಿಂದ ಅಲಂಕೃತರೂ, ಯಾವಾಗಲೂ ಶಿವಪೂಜೆಯೊಂದರಲ್ಲಿಯೇ ತತ್ಪರರೂ, ಆಸೆಯಿಲ್ಲದವರೂ, ಪರಿಶುದ್ಧವಾದ ಅಭಿಪ್ರಾಯವುಳ್ಳವರೂ, ಶಿವನಾಮಜಪವೊಂದರಲ್ಲಿಯೇ ನಿರತರೂ, ಸಕಲ ಭೋಗಗಳನ್ನೂ ತೊರೆದವರೂ, ಯಾವ ವಿಧವಾದ ತೊಂದರೆಗಳಿಗೂ ಗುರಿಯಾಗದವರೂ ಆಗಿ ಶಾಂಭವರೆನಿಸಿಕೊಂಡಿರುವರು. ॥೫-೬॥

ಕನಸಿನಲ್ಲಿಯೂ ಮತ್ತಾರನ್ನೂ ಮರೆಹೋಗದೇ ನನ್ನೊಬ್ಬನನ್ನೇ ಉತ್ಕೃಷ್ಟದೇವತೆಯೆಂದು ಭಾವಿಸಿ ನನ್ನ ನಾಮಾಮೃತಪಾನಮಾಡಲು ಆಸಕ್ತರಾಗಿ ನನ್ನನ್ನೇ ಮರೆಹೊಕ್ಕಿರುವ ನನ್ನ ಭಕ್ತರನೇಕರು ಸಂತೋಷದಿಂದ ಪ್ರತಿನಿತ್ಯವೂ ಸದಾ ಶಿವಲಿಂಗ ಪೂಜೆಯಲ್ಲಿಯೇ ನಿರತರಾಗಿ ಆದ್ಯಂತರಹಿತನೂ ನಿತ್ಯನೂ ಆದ ಮಹಾದೇವನೆನಿಸಿದ ನನ್ನನ್ನೇ ಧ್ಯಾನಮಾಡುತ್ತಿರುವರು. ॥೭-೮॥

ನಿಷ್ಕಲಂ ನಿರ್ಗುಣಂ ಶಾಂತಂ ಶಿವಮಕ್ಷರಮವ್ಯಯಂ ।
ಸರ್ವಾಧಾರಮನಾಧಾರಂ ವಿದಿತ್ವಾ ಮಾಂ ವಸಂತಿ ತೇ ॥೯॥

ತತ್ರ ತ್ಯಕ್ತತನುರ್ಮರ್ತ್ಯಃ ಕೀಟೋ ವಾ ಮಶಕೋಽಪಿ ವಾ ।
ಭುಕ್ತ್ವಾ ಭೋಗಾನ್ಯಥಾಕಾಮಂ ಮತ್ಸ್ವರೂಪಂ ಪ್ರಯಾಂತಿ ಚ ॥೧೦॥

ತತ್ರಾಸ್ತಿ ಪರ್ವತಃ ಕಶ್ಚಿತ್ಸ ಮಧಾತ್ಮಕ ಏವ ಹಿ ।
ಸ ತು ಲಿಂಗಮಯೋ ಯಸ್ಮಾಲ್ಲಿಂಗಾಕಾರಃ ಸ ಪರ್ವತಃ ॥೧೧॥

ತತ್ಪರ್ವತಸ್ಯ ವಿಧಿವದ್ವೈಶಾಖೇ ಮಾಘಮಾಸಿ ವಾ ।
ಕೃತ್ವಾ ಪ್ರದಕ್ಷಿಣಂ ಸಮ್ಯಗ್ಬ್ರಹ್ಮಹತ್ಯಾವಿಮುಚ್ಯತೇ ॥೧೨॥

ಕೈಲಾಸನಾಮಕಂ ಲಿಂಗಂ ತತ್ರಾಸ್ತ್ಯೇಕಂ ಮದಾತ್ಮಕಂ ।
ತತ್ರ ತಲ್ಲಿಂಗರೂಪೇಣ ನಿವಸಾಮ್ಯಹಮಾದರಾತ್ ॥೧೩॥

ಕರ್ಪೂರಗೌರಂ ತಲ್ಲಿಂಗಂ ಪಶ್ಚಿಮಾಭಿಮುಖಂ ಸದಾ ।
ವರ್ಣಾಂತರಂ ಪ್ರತಿಯುಗೇ ತಸ್ಯ ಲಿಂಗಸ್ಯ ಜಾಯತೇ ॥೧೪॥

---

ಕಲಂಕಶೂನ್ಯನೂ ಗುಣರಹಿತನೂ ಶಾಂತಸ್ವರೂಪನೂ ನಿತ್ಯನೂ ನಾಶರಹಿತನೂ ಆದ ಮಂಗಳಸ್ವರೂಪನೆನಿಸಿದ ನನ್ನನ್ನೇ ಎಲ್ಲಕ್ಕೂ ಆಧಾರನೆಂದೂ, ತನಗೆ ಮಾತ್ರ ಯಾವುದೂ ಆಧಾರವಿಲ್ಲವೆಂದೂ ತಿಳಿದು ಅವರು ಅಲ್ಲಿ ವಾಸಮಾಡುತ್ತಿರುವರು. ॥೯॥

ಅಲ್ಲಿ ಪ್ರಾಣತ್ಯಾಗಮಾಡುವ ಮನುಷ್ಯ, ಹುಳು, ಸೊಳ್ಳೆ ಮುಂತಾದವುಗಳಾವುದೇ ಆಗಲೀ, ತನ್ನ ಇಷ್ಟಾನುಸಾರ ಸಕಲ ಭೋಗಗಳನ್ನೂ ಅನುಭವಿಸಿ, ಕೊನೆಗೆ ನನ್ನ ರೂಪವನ್ನೇ ಹೊಂದುವುದು. ॥೧೦॥

ಅಲ್ಲಿ ಒಂದು ಪರ್ವತವಿರುವುದು. ಅದು ಲಿಂಗಮಯವಾಗಿ ಲಿಂಗಸ್ವರೂಪವೇ ಆಗಿರುವುದರಿಂದ ಅದು ನನ್ನ ಆಕಾರವೇ ಆಗಿರುವುದು. ವೈಶಾಖ ಅಥವ ಮಾಘ ಮಾಸಗಳಲ್ಲಿ ವಿಧಿಪೂರ್ವಕವಾಗಿ ಆ ಪರ್ವತವನ್ನು ಚೆನ್ನಾಗಿ ಪ್ರದಕ್ಷಿಣೆಮಾಡಿದರೆ ಬ್ರಹ್ಮಹತ್ಯಾದೋಷವೂ ಬಿಡುಗಡೆಯಾಗುವುದು. ॥೧೧-೧೨॥

ಅಲ್ಲಿ ಕೈಲಾಸಸಂಜ್ಞಕವಾದ ನನ್ನ ಅಂಶದ ಒಂದು ಶಿವಲಿಂಗವಿರುವುದು. ಅಲ್ಲಿ ಆ ಲಿಂಗಸ್ವರೂಪದಿಂದ ನಾನು ವಾಸಮಾಡುತ್ತಿರುವೆನು. ಕರ್ಪೂರದಂತೆ ಬಿಳುಪಾಗಿ

ವಿಷ್ಣುಬ್ರಹ್ಮಾದಯೋ ದೇವಾಃ ಸತತಂ ಶಿವಪೂಜಕಾಃ ।
ತಲ್ಲಿಂಗಮತಿಯತ್ನೇನ ಪೂಜಯಂತಿ ಮುಮುಕ್ಷವಃ ॥೧೫॥

ತಲ್ಲಿಂಗದರ್ಶನಾತ್ಸದ್ಯೋ ನಶ್ಯತ್ಯಘಕುಲಂ ಶಿವೇ ।
ತಲ್ಲಿಂಗಂ ಸಾವಧಾನೇನ ಪೂಜನೀಯಂ ಮುಮುಕ್ಷುಭಿಃ ॥೧೬॥

ಸುವರ್ಣಮುಖರೀತೀರ್ಥೇ ಸ್ನಾತ್ವಾ ಸಮ್ಯಗ್ಯಥಾವಿಧಿ ।
ಅಶೇಷಪಾಪನಿರ್ಮುಕ್ತಾ ಭವಿಷ್ಯಂತಿ ನ ಸಂಶಯಃ ॥೧೭॥

ಸ್ನಾತ್ವಾ ತತ್ರ ವಿಧಾನೇನ ಪಿತ್ರ್ಯಾನ್ ಸಂತರ್ಪ್ಯ ವಾರಿಣಾ ।
ಅನ್ನಾದಿಭಿಶ್ಚ ಸಂತರ್ಪ್ಯ ಸರ್ವಪಾಪೈಃ ಪ್ರಮುಚ್ಯತೇ ॥೧೮॥

ತತ್ತೀರೇ ಶ್ರಾದ್ಧಕರಣಾತ್ಪಿತೄಣಾಂ ಋಣಬಂಧನಾತ್ ।
ಮುಚ್ಯತೇ ಮನುಜಃ ಸದ್ಯಃ ಪದ್ಮಪತ್ರಮಿವಾಂಭಸಾ ॥೧೯॥

---

ಶುಭ್ರವಾಗಿರುವ ಆ ಲಿಂಗವು ಯಾವಾಗಲೂ ಪಶ್ಚಿಮದಿಕ್ಕಿಗೆ ಅಭಿಮುಖವಾಗಿದೆ. ಪ್ರತಿಯೊಂದು ಯುಗದಲ್ಲಿಯೂ ಆ ಲಿಂಗದ ಬಣ್ಣವು ಬೇರೆಬೇರೆಯಾಗುತ್ತದೆ. ||೧೩-೧೪||

ಶಿವಪೂಜಾತತ್ಪರರಾದ ವಿಷ್ಣು ಬ್ರಹ್ಮ ಮುಂತಾದವರೂ ಸಹ ಯಾವಾಗಲೂ ಆ ಶಿವಲಿಂಗವನ್ನು ತುಂಬಾ ನಿಯಮದಿಂದ ಮೋಕ್ಷಾಪೇಕ್ಷಿಗಳಾಗಿ ಪೂಜೆಮಾಡುತ್ತಿರುವರು. ದೇವಿ! ಆ ಲಿಂಗದರ್ಶನಮಾತ್ರದಿಂದಲೇ ಪಾಪಸಮೂಹವೆಲ್ಲವೂ ಕೂಡಲೇ ನಾಶವಾಗುವುದು. ಮೋಕ್ಷವನ್ನು ಬಯಸುವರೆಲ್ಲರೂ ಆ ಶಿವಲಿಂಗವನ್ನು ಸಾವಧಾನವಾಗಿ ಪೂಜೆಮಾಡಬೇಕು. ||೧೫-೧೬||

ಸುವರ್ಣ ಮುಖರೀನದಿಯ ನೀರಿನಲ್ಲಿ ವಿಧಿಪ್ರಕಾರ ಚೆನ್ನಾಗಿ ಸ್ನಾನಮಾಡಿದರೆ ಸಕಲ ಪಾತಕಗಳಿಂದಲೂ ಪ್ರಾಣಿಗಳು ಬಿಡುಗಡೆ ಹೊಂದುವರೆಂಬುದರಲ್ಲಿ ಸಂಶಯವೇ ಇಲ್ಲ. ಅಲ್ಲಿ ವಿಧಿಗನುಸಾರ ಸ್ನಾನಮಾಡಿ ಆ ನೀರಿನಿಂದ ತನ್ನ ಪಿತೃಗಳಿಗೆ ತರ್ಪಣಮಾಡಿ ಅನ್ನದಾನ ಮುಂತಾದವುಗಳಿಂದ ಸಂತೋಷಪಡಿಸಿ ಮಾನವನು ಪಾಪಸಮೂಹಗಳನ್ನೆಲ್ಲಾ ಕಳೆಯುತ್ತಾನೆ. ||೧೭-೧೮||

ಆ ಸುವರ್ಣಮುಖರೀನದಿಯ ದಡದಲ್ಲಿ ಶ್ರಾದ್ಧಮಾಡಿದ ಮಾನವನು ತಾವರೇ ಎಲೆಯ ಮೇಲೆ ಬಿದ್ದ ನೀರಿನಂತೆ ಕೂಡಲೇ ಪಿತೃಋಣಗಳಿಂದ ಬಿಡುಗಡೆ

ತತ್ರ ಸ್ನಾತ್ವಾ ವಿಧಾನೇನ ಸ್ವಶಕ್ತ್ಯಾ ಶಿವಯೋಗಿನೇ ।
ದೇಯಂ ಸುವರ್ಣಂ ಯತ್ನೇನ ಮತ್ಪ್ರೀತ್ಯರ್ಥಮತಂದ್ರಿತೈಃ ॥೨೦॥

ಭೋಜನೀಯಾಃ ಪ್ರಯತ್ನೇನ ಶಿವಯೋಗೀ ಯಥಾಸುಖಂ ।
ಸುದುಗ್ಧಪರಮಾನ್ನಾದ್ಯೈರ್ಯಥೇಷ್ಟಂ ಘೃತಮಿಶ್ರಿತೈಃ ॥೨೧॥

ತತ್ತು ಕ್ಷೇತ್ರಂ ಶಿವಕ್ಷೇತ್ರಮತ ಏವ ಹಿ ಶಾಂಕರಾಃ ।
ಭೋಜನೀಯಾಃ ಪ್ರಯತ್ನೇನ ತೋಷಣೀಯಾ ಧನಾದಿಭಿಃ ॥೨೨॥

ಏಕಸ್ಮಿನ್ಭೋಜನೇ ಶೈವೇ ಭೋಜಿತಾಃ ಕೋಟಿಶೋ ದ್ವಿಜಾಃ ।
ಯತಃ ಶೈವಮುಖದ್ವಾರಾ ಭುಜ್ಯತೇ ಗಿರಿಜೇ ಮಯಾ ॥೨೩॥

ಪರಂ ತು ಶ್ರದ್ಧಯಾ ಭಕ್ತ್ಯಾ ವಿನಯೇನ ವಿಚಕ್ಷಣೈಃ ।
ಭೋಜ್ಯತೇ ಯದಿ ಶೈವೇಂದ್ರಸ್ತದಾ ತದ್ಭುಜ್ಯತೇ ಮಯಾ ॥೨೪॥

ಶಿವಯೋಗಿನಿ ಸಂತುಷ್ಟೇ ಸಂತುಷ್ಟೋಽಸ್ಮ್ಯಹಮಂಬಿಕೇ ।
ಶಿವಯೋಗಿಸ್ವರೂಪೇಣ ಸಂಚರಾಮ್ಯಹಮೇವ ಹಿ ॥೨೫॥

---

ಹೊಂದುತ್ತಾನೆ. ಆ ನದಿಯಲ್ಲಿ ಸ್ನಾನಮಾಡಿದ ಮೇಲೆ ತನ್ನ ಶಕ್ತ್ಯನುಸಾರವಾಗಿ ಶಿವಯೋಗಿಯಾದ ನನ್ನ ಭಕ್ತನಿಗೆ ಆಲಸ್ಯವಿಲ್ಲದೇ ನನ್ನ ಪ್ರೀತ್ಯರ್ಥವಾಗಿ ಸುವರ್ಣ ದಾನಮಾಡಬೇಕು. ॥೧೯-೨೦॥

ಒಳ್ಳೆಯ ಹಾಲು ಪರಮಾನ್ನ ತುಪ್ಪ ಮುಂತಾದ ಪದಾರ್ಥಗಳಿಂದ ಶಿವಯೋಗಿಯು ಸಂತುಷ್ಟನಾಗುವಂತೆ ನಿಯಮದಿಂದ ಭೋಜನಮಾಡಿಸಬೇಕು. ಅದು ಶಿವಕ್ಷೇತ್ರವಾಗಿರುವುದರಿಂದ ಅಲ್ಲಿ ನನ್ನ ಭಕ್ತರನ್ನು ಅವಶ್ಯವಾಗಿ ಭೋಜನ ಮಾಡಿಸಿ, ದಕ್ಷಿಣೆಮುಂತಾದವುಗಳನ್ನು ಕೊಟ್ಟು ಸಂತೋಷಪಡಿಸಬೇಕು.॥೨೧-೨೨॥

ನನ್ನ ಭಕ್ತನೊಬ್ಬನಿಗೆ ಭೋಜನಮಾಡಿಸಿದರೆ ಕೋಟ್ಯಂತರ ಬ್ರಾಹ್ಮಣರು ಊಟಮಾಡಿದಂತೆಯೇ. ಎಲೌ ಗಿರಿಜೆಯೇ, ಯಾವಾಗಲೂ ನಾನು ನನ್ನ ಭಕ್ತನ ಮೂಲಕವೇ ಊಟಮಾಡುವೆನೆಂದು ತಿಳಿ. ಶ್ರದ್ಧೆ, ಭಕ್ತಿ ಇವುಗಳಿಂದಲೂ ವಿನಯ ದಿಂದಲೂ ಸಹ ತಿಳಿವಳಿಕೆಯುಳ್ಳವರು ಶೈವಶ್ರೇಷ್ಠರಿಗೆ ಭೋಜನಮಾಡಿಸಿದರೆ ಅದನ್ನು ನಾನು ಅವಶ್ಯವಾಗಿ ಊಟಮಾಡುವೆನೆಂದು ಭಾವಿಸು ॥೨೩-೨೪॥

ಅಂಬಿಕೇ, ಶಿವಯೋಗಿಯು ಸಂತೋಷಭರಿತನಾದರೆ ನಾನು ಸಂತುಷ್ಟ ನಾಗುವೆನು. ನಾನು ಯಾವಾಗಲೂ ಆ ಶಿವಯೋಗಿಯ ರೂಪದಿಂದಲೇ ಸಂಚಾರ

ಶೈವಕ್ಷೇತ್ರೇಷು ಸರ್ವೇಷು ಪೂಜ್ಯಾ ಹಿ ಶಿವಯೋಗಿನಃ ।
ಅಹಂ ತು ಪೂಜಿತಃ ಸತ್ಯಂ ಶಿವಯೋಗಿನಿ ಪೂಜಿತೇ ॥೨೬॥

ತತ್ರಾರ್ದ್ರಾಕೃತ್ತಿಕಾಯೋಗೇ ಭೂತಾಯಾಮಷ್ಟಮೀದಿನೇ ।
ಸಂಪೂಜ್ಯ ಮಾಂ ಬಿಲ್ವಪತ್ರೈರ್ಬ್ರಹ್ಮಹಾಪಿ ವಿಮುಚ್ಯತೇ ॥೨೭॥

ವೈಶಾಖಪೌರ್ಣಮಾಸ್ಯಾಂ ಯಃ ಸಂಪೂಜಯತಿ ತತ್ರ ಮಾಂ ।
ಯದಿ ಪಾತಾರ್ದ್ರಯುಕ್ತಾಯಾಂ ಸ ಮೋಕ್ಷಮಧಿಗಚ್ಛತಿ ॥೨೮॥

ಯೋ ಮಾಂ ಬಿಲ್ವದಲೈಸ್ತತ್ರ ಕೋಮಲೈಃ ಪೂಜಯಿಷ್ಯತಿ ।
ಸ ಸದ್ಯ ಏವ ಸಂಸಾರಾನ್ಮುಕ್ತೋ ಭವತಿ ಸರ್ವಥಾ ॥೨೯॥

ಶೇಷಃ ಪ್ರತ್ಯಹಮಾಗತ್ಯ ತತ್ರ ರತ್ನೈರ್ಮನೋಹರೈಃ ।
ತದೇವ ಲಿಂಗಮಮಲಂ ಸಂಪೂಜಯತಿ ಸಾದರಂ ॥೩೦॥

---

ಮಾಡುತ್ತಿರುವೆನೆಂದು ತಿಳಿ. ಆ ಶಿವಯೋಗಿಗಳು ಶಿವಕ್ಷೇತ್ರಗಳಲ್ಲೆಲ್ಲಾ ಪೂಜಾರ್ಹರೇ ಆಗಿರುವರು. ಶಿವಯೋಗಿಯ ಪೂಜೆಯಿಂದ ನಾನು ಸತ್ಯವಾಗಿಯೂ ಪೂಜಿಸಲ್ಪಟ್ಟಂತೆಯೇ ಆಗುವೆನು. ॥೨೫-೨೬॥

ಆರಿದ್ರಾ ಮತ್ತು ಕೃತ್ತಿಕಾನಕ್ಷತ್ರ ಸಂಬಂಧವಿರುವ ಚತುರ್ದಶೀ ಮತ್ತು ಅಷ್ಟಮೀ ದಿವಸಗಳಲ್ಲಿ ಬಿಲ್ವಪತ್ರೆ ಮುಂತಾದವುಗಳಿಂದ ನನ್ನನ್ನು ಪೂಜೆಮಾಡಿದರೆ ಬ್ರಹ್ಮಹತ್ಯೆಮಾಡಿದವನೂ ಪಾಪದಿಂದ ಬಿಡುಗಡೆ ಹೊಂದುವನು. ವೈಶಾಖಮಾಸದ ಪೂರ್ಣಿಮಾ ದಿವಸ ಆ ಕ್ಷೇತ್ರದಲ್ಲಿ, ವ್ಯತೀಪಾತ ಮತ್ತು ಆರ್ದ್ರಾನಕ್ಷತ್ರ ಸಂಬಂಧಿಸಿರುವಾಗ ನನ್ನನ್ನು ಪೂಜೆಮಾಡಿದರೆ ಅವನು ನಿಶ್ಚಯವಾಗಿ ಮೋಕ್ಷವನ್ನು ಹೊಂದುವನು. ॥೨೭-೨೮॥

ಅಲ್ಲಿ ಕೋಮಲವಾದ ಬಿಲ್ವಪತ್ರೆಗಳಿಂದ ನನ್ನನ್ನು ಪೂಜೆಮಾಡಿದರೆ ಕೂಡಲೇ ಅವನು ಈ ಸಂಸಾರ ಬಂಧನದಿಂದ ಖಂಡಿತವಾಗಿಯೂ ಬಿಡುಗಡೆ ಹೊಂದುವನು. ಆದಿಶೇಷನು ಪ್ರತಿನಿತ್ಯವೂ ಅಲ್ಲಿಗೆ ಬಂದು ಮನೋಹರವಾದ ರತ್ನಗಳಿಂದ ನಿರ್ಮಲವಾದ ಆ ಶಿವಲಿಂಗವನ್ನು ಆದರದಿಂದ ಪೂಜೆಮಾಡುತ್ತಾನೆ. ॥೨೯-೩೦॥

ಅತ್ಯುತ್ತಮೈರ್ಲಕ್ಷರತ್ನೈಃ ಶೇಷಃ ಪ್ರತ್ಯಹಮಾದರಾತ್ ।
ಸಮರ್ಚಯತಿ ತಲ್ಲಿಂಗಂ ನಿಯಮೇನಾತಿಯತ್ನತಃ ॥೩೧॥

ತತ್ರ ಕಶ್ಚಿದ್ಗಜೋ ನಿತ್ಯಂ ನಿಯಮೇನೈವ ಸಾದರಂ ।
ತುಂಡೇನ ಜಲಮಾನೀಯ ಮುದಾ ಮಾಮಭಿಷಿಂಚತಿ ॥೩೨॥

ತತಃ ಪರಂ ಬಿಲ್ವಪತ್ರಾಣ್ಯಾದಾಯೋಚ್ಚಸ್ವತುಂಡತಃ ।
ಮಾಮರ್ಚಯತಿ ಯತ್ನೇನ ಪುಷ್ಪೈರ್ನಾನಾವಿಧೈರಪಿ ॥೩೩॥

ಅಯಂ ಯದಾ ಸಮಾಯಾತಿ ಮತ್ಪೂಜಾರ್ಥಂ ಮದದ್ವಿಪಃ ।
ತತ್ಪೂರ್ವಂ ಫಣಿರಾಡ್ರತ್ನೈಃ ಪೂಜಾಂ ಕೃತ್ವಾ ಸ ಗಚ್ಛತಿ ॥೩೪॥

ತಾನಿ ರತ್ನಾನಿ ದೃಷ್ಟ್ವಾಯಂ ಹಸ್ತೀ ಪಾಷಾಣಶಂಕಯಾ ।
ದೂರೀಕರೋತಿ ರತ್ನಾನಿ ಸಕೋಪಃ ಸತ್ವರಂ ಶಿವೇ ॥೩೫॥

ಏವಂ ಪ್ರತ್ಯಹಮೇವಾಯಂ ರತ್ನಾನಿ ವಿಮಲಾನ್ಯಪಿ ।
ದೂರೀಕೃತ್ಯೈವ ಬಿಲ್ವೈರ್ಮಾಂ ಪೂಜಯಾಮಾಸ ಭಕ್ತಿತಃ ॥೩೬॥

---

ಪ್ರತಿನಿತ್ಯವೂ ಆದಿಶೇಷನು ಉತ್ತಮವಾದ ಲಕ್ಷರತ್ನಗಳಿಂದ ಆ ಲಿಂಗವನ್ನು ಬಹಳ ನಿಯಮದಿಂದಲೂ ಮತ್ತು ಆದರದಿಂದಲೂ ಪೂಜೆಮಾಡುತ್ತಿರುವನು. ಅಲ್ಲಿಯೇ ಒಂದು ಆನೆಯೂ ಅತ್ಯಂತ ನಿಯಮದಿಂದ ತನ್ನ ಸೊಂಡಲಿನಿಂದ ನೀರನ್ನು ತೆಗೆದುಕೊಂಡು ಬಂದು ಪ್ರೀತ್ಯಾದರಗಳಿಂದ ನನಗೆ ಅಭಿಷೇಕ ಮಾಡುತ್ತಿದ್ದಿತು. ॥೩೧-೩೨॥

ಅಭಿಷೇಕ ಮಾಡಿದ ಮೇಲೆ ತನ್ನ ದಪ್ಪಸೊಂಡಲಿನಿಂದ ಬಿಲ್ವಪತ್ರೆಗಳನ್ನು ಕುಯ್ದು ತಂದು ನಿಯಮದಿಂದ ಆ ಪತ್ರೆಗಳಿಂದಲೂ ಇನ್ನೂ ನಾನಾವಿಧವಾದ ಹೂವುಗಳಿಂದಲೂ ನನ್ನನ್ನು ಪೂಜೆಮಾಡುತ್ತಿದ್ದಿತು. ಆ ಮದಗಜವು ಪೂಜೆ ಮಾಡುವುದಕ್ಕೆ ಅಲ್ಲಿಗೆ ಬರುವುದಕ್ಕೆ ಮುಂಚೆ ಸರ್ಪರಾಜನಾದ ಆದಿಶೇಷನು ನಾನಾವಿಧವಾದ ರತ್ನಗಳನ್ನು ತಂದು ನನ್ನನ್ನು ಪೂಜೆಮಾಡಿ ಹೊರಟುಹೋಗುತ್ತಿದ್ದನು. ॥೩೩-೩೪॥

ಪಾರ್ವತಿ, ಆ ರತ್ನಗಳನ್ನು ನೋಡಿ, ಆನೆಯು ಅವುಗಳನ್ನು ಕಲ್ಲೆಂಬ ಭಾವನೆಯಿಂದ ಕೋಪದಿಂದ ದೂರಕ್ಕೆ ಬಿಸಾಡುತ್ತಾ ಪ್ರತಿನಿತ್ಯವೂ ಪರಿಶುದ್ಧವಾದ

ತದ್ದೂರೀಕೃತರತ್ನಾನಿ ದೃಷ್ಟ್ವಾ ಶೇಷಃ ಸ ವಿಸ್ಮಿತಃ ।
ಕೇನ ದೂರೀಕೃತಾನೀತಿ ದುಃಖಂ ಪ್ರಾಪ್ನೋತ್ಯಹರ್ನಿಶಂ ॥೩೭॥

ಅತ್ಯುತ್ತಮಾನಿ ರತ್ನಾನಿ ಸಮಾನೀಯ ಮಯಾ ಮುದಾ ।
ಸಮರ್ಪ್ಯತೇ ಮಹಾಲಿಂಗೇ ಕೇನ ದೂರೀಕೃತಾನ್ಯಹೋ ॥೩೮॥

ಶಿವಪೂಜಾಪನಯನಾತ್ಪಾತಕಂ ಯದುಪಾರ್ಜ್ಯತೇ ।
ತತ್ಕೃತೋ ದುಃಖಲೇಶೋಽಪಿ ಕಿಂ ನ ತಸ್ಯಾಭಿಜಾಯತೇ ॥೩೯॥

ಇತಿ ಕೃತ್ವಾ ಮಹದ್ದುಃಖಂ ರತ್ನೈಃ ಸಂಪೂಜ್ಯ ಮಾಂ ಪುನಃ ।
ಸ ಯಾತಿ ನಾಗಕುಹರಂ ನಾನಾನಾಗವಿರಾಜಿತಂ ॥೪೦॥

ಏವಮೇವ ಸಮಾಗತ್ಯ ಪೂಜಯಿತ್ವಾ ಪುನಃ ಪುನಃ ।
ಸ ಯಾತ್ಯಾಯಾತಿ ಸತತಂ ಪುನರಾಯಾತಿ ಯಾತಿ ಚ ॥೪೧॥

---

ಈ ರತ್ನಗಳನ್ನು ತಿರಸ್ಕಾರಮಾಡಿ ಬಿಲ್ವಪತ್ರೆಗಳನ್ನು ತಂದು ಭಕ್ತಿಯಿಂದ ನನ್ನನ್ನು ಪೂಜೆಮಾಡುತ್ತಿದ್ದಿತು. ॥೩೫-೩೬॥

ಹೀಗೆ ಆ ಆನೆಯು ದೂರಕ್ಕೆ ತಳ್ಳಿರುವ ರತ್ನಗಳನ್ನು ನೋಡಿ ಆದಿಶೇಷನು ಆಶ್ಚರ್ಯಗೊಂಡು ಹಗಲೂ ರಾತ್ರಿ ಯಾರು ಇದನ್ನು ಹೀಗೆ ದೂರ ತಳ್ಳುತ್ತಾರೆಂಬ ದುಃಖದಿಂದ, 'ಅಯ್ಯೋ! ನಾನು ಪ್ರತಿದಿನವೂ ಬಹಳ ಉತ್ಕೃಷ್ಟವಾದ ರತ್ನಗಳನ್ನು ತಂದು ಸಂತೋಷದಿಂದ ಪೂಜೆಮಾಡುತ್ತಿದ್ದೇನೆ. ಹೀಗೆ ಆ ಪರಶಿವನ ದೊಡ್ಡ ಲಿಂಗದಲ್ಲಿ ಸಮರ್ಪಣೆಮಾಡಿದ ಈ ರತ್ನಗಳನ್ನು ದೂರಮಾಡುವ ಪಾಪಿ ಯಾರು? ॥೩೭-೩೮॥

ಈ ರೀತಿಯಾಗಿ ಶಿವಪೂಜೆಯನ್ನು ವಿಘ್ನಪಡಿಸುವುದರಿಂದ ಉಂಟಾಗುವ ಲೇಶಾಂಶದುಃಖವೂ ಅವನಿಗೆ ಬರುವುದಿಲ್ಲವೇ!' ಎಂದು ಚಿಂತಿಸಿ, ಅತ್ಯಂತ ದುಃಖಿತನಾಗಿ ಪುನಃ ನಾನಾಬಗೆಯ ರತ್ನಗಳಿಂದ ನನ್ನನ್ನು ಆದರದಿಂದ ಪೂಜೆಮಾಡಿ ತಾನು ಅನೇಕ ಸರ್ಪಗಳಿಂದ ಪ್ರಕಾಶಿಸುತ್ತಿರುವ ಪಾತಾಳಲೋಕವನ್ನು ಪ್ರವೇಶಮಾಡುತ್ತಿದ್ದನು. ॥೩೯-೪೦॥

ಹೀಗೆಯೇ ಪದೇ ಪದೇ ಅವರಿಬ್ಬರೂ ಹೋಗಿಬಂದು ಪೂಜೆಮಾಡುತ್ತಲೇ ಇದ್ದರು. ಆನೆ ಮತ್ತು ಸರ್ಪ ಇವರಿಬ್ಬರೂ ಪ್ರತಿದಿನವೂ ಆದರದಿಂದ ಲಿಂಗಸ್ವರೂಪಿ

ಉಭಾಭ್ಯಾಂ ಹಸ್ತಿನಾಗಾಭ್ಯಾಮೇವಮನ್ವಹಮಾದರಾತ್ ।
ಲಿಂಗರೂಪೇ ಮಯಿ ಪ್ರೀತ್ಯಾ ಪೂಜಾಂ ಕೃತ್ವಾ ಮಯಿಸ್ಥಿತಂ ॥೪೨॥

ತತಃ ಕದಾಚಿತ್ಸ ಫಣೀ ಪೂಜಾಂ ಕೃತ್ವಾ ಪ್ರಯತ್ನತಃ ।
ಕೋಽಯಮಾಯಾತಿ ತಂ ದ್ರಕ್ಷ್ಯೇ ನೂನಮದ್ಯೇತಿ ಸಂಸ್ಥಿತಃ ॥೪೩॥

ದೃಷ್ಟ್ವಾಽಹಮತಿಯತ್ನೇನ ಶಿವಪೂಜಾವಿನಾಶಕಂ ।
ವಿನಾಶಯಾಮಿ ದೇವೋ ವಾ ನರೋ ವಾಸ್ತು ನ ಸಂಶಯಃ ॥೪೪॥

ಮಯಾ ತ್ವತ್ಯಂತಯತ್ನೇನ ರತ್ನೈರನ್ವಹಮಾದರಾತ್ ।
ಪೂಜ್ಯತೇ ಶಂಕರಸ್ತಾನಿ ನ ತಿಷ್ಠಂತ್ಯೇವ ಶಂಕರೇ ॥೪೫॥

ಇತಿ ನಿಶ್ಚಿತ್ಯ ನಾಗೇಂದ್ರಃ ಕ್ವಚಿತ್ಕೋಣೇ ನಿಲೀಯ ಸಃ ।
ಸ್ಥಿತಸ್ತದಾ ದ್ವಿಪಃ ಸೋಽಪಿ ಪೂಜಾರ್ಥಂ ಸಮುಪಾಗತಃ ॥೪೬॥

---

ಯಾಗಿರುವ ನನ್ನಲ್ಲಿ ಭಕ್ತಿಯಿಟ್ಟು ನನ್ನನ್ನು ಪೂಜೆಮಾಡುತ್ತಾ ಕಾಲಕಳೆಯುತ್ತಿದ್ದರು. ॥೪೧-೪೨॥

ಹೀಗಿರಲು ಒಂದುಸಲ ಆ ಆದಿಶೇಷನು ವಿಶೇಷ ಶ್ರದ್ಧೆಯಿಂದ ಪೂಜೆಮಾಡಿ, ಈ ದಿವಸ ಯಾರು ಬಂದು ನಾನು ಪೂಜಿಸಿದ ರತ್ನಗಳನ್ನೆಲ್ಲಾ ಎರಚುತ್ತಾನೆ! ನಿಶ್ಚಯವಾಗಿಯೂ ಅವನನ್ನು ನೋಡಿ ಪರೀಕ್ಷೆಮಾಡುತ್ತೇನೆ. ಆ ಪರಶಿವನ ಪೂಜೆಯನ್ನು ಹಾಳುಮಾಡುವ ಆ ದ್ರೋಹಿಯು ದೇವತೆಯಾಗಲೀ ಮನುಷ್ಯನೇ ಆಗಲೀ ಅವನನ್ನು ಕಂಡುಹಿಡಿದು ಸಂಶಯವೇ ಇಲ್ಲದೇ ಅವನನ್ನು ಕೊಂದು ಹಾಕುತ್ತೇನೆ. ॥೪೩-೪೪॥

ನಾನು ವಿಶೇಷವಾಗಿ ಕಷ್ಟಪಟ್ಟು ಪ್ರತಿದಿನವೂ ರತ್ನಗಳನ್ನು ತಂದು ಆದರದಿಂದ ಶಂಕರನಿಗೆ ಪೂಜೆಮಾಡುತ್ತಿದ್ದರೂ ಅವುಗಳೊಂದೂ ಆ ದೇವನ ಮೇಲೆ ಇರುವುದೇ ಇಲ್ಲವಲ್ಲಾ! ಈ ದಿವಸ ಈ ಕೆಲಸಮಾಡುವವನನ್ನು ಹೇಗಾದರೂ ಮಾಡಿ ಕಂಡುಹಿಡಿಯುವೆನೆಂದು ನಿಶ್ಚಯಿಸಿ, ಆದಿಶೇಷನು ಅಲ್ಲಿಯೇ ಒಂದು ಕೋಣೆಯಲ್ಲಿ ಬಚ್ಚಿಟ್ಟು ನಿಂತನು. ಆಗ ಆ ಆನೆಯೂ ಎಂದಿನಂತೆ ಶಿವಲಿಂಗವನ್ನು ಪೂಜೆಮಾಡಲು ಅಲ್ಲಿಗೆ ಬಂದಿತು. ॥೪೫-೪೬॥

ದ್ವಿಪಃ ಸ ತಾನಿ ರತ್ನಾನಿ ದೂರೀಕೃತ್ಯ ತತಃ ಪರಂ ।
ಬಿಲ್ವಪತ್ರೈಃ ಪ್ರಸೂನೈಶ್ಚ ಪೂಜಯಾಮಾಸ ಸಾದರಂ ॥೪೭॥

ದ್ವಿಪಸ್ತಸ್ಮಿನ್ ದಿನೇ ಭೂಯೋ ಬಿಲ್ವಪತ್ರಾರ್ಥಮಾದರಾತ್ ।
ಸಂಪೂಜ್ಯ ನತ್ವಾ ಯತ್ನೇನ ತ್ವರಯಾ ಬಹಿರಾಗತಃ ॥೪೮॥

ಬಹಿರಾಗತ್ಯ ರಮ್ಯಾಣಿ ಬಿಲ್ವಪತ್ರಾಣಿ ಶೋಭನೇ ।
ಗೃಹೀತ್ವಾ ಪೂಜಯಾಮಾಸ ಸಮ್ಯಗ್ಭಕ್ತಿಪುರಃಸರಂ ॥೪೯॥

ತತಸ್ತಂ ದಂತಿನಂ ದೃಷ್ಟ್ವಾ ನಾಗಃ ಸತ್ಕರಸನ್ಮುಖಃ ।
ತದ್ದಂತಿತುಂಡದ್ವಾರೇಣ ಶಿರೋಮಧ್ಯಂ ಜಗಾಮ ಸಃ ॥೫೦॥

ತತಸ್ತದ್ದಂತಿತೋ ದಂತೀ ದ್ವಾರಸ್ತಂಭೇ ಶಿಲಾಮಯೇ ।
ಶಿರಃ ಸಂಘರ್ಷಯಾಮಾಸ ಕ್ರೋಶನ್ಸಕ್ರೋಧಸಂಯುತಃ ॥೫೧॥

ತತಃ ಸಂಘರ್ಷಣೇನೈವ ಸ್ಫುಟಿತಂ ತಚ್ಛಿರಸ್ತದಾ ।
ನಿರ್ಜಗಾಮ ತತೋ ಭೋಗೀ ಮೃತಸ್ತಚ್ಛಿರಸಸ್ತದಾ ॥೫೨॥

---

ಅನಂತರ ಆ ಆನೆಯು ಅಮೂಲ್ಯ ರತ್ನಗಳನ್ನೆಲ್ಲಾ ದೂರಕ್ಕೆ ತಳ್ಳಿ ಆಮೇಲೆ ಬಿಲ್ವಪತ್ರೆಗಳಿಂದಲೂ ಹೂಗಳಿಂದಲೂ ಆದರಪೂರ್ವಕವಾಗಿ ಶಿವಲಿಂಗವನ್ನು ಪೂಜೆಮಾಡಿ ಪುನಃ ಬಿಲ್ವಪತ್ರೆಗಳನ್ನು ತರುವುದಕ್ಕೋಸ್ಕರ ನಿಯಮದಿಂದ ದೇವದೇವನಿಗೆ ನಮಸ್ಕಾರಮಾಡಿ ಪೂಜಿಸಿದ ಅನಂತರ ಜಾಗ್ರತೆ ಹೊರಕ್ಕೆ ಹೊರಟಿತು. ॥೪೭-೪೮॥

ಎಲೌ ಶೋಭನಾಂಗಿಯೇ, ಅನಂತರ ಆ ಆನೆಯು ಹೊರಗೆ ಬಂದು ಮನೋಹರವಾದ ಬಿಲ್ವಪತ್ರೆಗಳನ್ನು ತಂದು ಭಕ್ತಿಪುರಸ್ಸರವಾಗಿ ನನ್ನನ್ನು ಪೂಜೆಮಾಡಿತು. ಆಗ ಆ ಆನೆಯನ್ನು ನೋಡಿ ಸರ್ಪರಾಜನಾದ ಆದಿಶೇಷನು ಕೋಪದಿಂದ ಎದುರಾಗಿ ಬಂದು, ಅದರ ಸೊಂಡಲಿನ ಮೂಲಕ ಪ್ರವೇಶಮಾಡಿ ಆ ಆನೆಯ ತಲೆಯ ಮಧ್ಯಪ್ರದೇಶವನ್ನು ಮುಟ್ಟಿದನು. ॥೪೯-೫೦॥

ಆಗ ಸರ್ಪರಾಜನು ಕೋಪದಿಂದ ಆನೆಯನ್ನು ಕಚ್ಚಲು ಆಗ ಆ ಆನೆಯು ಅಲ್ಲಿದ್ದ ಕಲ್ಲಿನ ಬಾಗಿಲ ಕಂಬಕ್ಕೆ ತನ್ನ ತಲೆಯನ್ನು ಗಟ್ಟಿಯಾಗಿ ಗರ್ಜನೆಮಾಡುತ್ತಾ

ತತೋ ವಿಷಾರ್ದಿತೋ ದಂತೀ ಮೃತೋ ಭೂಮೌ ಪಪಾತ ಚ ।
ಪತಿತೇ ದಂತಿವರ್ಯೇಽಸ್ಮಿನ್ನಾಗೇ ಚ ಪೃಥಿವೀತಲೇ ॥೫೩॥

ಪ್ರಾದುರಾಸಮಹಂ ದೇವಿ ತದಾ ಮಲ್ಲಿಂಗಮಧ್ಯತಃ ।
ಸ್ತುತಸ್ತಾಭ್ಯಾಂ ತತೋ ಯತ್ನಾಚ್ಛ್ರೀರುದ್ರೇಣ ಯಥಾಕ್ರಮಂ ॥೫೪॥

ತತಸ್ತಾಭ್ಯಾಂ ಪ್ರಯತ್ನೇನ ವೃತೋಽಯಂ ವರ ಉತ್ತಮಃ ।
ಉಭಯೋರಪಿ ನಾಮ್ನೇದಂ ಲಿಂಗಂ ಪ್ರಖ್ಯಾತಿಮೇಷ್ಯತು ॥೫೫॥

ನಾಗವಾನುವೃತ್ತಿರಸ್ತ್ವೀಶ ಪೃಥಿವ್ಯಾಮಾವಯೋಃ ಸದಾ ।
ಮುಕ್ತಿಸ್ತ್ವದ್ದರ್ಶನಾದೇವ ಭವಿಷ್ಯತ್ಯದ್ಯ ಸರ್ವಥಾ ॥೫೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ವರೋ ದತ್ತಸ್ತದಾ ಶಿವೇ ।
ತಯೋರ್ಮುಕ್ತಿರಭೂದ್ದೇವಿ ಮತ್ಸಾಕ್ಷಾತ್ಕಾರತಸ್ತತಃ ॥೫೭॥

---

ಉಜ್ಜಿತು. ಹೀಗೆ ಉಜ್ಜುವಿಕೆಯಿಂದ ಆ ಸರ್ಪದ ತಲೆಯೊಡೆದು ನಾಗರಾಜನು ಅದೇ ನೋವಿನಿಂದ ಹೊರಬಂದು ಪ್ರಾಣಬಿಟ್ಟನು. ॥೫೧-೫೨॥

ಹಾಗೆಯೇ ವಿಷದಿಂದ ವ್ಯಾಪ್ತವಾದ ಆ ಆನೆಯೂ ಸತ್ತು ನೆಲದಮೇಲೆ ಬಿದ್ದಿತು. ಹೀಗೆ ಆ ಗಜಶ್ರೇಷ್ಠನೂ ಮತ್ತು ಸರ್ಪರಾಜನೂ ಮೃತರಾಗಿ ಭೂಮಿಯ ಮೇಲೆ ಬಿದ್ದಮೇಲೆ ನಾನು ಅಲ್ಲಿದ್ದ ನನ್ನ ಲಿಂಗಮಧ್ಯದಿಂದ ಇಬ್ಬರಿಗೂ ಪ್ರತ್ಯಕ್ಷ ವಾದೆನು. ಅನಂತರ ನನ್ನ ಭಕ್ತರಿಬ್ಬರೂ ಕ್ರಮವಾಗಿ ನಿಯಮವಾದ ರುದ್ರಮಂತ್ರ ಪುರಸ್ಸರವಾಗಿ ನನ್ನನ್ನು ಸ್ತೋತ್ರಮಾಡಿದರು. ॥೫೩-೫೪॥

ದೇವಿ! ಆಗ ಅವರಿಬ್ಬರೂ, 'ದೇವಾದಿದೇವ! ನಮ್ಮಿಬ್ಬರ ಹೆಸರಿನಿಂದಲೂ ಈ ನಿನ್ನ ಲಿಂಗವು ಪ್ರಸಿದ್ಧಿಗೆ ಬರಲಿ' ಎಂದು ಉತ್ತಮವಾದ ವರವನ್ನು ಬೇಡಿದರು. ಅಲ್ಲದೇ ನಮ್ಮಿಬ್ಬರ ಹೆಸರೂ ಈ ಭೂಮಂಡಲದಲ್ಲಿ ಅನ್ಯೋನ್ಯವಾಗಿ ಅನುವರ್ತಿಸಲಿ (ಅಂದರೆ ನಾಗನೆಂದರೆ ಆನೆಗೂ, ಸರ್ಪಕ್ಕೂ ಹೆಸರಾಗುವಂತೆ). ನಿನ್ನ ದರ್ಶನದಿಂದ ನಮಗೆ ಮೋಕ್ಷವಂತೂ ದೊರೆತೇ ದೊರೆಯುತ್ತದೆ. ॥೫೫-೫೬॥

ಮಂಗಳಾಂಗಿ, ಹೀಗೆಂದು ಪ್ರಾರ್ಥಿಸಿದ ಅವರ ಮಾತುಗಳನ್ನು ಕೇಳಿ ನಾನು ಆಗ ಹಾಗೆಯೇ ಆಗಲೆಂದು ವರಕೊಟ್ಟೆನು. ಅನಂತರ ನನ್ನ ದರ್ಶನದಿಂದ ಅವರಿಬ್ಬರಿಗೂ ಮೋಕ್ಷವುಂಟಾಯಿತೆಂದು ಶಿವನು ಪಾರ್ವತಿಗೆ ಹೇಳಿದನು. ॥೫೭॥

॥ ಪಾರ್ವತ್ಯುವಾಚ ॥

ಮಹಾದೇವ ಗಜಸ್ಯಾಸ್ಯ ಭಕ್ತಿರೇತಾದೃಶೀ ತ್ವಯಿ ।
ಕಥಂ ಜಾತಾ ಭೋಗಿನೋಽಪಿ ತದ್ವದಸ್ವ ಮಹೇಶ್ವರ ॥೫೮॥

ಅನಂತಜನ್ಮಭಿರ್ಘೋರಂ ಯದಿ ತಪ್ತಂ ತಪಸ್ತದಾ ।
ತ್ವಯಿ ಭಕ್ತಿರ್ಮಹಾದೇವ ಭವಿಷ್ಯತ್ಯನ್ಯಥಾ ತು ನ ॥೫೯॥

ಶರೀರಂ ಯಸ್ಯ ಚರಮಂ ತಸ್ಯೈವ ತ್ವಯಿ ಶಂಕರೇ ।
ಭಕ್ತಿರ್ಭವತಿ ಸಾ ಭಕ್ತಿರ್ಮುಕ್ತಿದಾಽನನ್ಯಗಾ ಶುಭಾ ॥೬೦॥

ಯೇಷಾಂ ಸಂಸಾರವಿಚ್ಛಿತ್ತಿರ್ಯದ್ದೇಹಾಪಗಮೇ ಸತಿ ।
ತ ಏವ ಸರ್ವಭಾವೇನ ಶರಣಂ ಯಾಂತಿ ಶಂಕರಂ ॥೬೧॥

ಸೋತ್ಕಂಠಂ ನೀಲಕಂಠೇತಿ ಶ್ರೀಕಂಠೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೨॥

ವಿಶ್ವಾಧಿಕ ಮಹಾದೇವ ವಿಶ್ವೇಶೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೩॥

---

ಮಹಾದೇವನೇ, ಈ ಆನೆಗೂ ಮತ್ತು ಸರ್ಪಕ್ಕೂ ನಿನ್ನಲ್ಲಿ ಈರೀತಿಯಾದ ಭಕ್ತಿಯು ಹೇಗೆ ಉಂಟಾಯಿತು? ಅದನ್ನು ತಿಳಿಸು. ಅನೇಕ ಜನ್ಮಗಳಲ್ಲಿ ಘೋರವಾದ ತಪಸ್ಸನ್ನು ಮಾಡಿದರೆ ಮಾತ್ರ ನಿನ್ನಲ್ಲಿ ಭಕ್ತಿಯುಂಟಾಗುವುದೇ ಹೊರತು ಇಲ್ಲದಿದ್ದಲ್ಲಿ ಅದು ಅಸಂಭವವಲ್ಲವೇ? ॥೫೮-೫೯॥

ಈ ಶರೀರ ಪ್ರಾಪ್ತಿಯು ಕೊನೆಯಾಗಿರುವನಿಗೆ ಮಾತ್ರ ಜಗನ್ಮಂಗಳಕರನಾದ ನಿನ್ನಲ್ಲಿ ಭಕ್ತಿಯುಂಟಾಗುತ್ತದೆ. ಹೀಗೆ ನಿನ್ನಲ್ಲುಂಟಾಗುವ ಭಕ್ತಿಯು ಮತ್ತಾರಲ್ಲಿಯೂ ಪ್ರವೃತ್ತವಾಗದಿದ್ದರೆ ಶುಭಕರವಾದ ಅದು ಮೋಕ್ಷವನ್ನೇ ಕರುಣಿಸುವುದು. ಈ ಮಾನವಶರೀರವು ತೊಲಗಿದ ನಂತರ ಸಂಸಾರಬಂಧನವನ್ನು ಕಳೆದುಕೊಳ್ಳುವರೆಲ್ಲಾ ಎಲ್ಲಾ ರೀತಿಯಿಂದಲೂ ಶಂಕರನಾದ ನಿನ್ನನ್ನೇ ಶರಣು ಹೊಂದುವರು. ॥೬೦-೬೧॥

ಭಕ್ತಿ ಮತ್ತು ಉತ್ಸಾಹದಿಂದ ನೀಲಕಂಠ, ಶ್ರೀಕಂಠ ಎಂದು ಹೇಳುವರಿಗೆ ಈ ಮಾನವ ಶರೀರವು ಸತ್ಯವಾಗಿ ಇದೇ ಕೊನೆಯದೆಂದು ಶ್ರುತಿ ಹೇಳುವುದು. ಎಲ್ಲೈ

ದೇವತಾ ಸಾರ್ವಭೌಮೇತಿ ಶಂಕರೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೪॥

ಸರ್ವದೇವಾಧಿದೇವೇತಿ ಮಹೇಶೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೫॥

ಸರ್ವೋತ್ತಮೋತ್ತಮಾನಂತ ಶ್ರೀಶರ್ವೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೬॥

ವಿದಾರಿತನೃಸಿಂಹೇತಿ ಶ್ರೀರುದ್ರೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೭॥

ಗರುಡಧ್ವಜವಂದ್ಯೇತಿ ಸರ್ವೇಶೇತಿ ವದಂತಿ ಯೇ ।
ತೇಷಾಂ ಶರೀರಂ ಚರಮಂ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೬೮॥

---

ಜಗಚ್ಛ್ರೇಷ್ಠನೇ, ನಿನ್ನನ್ನು ಮಹಾದೇವ, ಜಗದೊಡೆಯ, ಎಂದು ಹೇಳುವವರಿಗೂ ಈ ಶರೀರವು ಕೊನೆಯದೇ ಎಂಬ ವಿಷಯವು ಸತ್ಯವೆಂದೇ ಶ್ರುತಿಯಿರುವುದು. ॥೬೨-೬೩॥

ದೇವತೆಗಳಿಗೆಲ್ಲಾ ಸಾರ್ವಭೌಮನೆನಿಸಿರುವವನೂ, (ಚಕ್ರವರ್ತಿ) ಶಂಕರನೂ, (ಸುಖವನ್ನುಂಟುಮಾಡುವನೂ) ಎಲ್ಲಾ ದೇವತೆಗಳನ್ನೂ ತನ್ನ ಅಧಿದೇವತೆಗಳನ್ನಾಗಿ ಮಾಡಿಕೊಂಡಿರುವವನೂ, ಮಹೇಶ್ವರನೂ (ಸಕಲವಾದ ಐಶ್ವರ್ಯಶೀಲನೂ) ಎಂದು ನನ್ನ ದಿವ್ಯನಾಮಗಳನ್ನು ಹೇಳುವವರಿಗೆ ಈ ಶರೀರವು ಇದೇ ಕೊನೆಯದೆಂದು ಸತ್ಯವಾಗಿಯೂ ವೇದವು ಸಾರುತ್ತಿರುವುದು. ॥೬೪-೬೫॥

ಸಕಲ ದೇವತೆಗಳಲ್ಲಿಯೂ ಉತ್ತಮನಾದವನೂ, ನಾಶವಿಲ್ಲದವನೂ, ನೃಸಿಂಹಾವತಾರಿಯಾದ ವಿಷ್ಣುವನ್ನು ಸೀಳಿದವನೂ, ತನ್ನ ಭಕ್ತರ ಪಾಪಗಳನ್ನು ಹೋಗಲಾಡಿಸುವವನೂ, ಗರುಡನನ್ನೇ ಧ್ವಜವನ್ನಾಗಿ ಧರಿಸಿರುವ ಮಹಾವಿಷ್ಣುವಿನಿಂದ ನಮಸ್ಕರಿಸಲ್ಪಡುವನೂ, ಎಲ್ಲರಿಗೂ ಒಡೆಯನೂ, ಎಂದು ಹೇಳುವರಿಗೆ ಶರೀರ ಪ್ರಾಪ್ತಿಯು ಇದೇ ಸತ್ಯವಾಗಿಯೂ ಕೊನೆಯದೆಂದು ವೇದ ಹೇಳುವುದು. ॥೬೭-೬೮॥

ವಿಷ್ಣುನೇತ್ರಾರ್ಚಿತಾಂಗುಷ್ಠ ಮಹಾದೇವೇತಿ ವಾದಿನಃ ।
ಜೀವನ್ಮುಕ್ತಾ ಹಿ ತೇ ಜ್ಞೇಯಾಃ ಸತ್ಯಮಿತ್ಯಸ್ತಿ ಹಿ ಶ್ರುತಿಃ ॥೧೬॥

ಅನನ್ಯಶರಣಾ ನಿತ್ಯಂ ಯೇಽರ್ಚಯಂತಿ ಮಹೇಶ್ವರಂ ।
ತಾನಹಂ ಪೂಜಯಾಮೀತಿ ವೇದೋಽಪಿ ವದತಿ ಸ್ವಯಂ ॥೨೦॥

ಅನನ್ಯಾಃ ಶಂಕರಂ ನಿತ್ಯಂ ಯೇಽರ್ಚಯಂತಿ ಸುರೇಶ್ವರಂ ।
ನ ತೇಷಾಂ ಗರ್ಭವಾಸಾದಿ ದುಃಖಾನೀತ್ಯಸ್ತಿ ಹಿ ಶ್ರುತಿಃ ॥೨೧॥

ಏವಂ ಸತಿ ದ್ವಿಪೋ ನಿತ್ಯಂ ಬಿಲ್ವಪತ್ರಂ ಜಲಾದಿಭಿಃ ।
ಕರೋತಿ ಪೂಜನಂ ನಿತ್ಯಂ ಕಥಂ ತ್ವಯಿ ಮಹೇಶ್ವರ ॥೨೨॥

ಕೋಽಯಂ ಪೂರ್ವಭವೇ ಸ್ವಾಮಿನ್ ಕಿಮನೇನ ಕೃತಂ ತಪಃ ।
ಯಚ್ಛರೀರಸ್ಯ ವಿಗಮೇ ಸದ್ಯೋ ಮೋಕ್ಷಮವಾಪ್ನುಯಾತ್ ॥೨೩॥

ನಾಗೋಽಪ್ಯಯಂ ಸದಾ ಭಕ್ತ್ಯಾ ರತ್ನೈರತ್ಯುತ್ತಮೈರ್ಮುದಾ ।
ಪೂಜಯತ್ಯಾರ್ದ್ರಭಾವೇನ ಲಿಂಗರೂಪೇ ತ್ವಯಿ ಪ್ರಭೋ ॥೨೪॥

---

ವಿಷ್ಣುವಿನ ಕಣ್ಣಿನಿಂದಪೂಜಿಸಲ್ಪಟ್ಟ ಅಂಗುಷ್ಠವುಳ್ಳವನೂ, ಮಹಾದೇವನೂ, ಎಂದು ನಿನ್ನನ್ನು ಭಜಿಸುವವರು ಸತ್ಯವಾಗಿಯೂ ಜೀವನ್ಮುಕ್ತರೆಂದೇ ತಿಳಿಯಲ್ಪಡಬೇಕು. ಹೀಗೆಂದು ವೇದದಲ್ಲಿ ಹೇಳಿದೆ. ಮತ್ತಾರನ್ನೂ ಮರೆಹೊಗದೇ ನಿತ್ಯವೂ ಆ ಮಹೇಶ್ವರನನ್ನೇ ಪೂಜಿಸುವರನ್ನು ನಾನೂ ಪೂಜೆ ಮಾಡುತ್ತೇನೆಂದು ಸಾಕ್ಷಾತ್ತಾಗಿ ವೇದವೇ ಸಾರುತ್ತಿದೆ. ॥೧೯-೨೦॥

ನಿತ್ಯವೂ ಅನ್ಯಾಸಕ್ತನಾಗದೇ ದೇವತೆಗಳಿಗೆ ಒಡೆಯನಾದ ಆ ಶಂಕರನನ್ನು ಪೂಜೆ ಮಾಡುವನಿಗೆ ತಾಯಿಯ ಗರ್ಭದಲ್ಲಿ ವಾಸಮಾಡುವುದೇ ಮುಂತಾದ ದುಃಖಗಳಿಲ್ಲವೆಂದು ವೇದವಿರುವುದು. ಮಹೇಶ್ವರ, ಹೀಗಿರುವಾಗ ಆ ಆನೆಯು ಬಿಲ್ವಪತ್ರೆ ನೀರು ಮುಂತಾದವುಗಳಿಂದ ನಿತ್ಯವೂ ನಿನ್ನನ್ನು ಹೇಗೆ ಪೂಜೆಮಾಡುತ್ತಿದ್ದಿತೆಂಬುದು ನನಗೆ ಆಶ್ಚರ್ಯವನ್ನುಂಟುಮಾಡುತ್ತಿರುವುದು. ॥೨೧-೨೨॥

ಸ್ವಾಮಿ, ಈ ಆನೆಯು ಹಿಂದಿನ ಜನ್ಮದಲ್ಲಿ ಯಾರು? ಈ ಶರೀರ ನಾಶವಾದಕೂಡಲೇ ಮೋಕ್ಷವನ್ನು ಪಡೆಯುವಂತಹ ತಪಸ್ಸನ್ನೇನು ಮಾಡಿದ್ದನು?

ಏಕೈಕಸ್ಯ ಚ ರತ್ನಸ್ಯ ಮೌಲ್ಯಮೇವ ನ ವಿದ್ಯತೇ ।
ತಾದೃಶಾನಿ ಸಮಾನೀಯ ಕರೋತಿ ಕಥಮರ್ಚನಂ ॥೭೫॥

ಏತತ್ಸರ್ವಂ ವಿಶೇಷೇಣ ಶ್ರೋತವ್ಯಮಿತಿ ವರ್ತತೇ ।
ವದ ಸರ್ವಜ್ಞ ವಿಶ್ವೇಶ ಕರುಣಾಕರ ಶಂಕರ ॥೭೬॥

॥ ಸೂತ ಉವಾಚ ॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸರ್ವದೇವಶಿಖಾಮಣಿಃ ।
ಉವಾಚ ವಚನಂ ಚಾರು ಶ್ರೋತ್ರಾನಂದಕರಂ ಪರಂ ॥೭೭॥

॥ ಶ್ರೀ ಸದಾಶಿವ ಉವಾಚ ॥

ಹಸ್ತೀ ಪೂರ್ವಭವೇ ದೇವಿ ಬ್ರಾಹ್ಮಣೋ ವೇದಪಾರಗಃ ।
ಮಲಯಾಚಲದೇಶಸ್ಥೋ ದರಿದ್ರೋ ವ್ಯಾಧಿಪೀಡಿತಃ ॥೭೮॥

---

ಈ ಸರ್ಪವೂ ಉತ್ತಮವಾದ ರತ್ನಗಳಿಂದಲೂ ಭಕ್ತಿಯಿಂದಲೂ, ಸಂತೋಷದಿಂದಲೂ ಬಹಳ ವಿನಯಪೂರ್ವಕವಾಗಿ ಲಿಂಗಸ್ವರೂಪಿಯಾದ ನಿನ್ನನ್ನು ಯಾವಾಗಲೂ ಪೂಜೆ ಮಾಡುತ್ತಿದ್ದನಲ್ಲವೆ! ॥೭೩-೭೪॥

ಈ ಸರ್ಪರಾಜನು ಪೂಜೆ ಮಾಡುವ ಒಂದೊಂದು ರತ್ನಕ್ಕೂ ಬೆಲೆ ಕಟ್ಟಲು ಸಾಧ್ಯವೇ ಇಲ್ಲ (ಅಮೂಲ್ಯವಾಗಿರುವುದೆಂದು ಭಾವ). ಅಂತಹ ರತ್ನಗಳನ್ನು ಇವನು ಹೇಗೆ ಸಂಪಾದಿಸಿ ನಿನ್ನನ್ನು ಪೂಜಿಸುತ್ತಿರುವನು ? ಇವೆಲ್ಲವನ್ನೂ ವಿಸ್ತಾರವಾಗಿ ಕೇಳಬೇಕೆಂದು ಅಪೇಕ್ಷೆಯುಂಟಾಗಿದೆ. ಸರ್ವಜ್ಞನೂ, ಜಗದೊಡೆಯನೂ, ದಯಾಸಾಗರನೂ ಆದ ಶಂಕರನೇ, ದಯವಿಟ್ಟು ನನಗೆ ಈ ವಿಷಯವನ್ನು ತಿಳಿಸು, ಎಂದು ಪಾರ್ವತಿಯು ಪರಮೇಶ್ವರನನ್ನು ಪ್ರಶ್ನೆ ಮಾಡಿದಳು. ॥೭೫-೭೬॥

ಹೀಗೆ ನುಡಿದ ದೇವಿಯ ಮಾತನ್ನು ಕೇಳಿ ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವ ಆ ಮಹಾದೇವನು ಕೇಳಲು ಆನಂದಕರವಾಗಿರುವಂತೆ ಮನೋಹರವಾಗಿ ಇಂತೆಂದನು. ॥೭೭॥

ದೇವಿ, ಆ ಆನೆಯು ಹಿಂದಿನ ಜನ್ಮದಲ್ಲಿ ವೇದಪಾರಂಗತನಾದ ಒಬ್ಬ ಬ್ರಾಹ್ಮಣನಾಗಿದ್ದನು. ಈತನು ಮಲಯಪರ್ವತದ ತಪ್ಪಲಲ್ಲಿ ವಾಸಿಸುತ್ತಾ ದರಿದ್ರನಾಗಿಯೂ,

ಅನ್ಯಾರ್ಥಂ ಶಿವರಾತ್ರ್ಯಾಯಾಮನೇನೋಪೋಷಣಂ ಕೃತಂ ।
ಕೃತಂ ಜಾಗರಣಂ ರಾತ್ರೌ ತೇನ ಯಾಮಚತುಷ್ಟಯಂ ॥೭೯॥

ರಾತ್ರಾವನ್ಯಕೃತಾಂ ಪೂಜಾಂ ಶಿವಲಿಂಗೇ ಮದಾತ್ಮಕೇ ।
ದದರ್ಶಾಯಮತಿಪ್ರೀತ್ಯಾ ದೀಪಮಾಲಾಂ ಚ ತತ್ಕೃತಾಂ ॥೮೦॥

ತತಃ ಕದಾಚಿತ್ಸರ್ಪೇಣ ದಷ್ಟೋಽಭೂತ್ಸ ತತೋ ಮೃತಃ ।
ತತೋಽಯಮಭವದ್ದಂತೀ ಧರ್ಮವಿಕ್ರಯದೋಷತಃ ॥೮೧॥

ಪೂಜಾ ವಿಲೋಕಿತಾನೇನ ರಾತ್ರೌ ಭಕ್ತ್ಯಾ ಯತೋ ಮಮ ।
ತೇನ ಜಾತಿಸ್ಮರೋ ಜಾತೋ ದ್ವಿಪಜನ್ಮನ್ಯಪಿ ಪ್ರಿಯೇ ॥೮೨॥

ಆಬಾಲ್ಯಮತಿಯತ್ನೇನ ಮಮ ಪೂಜಾಂ ಕರೋತ್ಯಯಂ ।
ಕದಾಚಿದಪಿ ನ ತ್ಯಕ್ತಮನೇನ ಮಮ ಪೂಜನಂ ॥೮೩॥

---

ರೋಗಪೀಡಿತನಾಗಿಯೂ ಇದ್ದನು. ಇವನು ಒಂದುದಿನ ಮತ್ತೊಬ್ಬನಿಗೋಸ್ಕರ ಶಿವರಾತ್ರಿಯದಿನ ಉಪವಾಸ ಮಾಡಿ ರಾತ್ರಿಯಲ್ಲಿ ನಾಲ್ಕು ಜಾವಗಳಲ್ಲಿಯೂ ಜಾಗರಣೆ ಮಾಡಿದನು. ॥೭೮-೭೯॥

ರಾತ್ರಿಯಲ್ಲಿ ನನ್ನ ಸ್ವರೂಪಾತ್ಮಕವಾದ ಶಿವಲಿಂಗದಲ್ಲಿ ಬೇರೊಬ್ಬರಿಂದ ಮಾಡಿದ ಪೂಜೆಯನ್ನೂ, ಹತ್ತಿಸಿದ ದೀಪಮಾಲೆಗಳನ್ನೂ ವಿಶೇಷ ಭಕ್ತಿಯಿಂದ ನೋಡಿದನು. ಅದಾದ ಸ್ವಲ್ಪದಿನಗಳ ಮೇಲೆ ಒಂದಾನೊಂದು ದಿನ ಹಾವಿನಿಂದ ಕಚ್ಚಲ್ಪಟ್ಟು ಸತ್ತುಹೋಗಿ ಈಗ ತಾನುಮಾಡಿದ ಧರ್ಮವಿಕ್ರಯದ (ಮಾರುವಿಕೆಯ) ದೋಷದಿಂದ ಆನೆಯಾಗಿ ಜನಿಸಿದನು. ॥೮೦-೮೧॥

ಪ್ರಿಯೇ, ಶಿವರಾತ್ರಿಯಲ್ಲಿ ಭಕ್ತಿಯಿಂದ ನನ್ನ ಪೂಜೆಯನ್ನು ಈತನು ನೋಡಿದುದರಿಂದ ಈ ಆನೆಯ ಜನ್ಮದಲ್ಲಿಯೂ ತನ್ನ ಹಿಂದಿನ ಜನ್ಮ ಸ್ಮರಣೆಯು ಇವನಿಗೆ ಉಂಟಾಗುತ್ತಿದೆ. ಇವನು ಬಾಲ್ಯದಿಂದಲೂ ನನ್ನ ಪೂಜೆಯನ್ನು ಬಿಡದೆ ನಿಯಮದಿಂದ ಮಾಡುತ್ತಿರುವನು. ಯಾವಾಗಲೂ ನನ್ನ ಪೂಜೆಯನ್ನು ಬಿಟ್ಟವನಲ್ಲ. ॥೮೨-೮೩॥

ಬಿಲ್ವಪತ್ರೈರ್ಜಲೈಃ ಪುಷ್ಪೈರ್ಮಾಮಭ್ಯರ್ಚ್ಯಾನ್ವಹಂ ತತಃ ।
ಜಲಂ ಪಿಬತಿ ತನ್ಮಹ್ಯಂ ನಿವೇದ್ಯೈವ ಪ್ರಯತ್ನತಃ ॥೮೪॥

ಏತಾದೃಶದ್ವಿಪಂ ದೃಷ್ಟ್ವಾ ಬ್ರಹ್ಮವಿಷ್ಣ್ವಾದಯಃ ಸುರಾಃ ।
ಪೂಜಯಂತ್ಯತಿಯತ್ನೇನ ನಮಂತಿ ಚ ಮುಹುರ್ಮುಹುಃ ॥೮೫॥

ಯಾದೃಶಸ್ತಾದೃಶೋ ವಾಸ್ತು ಶಂಕರಾರ್ಚನತತ್ಪರಃ ।
ಪೂಜನೀಯಃ ಪ್ರಯತ್ನೇನ ಸರ್ವಥೇತ್ಯಸ್ತಿ ಹಿ ಶ್ರುತಿಃ ॥೮೬॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚಂಡಾಲ ಏವ ವಾ ।
ಮಾನನೀಯಃ ಪೂಜನೀಯೋ ಮದರ್ಚನಪರಾಯಣಃ ॥೮೭॥

ಭಾರ್ಯಾಪಿ ಯದಿ ಯತ್ನೇನ ಶಿವಪೂಜಾಪರಾ ತದಾ ।
ತಸ್ಯಾಂ ನಿಷ್ಠುರಮುಕ್ತ್ವಾಂತೇ ನರಕಂ ಯಾತಿ ಸರ್ವಥಾ ॥೮೮॥

ಪುತ್ರೋಽಪಿ ಯದಿ ಯತ್ನೇನ ಮದರ್ಚನಪರಸ್ತದಾ ।
ತಸ್ಮಿನ್ನಿಷ್ಠುರಮುಕ್ತ್ವಾಂತೇ ನರಕಂ ಯಾತಿ ಸರ್ವಥಾ ॥೮೯॥

---

ಬಿಲ್ವಪತ್ರೆ, ನೀರು, ಹೂವು ಮುಂತಾದವುಗಳಿಂದ ಪ್ರತಿದಿನವೂ ನನ್ನನ್ನು ಪೂಜೆಮಾಡಿ, ನನಗೆ ನಿವೇದನಮಾಡಿದ ಮೇಲೆಯೇ ತಾನು ನೀರು ಕುಡಿಯುತ್ತಿದ್ದನು. ಈ ರೀತಿಯಾದ ಆನೆಯನ್ನು ನೋಡಿ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ ಸಹ ನಿಯಮದಿಂದ ಅದನ್ನು ಪೂಜಿಸಿ ಪದೇ ಪದೇ ನಮಸ್ಕಾರ ಮಾಡುತ್ತಿರುವರು. ॥೮೪-೮೫॥

ಆ ಶಂಕರನ ಪೂಜಾತತ್ಪರನಾಗಿರುವವನು ಹೇಗಾದರೂ ಇರಲಿ, ಅವನನ್ನು ನಿಯಮದಿಂದ ಅವಶ್ಯವಾಗಿ ಪೂಜೆಮಾಡಬೇಕೆಂದು ಶ್ರುತಿಯಿರುವುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವ ಚಂಡಾಲ ಇವರಾರೇ ಆಗಲೀ ಅವನು ನನ್ನ ಪೂಜಾತತ್ಪರನಾಗಿದ್ದರೆ ಪೂಜಾರ್ಹನೆಂದೇ ತಿಳಿಯಬೇಕು. ॥೮೬-೮೭॥

ಪ್ರಿಯಳೇ, ಹೆಂಡತಿಯಾಗಲೀ, ಮಗನಾಗಲೀ ನಿಯಮದಿಂದ ಶಿವಪೂಜಾತತ್ಪರರಾಗಿದ್ದಾಗ ಅವರಲ್ಲಿ ನಿಷ್ಠೂರವಾಗಿ ಮಾತನಾಡಿ ತುಚ್ಛವಾಗಿ ಕಾಣುವವನು ಖಂಡಿತವಾಗಿಯೂ ನರಕವನ್ನೈದುವನು. ॥೮೮-೮೯॥

ಅಪ್ರಮಾದೇನ ಸತತಂ ನಿಷ್ಠಾ ಯಸ್ಯ ಶಿವಾರ್ಚನೇ ।
ಸ ಪೂಜನೀಯೋ ಯತ್ನೇನ ತಸ್ಮಿನ್ನಮ್ರಃ ಸದಾ ಭವೇತ್ ॥೯೦॥

ಅತ ಏವ ಗಜಂ ಸರ್ವೇ ಪ್ರಣಮಂತಿ ಸುರಾಃ ಸದಾ ।
ಬಿಲ್ವಾರ್ಚನಪ್ರಿಯಂ ನಿತ್ಯಂ ಮದರ್ಚನಪರಾಯಣಂ ॥೯೧॥

ಸ ಸರ್ಪೋಽಪಿ ಪುರಾ ವಿಪ್ರೋ ವೇದಶಾಸ್ತ್ರವಿಶಾರದಃ ।
ಮತ್ಪೂಜಾನಿರತೋ ನಿತ್ಯಂ ಹಿಮವತ್ಪರ್ವತೇ ಸ್ಥಿತಃ ॥೯೨॥

ಸ ದದರ್ಶಾಥ ಗಂಧರ್ವಂ ಶಿವಪೂಜಾಪರಾಯಣಂ ।
ಸ ರತ್ನೈರುತ್ತಮೈರ್ನಿತ್ಯಂ ಮಾಮರ್ಚಯತಿ ಸಾದರಂ ॥೯೩॥

ದ್ವಿಜಸ್ತಮೂಚೇ ಗಂಧರ್ವಂ ಪ್ರಣಿಪತ್ಯಾಭಿಪೂಜ್ಯ ಚ ।
ರತ್ನಾನಿ ಕುತ್ರ ಸಂತೀತಿ ಪಪ್ರಚ್ಛ ವಿನಯಾನ್ವಿತಃ ॥೯೪॥

ತತಸ್ತದ್ವಚನಂ ಶ್ರುತ್ವಾ ಗಂಧರ್ವಸ್ತಮಭಾಷತ ।
ವಿನಯೇನ ಪ್ರಣಮ್ಯೈನಂ ಮದರ್ಚನಪರಾಯಣಂ ॥೯೫॥

---

ಪ್ರಮಾದವಿಲ್ಲದೇ ಯಾವಾಗಲೂ ಶಿವಪೂಜೆಯಲ್ಲಿ ಶ್ರದ್ಧೆಯುಳ್ಳವನನ್ನು ವಿಶೇಷ ನಿಯಮದಿಂದ ಪೂಜಿಸುತ್ತಾ ಅವನಲ್ಲಿ ನಮ್ರನಾಗಿ ನಡೆದುಕೊಳ್ಳಬೇಕು. ಆದರಿಂದಲೇ ಎಲ್ಲಾ ದೇವತೆಗಳೂ ಯಾವಾಗಲೂ ಆ ಆನೆಗೆ ನಮಸ್ಕಾರಮಾಡುತ್ತಿದ್ದರು. ಆ ಆನೆಯು ನಿತ್ಯವೂ ಬಿಲ್ವಪತ್ರೆಗಳನ್ನು ಸಂಪಾದಿಸಲು ಪ್ರೀತಿಯುಳ್ಳದ್ದಾಗಿ ನನ್ನ ಪೂಜೆಯಲ್ಲಿಯೇ ತತ್ಪರವಾಗಿರುತ್ತಿದ್ದಿತು. ॥೯೦-೯೧॥

ಹಿಂದೆ ಆ ಸರ್ಪವೂ ಕೂಡ ವೇದಶಾಸ್ತ್ರಪಾರಂಗತನಾದ ಒಬ್ಬ ಬ್ರಾಹ್ಮಣನೇ ಆಗಿದ್ದನು. ಅವನು ನಿತ್ಯವೂ ಹಿಮವತ್ಪರ್ವತದಲ್ಲಿ ನನ್ನನ್ನು ಪೂಜೆಮಾಡುವುದರಲ್ಲಿಯೇ ನಿರತನಾಗಿದ್ದನು. ಒಂದು ದಿವಸ ಅವನು ಶಿವಪೂಜಾತತ್ಪರನಾಗಿದ್ದ ಒಬ್ಬ ಗಂಧರ್ವನನ್ನು ನೋಡಿದನು. ಆ ಗಂಧರ್ವನೂ ಪ್ರತಿದಿನವೂ ಉತ್ತಮವಾದ ರತ್ನಗಳನ್ನು ತಂದು ನನ್ನನ್ನು ಆದರದಿಂದ ಪೂಜೆಮಾಡುತ್ತಿದ್ದನು. ॥೯೨-೯೩॥

ಆದನ್ನು ಕಂಡ ಬ್ರಾಹ್ಮಣನು ಗಂಧರ್ವನಿಗೆ ಪೂಜೆಮಾಡಿ, ನಮಸ್ಕಾರಮಾಡಿದನಂತರ ವಿನಯದಿಂದ ಈ ರತ್ನಗಳು ನಿನಗೆ ಎಲ್ಲಿಂದ ಬಂದವು? ಎಲ್ಲಿರುವುವೆಂದು ಪ್ರಶ್ನೆಮಾಡಲು, ಆ ಮಾತನ್ನು ಕೇಳಿ ಗಂಧರ್ವನು ತನ್ನಂತೆಯೇ ಶಿವಪೂಜಾಪರಾ

॥ ಗಂಧರ್ವ ಉವಾಚ ॥

ಸಮುದ್ರೈಃ ಸಹ ಸಖ್ಯಂ ಮೇ ಬಹುಧಾ ವರ್ತತೇ ದ್ವಿಜ ।
ತೈರೇವೇತಾನಿ ರತ್ನಾನಿ ದೀಯಂತೇ ಮಹ್ಯಮನ್ವಹಂ ॥೯೬॥

ರತ್ನೈಃ ಪ್ರತ್ಯಹಮಭ್ಯರ್ಚ್ಯ ಶಂಕರಂ ಲೋಕಶಂಕರಂ ।
ತತಃ ಪರಂ ಜಲಾದೀನಿ ಗೃಹ್ಯಂತೇ ನಿಯಮಾಸ್ಮಯಾ ॥೯೭॥

ರತ್ನೈರಭ್ಯರ್ಚ್ಯ ತೈರ್ಲಿಂಗೇ ಸರ್ವಪಾಪೈಃ ಪ್ರಮುಚ್ಯತೇ ।
ರತ್ನಪೂಜನಮಾತ್ರೇಣ ಮುಕ್ತಾಶ್ಚ ಬಹವಃ ಪುರಾ ॥೯೮॥

ಭವತ್ಯೇವ ಹಿ ಸಂತುಷ್ಟಃ ಶಂಕರೋ ರತ್ನಪೂಜಯಾ ।
ಸಂತುಷ್ಟೇ ಶಂಕರೇ ಮುಕ್ತಿರ್ಹಸ್ತಲಭ್ಯೇವ ವಸ್ತುತಃ ॥೯೯॥

ನಾಗಲೋಕೇಽಪಿ ರತ್ನಾನಿ ತಿಷ್ಠಂತ್ಯತ್ಯುತ್ತಮಾನಿ ಚ ।
ಗಚ್ಛ ಪೂಜಯ ಯತ್ನೇನ ಪಾತಾಲಂ ನಾಗಜನ್ಮನಾ ॥೧೦೦॥

---

ಯಣನಾಗಿರುವ ಇವನನ್ನು ನೋಡಿ ನಮಸ್ಕಾರಮಾಡಿ ಅವನೊಡನೆ ಹೀಗೆ ಮಾತನಾಡಿದನು. ॥೯೪-೯೫॥

ಅಯ್ಯ ಬ್ರಾಹ್ಮಣನೇ! ನನಗೆ ಸಮುದ್ರಗಳೊಡನೆ ಸಂಪೂರ್ಣ ಸ್ನೇಹವಿರುವುದು. ಅವುಗಳಿಂದಲೇ ಪ್ರತಿದಿನವೂ ನನಗೆ ಈ ರತ್ನಗಳು ದೊರೆಯುತ್ತಿವೆ. ನಾನು ಆ ರತ್ನಗಳಿಂದ ಜಗನ್ಮಂಗಳಕರನಾದ ಶಂಕರನನ್ನು ಪ್ರತಿದಿನವೂ ನಿಯಮದಿಂದ ಪೂಜೆಮಾಡಿ, ಅನಂತರ ನೀರು ಅನ್ನ ಮುಂತಾದವುಗಳನ್ನು ಆಹಾರವಾಗಿ ತೆಗೆದುಕೊಳ್ಳುತ್ತೇನೆ. ॥೯೬-೯೭॥

ರತ್ನಗಳಿಂದ ಶಿವಲಿಂಗವನ್ನು ಪೂಜೆಮಾಡಿದವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಹಿಂದೆ ಅನೇಕರು ರತ್ನಪೂಜೆಮಾಡಿದ ಮಾತ್ರದಿಂದಲೇ ಮುಕ್ತಿಹೊಂದಿರುವರು. ಆ ಶಂಕರನು ರತ್ನಪೂಜೆಯಿಂದ ನಿಶ್ಚಯವಾಗಿಯೂ ಸಂತುಷ್ಟನಾಗುತ್ತಾನೆ. ಶಂಕರನು ಸಂತುಷ್ಟನಾದರೆ ಮೋಕ್ಷವು ಕೈಗೆ ಬಂದಂತೆಯೇ ಸರಿ. ॥೯೮-೯೯॥

ನಾಗಲೋಕದಲ್ಲಿಯೂ ಉತ್ತಮವಾದ ರತ್ನಗಳಿರುವುವು. ನೀನು ಸರ್ಪಜನ್ಮವನ್ನು ಪಡೆದು ಪಾತಾಳಕ್ಕೆ ಹೋಗಿ ನಿಯಮದಿಂದ ರತ್ನಗಳನ್ನು

ಇತ್ಯುಕ್ತಃ ಸ ತದಾ ವಿಪ್ರಸ್ತ್ಯಕ್ತ್ವಾ ಸದ್ಯಸ್ತನುಂ ಸ್ವಕಾಂ ।
ನಾಗೋ ಬಭೂವ ನಾಗಃ ಸನ್ಸತು ಜಾತಿಸ್ಮರೋಽಭವತ್ ॥೧೦೧॥

ತದಾ ಪ್ರಭೃತಿ ಯತ್ನೇನ ಸ ನಾಗೋಽನ್ವಹಮಾದರಾತ್ ।
ರತ್ನೈರತ್ಯುತ್ತಮೈಃ ಸಮ್ಯಕ್ಪೂಜಯಾಮಾಸ ಭಕ್ತಿತಃ ॥೧೦೨॥

ಏತಾವೇತಾವೃಶೌ ದೇವಿ ಶಿವಪೂಜಾಪರಾಯಣೌ ।
ತನ್ನಾಮ್ನೈವ ಹಿ ತಲ್ಲಿಂಗಂ ಪ್ರಖ್ಯಾತಂ ಮುಕ್ತಿದಾಯಕಂ ॥೧೦೩॥

ಪಶ್ಚಿಮಾಭಿಮುಖಂ ಲಿಂಗಂ ಕಾಲಹಸ್ತೀಶ್ವರಂ ಮುದಾ ।
ಸ್ಮೃತ್ವಾಪಿ ಸರ್ವಪಾಪೇಭ್ಯೋ ಮುಕ್ತೋ ಭವತಿ ಸರ್ವಥಾ ॥೧೦೪॥

ಪಶ್ಚಿಮಾಭಿಮುಖಂ ಲಿಂಗಂ ಶೇಷಾಕಾರಮನುತ್ತಮಂ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಪ್ರಯಾತಿ ಮಮ ಸನ್ನಿಧಿಂ ॥೧೦೫॥

---

ಸಂಪಾದಿಸಿ ಆ ಶಿವನನ್ನು ಪೂಜೆಮಾಡೆಂದು ಗಂಧರ್ವನು ಹೇಳಲು ಆ ಬ್ರಾಹ್ಮಣನು ಕೂಡಲೇ ತನ್ನ ಮನುಷ್ಯ ಶರೀರವನ್ನು ಬಿಟ್ಟು ಸರ್ಪಜನ್ಮವನ್ನು ಹೊಂದಿದನು. ಅವನು ನಾಗನಾಗಿದ್ದರೂ ಹಿಂದಿನ ಜಾತಿಸ್ಮರಣೆಯುಮಾತ್ರ ಅವನಿಗಿದ್ದಿತು. ॥೧೦೦-೧೦೧॥

ಅದು ಮೊದಲುಗೊಂಡು ಆ ಸರ್ಪವೂ ವಿಧ್ಯುಕ್ತ ನಿಯಮದಿಂದ ಆದರ ಪೂರ್ವಕವಾಗಿ ಪ್ರತಿನಿತ್ಯವೂ ಅತ್ಯುತ್ತಮವಾದ ರತ್ನಗಳನ್ನು ತಂದು ನನ್ನನ್ನು ಭಕ್ತಿಯಿಂದ ಪೂಜೆಮಾಡಿದನು. ಎಲೌದೇವಿ, ಇವರಿಬ್ಬರೂ ಇಂತಹ ಮಹಿಮೆಯುಳ್ಳವರು. ಯಾವಾಗಲೂ ನನ್ನ ಪೂಜೆಯಲ್ಲಿಯೇ ನಿರತರು. ಆದರಿಂದಲೇ ಆ ಶಿವಲಿಂಗವು ಅವರಿಬ್ಬರ ಹೆಸರಿನಿಂದಲೇ ಪ್ರಸಿದ್ಧವಾಗಿ ಮೋಕ್ಷಪ್ರದವಾಗಿರುವುದು. ॥೧೦೨-೧೦೩॥

ಪಶ್ಚಿಮದಿಕ್ಕಿಗೆ ಎದುರಾಗಿರುವ ಆ ಕಾಲಹಸ್ತೀಶ್ವರನ ಲಿಂಗವನ್ನು ಪ್ರೀತಿಯಿಂದ ಸ್ಮರಣೆ ಮಾಡಿದ ಮಾತ್ರದಿಂದಲೇ ನನ್ನ ಭಕ್ತನು ಸಕಲ ಪಾಪಗಳಿಂದಲೂ ಬಿಡುಗಡೆಹೊಂದುವನು. ಪಶ್ಚಿಮದಿಕ್ಕಿಗೆ ಅಭಿಮುಖವಾಗಿ ಸರ್ಪಾಕಾರದಂತಿರುವ ಉತ್ತಮವಾದ ಆ ಲಿಂಗವನ್ನು ಬಿಲ್ವಪತ್ರೆಗಳಿಂದ ಪೂಜೆ ಮಾಡಿದವನು ನನ್ನ ಸನ್ನಿಧಾನವನ್ನೈದುವನು. ॥೧೦೪-೧೦೫॥

ನ ದೃಷ್ಟಂ ಯೇನ ತಲ್ಲಿಂಗಂ ತಸ್ಯ ಜನ್ಮ ನಿರರ್ಥಕಂ ।
ನಾರ್ಚಿತಂ ಯೇನ ತಲ್ಲಿಂಗಂ ಜೀವನ್ನಪಿ ಮೃತೋ ಹಿ ಸಃ ॥೧೦೬॥

ದ್ರಷ್ಟವ್ಯೋಽತಿಪ್ರಯತ್ನೇನ ಕಾಲಹಸ್ತೀಶ್ವರೋ ಮುದಾ ।
ಯಷ್ಟವ್ಯೋ ಬಿಲ್ವಪತ್ರಾದ್ಯೈಃ ಸಂಸಾರಭಯನಾಶಕಃ ॥೧೦೭॥

ಶ್ರೀಮದ್ದಕ್ಷಿಣಕೈಲಾಸೇ ಸರ್ವೇ ಬ್ರಹ್ಮಾದಯಃ ಸುರಾಃ ।
ತಿಷ್ಠಂತಿ ದೇವದೇವೇಶಂ ಮಾಮಭ್ಯರ್ಚ್ಯಾನ್ವಹಂ ಮುದಾ ॥೧೦೮॥

ನಿತ್ಯಂ ಶ್ರೀಕಾಲಹಸ್ತೀಶಂ ಯೋಽನುಸೇವಿತುಮಿಚ್ಛತಿ ।
ಸ ಮದೀಯೋ ಗಣೋ ಜ್ಞೇಯೋ ಮಮ ಪ್ರಿಯಕರಶ್ಚ ಸಃ॥೧೦೯॥

ಪ್ರಾಣವಿಶ್ಲೇಷಸಮಯೇ ಕಾಲಹಸ್ತೀಶ್ವರೇತಿ ಮಾಂ ।
ಯಃ ಸ್ಮರಿಷ್ಯತಿ ಭಾಗ್ಯೇನ ತಸ್ಮೈ ಮೋಕ್ಷಂ ದದಾಮ್ಯಹಂ ॥೧೧೦॥

ಯಂ ಯಂ ಕಾಮಯತೇ ಕಾಮಂ ಪ್ರಾಣವಿಶ್ಲೇಷಣಕ್ಷಣೇ ।
ತಸ್ಮಿನ್ ಕ್ಷೇತ್ರವರೇ ದೇವಿ ತಂ ತಂ ಕಾಮಂ ಸ ವಿಂದತಿ ॥೧೧೧॥

---

ಆ ಲಿಂಗವನ್ನು ದರ್ಶನ ಮಾಡದಿರುವವನ ಬಾಳು ನಿರರ್ಥಕವೆಂದು ತಿಳಿ. ಆ ಶಿವಲಿಂಗವನ್ನು ಪೂಜೆ ಮಾಡದವನು ಬದುಕಿದ್ದರೂ ಸತ್ತಂತೆಯೇ. ಆ ಕಾಲ ಹಸ್ತೀಶ್ವರನನ್ನು ವಿಶೇಷ ನಿಯಮದಿಂದ ಸಂತೋಷಪೂರ್ವಕವಾಗಿ ಕಾಣಬೇಕು. ಆ ಶಿವಲಿಂಗವು ಸಂಸಾರದ ಭಯವನ್ನು ಹೋಗಲಾಡಿಸುವುದಾದ್ದರಿಂದ ಬಿಲ್ವ ಪತ್ರೆಯೇ ಮುಂತಾದ ಸಾಧನಗಳಿಂದ ನಿಯಮಪೂರ್ವಕವಾಗಿ ಅದನ್ನು ಪೂಜೆ ಮಾಡಬೇಕು. ॥೧೦೬-೧೦೭॥

ಸಂಪತ್ಕರವಾದ ಆ ದಕ್ಷಿಣಕೈಲಾಸದಲ್ಲಿ (ಕಾಳಹಸ್ತಿಯಲ್ಲಿ) ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ದೇವದೇವಾಧಿಪತಿಯಾದ ನನ್ನನ್ನು ಸಂತೋಷದಿಂದ ಪ್ರತಿನಿತ್ಯವೂ ಪೂಜೆ ಮಾಡುತ್ತಿರುವರು. ನಿತ್ಯವೂ ಆ ಕಾಲಹಸ್ತೀಶ್ವರನನ್ನು ಸೇವೆ ಮಾಡಲಿಚ್ಛಿಸುವವನು ನನ್ನ ಗಣವೆಂದು ಪರಿಗಣಿಸಲ್ಪಟ್ಟು ನನಗೆ ತುಂಬಾ ಪ್ರೀತಿಕರ ನೆನಿಸುವನು. ॥೧೦೮-೧೦೯॥

ಪ್ರಾಣ ಹೋಗುವ ಕಾಲದಲ್ಲಿ ಕಾಲಹಸ್ತೀಶ್ವರ, ಎಂದು ನನ್ನನ್ನು ಅದೃಷ್ಟ ವಶದಿಂದ ಸ್ಮರಣೆ ಮಾಡುವವನಿಗೂ ನಾನು ತಪ್ಪದೇ ಮೋಕ್ಷವನ್ನು ಕೊಡುತ್ತೇನೆ.

ತನ್ಮೋಕ್ಷದಂ ಕಾಮದಂ ಚ ತತ್ತು ಕ್ಷೇತ್ರಮನುತ್ತಮಂ ।
ಅತ ಏವ ಹಿ ತತ್ಕ್ಷೇತ್ರಂ ಸೇವನೀಯಂ ಪ್ರಯತ್ನತಃ ॥೧೧೨॥

ಪುರಾ ಕಶ್ಚಿದ್ದ್ವಿಜಃ ಸ್ನಾತ್ವಾ ಸುವರ್ಣಮುಖರೀಜಲೇ ।
ಪೂಜಯಾಮಾಸ ಯತ್ನೇನ ಕಾಲಹಸ್ತೀಶ್ವರಂ ಮುದಾ ॥೧೧೩॥

ತತಃ ಪ್ರದಕ್ಷಿಣಾದೀನಿ ಕೃತ್ವಾ ಸುಷ್ವಾಪ ಚಿಂತಯಾ ।
ತತಃ ಸ್ವಪ್ನೋ ಬಭೂವೇಷಂ ತಸ್ಯ ಚಿಂತಾವಿನಾಶಕಃ ॥೧೧೪॥

ಯತ್ಸ್ವಪ್ನಶ್ರವಣಾದೇವ ರೋಮಾಂಚಸ್ತೇ ಭವಿಷ್ಯತಿ ।
ಸುಭಗೇ ತಾದೃಶಂ ವಕ್ಷ್ಯೇ ಶೃಣು ಸ್ವಪ್ನಂ ಪ್ರಯತ್ನತಃ ॥೧೧೫॥

॥ ಶ್ರೀ ಶಿವ ಉವಾಚ ॥

ಚಿಂತಾಂ ಮಾ ಕುರು ವಿಪ್ರೇಂದ್ರ ಕ್ಷೇತ್ರೇಽಸ್ಮಿನ್ ಕಾಮದೇ ಮಮ ।
ಚಿಂತಿತಾರ್ಥಪ್ರದೋಽತ್ರಾಹಂ ನಿವಸಾಮಿ ನ ಸಂಶಯಃ ॥೧೧೬॥

---

ದೇವಿ, ಆ ಉತ್ತಮವಾದ ಕ್ಷೇತ್ರದಲ್ಲಿ ಸಾಯುವಾಗ ಮಾನವನು ಬೇಡುವ ಸಕಲ ಇಷ್ಟಾರ್ಥಗಳೂ ತಪ್ಪದೆ ಅವನಿಗೆ ದೊರೆಯುವುವು. ॥೧೧೦-೧೧೧॥

ಆ ಕ್ಷೇತ್ರವು ಸಕಲ ಇಷ್ಟಾರ್ಥಗಳನ್ನೂ ಮತ್ತು ಮೋಕ್ಷವನ್ನೂ ಕೊಡಬಲ್ಲ ಉತ್ತಮವಾದ ಕ್ಷೇತ್ರವಾಗಿರುವುದು. ಆದ್ದರಿಂದಲೇ ಆ ಕ್ಷೇತ್ರವನ್ನು ಅವಶ್ಯವಾಗಿ ನಿಯಮದಿಂದ ಎಲ್ಲರೂ ಆಶ್ರಯಿಸಿ ಸೇವಿಸಬೇಕು. ಹಿಂದೆ ಇದೇ ಕ್ಷೇತ್ರದಲ್ಲಿ ಒಬ್ಬ ಬ್ರಾಹ್ಮಣನು ಸುವರ್ಣಮುಖರೀ ನದಿಯ ನೀರಿನಲ್ಲಿ ಸ್ನಾನಮಾಡಿ ಶ್ರುತಿ ನಿಯಮಪೂರ್ವಕವಾಗಿ ಪ್ರೀತಿಯಿಂದ ಕಾಲಹಸ್ತೀಶ್ವರನನ್ನು ಪೂಜೆ ಮಾಡಿದನು. ॥೧೧೨-೧೧೩॥

ಅನಂತರ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡಿ ಮನಸ್ಸಿನಲ್ಲಿ ಯೋಚನೆ ಮಾಡುತ್ತಾ ಮಲಗಿಕೊಂಡನು. ಆಗ ಅವನಿಗೆ ಆ ಯೋಚನೆಯನ್ನು ಹೋಗಲಾಡಿಸುವ ಸ್ವಪ್ನವಾಯಿತು. ಸುಂದರಾಂಗಿಯಾದ ದೇವಿಯೇ, ಆ ಕನಸಿನ ಸಮಾಚಾರವನ್ನು ಕೇಳಿದ ಮಾತ್ರದಿಂದಲೇ ನಿನಗೆ ರೋಮಾಂಚವುಂಟಾಗುವಂತಿರುವ ವೃತ್ತಾಂತವನ್ನು ನಿನಗೆ ಹೇಳುತ್ತೇನೆ ಗಮನವಿಟ್ಟು ಕೇಳು, ಎಂದು ಪರಮೇಶ್ವರನು ಇಂತೆಂದನು. ॥೧೧೪-೧೧೫॥

ಓ ಬ್ರಾಹ್ಮಣೋತ್ತಮನೇ, ಸಕಲ ಇಷ್ಟಾರ್ಥಗಳನ್ನೂ ಕೊಡುವ ಈ ನನ್ನ

ಆದೇಹಪಾತಂ ಯತ್ನೇನ ಕುರು ಮತ್ಪೂಜನಂ ಸದಾ ।
ತೇನಾಹಂ ಸರ್ವಥಾ ಕಾಮಾನ್ಪೂರಯಿಷ್ಯೇ ನ ಸಂಶಯಃ ॥೧೧೭॥

ಮಾಮಾಶ್ರಿತ್ಯ ಮಹಾದೇವಂ ಸರ್ವಾಭೀಪ್ಸಿತದಾಯಕಂ ।
ನ ಕೋಽಪಿ ಚಿಂತಾವಶಗೋ ನ ಜಾತೋ ನ ಭವಿಷ್ಯತಿ ॥೧೧೮॥

ತಾವದ್ದುಃಖಾನಿ ಚಿಂತಾಽನಿ ಯಾವನ್ಮಾಂ ನೋಪಸೇವತೇ ।
ಮಯಿ ಸಂಸೇವಿತೇ ನಿತ್ಯಂ ಭವತ್ಯಾನಂದ ಏವ ಹಿ ॥೧೧೯॥

ಅಹಂ ತ್ವನನ್ಯಸದೃಶಃ ಸರ್ವದೇವಶಿಖಾಮಣಿಃ ।
ಉಪೇಂದ್ರೇಂದ್ರಾದಯೋ ದೇವಾಃ ಸರ್ವೇಽಪಿ ಮಮ ಸೇವಕಾಃ ॥೧೨೦॥

ಮತ್ತ ಏವಾಭವದ್ವಿಷ್ಣುರ್ಮತ್ತ ಏವಾಭವದ್ವಿಧಿಃ ।
ಮತ್ತ ಏವ ತದನ್ಯಚ್ಚ ಜಗದಾಸೀಚ್ಚರಾಚರಂ ॥೧೨೧॥

---

ಕ್ಷೇತ್ರದಲ್ಲಿ ನೀನೆಂದಿಗೂ ಯೋಚನೆ ಮಾಡಬೇಡ. ನಾನು ನನ್ನ ಭಕ್ತರಿಗೆ ಇಲ್ಲಿ ಬಯಸಿದ ಇಷ್ಟಾರ್ಥಗಳನ್ನು ಕೊಡುತ್ತಾ ನೆಲಸಿರುವೆನು. ಇದರಲ್ಲಿ ಸಂದೇಹ ಪಡಬೇಡ. ಈ ಶರೀರವು ಬಿದ್ದುಹೋಗುವವರೆಗೂ ನೀನು ನಿಯಮದಿಂದ ಯಾವಾಗಲೂ ನನ್ನನ್ನು ಪೂಜೆಮಾಡು. ಇದರಿಂದ ನಾನು ನಿನ್ನ ಸಕಲ ಇಷ್ಟಾರ್ಥಗಳನ್ನೂ ಈಡೇರಿಸುವೆನು. ॥೧೧೬-೧೧೭॥

ಎಲ್ಲಾ ಮನೋರಥಗಳನ್ನೂ ಸಲ್ಲಿಸುವ ಮಹಾದೇವನೆನಿಸಿದ ನನ್ನನ್ನಾಶ್ರಯಿಸಿದವರಿಗೆ ಚಿಂತೆಯಾಗಲಿ ಹುಟ್ಟುಸಾವುಗಳಾಗಲಿ ಇರಲಿಲ್ಲ. ಇರುವುದೂ ಇಲ್ಲ. ನನ್ನನ್ನು ಸೇವಿಸದೇ ಇರುವವರೆಗೆ ಮಾತ್ರ ಆ ದುಃಖಗಳೂ ಮತ್ತು ಯೋಚನೆಯೂ ಇರುತ್ತದೆ. ನನ್ನನ್ನು ಸೇವೆ ಮಾಡಿದಮೇಲೆ ನಿತ್ಯಾನಂದವೇ ಉಂಟಾಗುತ್ತದೆ ಯೆಂಬುದರಲ್ಲಿ ಸಂದೇಹವೇ ಇಲ್ಲ. ॥೧೧೮-೧೧೯॥

ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವ ನಾನು ಮತ್ತೊಬ್ಬರಿಗೆ ಎಂದೂ ಸಮಾನವಾಗಲಾರೆನು. ವಿಷ್ಣು, ದೇವೇಂದ್ರ ಮುಂತಾದವರೆಲ್ಲರೂ ನನ್ನ ಸೇವಕರು. ವಿಷ್ಣುವೂ, ಆ ಬ್ರಹ್ಮನೂ ನನ್ನಿಂದಲೇ ಉಂಟಾದರು. ಉಳಿದ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನನ್ನಿಂದಲೇ ನಿರ್ಮಿಸಲ್ಪಟ್ಟಿತೆಂದು ತಿಳಿ. ॥೧೨೦-೧೨೧॥

ಚಿಂತಾ ನ ಕಾರ್ಯಾ ವಿಪ್ರೇಂದ್ರ ತವಾಭೀಷ್ಟಂ ದದಾಮ್ಯಹಂ ।
ಮದ್ಭಕ್ತಾಯ ಸುಶೀಲಾಯ ನಾದೇಯಂ ಮಮ ವರ್ತತೇ ॥೧೨೨॥

ದ್ವಿಜೋಪೇಂದ್ರತ್ವಮಿಂದ್ರತ್ವಂ ಬ್ರಹ್ಮತ್ವಂ ವಾ ಯದಿ ತ್ವಯಾ ।
ಪ್ರಾರ್ಥ್ಯತೇ ತನ್ಮಯಾ ತುಭ್ಯಂ ದೇಯಮೇವ ನ ಸಂಶಯಃ ॥೧೨೩॥

ಕಿಂಚೇದಂ ಕಾಮದಂ ಕ್ಷೇತ್ರಂ ಮಮ ಪ್ರಿಯಕರಂ ದ್ವಿಜ ।
ಅತ್ರಾಭೀಷ್ಟಂ ದದಾಮ್ಯೇವ ಮದ್ಭಕ್ತಾಯ ನ ಸಂಶಯಃ ॥೧೨೪॥

ಏತಾದೃಶೀಂ ಸ್ವಪ್ನವಾರ್ತಾಂ ಪ್ರಾತರುತ್ಥಾಯ ಯತ್ನತಃ ।
ಕಥಯಾಮಾಸ ಶೈವೇಭ್ಯೋ ವಿನೀತೋ ಭಕ್ತಿಪೂರ್ವಕಂ ॥೧೨೫॥

ತತಸ್ತಾಂ ಸ್ವಪ್ನವಾರ್ತಾಂ ತೇ ಶ್ರುತ್ವಾ ಶೈವೋತ್ತಮಾಸ್ತದಾ ।
ಸಂತೋಷಂ ಪರಮಂ ಪ್ರಾಪುರಪೂರ್ವಸ್ವಪ್ನವಾರ್ತಯಾ ॥೧೨೬॥

ತದಾ ಪ್ರಭೃತಿ ವಿಪ್ರೋಽಸೌ ಪ್ರಯತ್ನೇನ ಮದರ್ಚನಂ ।
ಕೃತ್ವಾ ಕದಾಚಿದ್ವಿಜಹೌ ಪ್ರಾಣಾನ್ಮಾಮನುಸಂಸ್ಮರನ್ ॥೧೨೭॥

---

ಎಲೈ ಬ್ರಾಹ್ಮಣಶ್ರೇಷ್ಠನೇ, ನೀನು ಯೋಚಿಸಬೇಡ. ನಿನ್ನ ಅಭೀಷ್ಟವೇನಿದ್ದರೂ ನಾನು ಕೊಡುವೆನು. ಸಾಧು ಸ್ವಭಾವವುಳ್ಳ ನನ್ನ ಭಕ್ತನಿಗೆ ಕೊಡದೇ ಇರುವ ವಸ್ತುವು ನನ್ನಲ್ಲಿ ಯಾವುದುತಾನೇ ಇರುವುದು? ಬ್ರಾಹ್ಮಣನೇ, ಇಂದ್ರ, ವಿಷ್ಣು, ಬ್ರಹ್ಮ ಇವರಲ್ಲಿ ಯಾರ ಪದವಿ ಬೇಕಾದರೂ ಪ್ರಾರ್ಥಿಸು. ನಿನಗೆ ಸಂದೇಹವಿಲ್ಲದೇ ನಾನು ಕೊಡುವೆನು. ॥೧೨೨-೧೨೩॥

ಅಯ್ಯ ಬ್ರಾಹ್ಮಣನೇ, ಇದಲ್ಲದೇ ಸಕಲ ಮನೋರಥಗಳನ್ನೂ ಈಡೇರಿಸುವ ಈ ಕ್ಷೇತ್ರವು ನನಗೆ ತುಂಬಾ ಪ್ರೀತಿಕರವಾಗಿರುವುದು. ಈ ಕ್ಷೇತ್ರದಲ್ಲಿ ನನ್ನ ಭಕ್ತನು ಬೇಡುವ ಅಭೀಷ್ಟವನ್ನೆಲ್ಲಾ ತಪ್ಪದೇ ನಾನು ಕೊಡಲು ಸಿದ್ಧನಿರುವೆನೆಂದು ಹೇಳಲು, ಈ ರೀತಿಯಾದ ತನ್ನ ಕನಸಿನ ಸುದ್ದಿಯನ್ನು ಆ ಬ್ರಾಹ್ಮಣನು ಬೆಳಗಾಗುತ್ತಲೇ ಎದ್ದು ಇತರ ಶಿವಭಕ್ತರಿಗೆ ವಿನಯದಿಂದಲೂ, ಭಕ್ತಿಪೂರ್ವಕವಾಗಿಯೂ ತಿಳಿಸಿದನು. ॥೧೨೪-೧೨೫॥

ಆಗ ಶಾಂಭವಶ್ರೇಷ್ಠರೆಲ್ಲರೂ ಅವನು ಹೇಳಿದ ಸ್ವಪ್ನಸಮಾಚಾರನನ್ನು ಕೇಳಿ, ಆ ಸುದ್ದಿಯಿಂದ ತುಂಬಾ ಸಂತೋಷಪಟ್ಟರು. ಅದುಮೊದಲು ಆ

ತದಾನೀಮೇವ ಶೈವಾಯ ಸೋಽಹಂ ಪ್ರತ್ಯಕ್ಷತಾಂ ಗತಃ ।
ತತಃ ಪ್ರಣಮ್ಯ ಮಾಂ ವಿಪ್ರಶ್ಚಕಾರ ಸ್ತೋತ್ರಮಾದರಾತ್ ॥೧೨೮॥

ತತಃ ಸ ವಿಪ್ರೋ ವಿನಯಾನ್ನತ್ವಾ ಸಂಪೂಜ್ಯ ಮಾಂ ಶಿವೇ ।
ಇದಮೇವ ವಚಃ ಪ್ರಾಹ ಕೃತಾಂಜಲಿಪುಟಸ್ತದಾ ॥೧೨೯॥

॥ ದ್ವಿಜ ಉವಾಚ ॥

ಅನಾಮಯಂ ಪದಂ ಮಹ್ಯಂ ದೇಹಿ ಶಂಕರ ಸರ್ವದಾ ।
ಯತ್ಪ್ರಾಪ್ಯ ನ ನಿವರ್ತಂತೇ ಕಲ್ಪಾಂತೇಽಪ್ಯಕ್ಷಯಂ ಪದಂ ॥೧೩೦॥

ಮಯಾ ನ ಯಾಚ್ಯತೇ ಶಂಭೋ ವಿಷ್ಣುತ್ವಂ ತೇನ ಕಿಂ ಮಮ ।
ವಿಷ್ಣೋರಪಿ ಯತೋ ಘೋರೋ ಗರ್ಭವಾಸೋಽಖಿಲೈಃ ಶ್ರುತಃ ॥೧೩೧॥

ಸಂಸಾರೋಽಪಿ ಮಹಾನೇವ ವಿಷ್ಣುನಾಽಪ್ಯನುಭೂಯತೇ ।
ಉತ್ಪತ್ತಿರ್ಬಹುಧಾ ಜಾತಾ ತಸ್ಯ ಮತ್ಸ್ಯಾದಿಯೋನಿಷು ॥೧೩೨॥

---

ಬ್ರಾಹ್ಮಣನು ಕಡುನಿಯಮದಿಂದ ನನ್ನನ್ನು ಪೂಜೆಮಾಡುತ್ತಿದ್ದು ಒಂದುದಿನ ನನ್ನನ್ನೇ ಸ್ಮರಣೆಮಾಡುತ್ತಾ ಪ್ರಾಣಬಿಟ್ಟನು. ॥೧೨೬-೧೨೭॥

ದೇವಿ, ಆ ಕಾಲದಲ್ಲಿಯೇ ನಾನು ಆ ಶೈವನಿಗೆ ಪ್ರತ್ಯಕ್ಷನಾದೆನು. ಅವನು ಕೂಡಲೇ ಎದ್ದು ನನಗೆ ನಮಸ್ಕಾರ ಮಾಡಿ ಆದರದಿಂದ ನನ್ನನ್ನು ಸ್ತೋತ್ರಮಾಡಿದನು. ಪುನಃಪುನಃ ಆ ಬ್ರಾಹ್ಮಣನು ವಿನಯದಿಂದ ನನಗೆ ನಮಸ್ಕಾರ ಮಾಡಿ ನನ್ನನ್ನು ಪೂಜಿಸಿ ಕೈಮುಗಿದುಕೊಂಡು ನನ್ನೊಡನೆ ಹೀಗೆಂದನು. ॥೧೨೮-೧೨೯॥

ಶಂಕರನೇ, ಕಲ್ಪದ ಕೊನೆಯಲ್ಲಿಯೂ ನಾಶವಿಲ್ಲದ, ಶಾಶ್ವತವಾಗಿರುವ, ಯಾವ ವಿಧವಾದ ರೋಗರುಜಿನಾದಿಗಳಿಗೂ ಎಡೆಯಿಲ್ಲದ ಸ್ಥಾನವನ್ನು ನನಗೆ ಕೊಡು. ಶಂಭುವೇ, ನನಗೆ ಆ ವಿಷ್ಣುಪದವಿಯು ಬೇಡ. ಅದರಿಂದೇನು ತಾನೇ ನನಗೆ ಪ್ರಯೋಜನ! ಆ ವಿಷ್ಣುವೇ ಭಯಂಕರವಾದ ಗರ್ಭವಾಸವನ್ನನುಭವಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ॥೧೩೦-೧೩೧॥

ದೊಡ್ಡ ಸಂಸಾರವನ್ನೇ ಆ ವಿಷ್ಣುವು ಅನುಭವಿಸುತ್ತಿರುವನಲ್ಲವೇ! ಅವನಿಗೆ ಮೀನು ಮುಂತಾದ ಅನೇಕ ಯೋನಿಗಳಲ್ಲಿ ಉತ್ಪತ್ತಿಯುಂಟಾಯಿತು.

ತ್ವಯಾ ದತ್ತೋಽಸ್ತಿ ವೈಕುಂಠಃ ಶಿವಭಕ್ತಾಯ ವಿಷ್ಣವೇ ।
ತ್ವಯಿ ಭಕ್ತಿಃ ಕೃತಾ ತೇನ ತದರ್ಥಂ ಪೂರ್ವಮೀಶ್ವರ ॥೧೩೩॥

ಅಲಬ್ಧಾನ್ಯಪದಸ್ಯಾಸ್ಯ ತದ್ವಿಷ್ಣೋಃ ಪರಮಂ ಪದಂ ।
ಅಲಬ್ಧಾನ್ಯಪದಾಃ ಕೇಚಿತ್ತದ್ವಿಪಶ್ಯಂತಿ ಸೂರಯಃ ॥೧೩೪॥

ಕದನ್ನಮಪ್ಯನನ್ನಸ್ಯ ಪರಮಾನ್ನಂ ಯಥಾ ತಥಾ ।
ಅಲಬ್ಧಾನ್ಯಪದಸ್ಯಾಸೀತ್ತದ್ವಿಷ್ಣೋಃ ಪರಮಂ ಪದಂ ॥೧೩೫॥

ನಿತ್ಯಂ ನಿಷ್ಕಂಟಕಂ ರಾಜ್ಯಂ ಭಾಗ್ಯವಾನಭಿವಾಂಛತಿ ।
ಕ್ಷುತ್ಪೀಡಿತೋ ದರಿದ್ರಸ್ತು ಕುತ್ಸಿತಾನ್ನಾನಿ ವಾಂಛತಿ ॥೧೩೬॥

ಅಲಬ್ಧಾನ್ಯಪದೋ ವಿಷ್ಣುಸ್ತದಾ ವೈಕುಂಠವಾಂಛಯಾ ।
ತ್ವಯಿ ಭಕ್ತಿಂ ಚಕಾರಾತೋ ವೈಕುಂಠಂ ಪ್ರಾಪ ಕೇಶವಃ ॥೧೩೭॥

---

ದೇವ, ನಿನ್ನ ಭಕ್ತನಾಗಿ ಹಿಂದೆ ವಿಷ್ಣುವು ಭಕ್ತಿಯಿಂದ ನಿನ್ನನ್ನು ಸೇವಿಸಿದುದರಿಂದ ಆ ವಿಷ್ಣುವಿಗೆ ನೀನೇ ವೈಕುಂಠಲೋಕವನ್ನು ಕರುಣಿಸಿರುವೆ. ||೧೩೨-೧೩೩||

ಇನ್ನಾವ ಉತ್ತಮವಾದ ಸ್ಥಾನವೂ ದೊರೆಯದಿದ್ದರೆ ಆ ವಿಷ್ಣುವಿನ ಸ್ಥಾನವೇ ಉತ್ಕೃಷ್ಟವಾದ ಸ್ಥಳವೆನಿಸುವುದು. ಕೆಲವು ಮಂದಿ ಪಂಡಿತರು ಉತ್ತಮವಾದ ಮೋಕ್ಷಾದಿಗಳನ್ನು ಹೊಂದಲಾರದೇ ಆ ವೈಕುಂಠವನ್ನೇ ಬಯಸುತ್ತಾರೆ. ಅನ್ನವೇ ಇಲ್ಲದವನಿಗೆ ನೀಚವಾದ ಅನ್ನವೇ ಪರಮಾನ್ನವೆನಿಸುವಂತೆ ಇತರ ಯಾವ ಸ್ಥಾನಗಳೂ ದೊರೆಯದವನಿಗೆ ಆ ವೈಕುಂಠವೇ ಉತ್ತಮವಾದ ಸ್ಥಾನವಾಗುವುದು. ||೧೩೪-೧೩೫||

ಭಾಗ್ಯವಂತನು ನಿತ್ಯವೂ ಯಾವ ವಿಧವಾದ ತೊಂದರೆಯೂ ಇಲ್ಲದಿರುವ ರಾಜ್ಯವನ್ನಪೇಕ್ಷಿಸುವನು. ಹಸಿವಿನಿಂದ ಬಳಲಿದ ಬಡವನು ನೀಚಾನ್ನವನ್ನೇ ಬಯಸುವನು. ಆ ವಿಷ್ಣುವಿಗೆ ಮತ್ತಾವ ಸ್ಥಾನವೂ ದೊರೆಯದೆ ಆ ವೈಕುಂಠವನ್ನೇ ಹೊಂದಬೇಕೆಂಬ ಅಪೇಕ್ಷೆಯಿಂದ ನಿನ್ನಲ್ಲಿ ಭಕ್ತಿ ತೋರಿಸಿ ಆಗ ವೈಕುಂಠಲೋಕವನ್ನು ಹೊಂದಿದನು. ||೧೩೬-೧೩೭||

ಮಯಾ ವೈಕುಂಠಲೋಕಸ್ತು ಮನಸಾಪಿ ನ ಗಣ್ಯತೇ ।
ತಸ್ಮಾತ್ಪದಂ ಮಹಾದೇವ ದೇಹಿ ಮಹ್ಯಮನಾಮಯಂ ॥೧೩೮॥

ಮಯಾ ಬ್ರಹ್ಮತ್ವಮಿಂದ್ರತ್ವಂ ಕೃತಂ ಯವಸವತ್ಪ್ರಭೋ ।
ನ ತತ್ರ ವಾಂಛಾ ಸ್ವಪ್ನೇಽಪಿ ಜಾಯತೇ ಮನ್ಮನಸ್ತ್ವಯಿ ॥೧೩೯॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಶಾಂಕರಸ್ಯ ಮಹಾತ್ಮನಃ ।
ತಸ್ಮೈ ಮುಕ್ತಿರ್ಮಯಾ ದತ್ತಾ ಪ್ರೀತಿಪೂರ್ವಕಮಾದರಾತ್ ॥೧೪೦॥

ಷಷ್ಟ್ಯರ್ಬುದ ಸಹಸ್ರಾಣಿ ಶಾಂಕರಾಸ್ತತ್ರ ಸರ್ವದಾ ।
ಅನನ್ಯಮನಸಃ ಸಂತಿ ಮದರ್ಚನಪರಾಯಣಾಃ ॥೧೪೧॥

ತೇಽಪ್ಯೇವಮೇವ ಬ್ರಹ್ಮಾದೀನ್ಕದಾಚಿದಪಿ ಶೋಭನೇ ।
ಶೈವಾ ನ ಗಣಯಂತ್ಯೇವ ಮದರ್ಚನಪರಾಯಣಾಃ ॥೧೪೨॥

ಅಸ್ಮಾಭಿರತ್ರ ಮರಣಾನ್ಮುಕ್ತಿಃ ಪ್ರಾಪ್ಯೈವ ಸರ್ವಥಾ ।
ವಿಷ್ಣುಬ್ರಹ್ಮಾದಿದೇವಾನಾಂ ಕದಾ ಮುಕ್ತಿರ್ಭವಿಷ್ಯತಿ ॥೧೪೩॥

---

ಆ ವೈಕುಂಠಲೋಕವನ್ನು ಮನಸ್ಸಿನಲ್ಲಿಯೂ ಸಹ ನಾನು ಬಯಸುವುದಿಲ್ಲವು. ಆದ್ದರಿಂದ ಎಲೈ ಮಹಾದೇವನೇ, ನನಗೆ ಯಾವ ವಿಧವಾದ ತೊಂದರೆಯೂ ಇಲ್ಲದೆ ಇರುವ ಸ್ಥಾನವನ್ನು ಕೊಡು. ಪ್ರಭುವೇ, ಬ್ರಹ್ಮಪದವಿ ಮತ್ತು ದೇವೇಂದ್ರ ಪಟ್ಟ ಇವುಗಳನ್ನು ನಾನು ಒಣಹುಲ್ಲಿನಂತೆ ಅಪ್ರಯೋಜಕವೆಂದು ಭಾವಿಸಿರುವುದರಿಂದ ಕನಸ್ಸಿನಲ್ಲಿಯೂ ನನ್ನ ಮನಸ್ಸು ಆದರಲ್ಲಿ ಪ್ರವರ್ತಿಸುವುದಿಲ್ಲ. ಎಂದು ಹೇಳಿದ ಆ ಪರಮಭಕ್ತನಾದ ಮಹಾತ್ಮನ ಮಾತುಗಳನ್ನು ಕೇಳಿ ನಾನು ಪ್ರೀತಿಪುರಸ್ಸರವಾಗಿ ಆದರದಿಂದ ಅವನಿಗೆ ಮೋಕ್ಷವನ್ನು ಕರುಣಿಸಿದೆನು. ॥೧೩೮-೧೩೯-೧೪೦॥

ಅಲ್ಲಿ ಯಾವಾಗಲೂ ಅರುವತ್ತು ಅರ್ಬುದ ಸಹಸ್ರ ಮಂದಿ ನನ್ನ ಭಕ್ತರು ಮತ್ತಾವ ದೇವತೆಗಳಲ್ಲಿಯೂ ಮನಸ್ಸಿಡದೆ ನನ್ನನ್ನೇ ಪೂಜೆಮಾಡುತ್ತಿರುವರು. ಎಲೌ ಶೋಭನಾಂಗಿ, ಅವರೆಲ್ಲರೂ ಹೀಗೆಯೇ ನನ್ನ ಪೂಜಾತತ್ಪರರಾಗಿರುವುದರಿಂದ ಬ್ರಹ್ಮಾದಿ ದೇವತೆಗಳನ್ನೂ ಅವರು ಗಣನೆಮಾಡುತ್ತಿಲ್ಲ. ॥೧೪೧. ೧೪೨॥

ನಮಗೇನೋ ಇಲ್ಲಿ ಮರಣಹೊಂದುವುದರಿಂದ ಮೋಕ್ಷವುಂಟಾಗುವುದು ಖಂಡಿತ. ಆದರೆ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳಿಗೆ ಯಾವಾಗ ಮುಕ್ತಿಯುಂ

ಸಂಸಾರಪಾಶಸಂಬದ್ಧಾ ವಿಷ್ಣುಬ್ರಹ್ಮಾದಯಃ ಸುರಾಃ ।
ತೇಷಾಂ ತು ಬ್ರಹ್ಮಕಲ್ಪಾಂತೇ ಮುಕ್ತಿರೀಶ ಪ್ರಸಾದತಃ ॥೧೪೪॥

ಅಸ್ಮಾಭಿರಲ್ಪಕಾಲೇನ ಶಂಕರಾರ್ಚನಪೂರ್ವಕಂ ।
ಶ್ರೀಮದ್ದಕ್ಷಿಣಕೈಲಾಸೇ ತನುಸ್ತ್ಯಾಜ್ಯೇಹ ಮುಕ್ತಯೇ ॥೧೪೫॥

ಅಸ್ಮಾಭಿರ್ಭಾರತೇ ವರ್ಷೇ ಜನ್ಮ ಪ್ರಾಪ್ತಂ ತಪಸ್ಯಯಾ ।
ತತ್ರಾಪ್ಯತ್ಯುತ್ತಮಂ ಕ್ಷೇತ್ರಂ ಶೈವಂ ಪ್ರಾಪ್ತಮಿದಂ ಮಹತ್ ॥೧೪೬॥

ಅಸ್ಮಾಭಿಃ ಸಾವಧಾನೇನ ಭಸ್ಮೋದ್ಧೂಳಿತವಿಗ್ರಹೈಃ ।
ನಿತ್ಯಂ ಶ್ರೀಕಾಲಹಸ್ತೀಶಃ ಪೂಜನೀಯೋ ಯಥಾವಿಧಿ ॥೧೪೭॥

ಪಶ್ಚಿಮಾಭಿಮುಖಂ ಲಿಂಗಂ ಯದ್ಯನ್ಯತ್ರಾಪಿ ತಿಷ್ಠತಿ ।
ತತ್ರಾಪಿ ಮರಣೇ ಮುಕ್ತಿರ್ಭವಿಷ್ಯತ್ಯೇವ ಸರ್ವಥಾ ॥೧೪೮॥

---

ಟಾಗುವುದೋ ಕಾಣೆವು. ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೆಲ್ಲರೂ ಈ ಸಂಸಾರ ಪಾಶಕ್ಕೆ ಸಿಕ್ಕಿರುವರಾದ್ದರಿಂದ ಅವರಿಗೆ ಬ್ರಹ್ಮಕಲ್ಪದ ಕೊನೆಯಲ್ಲಿ ಮಾತ್ರ ಆ ಈಶ್ವರನ ಅನುಗ್ರಹದಿಂದ ಮೋಕ್ಷವುಂಟಾಗುತ್ತದೆ. ॥೧೪೩-೧೪೪॥

ನಾವೂ ಕೇವಲ ಅಲ್ಪಕಾಲದಲ್ಲಿಯೇ ಆ ಶಂಕರನ ಪೂಜಾಪೂರ್ವಕವಾಗಿ ಈ ಸಂಪದ್ಯುಕ್ತವಾದ ದಕ್ಷಿಣಕೈಲಾಸದಲ್ಲಿ ಮುಕ್ತಿಗೋಸ್ಕರ ಈ ಶರೀರವನ್ನು ತ್ಯಾಗಮಾಡಬೇಕು. ಹಿಂದೆ ತುಂಬಾ ತಪಸ್ಸುಮಾಡಿ ನಾವು ಈ ಭರತಖಂಡದಲ್ಲಿ ಜನ್ಮತಾಳಿದೆವು. ಅದರಲ್ಲಿಯೂ ಅತ್ಯುತ್ತಮವಾದ ಈ ಶಿವನ ಕ್ಷೇತ್ರವೂ ನಮಗೆ ಈಗ ಲಭಿಸಿದೆ. ॥೧೪೫-೧೪೬॥

ನಾವೆಲ್ಲರೂ ಸಾವಧಾನವಾಗಿ ಶರೀರಕ್ಕೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡು ನಿತ್ಯವೂ ವಿಧಿಪೂರ್ವಕವಾಗಿ ಆ ಕಾಲಹಸ್ತೀಶ್ವರನನ್ನು ಪೂಜೆಮಾಡಬೇಕು. ಇದೇ ರೀತಿ ಪಶ್ಚಿಮ ದಿಕ್ಕಿಗೆ ಎದುರಾಗಿ ಶಿವಲಿಂಗವು ಇನ್ನೆಲ್ಲಿಯಾದರೂ ಇದ್ದಿದ್ದರೆ ಅಲ್ಲಿ ಮರಣಹೊಂದಿದರೂ ಖಂಡಿತವಾಗಿಯೂ ಮೋಕ್ಷವುಂಟಾಗುವುದರಲ್ಲಿ ಸಂದೇಹವೇ ಇಲ್ಲ. ॥೧೪೭-೧೪೮॥

ಪಶ್ಚಿಮಾಭಿಮುಖಂ ಲಿಂಗಮಿದಮತ್ಯಂತದುರ್ಲಭಂ ।
ಏತಸ್ಯ ದರ್ಶನಂ ಕ್ವಾಸ್ತಿ ವಿನಾ ಬಹುತಪಸ್ಯಯಾ ॥೧೪೯॥

ಕಾಲಹಸ್ತೀಶ್ವರಂ ಲಿಂಗಂ ಪಶ್ಚಿಮಾಭಿಮುಖಂ ಶಿವಾ ।
ಸ್ವಯಂ ಯತ್ನೇನ ಸತತಮಭ್ಯರ್ಚಯತಿ ಸಾದರಂ ॥೧೫೦॥

ಸರ್ವೇಷಾಂ ಮುಕ್ತಿದಾನಾರ್ಥಮಾವಿರ್ಭೂತೋಽತ್ರ ಶಂಕರಃ ।
ಮಹಾಪದ್ಯಪಿ ನ ತ್ಯಾಜ್ಯಮಿದಂ ಕ್ಷೇತ್ರಂ ಶಿವಾತ್ಮಕಂ ॥೧೫೧॥

ಕಾಲಹಸ್ತೀಶ್ವರಂ ಲಿಂಗಂ ಬಿಲ್ವಪತ್ರೈರ್ಜಲಾಪ್ಲುತೈಃ ।
ಯಃ ಪೂಜಯಿಷ್ಯತಿ ಪ್ರೀತ್ಯಾ ನ ತಸ್ಯ ನರಕಾದ್ಭಯಂ ॥೧೫೨॥

ಶಾಂಕರಾಯಾತ್ರ ದುಗ್ಧಾನ್ನಂ ಶರ್ಕರಾಘೃತಸಂಯುತಂ ।
ದೇಯಮತ್ಯಂತಯತ್ನೇನ ಶಿವಪ್ರೀತ್ಯರ್ಥಮಾದರಾತ್ ॥೧೫೩॥

ಯತ್ರ ಕುತ್ರಾಪಿ ಯತ್ನೇನ ಭೋಜಿತೇ ಶಿವಯೋಗಿನೇ ।
ತತ್ರಾಪಿ ಶಂಕರಃ ಪ್ರೀತೋ ಭವತ್ಯತ್ರ ತು ಕಿಂ ಪುನಃ ॥೧೫೪॥

---

ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿರುವ ಶಿವಲಿಂಗವು ದೊರೆಯುವುದೇ ಅತ್ಯಂತ ದುರ್ಲಭವು. ಹೀಗಿರುವಾಗ ವಿಶೇಷ ತಪಸ್ಸುಮಾಡದೇ ಆ ಲಿಂಗದ ದರ್ಶನ ಹೇಗೆ ಉಂಟಾದೀತು! ಪಶ್ಚಿಮ ದಿಕ್ಕಿಗೆ ಎದುರಾಗಿರುವ ಈ ಕಾಲಹಸ್ತೀಶ್ವರನ ಲಿಂಗವನ್ನು ಸಾಕ್ಷಾದ್ಗಿರಿಜೆಯೇ ತುಂಬಾ ನಿಯಮದಿಂದಲೂ ಆದರದಿಂದಲೂ ಯಾವಾಗಲೂ ಪೂಜೆಮಾಡುತ್ತಾಳೆ. ||೧೪೯-೧೫೦||

ಎಲ್ಲರಿಗೂ ಮೋಕ್ಷವನ್ನು ಕರುಣಿಸುವುದಕ್ಕೋಸ್ಕರವೇ ಆ ಲೋಕಶಂಕರನು ಇಲ್ಲಿ ನೆಲಸಿರುವನು. ಶಿವಾಂಶದಿಂದ ಕೂಡಿದ ಈ ಕ್ಷೇತ್ರವನ್ನು ಎಷ್ಟೇ .ತೊಂದರೆಗಳು ಬಂದಾಗ್ಯೂ ಬಿಡಬಾರದು. ಈ ಕಾಲಹಸ್ತೀಶ್ವರನ ಲಿಂಗವನ್ನು ನೀರಿನಿಂದ ತೊಳೆದ ಬಿಲ್ವಪತ್ರೆಗಳಿಂದ ಪ್ರೀತಿಪೂರ್ವಕವಾಗಿ ಪೂಜೆಮಾಡುವವನಿಗೆ ಎಂದಿಗೂ ನರಕದ ಭಯವಿಲ್ಲ. ||೧೫೧-೧೫೨||

ಈ ಕ್ಷೇತ್ರದಲ್ಲಿ ಸಕ್ಕರೆ ತುಪ್ಪದೊಡನೆ ಬೆರೆದ ಹಾಲನ್ನವನ್ನು ಆ ಶಂಕರನ ಭಕ್ತನಿಗೆ ನಿಯಮಬದ್ಧನಾಗಿ ಶಿವನ ಪ್ರೀತಿಯನ್ನು ಸಂಪಾದನೆಮಾಡುವು

ಯದ್ಯತ್ರ ಶಾಂಕರೋ ಭಕ್ತ್ಯಾ ಪೂಜ್ಯತೇ ಶಂಕರಾರ್ಚಕಃ ।
ತದಾ ತುಷ್ಟೋ ಭವತ್ಯೇವ ಸಾಂಬಃ ಸರ್ವೋತ್ತಮಃ ಶಿವಃ ॥೧೫೫॥

ಅತ್ರಾಲ್ಪಮಪಿ ಚೇಜ್ಜಪ್ತಂ ತದಾನಂತ್ಯಾಯ ಕಲ್ಪತೇ ।
ಅತ್ರಾಲ್ಪಮಪಿ ಚೇದ್ದತ್ತಂ ತದಾನಂತ್ಯಾಯ ಕಲ್ಪತೇ ॥೧೫೬॥

ಭೂರಿ ಪುಣ್ಯಪ್ರಭಾವೇನ ಪ್ರಾಪ್ಯತೇ ಕ್ಷೇತ್ರಮೀದೃಶಂ ।
ಅಸ್ಮಾಭಿರತಿಯತ್ನೇನ ಸ್ಥಾತವ್ಯಂ ಶಿವಪೂಜಕೈಃ ॥೧೫೭॥

ಇತ್ಯನ್ಯೋನ್ಯಂ ವದಂತಸ್ತೇ ಮುನಯೋ ಬ್ರಹ್ಮವಾದಿನಃ ।
ಶ್ರೀಮದ್ದಕ್ಷಿಣಕೈಲಾಸೇ ನಿವಸಂತಿ ಮನೋರಮೇ ॥೧೫೮॥

ಪುರಾ ನಿಷ್ಕಲ್ಮಷೋ ನಾಮ ಮುನಿರ್ಲಿಂಗಪೂಜಕಃ ।
ಶ್ರೀಮದ್ದಕ್ಷಿಣಕೈಲಾಸೇ ಚಕಾರ ವಸತಿಂ ಶಿವೇ ॥೧೫೯॥

---

ದಕ್ಷೋಪಸ್ಕರ ಆದರದಿಂದ ಬಡಿಸಬೇಕು. ಯಾವ ಸ್ಥಳದಲ್ಲಿಯಾದರೂ ನಿಯಮದಿಂದ ಶಿವಯೋಗಿಯಾದವನಿಗೆ ಊಟಮಾಡಿಸಿದರೆ ಆ ಶಂಕರನು ಪ್ರೀತಿಹೊಂದುವಾಗ ಇಂತಹ ತನ್ನ ಕ್ಷೇತ್ರದಲ್ಲಿ ಹೇಳಬೇಕಾದದ್ದೇನು! ॥೧೫೩-೧೫೪॥

ಆ ಶಂಕರನ ಪೂಜಕನಾದ ಶೈವೋತ್ತಮನನ್ನು ಈ ಕ್ಷೇತ್ರದಲ್ಲಿ ಭಕ್ತಿಯಿಂದ ಪೂಜೆಮಾಡಿದರೆ ಆಗ ಸರ್ವಶ್ರೇಷ್ಠನೆನಿಸಿದ ಅಂಬಿಕಾಸಮೇತನಾದ ಶಿವನು ಸಂತುಷ್ಟನಾಗಿಯೇ ಆಗುತ್ತಾನೆ. ಇಲ್ಲಿ ಸ್ವಲ್ಪವೇ ಜಪಮಾಡಿದರೂ ಮತ್ತು ದಾನಮಾಡಿದರೂ ಅದು ಅನಂತ ಫಲಗಳನ್ನು ಕೊಡಲು ಸಮರ್ಥವಾಗುವುದು. ॥೧೫೫-೧೫೬॥

ಆಹಾ! ಅತಿಶಯ ಪುಣ್ಯಮಹಿಮೆಯಿಂದ ಈ ರೀತಿಯಾದ ಕ್ಷೇತ್ರವು ಲಭಿಸುವುದು. ಶಿವಪೂಜಾಸಕ್ತರಾದ ನಾವು ಅವಶ್ಯವಾಗಿ ಈ ಕ್ಷೇತ್ರದಲ್ಲಿ ನೆಲಸಬೇಕೆಂದು ಪರಸ್ಪರವಾಗಿ ಬ್ರಹ್ಮಜ್ಞಾನಿಗಳಾದ ಆ ಮುನಿಗಳು ಮನೋಹರವಾಗಿರುವ ಶ್ರೀದಕ್ಷಿಣಕೈಲಾಸವೆನಿಸಿದ ಕಾಲಹಸ್ತಿಯಲ್ಲಿ ಯೋಚಿಸುತ್ತಾ ವಾಸಮಾಡುತ್ತಿರುವರು. ॥೧೫೭-೧೫೮॥

ಗಿರಿರಾಜಕುಮಾರಿ! ಹಿಂದೆ ಇದೇ ದಕ್ಷಿಣಕೈಲಾಸದಲ್ಲಿ ನಿಷ್ಕಲ್ಮಷನೆಂದು ಪ್ರಸಿದ್ಧನಾಗಿದ್ದ ಮುನಿಯೊಬ್ಬನು ನನ್ನ ಶಿವಲಿಂಗವನ್ನು ಪೂಜೆಮಾಡುತ್ತಾ ಇಲ್ಲಿಯೇ ವಾಸಮಾಡುತ್ತಿದ್ದನು. ಆತನು ಇಲ್ಲಿಯೇ ವಿಶೇಷ ನಿಯಮಪೂರ್ವಕವಾಗಿ

ತೇನ ತಪ್ತಂ ತಪೋ ಘೋರಂ ಶತ್ರ್ಯೈವಾತಿ ಪ್ರಯತ್ನತಃ ।
ತೇನೈವ ತಪಸಾ ದೇವಾ ಕ್ಷುಬ್ಧಾಃ ಸರ್ವೇಽಪಿ ಶಾಂಕರಿ ॥೧೬೦॥

ಭಸ್ಮನೋದ್ಧೂಲ್ಯ ಸರ್ವಾಂಗಂ ಸ ಮದರ್ಚನತತ್ಪರಃ ।
ಮಾಮೇವ ಸತತಂ ಪ್ರೀತ್ಯಾ ಪೂಜಯಿತ್ವಾ ಸ್ಥಿತಃ ಶಿವೇ ॥೧೬೧॥

ತಂ ದದರ್ಶ ಮಹಾಶೈವಂ ವಿನೀತ ಇತಿ ಶಾಂಕರಃ ।
ದೃಷ್ಟ್ವಾ ತಂ ಪೂಜಯಾಮಾಸ ಬಿಲ್ವಪತ್ರೇಣ ಭಸ್ಮನಾ ॥೧೬೨॥

ತತಸ್ತಮಬ್ರವೀದ್ವಿಪ್ರೋ ನಿಷ್ಕಲ್ಮಷಮನಾಕುಲಂ ।
ಮುಕ್ತಿಕ್ಷೇತ್ರೋತ್ತಮಕ್ಷೇತ್ರಂ ಕಿಮಸ್ತೀತಿ ಯಥಾರ್ಥತಃ ॥೧೬೩॥

ತತೋ ನಿಷ್ಕಲ್ಮಷೋ ವಿಪ್ರಂ ವಿನೀತಂ ತಮಭಾಷತ ।
ಮುಕ್ತಿಕ್ಷೇತ್ರೋತ್ತಮಕ್ಷೇತ್ರಂ ಕಾಶ್ಯೇಕಾ ಶ್ರುತಿಸಂಮತಾ ॥೧೬೪॥

ಮುಕ್ತಿಕ್ಷೇತ್ರಮಿದಂ ವಿಪ್ರ ಮುಕ್ತಿಕ್ಷೇತ್ರೋತ್ತಮಂ ತು ನ ।
ಮುಕ್ತಿಕ್ಷೇತ್ರೋತ್ತಮಂ ಕಾಶೀ ನಾನ್ಯೇತಿ ಶ್ರುತಿಸಂಮತಾ ॥೧೬೫॥

---

ಘೋರತಪಸ್ಸನ್ನು ಮಾಡಿದನು. ಆ ತಪಸ್ಸಿನಿಂದ ದೇವತೆಗಳೆಲ್ಲಾ ಕ್ಷುಬ್ಧರಾದರು. ॥೧೫೯-೧೬೦॥

ಶಿವೇ, ಇವನು ತನ್ನ ಸಕಲ ಅವಯವಗಳನ್ನೂ ಭಸ್ಮದಿಂದ ಲೇಪನಮಾಡಿಕೊಂಡು ನನ್ನನ್ನೇ ಪ್ರೀತಿಯಿಂದ ಯಾವಾಗಲೂ ಪೂಜೆಮಾಡುತ್ತಾ ಇದ್ದನು. ಇಂತಹ ಶೈವಾಗ್ರಣಿಯನ್ನು ವಿನೀತನೆಂಬ ಶೈವಶ್ರೇಷ್ಠನೊಬ್ಬನು ನೋಡಿ ಬಿಲ್ವಪತ್ರೆಗಳಿಂದಲೂ ವಿಭೂತಿಯಿಂದಲೂ ಅವನನ್ನು ಪೂಜೆಮಾಡಿದನು. ॥೧೬೧-೧೬೨॥

ಅನಂತರ ಆ ವಿನೀತನು ಸತ್ಪುರುಷನಾದ ನಿಷ್ಕಲ್ಮಷನನ್ನು ಕುರಿತು ಅಯ್ಯ ಮಹಾತ್ಮನೇ, ಮುಕ್ತಿಯನ್ನುಂಟುಮಾಡುವಂತಹ ಉತ್ತಮವಾದ ಕ್ಷೇತ್ರವಾವುದಾದರೂ ವಸ್ತುತಃ ಇದೆಯೋ ಎಂದು ಪ್ರಶ್ನೆಮಾಡಲು ಆಗ ಆ ನಿಷ್ಕಲ್ಮಷನು ಅಯ್ಯ ಬ್ರಾಹ್ಮಣ! ವೇದಸಂಮತವಾದ ಕಾಶಿಯೆಂಬುದೊಂದು ಮುಕ್ತಿಪ್ರದವಾದ ಉತ್ತಮ ಕ್ಷೇತ್ರವೆಂದು ಪರಿಗಣಿತವಾಗಿದೆ. ॥೧೬೩-೧೬೪॥

ಈ ದಕ್ಷಿಣಕೈಲಾಸವು ಮುಕ್ತಿಕ್ಷೇತ್ರವೆನಿಸಿರುವುದು. ಮತ್ತು ಉತ್ತಮವಾದ ಮುಕ್ತಿಕ್ಷೇತ್ರವೆಂದು ವೇದಗಳಲ್ಲಿ ಪ್ರಸಿದ್ಧವೂ ಆಗಿದೆ. ಆ ಮಹೇಶ್ವರನಿಗೆ ರಾಜಧಾನಿ

ಮಹೇಶರಾಜಧಾನೀ ಯಾ ಸಾ ಸರ್ವಶ್ರುತಿಸಂಮತಾ ।
ಸಾ ತು ಕಾಶ್ಯೇವ ನಾನ್ಯೇತಿ ವೇದಾಃ ಸಂತಿ ಸಹಸ್ರಶಃ ॥೧೬೬॥

ವ್ಯಾಚಷ್ಟೇ ತಾರಕಂ ಬ್ರಹ್ಮ ಯತ್ರ ಸಾಂಬಃ ಸದಾಶಿವಃ ।
ತದೇವ ಮುಕ್ತಿಕ್ಷೇತ್ರೇಷು ಶ್ರೇಷ್ಠಮಿತ್ಯುಚ್ಯತೇ ಬುಧೈಃ ॥೧೬೭॥

ಇದಂ ಮುಕ್ತಿಪ್ರದಂ ಕ್ಷೇತ್ರಂ ಕಾಶೀಸಂಪ್ರಾಪ್ತಿಸಾಧನಂ ।
ತತಸ್ತದೇವ ಹಿ ಕ್ಷೇತ್ರಂ ಮುಕ್ತಿಕ್ಷೇತ್ರೋತ್ತಮೋತ್ತಮಂ ॥೧೬೮॥

ಯತ್ರ ದೇವಾಧಿದೇವೋಽಸ್ತಿ ವಿಶ್ವೇಶೋ ವಿಶ್ವನಾಯಕಃ ।
ತತಃ ಕ್ಷೇತ್ರೋತ್ತಮಂ ನಾನ್ಯತ್ಕ್ಷೇತ್ರಮಿತ್ಯಸ್ತಿ ಹಿ ಶ್ರುತಿಃ ॥೧೬೯॥

ಕಾಶ್ಯಾಂ ವಿಶ್ವೇಶರೂಪೇಣ ಮುಕ್ತಿಃ ಪುಂಜೀಕೃತಾ ದ್ವಿಜ ।
ತತಸ್ತತ್ಸದೃಶಂ ಕ್ಷೇತ್ರಂ ನಾಸ್ತಿ ನಾಸ್ತೀತ್ಯಪಿ ಶ್ರುತಿಃ ॥೧೭೦॥

---

ಯೆನಿಸಿರುವುದು ಆ ಕಾಶಿಯೊಂದೇ ಹೊರತು ಬೇರೆ ಯಾವುದೂ ಅಲ್ಲವೆಂದು ಸಾವಿರಾರು ಶ್ರುತಿಗಳು ಸಾರುತ್ತಿರುವುವು. ॥೧೬೫-೧೬೬॥

ಅಂಬಿಕಾಸಮೇತನಾದ ಆ ಸದಾಶಿವನೇ ಸಾಕ್ಷಾತ್ತಾಗಿ ತಾರಕಬ್ರಹ್ಮಮಂತ್ರವನ್ನು ತನ್ನ ಭಕ್ತರಿಗೆ ಉಪದೇಶ ಮಾಡುತ್ತಿರುವ ಆ ಕಾಶಿಯೇ ಮುಕ್ತಿಪ್ರದವಾದ ಕ್ಷೇತ್ರಗಳಲ್ಲಿ ಶ್ರೇಷ್ಠವಾದುದೆಂದು ಪಂಡಿತರು ಹೇಳುತ್ತಿರುವರು. ಅಯ್ಯ ಬ್ರಾಹ್ಮಣೋತ್ತಮನೇ, ಇದು ಕಾಶೀಪ್ರಾಪ್ತಿಗೆ ಸಾಧನಭೂತವಾಗಿರುವ ಮುಕ್ತಿಕ್ಷೇತ್ರ ಮಾತ್ರವಾಗಿರುವುದೆಂದು ತಿಳಿ. ಆ ಕಾಶಿಯೇ ಅತ್ಯುತ್ತಮವಾದ ಮುಕ್ತಿಪ್ರದವಾದ ಕ್ಷೇತ್ರವೆನಿಸಿರುವುದು. ॥೧೬೭-೧೬೮॥

ಜಗದೊಡೆಯನೂ, ದೇವಾಧಿದೇವನೂ ಆದ ವಿಶ್ವೇಶ್ವರನು ನೆಲಸಿರುವ ಕ್ಷೇತ್ರವೇ ಎಲ್ಲಾ ಕ್ಷೇತ್ರಗಳಲ್ಲಿಯೂ ಅತ್ಯುತ್ತಮವೆಂದು ಶ್ರುತಿಯಿರುವುದು. ಅಯ್ಯ ಬ್ರಾಹ್ಮಣನೇ, ಆ ಕಾಶಿಯಲ್ಲಿ ವಿಶ್ವೇಶ್ವರನ ಸ್ವರೂಪದಿಂದ ಮೋಕ್ಷವೆಂಬುದು ಒಂದು ಸಮೂಹವಾಗಿದೆಯೆಂದು ತಿಳಿಯುವನಾಗು. ಆದ್ದರಿಂದಲೇ ಆ ಕಾಶಿಗೆ ಸಮಾನವಾದ ಮತ್ತೊಂದು ಕ್ಷೇತ್ರವು ಎಂದೆಂದಿಗೂ ಇಲ್ಲವೆಂದು ವೇದಗಳು ಹೇಳುತ್ತಿರುವುವು. ॥೧೬೯-೧೭೦॥

ಯತ್ರ ಸ್ಥಿತಃ ಪುಲ್ಕಸೋಽಪಿ ಧಿಕ್ಕರೋತಿ ಶಚೀಪತಿಂ ।
ತತ್ತು ಕಾಶ್ಯಭಿಧಂ ಕ್ಷೇತ್ರಂ ತತ್ತು ವಿಶ್ವೇಶ್ವರಾಶ್ರಿತಂ ॥೧೭೧॥

ಯತ್ರ ವೈಶ್ವೇಶ್ವರಂ ಲಿಂಗಂ ದೃಷ್ಟ್ವಾಽಪಿ ಮುನಿಪುಂಗವ ।
ನ ಗರ್ಭಭಾಕ್ಪುನಃ ಸತ್ಯಂ ಸತ್ಯಂ ಸತ್ಯಮಿತಿ ಶ್ರುತಿಃ ॥೧೭೨॥

ತತ್ರಾಸ್ತಿ ಮಣಿಕರ್ಣ್ಯಾಖ್ಯಂ ಕುಂಡಂ ಕೇಶವನಿರ್ಮಿತಂ ।
ತತ್ರ ಪೀತ್ವಾ ಪಯೋ ಭೂಯಸ್ತನ್ಯಪೋ ನ ಭವಿಷ್ಯತಿ ॥೧೭೩॥

ಮಣಿಕರ್ಣ್ಯಾಂ ಯಃ ಪ್ರವಿಷ್ಟಃ ಸ ಪ್ರವಿಷ್ಟಃ ಶಿವೋದರೇ ।
ಶಿವೋದರೇ ಪ್ರವಿಷ್ಟೋ ಯಃ ಸ ಪುನರ್ಜನ್ಮಭಾಙ್ನ ಹಿ ॥೧೭೪॥

ಮಣಿಕರ್ಣ್ಯಾಂ ವಸೇದ್ಯಸ್ತು ನಿಯಮೇನ ಸಮನ್ವಿತಃ ।
ಸ ವಸತ್ಯೇವ ಕೈಲಾಸೇ ನಾನಾಗಣನಿಷೇವಿತೇ ॥೧೭೫॥

ಮಣಿಕರ್ಣೀಪ್ರವಿಷ್ಟೇನ ಸುಖಂ ಯದನುಭೂಯತೇ ।
ಸುಖಂ ತು ತಾದೃಶಂ ವಿಪ್ರ ನ ಕುತ್ರಾಪ್ಯನುಭೂಯತೇ ॥೧೭೬॥

---

ಅಲ್ಲಿರುವ ಬಡವನೂ ಸಹ ದೇವೇಂದ್ರನನ್ನು ಧಿಕ್ಕರಿಸುವಂತಿರುವನು. ಆ ಕಾಶೀ ಕ್ಷೇತ್ರವು ವಿಶ್ವೇಶ್ವರನಿಂದ ಆಶ್ರಯಿಸಲ್ಪಟ್ಟಿದೆ. ಅಯ್ಯ ಮುನಿಶ್ರೇಷ್ಠನೇ, ಆ ವಿಶ್ವೇಶ್ವರನ ದಿವ್ಯಲಿಂಗವನ್ನು ನೋಡಿದವನು ಮತ್ತೆ ಈ ಮನುಷ್ಯಗರ್ಭವನ್ನು ಸತ್ಯವಾಗಿ ಹೊಂದುವುದಿಲ್ಲವೆಂದು ಶ್ರುತಿಯಿರುವುದು. ॥೧೭೧-೧೭೨॥

ಆ ಕಾಶಿಯಲ್ಲಿ ಮಹಾವಿಷ್ಣುವಿನಿಂದ ನಿರ್ಮಿಸಲ್ಪಟ್ಟಿರುವ ಮಣಿಕರ್ಣಿಕೆಯೆಂಬ ಒಂದು ಕುಂಡವಿರುವುದು. ಈ ಕುಂಡದ ನೀರನ್ನು ಕುಡಿದವನಿಗೆ ಪುನಃ ಸ್ತನ್ಯಪಾನ ಮಾಡುವ ಅವಸ್ಥೆಯೇ ಬರುವುದಿಲ್ಲ. ಮಣಿಕರ್ಣಿಕಾ ತೀರ್ಥದಲ್ಲಿ ಪ್ರವೇಶ ಮಾಡಿದವನು ಆ ಪರಶಿವನ ಹೊಟ್ಟೆಯಲ್ಲಿ ಪ್ರವೇಶ ಮಾಡಿದಂತಾಗುವುದು. ಶಿವನ ಹೊಟ್ಟೆಯಲ್ಲಿ ಪ್ರವೇಶ ಮಾಡಿದವನು ಪುನಃ ಜನ್ಮವನ್ನೇ ಹೊಂದಲಾರನಲ್ಲವೆ! ॥೧೭೩-೧೭೪॥

ನಿಯಮದಿಂದ ಆ ಮಣಿಕರ್ಣಿಕಾ ಕ್ಷೇತ್ರದಲ್ಲಿ ವಾಸಮಾಡುವವನು ಅನೇಕ ಶಿವಗಣಗಳಿಂದ ಸೇವಿಸಲ್ಪಡುವ ಕೈಲಾಸದಲ್ಲಿಯೇ ವಾಸ ಮಾಡಿದಂತಾಗುವುದು.

ಮಣಿಕರ್ಣ್ಯಾಂ ನರಃ ಸ್ನಾತ್ವಾ ದೃಷ್ಟ್ವಾ ವಿಶ್ವೇಶ್ವರಂ ಪ್ರಭುಂ ।
ಸ ವಂಶಕೋಟಿಸಂಯುಕ್ತಃ ಪ್ರಯಾತಿ ಶಿವಮವ್ಯಯಂ ॥೧೭೭॥

ಪರಂ ತು ಕಾಶೀಕ್ಷೇತ್ರಸ್ಯ ಪ್ರಾಪ್ತಿರತ್ಯಂತದುರ್ಲಭಾ ।
ಸಾ ಮಹೇಶಪ್ರಸಾದೇನ ಭವತೀತ್ಯನುಶುಶ್ರುಮಃ ॥೧೭೮॥

ತತಸ್ತತ್ಪ್ರಾಪ್ತಿಕಾಮೇನ ಕಾರ್ಯಮತ್ರ ತಪೋ ಮುದಾ ।
ಸಂತುಷ್ಟೇ ತಪಸಾತ್ರೇಶೇ ಕಾಶೀಪ್ರಾಪ್ತಿರ್ಭವಿಷ್ಯತಿ ॥೧೭೯॥

ಇತಿ ತದ್ವಚನಂ ಶ್ರುತ್ವಾ ತಪಶ್ಚಕ್ರೇ ತತೋ ದ್ವಿಜಃ ।
ತತ್ರ ದಕ್ಷಿಣಕೈಲಾಸೇ ಸರ್ವಕಾಮಪ್ರದೇ ಶುಭೇ ॥೧೮೦॥

ಪುರಾ ತತ್ರ ಮಮ ಕ್ಷೇತ್ರೇ ಕಶ್ಚಿದ್ಭಿಲ್ಲೋ ವನಾಶ್ರಯಃ ।
ಪೂಜಯಾಮಾಸ ಯತ್ನಾನ್ಮಾಂ ಬಿಲ್ವಪತ್ರಾದಿಭಿರ್ಮುದಾ ॥೧೮೧॥

---

ಮಣಿಕರ್ಣಿಕೆಯಲ್ಲಿ ಕುಳಿತು ಸುಖವನ್ನನುಭವಿಸುವನು ಮತ್ತೆಲ್ಲಿಯೂ ಅಂತಹ ಸುಖವನ್ನನುಭವಿಸಲಾರನು. ॥೧೭೫-೧೭೬॥

ಮಾನವನು ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನಮಾಡಿ ಪ್ರಭುವಾದ ಆ ವಿಶ್ವೇಶ್ವರನನ್ನು ನೋಡಿದರೆ, ಅವನು ಕೋಟಿ ವಂಶಗಳೊಡನೆ ಶಾಶ್ವತವಾದ ಆ ಪರಶಿವನ ಸಾಯುಜ್ಯವನ್ನು ಪಡೆಯುತ್ತಾನೆ. ಆದರೆ ಆ ಕಾಶೀಕ್ಷೇತ್ರವು ದೊರೆಯುವುದೇ ತುಂಬಾ ಕಷ್ಟಸಾಧ್ಯವಾದುದು. ಆ ಮಹೇಶ್ವರನ ಅನುಗ್ರಹದಿಂದ ಮಾತ್ರವೇ ಆ ಕಾಶಿಯು ದೊರೆಯುತ್ತದೆಂದು ಕೇಳುತ್ತೇವೆ. ॥೧೭೭-೧೭೮॥

ಆದ್ದರಿಂದ ಈ ದಕ್ಷಿಣ ಕೈಲಾಸದಲ್ಲಿ ಆ ಕಾಶೀ ಕ್ಷೇತ್ರವನ್ನು ಹೊಂದುವ ಅಪೇಕ್ಷೆಯಿಂದ ಪ್ರೀತಿಪೂರ್ವಕವಾಗಿ ತಪಸ್ಸು ಮಾಡಬೇಕು. ಇಲ್ಲಿ ನಾವು ಮಾಡುವ ತಪಸ್ಸಿನಿಂದ ಆ ಈಶ್ವರನು ಸಂತುಷ್ಟನಾದರೆ ಆಗ ಆ ಕಾಶೀಕ್ಷೇತ್ರವು ನಮಗೆ ದೊರೆಯುವುದು, ಎಂದು ನುಡಿದ ಆ ಬ್ರಾಹ್ಮಣನ ವಾಕ್ಯಗಳನ್ನು ಕೇಳಿ, ಆ ಬ್ರಾಹ್ಮಣೋತ್ತಮನು ಸಕಲ ಇಷ್ಟಾರ್ಥಗಳನ್ನೂ ಕೊಡುವ ಶುಭಕರವಾದ ಆ ದಕ್ಷಿಣಕೈಲಾಸ ಕ್ಷೇತ್ರದಲ್ಲಿ ಬಹುಕಾಲ ತಪಸ್ಸು ಮಾಡಿದನು. ॥೧೭೯-೧೮೦॥

ದೇವಿ, ಹಿಂದೆ ಇದೇ ನನ್ನ ಕ್ಷೇತ್ರದಲ್ಲಿ ಕಾಡಿನಲ್ಲಿ ವಾಸಮಾಡುವ ಒಬ್ಬ ಬೇಡರವನು ಬಿಲ್ವಪತ್ರೆ, ಹೂ ಮುಂತಾದ ಸಾಧನಗಳನ್ನು ತಂದು ಅತ್ಯಂತ

ಪ್ರತ್ಯಹಂ ಮಾಮನಭ್ಯರ್ಚ್ಯ ನ ಗೃಹ್ಣಾತಿ ಜಲಾದಿಕಂ ।
ಕರೋತಿ ಸತತಂ ಭಕ್ತ್ಯಾ ಭಸ್ಮರುದ್ರಾಕ್ಷಧಾರಣಂ ॥೧೮೨॥

ಅರಣ್ಯೇ ಪ್ರತ್ಯಹಂ ತೇನ ಸ್ಥೀಯತೇ ವನವಾಸಿನಾ ।
ತತ್ರ ಸ್ಥಿತ್ವಾಪಿ ಮಾಮೇವ ಸ್ಮೃತ್ವಾ ಸ್ಮೃತ್ವಾಭಿನಂದತಿ ॥೧೮೩॥

ಸ ಮುಹ್ಯಂ ಮಾಂಸಮಮಲಮಾಸ್ವಾದ್ಯಾಸ್ವಾದ್ಯ ಭಕ್ತಿತಃ ।
ಉಪಹಾರಂ ಪ್ರಯತ್ನೇನ ಕಲ್ಪಯತ್ಯನ್ವಹಂ ಮುದಾ ॥೧೮೪॥

ಕುಸುಮೈರ್ಬಿಲ್ವಪತ್ರೈಶ್ಚ ಮುಖಮಧ್ಯಸ್ಥಿತೈರ್ಜಲೈಃ ।
ಮಾಮರ್ಚಯತಿ ಯತ್ನೇನ ಭಿಲ್ಲೋ ನಿಯಮಪೂರ್ವಕಂ ॥೧೮೫॥

ತಂ ದೃಷ್ಟ್ವಾ ಮುನಯಃ ಸರ್ವೇ ಭಿಲ್ಲಂ ತಾದೃಶಮನ್ವಹಂ ।
ದುಃಖಿತಾ ಏವ ತಿಷ್ಠಂತಿ ಮುಖಮಧ್ಯಜಲಾರ್ಚಕಂ ॥೧೮೬॥

---

ನಿಯಮದಿಂದ ಪ್ರೀತಿಪೂರ್ವಕವಾಗಿ ನನ್ನನ್ನು ಪೂಜೆ ಮಾಡುತ್ತಿದ್ದನು. ಪ್ರತಿದಿನವೂ ನನ್ನನ್ನು ಪೂಜೆ ಮಾಡದೇ ಅನ್ನ, ನೀರು ಮುಂತಾದುವುಗಳನ್ನು ಅವನು ಸ್ವೀಕರಿಸುತ್ತಿರಲಿಲ್ಲ. ಅನವರತವೂ ಭಕ್ತಿಯಿಂದ ವಿಭೂತಿ ಮತ್ತು ರುದ್ರಾಕ್ಷ ಇವುಗಳನ್ನು ಧರಿಸುತ್ತಿದ್ದನು. ||೧೮೧-೧೮೨||

ಅವನು ಪ್ರತಿದಿನವೂ ಕಾಡಿನಲ್ಲಿಯೇ ಇದ್ದುಕೊಂಡು ಅಲ್ಲಿಯೇ ನನ್ನನ್ನು ಸ್ಮರಣೆ ಮಾಡುತ್ತಾ ಆನಂದಪಡುತ್ತಿದ್ದನು. ಆ ಬೇಡನು ನಿರ್ಮಲವಾದ ಮಾಂಸವನ್ನು ತಾನು ಮೊದಲು ತಿಂದುನೋಡಿ, ರುಚಿಯಾಗಿರುವುದನ್ನು ಮಾತ್ರ ಆಸಕ್ತಿಯಿಂದ ಭಕ್ತಿಪುರಸ್ಸರವಾಗಿ ನನಗೆ ನೈವೇದ್ಯ ಮಾಡುತ್ತಿದ್ದನು. ||೧೮೩-೧೮೪||

ಅವನು ಹೂವು, ಬಿಲ್ವಪತ್ರೆ ಇವುಗಳನ್ನು ಸಂಪಾದಿಸಿ, ಬಾಯಿಯಲ್ಲಿ ನೀರು ತುಂಬಿಕೊಂಡು ಬಂದು ಅದರಿಂದ ನನಗೆ ವಿಧಿಪೂರ್ವಕವಾಗಿ ಅಭಿಷೇಕಮಾಡಿ, ಪತ್ರೆ ಮುಂತಾದವುಗಳನ್ನು ಪೂಜಿಸುತ್ತಿದ್ದನು. ಈ ರೀತಿಯಾಗಿ ಬಾಯಿ ನೀರು ತಂದು ಆ ಎಂಜಲು ನೀರಿನಿಂದ ದೇವದೇವನಾದ ಶಿವನಿಗೆ ಅಭಿಷೇಕಮಾಡುತ್ತಿದ್ದ ಬೇಡರವನನ್ನು ನೋಡಿ ಮುನಿಗಳೆಲ್ಲಾ ಅಸಹ್ಯಪಟ್ಟು ದುಃಖಭರಿತರಾಗುತ್ತಿದ್ದರು. ||೧೮೫-೧೮೬||

ಉಚ್ಛಿಷ್ಟೋದಕಪಾನೀಯಂ ಕಿಂ ನಿತ್ಯಮಭಿಷಿಂಚತಿ ।
ಮಾಂಸೋಪಹಾರಂ ಶರ್ವಾಯ ನಿವೇದಯತಿ ಕಿಂ ಜಡಃ ॥೧೮೭॥

ಪ್ರತ್ಯಹಂ ನಿಯಮೇನೈವ ಬಿಲ್ವಪತ್ರೈರ್ಮನೋಹರೈಃ ।
ಪೂಜಯತ್ಯಯಮೀಶಾನಂ ಶಿವಲಿಂಗಸ್ವರೂಪಿಣಂ ॥೧೮೮॥

ಈದೃಶೋ ಮುಖಮಧ್ಯಸ್ಥೈಃ ಶಿವಂ ಸಮಭಿಷಿಂಚತಿ ।
ದುರ್ಬುದ್ಧಿರೀದೃಶೀ ಜಾತಾ ಕಥಮೇತಸ್ಯ ಸರ್ವದಾ ॥೧೮೯॥

ಏವಂ ನ ಕಾರ್ಯಂ ಭಿಲ್ಲೇತಿ ಯದ್ಯಸ್ಮಾಭಿರಿಹೋಚ್ಯತೇ ।
ಶರಪಾಣಿರಯಂ ಕ್ರೂರಃ ಸರ್ವಾನೇವ ಹನಿಷ್ಯತಿ ॥೧೯೦॥

ಏವಂ ಸ್ಥಿತಾ ಮುನಿವರಾಃ ಪ್ರತ್ಯಹಂ ದುಃಖಿತಾಃ ಶಿವೇ ।
ತತ್ರ ಸ್ಥಿತೇಷು ತೇಷ್ವೇವಂ ನಿತ್ಯಂ ಕೃತ್ವಾ ಸ ಸಂಸ್ಥಿತಃ ॥೧೯೧॥

---

ಅಯ್ಯೋ! ಈ ಪಾಪಿಯು ತನ್ನ ಬಾಯಲ್ಲಿ ತುಂಬಿಕೊಂಡು ಬಂದಿರುವ ಉಚ್ಛಿಷ್ಟವಾದ ನೀರಿನಿಂದ ನಿತ್ಯವೂ ಶಿವನನ್ನು ಅಭಿಷೇಕಮಾಡುತ್ತಿರುವನಲ್ಲಾ! ಅಲ್ಲದೇ ಈ ಮೂರ್ಖನು ಈಶ್ವರನಿಗೆ ಮಾಂಸವನ್ನು ನಿವೇದನಮಾಡುತ್ತಿರುವನು. ಇಷ್ಟುಮಾಡಿ ಪ್ರತಿನಿತ್ಯವೂ ಬಿಡದೆ ನಿಯಮದಿಂದ ಮನೋಹರವಾದ ಬಿಲ್ವಪತ್ರೆಗಳನ್ನು ತಂದು ಶಿವಲಿಂಗರೂಪಿಯಾಗಿರುವ ಈಶ್ವರನನ್ನು ಪೂಜೆಮಾಡುತ್ತಿರುವನು. ||೧೮೭-೧೮೮||

ಹೀಗೆ ನಿಯಮದಿಂದ ಬಿಲ್ವದಳ ಮುಂತಾದವುಗಳಿಂದ ಪೂಜೆಮಾಡುವನಾದರೂ ಬಾಯಿನ ಒಳಗಿರುವ ನೀರಿನಿಂದ ಮಾತ್ರ ಆ ಶಿವನಿಗೆ ಅಭಿಷೇಕಮಾಡುತ್ತಿರುವನು. ಯಾವಾಗಲೂ ಈತನಿಗೆ ಹೀಗೆ ಮಾಡುವಂತಹ ದುರ್ಬುದ್ಧಿಯು ಹೇಗೆ ಹುಟ್ಟಿತೋ ಕಾಣೆವಲ್ಲಾ! ಒಂದುವೇಳೆ ನಾವು, ಅಯ್ಯ ಭಿಲ್ಲನೆ, ಹೀಗೆ ಮಾಡಬೇಡವೆಂದು ಹೇಳಿದ್ದೇ ಆದರೆ ದುಷ್ಟನಾದ ಇವನು ಬಾಣವನ್ನು ಹಿಡಿದು ನಮ್ಮೆಲ್ಲರನ್ನೂ ಒಟ್ಟಿಗೆ ಕೊಂದೇಬಿಡುವನು. ||೧೮೯-೧೯೦||

ಎಲೌ ಶೋಭನಾಂಗಿಯೇ, ಹೀಗೆ ಪ್ರತಿನಿತ್ಯವೂ ಆ ಮುನಿಪುಂಗವರು ಈ ಬೇಡನ ಕೃತ್ಯಗಳನ್ನು ನೋಡಿ ದುಃಖಿತರಾಗಿರುತ್ತಿರಲು, ಇತ್ತಲಾಗಿ ಇವನು ಎಂದಿನಂತೆ ತನ್ನ ಕೆಲಸಗಳನ್ನು ತಪ್ಪದೇ ಮಾಡಿಕೊಂಡಿದ್ದನು. ಆ ಮುನಿ

ತೇ ತಪೋವ್ಯಯಭೀತ್ಯೈನಂ ನ ಶಪಂತಿ ಕದಾಚನ ।
ಕಿಂ ಚಾಸ್ಮಿನ್ನಿವಭಕ್ತತ್ವಂ ದೃಷ್ಟ್ವಾ ತೂಷ್ಣೀಂ ಸ್ಥಿತಾಃ ಶಿವೇ ॥೯೨॥

ಸದಾಚಾರೋ ದುರಾಚಾರೋ ನಿಯಮೇನ ಶಿವಾರ್ಚಕಃ ।
ಪೂಜನೀಯೋಽತಿಯತ್ನೇನ ನ ತಸ್ಮಿನ್ನಿಷ್ಠುರಂ ವದೇತ್ ॥೯೩॥

ಕದಾಚಿತ್ಸಂಚರನ್ಭಿಲ್ಲೋ ವನಮಧ್ಯಗತಃ ಶಿವೇ ।
ಭಿಲ್ಲೋ ಘರ್ಮಾಂಶುಸಂತಪ್ತಸ್ತೃಷಿತಶ್ಚ ಬಭೂವ ಸಃ ॥೯೪॥

ತಸ್ಯೈವ ನಿಕಟೇ ಕುಂಡಂ ಶೀತಲೋದಕಸಂವೃತಂ ।
ಸ್ಮೃತಂ ತಥಾಪಿ ಭಿಲ್ಲೇನ ನ ಪೀತಂ ಶೀತಲಂ ಜಲಂ ॥೯೫॥

ಮಯಾ ಶ್ರೀಕಾಲಹಸ್ತೀಶೋ ಬಿಲ್ವಪತ್ರಾದಿಸಾಧನೈಃ ।
ನಾರಾಧಿತಃ ಪ್ರಯತ್ನೇನ ನನರ್ತ ಚ ಪುನಃ ಪುನಃ ॥೯೬॥

---

ಪುಂಗವರಾದರೋ ತಮ್ಮ ತಪಸ್ಸು ಖರ್ಚಾಗುವುದೆಂಬ ಭಯದಿಂದ ಇವನಿಗೆ ಯಾವಾಗಲೂ ಶಾಪಕೊಡುತ್ತಿರಲಿಲ್ಲ. ಇದಲ್ಲದೇ ಈ ಬೇಡನಲ್ಲಿರುವ ಶಿವಭಕ್ತಿಯನ್ನು ನೋಡಿ ಸುಮ್ಮನಿರುತ್ತಿದ್ದರು. ॥೯೧-೯೨॥

ಒಳ್ಳೆಯ ಆಚಾರಶೀಲನಾಗಲೀ, ಹೀನವಾದ ಆಚಾರವುಳ್ಳವನಾಗಲೀ ಶಿವಭಕ್ತಿಯುತನಾಗಿರುವವನನ್ನು ಅವಶ್ಯವಾಗಿ ಪೂಜೆಮಾಡಲೇಬೇಕು. ಆತನಲ್ಲಿ ಎಂದಿಗೂ ನಿಷ್ಠುರವಾಗಿ ಮಾತನಾಡಬಾರದು. ಗಿರಿಜೇ, ಒಂದು ದಿವಸ ಇದೇ ಬೇಡನು ಸಂಚಾರಮಾಡುತ್ತಾ ಕಾಡಿನ ಮಧ್ಯಕ್ಕೆ ಬಂದಾಗ ತೀವ್ರವಾದ ಬಿಸಿಲಿನಿಂದ ಬಳಲಿ ಬಾಯಾರಿಕೆಗೊಳಗಾದನು. ॥೯೩-೯೪॥

ಅವನು ಬರುತ್ತಿರುವ ದಾರಿಯ ಹತ್ತಿರದಲ್ಲಿ ತಂಪಾದ ನೀರಿನಿಂದ ಪರಿಪೂರ್ಣವಾದ ಒಂದು ಕುಂಡವಿದ್ದಿತು. ಅವನಿಗೆ ಅದರ ಜ್ಞಾಪಕಬಂದರೂ ಆ ಬೇಡನು ಅದರ ನೀರನ್ನು ಕುಡಿಯಲಿಲ್ಲ. ಆಗ ಆತನು “ ನಾನು ಬಿಲ್ವಪತ್ರೆ, ಹೂಮುಂತಾದ ಸಲಕರಣೆಗಳಿಂದ ಆ ಕಾಲಹಸ್ತೀಶ್ವರನಿಗೆ ಪೂಜೆಮಾಡಿ ಆ ದೇವದೇವನ ಮುಂದೆ ನಿಯಮಬದ್ಧನಾಗಿ ಇನ್ನೂ ನಾಟ್ಯವಾಡಲಿಲ್ಲ. ॥೯೫-೯೬॥

ವಿಭೂತಿರ್ನ ಧೃತಾ ಶುದ್ಧಾ ಸರ್ವಪಾಪಾಪನೋದಿನೀ।
ಶೈವಃ ಪಂಚಾಕ್ಷರಃ ಶುದ್ಧೋನ ಜಪ್ತಃ ಶಿವಸಂನಿಧೌ ॥೧೯೭॥

ಏವಂ ಸತಿ ತೃಷಾರ್ತೇನ ಜಲ ಪೇಯಂ ಕಥಂ ಮಯಾ।
ತೃಷಯಾ ಯದಿ ಗಚ್ಛಂತಿ ಗಚ್ಛಂತ್ವಸ್ಯಾಸವೋ ಮಮ ॥೧೯೮॥

ತೃಷಾರ್ದಿತೇನ ಚೇತ್ತ್ಯಕ್ತಾ ತನುರೇಷಾ ತದಾ ಮಮ।
ಸರ್ವಥಾ ನರಕಾವಾಸೋ ನ ಭವಿಷ್ಯತಿ ಶಾಶ್ವತಃ ॥೧೯೯॥

ವಿಭೂತಿಧಾರಣಂ ತ್ಯಕ್ತ್ವಾ ಮಯಾ ಚೇತ್ಪೀಯತೇ ಜಲಂ।
ತದಾ ತು ನರಕಾವಾಸೋ ಭವಿಷ್ಯತ್ಯೇವ ಸರ್ವಥಾ ॥೨೦೦॥

ವಿಭೂತಿಧಾರಣಂ ತ್ಯಕ್ತ್ವಾ ಪೀತಂ ಕೈಶ್ಚಿತ್ಪುರಾ ಜಲಂ।
ತೈರ್ದುಃಖಮನುಭುಕ್ತ್ವೈವ ಸ್ಥೀಯತೇ ನರಕಾರ್ಣವೇ ॥೨೦೧॥

ತ್ಯಕ್ತ್ವಾ ಶಿವಾರ್ಚನಂ ಕೈಶ್ಚಿತ್ಪುರಾ ಪೀತಂ ಜಲಂ ತತಃ।
ತೈರಿದಾನೀಮಪಿ ಧ್ಯಾತೇ ಭುಜ್ಯತೇ ದುಃಖಮಾಯಸೇ ॥೨೦೨॥

---

ಪರಿಶುದ್ಧವಾದ ವಿಭೂತಿಯನ್ನು ನಾನಿನ್ನೂ ಧಾರಣೆಮಾಡಿಲ್ಲ. ಶುದ್ಧವಾಗಿರುವ ಶಿವಪಂಚಾಕ್ಷರ ಮಹಾಮಂತ್ರವನ್ನು ಆ ಶಿವನ ಸಂನಿಧಾನದಲ್ಲಿ ಜಪಿಸಿಲ್ಲ. ಹೀಗಿರುವಾಗ ಬಾಯಾರಿತೆಂದು ನಾನು ಹೇಗೆತಾನೇ ನೀರು ಕುಡಿಯಲಿ? ಒಂದು ವೇಳೆ ಈ ಬಾಯಾರಿಕೆಯಿಂದ ಈಗ ನನ್ನ ಪ್ರಾಣಗಳೇ ಬೇಕಾದರೂ ಹೋಗಲಿ. ॥೧೯೭-೧೯೮॥

ಹಸಿವಿನಿಂದ ಬಳಲಿದ್ದಾಗಲೇ ಈ ಶರೀರವು ನಷ್ಟವಾದರೆ ಆಗ ಖಂಡಿತವಾಗಿಯೂ ಪರಂಪರೆಯಾಗಿ ಬರುತ್ತಿದ್ದ ನರಕವಾಸವೇ ಇಲ್ಲದಂತಾಗುವುದು. ವಿಭೂತಿಯನ್ನು ಧರಿಸಿಕೊಳ್ಳದೇ ನಾನು ನೀರು ಕುಡಿದಿದ್ದೇ ಆದರೆ ಆಗ ತಪ್ಪದೇ ನರಕವಾಸವುಂಟಾಗುವುದರಲ್ಲಿ ಸಂದೇಹವೇ ಇಲ್ಲ. ॥೧೯೯-೨೦೦॥

ಹಿಂದೆ ಕೆಲವರು ವಿಭೂತಿಯನ್ನು ಧರಿಸದೇ ನೀರು ಕುಡಿದರು. ಅವರು ಆಗ ಘೋರವಾದ ನರಕವೆಂಬ ಸಮುದ್ರದಲ್ಲಿ ಬಿದ್ದು ಇನ್ನೂ ದುಃಖವನ್ನು ಅನುಭವಿಸುತ್ತಲೇ ಇರುವರು. ಕೆಲವರು ಶಿವಪೂಜೆ ಮಾಡದೆ ಹಿಂದೆ ಜಲಪಾನ

ಪಂಚಾಕ್ಷರಂ ಜಪಂ ತ್ಯಕ್ತ್ವಾ ಕೈಶ್ಚಿತ್ಪೀತಂ ಜಲಂ ಪುರಾ ।
ತೇ ತಪ್ತಮೂತ್ರಂ ಸಮಲಂ ಪೀತ್ವಾ ತಿಷ್ಠಂತಿ ದುಃಖಿತಾಃ ॥೨೦೪॥

ತತಃ ಶಿವಾರ್ಚನಂ ತ್ಯಕ್ತ್ವಾ ಭಸ್ಮಸೋದ್ಧಾರಣಂ ತಥಾ ।
ಪಂಚಾಕ್ಷರಜಪಂ ತ್ಯಕ್ತ್ವಾ ನ ಪೇಯಮುದಕಂ ಮಯಾ ॥೨೦೫॥

ಕಿಮೇತೈರ್ಮಮ ಕರ್ತವ್ಯಂ ಪ್ರಾಣೈರ್ದೇಹೇನ ವಾ ಮಮ ।
ಮಯಾ ಶಿವಾರ್ಚನಾದೀನಿ ತ್ಯಕ್ತ್ವಾ ಪೇಯಂ ಜಲಂ ಕಥಂ ॥೨೦೬॥

ಏವಮತ್ಯಂತಯತ್ನೇನ ಶರೀರಂ ಯದಿ ರಕ್ಷ್ಯತೇ ।
ತದಾ ಕಿಮಿದಮಾಕಲ್ಪಂ ಶರೀರಂ ಮೇ ವಸಿಷ್ಯತಿ ॥೨೦೭॥

ಪೂಯಶೋಣಿತಮೂತ್ರಾಢ್ಯಂ ಪುರೀಷನಿಲಯಂ ಸದಾ ।
ಶರೀರಮೇತದ್ದುರ್ಗಂಧಿ ಕಿಮನೇನ ಸುಖಂ ಮಮ ॥೨೦೮॥

ಆಂತ್ರಾಸ್ಥಿಬದ್ಧಂ ಸಮಲಮಪಾಯಶತಸಂಕುಲಂ ।
ಕ್ಷಯಿಷ್ಣುರೋಗಸಂಬದ್ಧಂ ಶರೀರಂ ಮೇ ನ ರೋಚತೇ ॥೨೦೯॥

---

ಮಾಡಿದ್ದರಿಂದ ಅವರು ಹೊಗೆಯಾಡುತ್ತಿರುವ ಸ್ಥಳದಲ್ಲಿ ಆಯುಧಗಳ ಏಟಿನಿಂದ ಸಹಿಸಲಸಾಧ್ಯವಾದ ದುಃಖವನ್ನನುಭವಿಸುತ್ತಿರುವರು. ॥೨೦೧-೨೦೨॥

ಶಿವಪಂಚಾಕ್ಷರ ಮಂತ್ರಜಪಮಾಡದೇ ಕೆಲವರು ಹಿಂದೆ ನೀರನ್ನು ಕುಡಿದರು. ಅವರು ಅಮೇಧ್ಯಸಮೇತವಾದ ಕಾದ ಮೂತ್ರವನ್ನು ಕುಡಿದು ತುಂಬಾ ದುಃಖಿತರಾಗಿರುವರು. ಆದ್ದರಿಂದ ಶಿವಪೂಜೆಯನ್ನೂ ಭಸ್ಮಧಾರಣೆಯನ್ನೂ ಮತ್ತು ಶಿವಪಂಚಾಕ್ಷರಜಪವನ್ನೂ ಮಾಡದೇ ನಾನೆಂದಿಗೂ ನೀರು ಕುಡಿಯ ಬಾರದು. ॥೨೦೪-೨೦೫॥

ಈ ಪ್ರಾಣಗಳಿಂದ ನನಗೆ ಆಗಬೇಕಾದ್ದೇನು? ಪವಿತ್ರವಾದ ಶಿವಪೂಜೆಯನ್ನು ಬಿಟ್ಟು ಹೇಗೆ ತಾನೇ ನಾನು ನೀರು ಕುಡಿಯಬಹುದು? ಒಂದು ವೇಳೆ ನೀರನ್ನು ಕುಡಿದಾದರೂ ಪ್ರಯತ್ನಪಟ್ಟು ಈ ಶರೀರವನ್ನು ಕಾಪಾಡಿದರೆ ಈ ನನ್ನ ದೇಹವು ಕಲ್ಪಪರ್ಯಂತವಾಗಿಯೂ ಜೀವಿಸಬಲ್ಲುದೆ? ॥೨೦೬-೨೦೭॥

ಕೀವು, ರಕ್ತ, ಮೂತ್ರ ಇವುಗಳಿಂದ ಯುಕ್ತವಾಗಿ ಯಾವಾಗಲೂ ಅಮೇಧ್ಯಕ್ಕೆ ಆವಾಸಸ್ಥಳವಾಗಿ ದುರ್ಗಂಧಭರಿತವಾಗಿರುವ ಈ ಶರೀರದಿಂದ ನನಗೇನು

ಅನಂತಾನಿ ಶರೀರಾಣಿ ತ್ಯಕ್ತಾನ್ಯೇವ ಪುರಾ ಮಯಾ ।
ಇದಮಪ್ಯಧುನಾ ತ್ಯಾಜ್ಯಂ ತೃಷಾರ್ತೇನ ಮಯಾ ಧ್ರುವಂ ॥೨೦೯॥

ವಸ್ತ್ರಾಣಿ ಕತಿ ನಷ್ಟಾನಿ ಕಟಿಬದ್ಧಾನಿ ಸಾದರಂ ।
ತನ್ನಾಶೋಽ ನ ಯಥಾ ದುಃಖಂ ತಥಾನೇನ ನ ಸಂಶಯಃ ॥೨೧೦॥

ಮಯಾ ಪೂರ್ವಂ ಸ್ಥಿತಂ ನೂನಂ ಶಂಕರಾರಾಧನಂ ವಿನಾ ।
ಅತಃ ಪ್ರಾಪ್ತಾನಿ ಬಹುಧಾ ಶರೀರಾಣಿ ಮಯಾ ಪುರಾ ॥೨೧೧॥

ಶಿವಪೂಜನಮೇವಾಹುಃ ಸಂಸಾರೋಚ್ಛೇದಕಾರಣಂ ।
ತಥಾ ಸತ್ಯದ್ಯ ಮನಸಾ ಶಂಕರಂ ಪೂಜಯಾಮ್ಯಹಂ ॥೨೧೨॥

---

ತಾನೇ ಪ್ರಯೋಜನ? ನರಗಳಿಂದಲೂ ಮೂಳೆಗಳಿಂದಲೂ ಸಂಬದ್ಧವಾಗಿ ಮಲ ಮೂತ್ರಗಳಿಗೆ ಮನೆಯಾಗಿ ನಾನಾ ತೊಂದರೆಗಳಿಗೆ ಈಡಾಗುವ ಈ ಶರೀರವು ಕ್ಷಯಿಸುವ ಸ್ವಭಾವವುಳ್ಳದ್ದಾಗಿ ಅನೇಕ ರೋಗಗಳಿಗೆ ಆಶ್ರಯವಾಗಿರುವುದು. ಇಂತಹ ಶರೀರದಲ್ಲಿ ನನಗೆ ಅಭಿರುಚಿಯೇ ಇಲ್ಲ. ॥೨೦೭-೨೦೮॥

ಹಿಂದೆ ನಾನು ಅನೇಕ ಶರೀರಗಳನ್ನು ಹೊಂದಿ ಎಲ್ಲವನ್ನೂ ಬಿಟ್ಟಿರುವೆನು. ಈಗಲೂ ಬಾಯಾರಿಕೆಯಿಂದ ಬಳಲಿದ ನಾನು ಈ ಶರೀರವನ್ನೂ ಈಗ ನಿಶ್ಚಯವಾಗಿ ಬಿಡಲು ಸಿದ್ಧನಾಗಿರುವೆನು. ವಿಶೇಷ ಆದರದಿಂದ ಸೊಂಟಕ್ಕೆ ಕಟ್ಟಿಕೊಂಡಿದ್ದ ಎಷ್ಟೋ ಬಟ್ಟೆಗಳು ಹಾಳಾದವು. ಅವುಗಳ ನಾಶದಿಂದ ನನಗೆ ದುಃಖವುಂಟಾದಂತೆಯೇ ಈ ಶರೀರ ನಾಶದಿಂದಲೂ ಶೋಕವುಂಟಾಗುವುದು. ಇದರಲ್ಲಿ ಸಂದೇಹವಿಲ್ಲ. ॥೨೦೯-೨೧೦॥

ಹಿಂದೆ ನಾನು ನಿಶ್ಚಯವಾಗಿಯೂ ಶಂಕರನನ್ನು ಪೂಜೆಮಾಡದೆಯೇ ಕಾಲಕಳೆಯುತ್ತಿದ್ದೆನು. ಅದರಿಂದ ನನಗೆ ಹಿಂದಿನ ಜನ್ಮಗಳಲ್ಲಿ ಅನೇಕ ಶರೀರಗಳುಂಟಾಗಿದ್ದವು. ಈ ಸಂಸಾರದ ನಾಶಕ್ಕೆ ಕಾರಣಭೂತವಾಗಿರುವುದು ಈ ಶಿವಪೂಜೆಯೆಂದೇ ಪ್ರಾಜ್ಞರು ಹೇಳುತ್ತಿರುವರು. ಆದಕಾರಣ ನಾನು ಈಗ ಮನಸ್ಸಿನಿಂದಲೇ ಆ ಶಂಕರನನ್ನು ಪೂಜೆಮಾಡುತ್ತೇನೆ. ॥೨೧೧-೨೧೨॥

ಸರ್ವವ್ಯಾಪೀ ಸರ್ವಭೂತಾಂತರಾತ್ಮಾ
ಸಾಕ್ಷೀ ಚೇತಾ ನಿರ್ಗುಣಶ್ಚೇಶ್ವರಶ್ಚ ।
ಸೋಮೋ ನಿತ್ಯೋ ನಿರ್ವಿಕಾರಶ್ಚಿದಾತ್ಮಾ
ನೀಲಗ್ರೀವಃ ಪಾತುಮಾಮದ್ಯ ದುಃಖಾತ್ ॥೨೧೩॥

ಮಾಯಾತೀತೋ ಮೋಹಿತಾಶೇಷಲೋಕಃ
ಸೋಮಾಕಾರಃ ಸಾಮವೇದಸ್ವರೂಪಃ ।
ಸರ್ವಾಶಾಸ್ಯಃ ಸರ್ವರೂಪೋ ಮಹೇಶೋ
ನೀಲಗ್ರೀವಃ ಪಾತುಮಾಮದ್ಯ ದುಃಖಾತ್ ॥೨೧೪॥

ವ್ಯಕ್ತಾಽವ್ಯಕ್ತಾನಾದಿಕರ್ಮಾದಿಗಮ್ಯೋ
ವ್ಯಕ್ತಾಽವ್ಯಕ್ತಾನಾದಿಧರ್ಮಾದಿಗಮ್ಯಃ ।
ವ್ಯಕ್ತಾಽವ್ಯಕ್ತಾನಾದಿದೇವಾಧಿಗಮ್ಯೋ
ನೀಲಗ್ರೀವಃ ಪಾತುಮಾಮದ್ಯ ದುಃಖಾತ್ ॥೨೧೫॥

---

ಚರಾಚರಾತ್ಮಕವಾದ ಸಕಲ ಪ್ರಪಂಚದಲ್ಲಿಯೂ ವ್ಯಾಪಿಸಿರುವವನೂ, ಸಕಲ ಪ್ರಾಣಿಗಳಲ್ಲಿಯೂ ಅಡಗಿರುವವನೂ, ಸಕಲ ಕರ್ಮಗಳನ್ನೂ ಪ್ರತ್ಯಕ್ಷವಾಗಿ ನೋಡುತ್ತಿರುವನೂ, ಚೈತನ್ಯಸ್ವರೂಪನೂ, ಗುಣರಹಿತನೂ, ಐಶ್ವರ್ಯಸಂಪನ್ನನೂ, ಶಾಶ್ವತನೂ, ವಿಕಾರಶೂನ್ಯನೂ, ಚಿತ್ಸ್ವರೂಪನೂ (ಜ್ಞಾನಸ್ವರೂಪನೂ) ಕಪ್ಪಾದ ಕೊರಳುಳ್ಳವನೂ ಆಗಿರುವ ಆ ಅಂಬಿಕಾಸಹಚರನು ಈಗ ಒದಗಿರುವ ದುಃಖದಿಂದ ನನ್ನನ್ನು ಪಾರುಮಾಡಲಿ. ॥೨೧೩॥

ಮಾಯೆಗೆ (ಅಜ್ಞಾನಕ್ಕೆ) ಸಿಕ್ಕದವನೂ, ಸಕಲ ಲೋಕಗಳನ್ನೂ ತನ್ನ ಮಾಯೆಯಿಂದ ಮೋಹಗೊಳಿಸುವವನೂ, ಉಮಾರಮಣಸ್ವರೂಪನೂ, ಸಾಮವೇದದ ಆಕಾರವುಳ್ಳವನೂ, ಎಲ್ಲರಿಂದಲೂ ಪೂಜಿಸಲ್ಪಡುವವನೂ, ಎಲ್ಲಾ ರೂಪವನ್ನೂ ಹೊಂದಿರುವವನೂ ಕಪ್ಪಾದ ಕೊರಳುಳ್ಳವನೂ ಆದ ಮಹೇಶ್ವರನು ನನಗೆ ಈಗ ಒದಗಿರುವ ದುಃಖವನ್ನು ಹೋಗಲಾಡಿಸಿ ನನ್ನನ್ನು ಸಲಹಲಿ. ॥೨೧೪॥

ಅನಾದಿಕಾಲದಿಂದಲೂ ಸಿದ್ಧವಾಗಿರುವ ವ್ಯಕ್ತ (ಗೋಚರವಾಗಿರತಕ್ಕವುಗಳು) ಅವ್ಯಕ್ತ (ಗೋಚರವಾಗದಿರುವುವು) ಇಂತಹ ಕರ್ಮಗಳಿಂದಲೂ ಧರ್ಮಗಳಿಂದಲೂ, ದೇವತಾಸ್ವರೂಪಗಳಿಂದಲೂ, ಗೋಚರಿಸುವ ನೀಲಗ್ರೀವನು ನನ್ನನ್ನು ದುಃಖದಿಂದ ಪಾರುಮಾಡಲಿ. ॥೨೧೫॥

ಯಂ ವೇದಾಂತಾ ನೈವ ಜಾನಂತಿ ಶಂಭುಂ
ಯಸ್ಮಾನ್ನಿತ್ಯಂ ವೇದವಾಚೋ ನಿವೃತ್ತಾಃ ।
ಯಂ ಬ್ರಹ್ಮಾದ್ಯಾ ನೈವ ಜಾನಂತಿ ಸೋಽಯಂ
ನೀಲಗ್ರೀವಃ ಪಾತುಮಾಮದ್ಯ ದುಃಖಾತ್ ॥೨೧೬॥

ಯತ್ಸವ್ಯಂಗಾದುದ್ಭವಃ ಸೃಷ್ಟಿಕರ್ತು-
ರ್ಯದ್ವಾಮಾಂಗಾಜ್ಜನ್ಮ ಸಂಪ್ರಾಪ ವಿಷ್ಣುಃ ।
ಯಃ ಸರ್ವೇಶಃ ಸೋಽಯಮಾದ್ಯಂತಶೂನ್ಯೋ
ನೀಲಗ್ರೀವಃ ಪಾತುಮಾಮದ್ಯ ದುಃಖಾತ್ ॥೨೧೭॥

ಯಂ ಸರ್ವೇಶಂ ತತ್ವತೋ ವೇದನಿಷ್ಠಾ
ವಿಜ್ಞಾಯೇಶಂ ಪೂಜಯಂತ್ಯಾದರೇಣ ।
ಸೋಽಯಂ ಶರ್ವಃ ಸರ್ವವೇದಾಂತವೇದ್ಯೋ
ನೀಲಗ್ರೀವಃ ಪಾತು ಮಾಮದ್ಯ ದುಃಖಾತ್ ॥೨೧೮॥

---

ಪ್ರತಿದಿನವೂ ವೇದವಾಕ್ಯಗಳೆಲ್ಲವೂ ಹೊಗಳುತ್ತಿರುವ ಆ ಶಂಭುವನ್ನು ವೇದಾಂತವಾಕ್ಯಗಳೂ ಸಹ ಪೂರ್ಣವಾಗಿ ತಿಳಿಯಲಾರವು. ಬ್ರಹ್ಮಾದಿ ದೇವತೆಗಳೂ ಸಹ ತಿಳಿಯಲಸಾಧ್ಯನಾಗಿರುವ ಆ ನೀಲಕಂಠನು ನನ್ನನ್ನು ಈ ದುಃಖದಿಂದ ಪಾರುಮಾಡಲಿ. ॥೨೧೬॥

ಯಾವ ದೇವನ ಶರೀರದ ಬಲಭಾಗದಿಂದ ಸೃಷ್ಟಿಕರ್ತೃವಾದ ಬ್ರಹ್ಮನೂ, ಎಡಭಾಗದಿಂದ ಪಾಲನಕರ್ತೃವಾದ ವಿಷ್ಣುವೂ ಜನಿಸಿದರೋ, ಅಂತಹ ಸಕಲದೇವತೆಗಳಿಗೂ ಒಡೆಯನೂ ಆದ್ಯಂತವಿಲ್ಲದವನೂ (ಉತ್ಪತ್ತಿ ಮತ್ತು ನಾಶಗಳಿಲ್ಲದವನೂ) ಆದ ನೀಲಕಂಠನು ನನ್ನನ್ನು ಈ ದುಃಖದಿಂದ ಈಗ ಪಾರುಮಾಡಲಿ. ॥೨೧೭॥

ವೇದತತ್ಪರರಾದ ಮುನಿಗಳು ತತ್ವವನ್ನರಿತು ಸಕಲಲೋಕಾಧಿಪತಿಯೂ ಆ ಈಶ್ವರನೇ ಎಂದು ತಿಳಿದು ಆದರದಿಂದ ಆತನನ್ನು ಪೂಜೆಮಾಡುತ್ತಿರುವರು. ಸಕಲ ವೇದಾಂತಗಳಿಂದಲೂ ತಿಳಿಯಲ್ಪಡತಕ್ಕವನೂ ಪ್ರಳಯಕಾಲದಲ್ಲಿ ಸಕಲ ಪ್ರಾಣಿಗಳನ್ನೂ ಸಂಹಾರಮಾಡತಕ್ಕವನೂ (ಶರ್ವ) ಆದ ಈ ನೀಲಕಂಠನು ನನಗೆ ಬಂದಿರುವ ದುಃಖವನ್ನು ತೊಲಗಿಸಿ ನನ್ನನ್ನು ಈಗ ಸಲಹಲಿ. ॥೨೧೮॥

ಯಸ್ಯಾಪಾಂಗಸ್ಪಂದಮಾತ್ರೇಣ ನಿತ್ಯಂ
ಬ್ರಹ್ಮೋಪೇಂದ್ರೇಂದ್ರಾದಯಃ ಕಂಪಮಾನಾಃ ।
ದೂರೇ ತಿಷ್ಠಂತ್ಯನ್ವಹಂ ಸೋಽಯಮೀಶೋ
ನೀಲಗ್ರೀವಃ ಪಾತು ಮಾಮದ್ಯ ದುಃಖಾತ್ ॥೨೧೯॥

ಯತ್ಪಾದಾಬ್ಜಂ ವಿಷ್ಣುರತ್ಯಂತಭಕ್ತ್ಯಾ
ಸ್ವೀಯಂ ನೇತ್ರಂ ಸಮ್ಯಗುತ್ಪಾಟ್ಯ ರಮ್ಯಂ ।
ಸ್ವಾಭೀಷ್ಟಾರ್ಥಂ ಪೂಜಯಾಮಾಸ ಸೋಽಯಂ
ನೀಲಗ್ರೀವಃ ಪಾತು ಮಾಮದ್ಯ ದುಃಖಾತ್ ॥೨೨೦॥

ಯಸ್ಯ ಸ್ಮೃತ್ಯಾ ಸರ್ವಪಾಪೌಘನಾಶೋ
ಯತ್ಪೂಜಾತೋ ಘೋರಸಂಸಾರನಾಶಃ ।
ಯಸ್ಯ ಸ್ತುತ್ಯಾ ಮುಕ್ತಿರಾಪ್ತ್ಯೈವ ಸೋಽಯಂ
ನೀಲಗ್ರೀವಃ ಪಾತು ಮಾಮದ್ಯ ದುಃಖಾತ್ ॥೨೨೧॥

---

ಕಡೆಗಣ್ಣಿನ ಅಲುಗುವಿಕೆಯಿಂದಲೇ ನಿತ್ಯವೂ ಬ್ರಹ್ಮ, ವಿಷ್ಣು, ಮತ್ತು ದೇವೇಂದ್ರ ಮುಂತಾದವರೆಲ್ಲರೂ ನಡುಗುತ್ತಾ ದೂರದಲ್ಲಿಯೇ ಯಾವಾಗಲೂ ನಿಂತಿರುವರೋ, ಅಂತಹ ನೀಲಕಂಠನೆನಿಸಿದ ಈ ಈಶ್ವರನು ಈಗ ದುಃಖದಿಂದ ನನ್ನನ್ನು ಕಾಪಾಡಲಿ. ॥೨೧೯॥

ಮಹಾವಿಷ್ಣುವು ತನ್ನ ಮನೋಹರವಾದ ಕಣ್ಣನ್ನೇ ಕಿತ್ತು ತನ್ನ ಇಷ್ಟಾರ್ಥ ಸಿದ್ಧಿಗೋಸ್ಕರ ವಿಶೇಷ ಭಕ್ತಿಯಿಂದ ಆ ಮಹೇಶ್ವರನ ಪಾದಕಮಲಗಳಿಗೆ ಪೂಜೆ ಮಾಡಿದನು. ಈರೀತಿಯಾದ ಮಹಾಮಹಿಮೆಯಿಂದ ಕೂಡಿರುವ ಪೂಜ್ಯ ನೀಲ ಕಂಠನು ಈಗ ನನ್ನನ್ನು ದುಃಖದಿಂದ ಪಾರುಮಾಡಲಿ. ॥೨೨೦॥

ಸ್ಮರಣೆಮಾಡಿದಮಾತ್ರದಿಂದಲೇ ಸಕಲ ಪಾಪಸಮೂಹಗಳೂ, ಪೂಜೆಯಿಂದ ಭಯಂಕರವಾದ ಈ ಸಂಸಾರಬಂಧನವೂ ನಾಶವಾಗಿ ಸ್ತೋತ್ರದಿಂದ ಮೋಕ್ಷವನ್ನೇ ದೊರಕಿಸುವ ಆ ನೀಲಕಂಠನು ಸದ್ಯದಲ್ಲಿ ನನಗೆ ಉಂಟಾಗಿರುವ ದುಃಖವನ್ನು ದೂರಮಾಡಿ ನನ್ನನ್ನು ಸಲಹಲಿ. ॥೨೨೧॥

॥ ಶ್ರೀಶಿವ ಉವಾಚ ॥

ಏವಂ ಸ್ತುತ್ವಾ ಸ ಭಿಲ್ಲೋ ಮಾಮಾನಂದಾಶ್ರುಲಸನ್ಮುಖಃ ।
ದಧ್ಯೌ ದೇವಾಧಿದೇವಂ ಮಾಮಮೃತಾಪ್ಲುತವಿಗ್ರಹಂ ॥೨೨೨॥

ತದಾನೀಮಭವದ್ವೃಷ್ಟಿರ್ಮಂದಾರಕುಸುಮಾನ್ವಿತಾ ।
ಶರೀರಂ ಸಿಕ್ತಮಭವತ್ತಸ್ಯ ವೃಷ್ಟ್ಯಾ ತದಾ ಶಿವೇ ॥೨೨೩॥

ಯದಾ ವೃಷ್ಟಿರಭೂದ್ರಮ್ಯಾ ಸ ಪಿಧಾಯ ಮುಖಂ ತದಾ ।
ಸ್ಥಿತೋ ಮುಖೇ ಜಲಸ್ಯಾಸ್ಯ ಪ್ರವೇಶೋ ಮಾಸ್ತ್ವಿತಿ ಪ್ರಿಯೇ ॥೨೨೪॥

ತತೋಽಸ್ಯ ತೃಟ್ತದಾ ಶಾಂತಾ ಜಲಪಾನಂ ವಿನಾ ಪ್ರಿಯೇ ।
ಜಲಂ ನ ಪೀತಂ ಭಿಲ್ಲೇನ ಪಾತ್ಯಮಾನಮಪಿ ಧ್ರುವಂ ॥೨೨೫॥

ತತಃ ಸ ಬಿಲ್ವಪತ್ರಾಣಿ ಪುಷ್ಪಾಣ್ಯತ್ಯುತ್ತಮಾನಿ ಚ ।
ಮಾಂಸಾನ್ಯಪಿ ವಿಚಿತ್ರಾಣಿ ಸಮಾದಾಯೈವ ನಿರ್ಗತಃ ॥೨೨೬॥

ತತಃ ಶನೈಃ ಶನೈರ್ಭಿಲ್ಲಃ ಕಾಲಹಸ್ತೀಶ್ವರಾಲಯಂ ।
ಸಂಪ್ರಾಪ ಪೂಜಾದ್ರವ್ಯಾಣಿ ಗೃಹೀತ್ವಾ ಮುದಿತಾನನಃ ॥೨೨೭॥

---

ಆ ಬೇಡನು ಹೀಗೆ ನನ್ನನ್ನು ಸ್ತೋತ್ರಮಾಡಿ, ಆನಂದಬಾಷ್ಪಗಳಿಂದ ಶೋಭಿಸುತ್ತಿರುವ ಮುಖವುಳ್ಳವನಾಗಿ, ಸಕಲ ದೇವತೆಗಳಿಗೂ ಅಧಿಪತಿಯೆನಿಸಿ, ಅಮೃತದಿಂದ ನೆನಸಲ್ಪಟ್ಟ ವಿಗ್ರಹವುಳ್ಳ ನನ್ನನ್ನು ಧ್ಯಾನಮಾಡಿದನು. ಎಲೌ ಮಂಗಳಾಂಗಿಯೇ! ಆಗ ಮಂದಾರಪುಷ್ಪಗಳಿಂದ ಕೂಡಿದ ಪುಷ್ಪವೃಷ್ಟಿಯಾಗಲು ಆತನ ಶರೀರವೆಲ್ಲವೂ ಆ ಮಳೆಯಿಂದ ನೆನೆಯಿತು. ॥೨೨೨-೨೨೩॥

ಆ ರೀತಿ ಮನೋಹರವಾಗಿ ಮಳೆಯಾದಾಗ ಆ ಭಿಲ್ಲನು ಮಳೆಯ ನೀರು ಬಾಯಿಗೆ ಹೋಗಬಾರದೆಂದು ಭಾವಿಸಿ, ತನ್ನ ಮುಖವನ್ನು ಮುಚ್ಚಿಕೊಂಡನು. ಪ್ರಿಯೇ, ಅನಂತರ ಆ ಬೇಡನ ಬಾಯಾರಿಕೆಯು ಕೂಡಲೇ ಶಾಂತವಾಯಿತು. ಮೇಲೆ ಮೇಲೆ ಬೀಳುತ್ತಿದ್ದರೂ ಆ ಬೇಡರವನು ತಾನು ನಿಶ್ಚಯವಾಗಿಯೂ ನೀರು ಕುಡಿಯಲಿಲ್ಲ. ॥೨೨೪-೨೨೫॥

ಆಮೇಲೆ ಆ ಬೇಡರವನು ಬಿಲ್ವಪತ್ರೆಗಳನ್ನೂ ಅತ್ಯುತ್ತಮವಾದ ಹೂಗಳನ್ನೂ ವಿಚಿತ್ರವಾದ ಮಾಂಸಗಳನ್ನೂ ತೆಗೆದುಕೊಂಡು ಮೆಲ್ಲಮೆಲ್ಲಗೆ ಪೂಜಾ

ತತಃ ಸ್ನಾತ್ವಾ ಪ್ರಯತ್ನೇನ ಸುವರ್ಣಮುಖರೀಜಲೇ ।
ಭಸ್ಮನೋದ್ಧೂಳನಂ ಕೃತ್ವಾ ತ್ರಿಪುಂಡ್ರಂ ಚ ಚಕಾರ ಸಃ ॥೨೨೮॥

ತತೋ ಗೃಹೀತ್ವಾ ಪುಷ್ಪಾಣಿ ಬಿಲ್ವಪತ್ರಾಣಿ ಚಾದರಾತ್ ।
ಮಾಂಸಂ ಚ ಜಗೃಹೇ ಭಿಲ್ಲೋ ಜಲಂ ಚ ಮುಖತಸ್ತದಾ ॥೨೨೯॥

ತತೋ ಮುಖಜಲೈಃ ಸಮ್ಯಗಭಿಷಿಚ್ಯ ಸಮಾಹಿತಃ ।
ಬಿಲ್ವಪತ್ರೈಃ ಸುಪುಷ್ಪೈಶ್ಚ ಚಕ್ರೇ ಪೂಜಾಂ ಪ್ರಯತ್ನತಃ ॥೨೩೦॥

ತತೋ ಮಾಂಸಾನಿ ಸರ್ವಾಣಿ ಸುಸ್ವಾದೂನಿ ಪ್ರಯತ್ನತಃ ।
ಮಹ್ಯಂ ನಿವೇದಯಾಮಾಸ ಪಂಚಾಕ್ಷರಪುರಃಸರಮ್ ॥೨೩೧॥

ಪ್ರದಕ್ಷಿಣನಮಸ್ಕಾರಾನ್ನರ್ತನಂ ಚ ಚಕಾರ ಸಃ ।
ತತಃ ಪಂಚಾಕ್ಷರಂ ಶುದ್ಧಂ ಜಜಾಪ ಪ್ರೀತಮಾನಸಃ ॥೨೩೨॥

---

ದ್ರವ್ಯಗಳೊಡನೆ ಸಂತೋಷದಿಂದ ಆ ಕಾಲಹಸ್ತೀಶ್ವರನ ದೇವಾಲಯಕ್ಕೆ ಹೋದನು. ॥೨೨೬-೨೨೭॥

ಆಮೇಲೆ ಆ ಭಿಲ್ಲನು ಸುವರ್ಣಮುಖರೀ ನದಿಯ ನೀರಿನಲ್ಲಿ ನಿಯಮದಿಂದ ಸ್ನಾನಮಾಡಿ ಭಸ್ಮಲೇಪನವನ್ನೂ ಮತ್ತು ಭಸ್ಮತ್ರಿಪುಂಡ್ರಧಾರಣೆಯನ್ನೂ ಮಾಡಿಕೊಂಡು, ಅನಂತರ ಹೂಗಳನ್ನೂ ಬಿಲ್ವಪತ್ರೆಗಳನ್ನೂ ಮಾಂಸವನ್ನೂ ಹಿಡಿದು ಬಾಯಿಯಲ್ಲಿ ತುಂಬಾ ನೀರನ್ನೂ ತುಂಬಿಕೊಂಡು ದೇವಾಲಯಕ್ಕೆ ಹೊರಡಲು ಸಿದ್ಧವಾದನು. ॥೨೨೮-೨೨೯॥

ಅನಂತರ ಆ ಬೇಡರವನು ದೇವರ ಸನ್ನಿಧಿಗೆ ಬಂದು ತನ್ನ ಬಾಯಿಯಲ್ಲಿದ್ದ ನೀರಿನಿಂದ ಆ ಮಹೇಶ್ವರನಿಗೆ ಚೆನ್ನಾಗಿ ಅಭಿಷೇಕಮಾಡಿ, ಬಿಲ್ವಪತ್ರೆಗಳಿಂದಲೂ ಒಳ್ಳೆಯ ಹೂಗಳಿಂದಲೂ ನಿಯಮಬದ್ಧನಾಗಿ ಪೂಜೆಮಾಡಿದನು. ಹಾಗೆಯೇ ಬಹಳ ರುಚಿಕರವಾಗಿರುವ ಮಾಂಸಗಳನ್ನು ನಿಯಮಪೂರ್ವಕವಾಗಿ ಶಿವಪಂಚಾಕ್ಷರ ಮಂತ್ರದೊಡನೆ ನನಗೆ ಸಮರ್ಪಿಸಿದನು. ॥೨೩೦-೨೩೧॥

ಹೀಗೆ ನಿವೇದನಮಾಡಿದನಂತರ ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡಿ ನಾಟ್ಯವಾಡಿ ಪ್ರೀತಿಯಿಂದ ಪವಿತ್ರವಾದ ಶಿವಪಂಚಾಕ್ಷರಮಂತ್ರವನ್ನು

ಏತಸ್ಮಿನ್ನಂತರೇ ದೇವಿ ಋಷಯೋ ಬ್ರಹ್ಮವಾದಿನಃ ।
ಸಾಯಂ ಪ್ರದೋಷಪೂಜಾರ್ಥಂ ಕೋಟಿಶಃ ಸಮುಪಾಗತಾಃ ॥೨೩೩॥

ತದಾ ಮಯಾ ಭಿಲ್ಲಭಕ್ತಿಪ್ರಖ್ಯಾಪನಮನೀಷಯಾ ।
ದೃಢಂ ದೇವಾಲಯಸ್ಯೈವಂ ಭ್ರಂಶಸ್ತೇಭ್ಯಃ ಪ್ರದರ್ಶಿತಃ ॥೨೩೪॥

ಭ್ರಶ್ಯಮಾನಂ ತತೋ ದೃಷ್ಟ್ವಾ ದೇವಾಲಯಮನುತ್ತಮಂ ।
ಋಷಯೋ ನಿರ್ಯಯುಃ ಸರ್ವೇ ವಿಸ್ಮಿತಾಸ್ತೇ ಶಿವಾಲಯಾತ್ ॥೨೩೫॥

ಭ್ರಶ್ಯಮಾನಂ ತು ತಂ ದೃಷ್ಟ್ವಾ ಭಿಲ್ಲೋ ದೇವಾಲಯಂ ತದಾ ।
ವಿಸ್ಮಿತಂ ಚಿಂತಯಾಮಾಸ ಕಿಂ ಕರ್ತವ್ಯಮಿತಿ ಪ್ರಿಯೇ ॥೨೩೬॥

ಭ್ರಶ್ಯಮಾನಸ್ತು ಪಾಷಾಣಃ ಶಿವಲಿಂಗೇ ಪತಿಷ್ಯತಿ ।
ತತ್ಪಾತೇನ ಶ್ರಿಹಾಘಾತಃ ಶಿವಲಿಂಗೇ ಭವಿಷ್ಯತಿ ॥೨೩೭॥

ಜೀವತಾ ತ್ವಯಮಾಘಾತೋ ಮಯಾ ದ್ರಷ್ಟುಂ ನ ಶಕ್ಯತೇ ।
ಭ್ರಶ್ಯಮಾನಾಶ್ಚ ಪಾಷಾಣಾಃ ಸ ಧರ್ತವ್ಯಾ ಯತೋ ದೃಢಾಃ ॥೨೩೮॥

---

ಜಪಿಸಿದನು. ದೇವಿ! ಇದೇ ಸಮಯದಲ್ಲಿ ಸಾಯಂಕಾಲವಾದ್ದರಿಂದ ಪ್ರದೋಷ ಕಾಲದ ಪೂಜೆಗೋಸ್ಕರ ಅನೇಕಮಂದಿ ಬ್ರಹ್ಮಜ್ಞಾನಿಗಳಾದ ಋಷಿಗಳು ಅಲ್ಲಿಗೆ ಗುಂಪುಗುಂಪಾಗಿ ಬಂದರು. ॥೨೩೨-೨೩೩॥

ಆಗ ನಾನು ಈ ಭಿಲ್ಲನ ಭಕ್ತಿಯನ್ನು ಪ್ರಕಾಶಪಡಿಸಬೇಕೆಂಬ ಅಭಿಲಾಷೆ ಯಿಂದ, ದೃಢವಾಗಿದ್ದ ಆ ಶಿವದೇವಾಲಯವು ಒಡೆದು ಹೋಗುತ್ತಿರುವಂತೆ ಅವರೆಲ್ಲ ರಿಗೂ ಪ್ರದರ್ಶನಮಾಡಿದೆನು. ಅತ್ಯಂತ ಉತ್ತಮವಾಗಿದ್ದ ಶಿವದೇವಾಲಯವು ಒಡೆದು ಬೀಳುತ್ತಿರುವುದನ್ನು ನೋಡಿ ಆ ಋಷಿಗಳೆಲ್ಲರೂ ಆಶ್ಚರ್ಯಪಟ್ಟು ಆ ಶಿವಾಲಯದಿಂದ ಓಡಿಹೋದರು. ॥೨೩೪-೨೩೫॥

ಪ್ರಿಯೇ! ಆಗ ಈರೀತಿಯಾಗಿ ಒಡೆದುಹೋಗುತ್ತಿರುವ ದೇವಾಲಯವನ್ನು ನೋಡಿ, ಮುಂದೇನುಮಾಡಬೇಕೆಂದು ಆಶ್ಚರ್ಯಹೊಂದಿ ಆ ಬೇಡನು ಹೀಗೆ ಆಲೋಚನೆಮಾಡಿದನು. ಒಡೆಯುತ್ತಿರುವ ಈ ಕಲ್ಲುಗಳು ಶಿವಲಿಂಗದ ಮೇಲೆ ಬಿದ್ದು ಅದರಿಂದ ಶಿವಲಿಂಗಕ್ಕೆ ಘಾಯವಾಗುತ್ತದೆ. ॥೨೩೬-೨೩೭॥

ನಾನು ಬದುಕಿರುವಾಗಲೇ ಈ ರೀತಿಯಾದ ಏಟು ಶಿವಲಿಂಗಕ್ಕೆ ಬೀಳುವು ದನ್ನು ನೋಡಲು ನನ್ನಿಂದ ಸಾಧ್ಯವಿಲ್ಲ. ಒಡೆದು ಬೀಳುತ್ತಿರುವ ಕಲ್ಲುಗಳು

ಶಕ್ತಿಶ್ಚ ಮಮ ನಾಸ್ತ್ಯೇವ ಬೃಹತ್ಪಾಷಾಣಧಾರಣೇ ।
ಪತಿಷ್ಯಂತ್ಯೇವ ಪಾಷಾಣಾಃ ಶಿವಲಿಂಗೋಪರಿ ಧ್ರುವಂ ॥೨೩೯॥

ತನುಂ ವಿತಾನವತ್ಕೃತ್ವಾ ಶಿವಲಿಂಗೋಪರಿಸ್ಥಿತೇ ।
ಭ್ರಶ್ಯಮಾನಸ್ತು ಪಾಷಾಣೋ ಮತ್ಪೃಷ್ಠೇ ತು ಪತಿಷ್ಯತಿ ॥೨೪೦॥

ಯದಿ ಪಾಷಾಣಭಾರೇಣ ಮಚ್ಛರೀರಂ ಪತಿಷ್ಯತಿ ।
ತತಃ ಪರಂ ತು ಪಾಷಾಣಾ ಬಹವೋಽಪಿ ಪತಂತು ತೇ ॥೨೪೧॥

ತಥಾಪಿ ಶಿವಲಿಂಗಸ್ಯ ತ್ವಾಘಾತೋ ನ ಭವಿಷ್ಯತಿ ।
ಯೇನ ಕೇನಾಪಿ ರೂಪೇಣ ಶಿವಲಿಂಗಸ್ಯ ಸರ್ವಥಾ ॥೨೪೨॥

ಅಘಾತೋ ನ ಯಥಾತ್ರ ಸ್ಯಾತ್ತಥಾ ಕಾರ್ಯಂ ಪ್ರಯತ್ನತಃ ।
ಬಹಿಃ ಪಲಾಯ್ಯಗಮನೇ ರಕ್ಷಿತೇಯಂ ತನುರ್ಭವೇತ್ ॥೨೪೩॥

ಕಿಮಸ್ತಿ ಫಲಮೇತಸ್ಯ ಶರೀರಸ್ಯ ತು ರಕ್ಷಣೇ ।
ದೇಹರಕ್ಷಣಮಾತ್ರಂ ತು ಪುರುಷಾರ್ಥೋ ನ ಸರ್ವಥಾ ॥೨೪೪॥

---

ತುಂಬಾ ಗಟ್ಟಿಯಾಗಿರುವುದರಿಂದ ಅವನ್ನು ಹಿಡಿದು ನಿಲ್ಲಿಸಲು ಸಾಧ್ಯವಿಲ್ಲ. ಅಂತಹ ದಪ್ಪದಪ್ಪ ಕಲ್ಲುಗಳನ್ನು ಧರಿಸುವಷ್ಟು ಶಕ್ತಿಯೂ ಮೊದಲು ನನ್ನಲ್ಲಿಲ್ಲ. ನಿಶ್ಚಯವಾಗಿಯೂ ಶಿವಲಿಂಗದ ಮೇಲೆ ಕಲ್ಲುಗಳು ಬಿದ್ದೇಬೀಳುತ್ತವೆ. ॥೨೩೮-೨೩೯॥

ಆ ಶಿವಲಿಂಗದ ಮೇಲೆ ನನ್ನ ಈ ಶರೀರವನ್ನು ಅಡ್ಡಲಾಗಿ ಬರುವಂತೆ ಇಟ್ಟು ನಿಂತರೆ ಒಡೆದು ಬೀಳುವ ಕಲ್ಲುಗಳು ನನ್ನ ಬೆನ್ನಿನ ಮೇಲೆ ಬೀಳುತ್ತವೆ. ಆ ಕಲ್ಲಿನ ಭಾರದಿಂದ ಈ ಶರೀರವೇನಾದರೂ ನಷ್ಟವಾಗುವುದಾದರೆ ಅನಂತರ ಎಷ್ಟು ಕಲ್ಲುಗಳು ಬೇಕಾದರೂ ಬೀಳಲಿ. ॥೨೪೦-೨೪೧॥

ಆಗ ಶಿವಲಿಂಗಕ್ಕೆ ಯಾವ ರೀತಿಯಿಂದಲೂ ಏಟುಬೀಳುವುದಿಲ್ಲ. ಯಾವ ರೀತಿಯಿಂದಲಾದರೂ ಶಿವಲಿಂಗಕ್ಕೆ ಖಂಡಿತವಾಗಿಯೂ ಏಟು ಬೀಳದಿರುವಂತೆ ಪ್ರಯತ್ನಿಸಲೇಬೇಕು. ಹೊರಗಡೆ ಓಡಿಹೋಗುವುದರಿಂದಲೇನೋ ಈ ಶರೀರವು ರಕ್ಷಿಸಲ್ಪಡಬಹುದು. ॥೨೪೨-೨೪೩॥

ಈ ಶರೀರವನ್ನು ರಕ್ಷಣೆಮಾಡಿದುದರಿಂದ ಏನುತಾನೇ ಫಲವುಂಟು? ಈ ಶರೀರರಕ್ಷಣೆ ಮಾತ್ರದಿಂದಲೇ ಪುರುಷಾರ್ಥಸಾಧನೆಯಾಗುವುದಿಲ್ಲವು. ಈ

ಏತತ್ಸಂರಕ್ಷಣಂ ಕರ್ತುಂ ಕೋಸು ಯತ್ನಂ ಕರಿಷ್ಯತಿ ।
ಸುಖಲೇಶೋಽಪಿ ನಾಸ್ತ್ಯಸ್ಯ ಬಹಿಶ್ಚೇದ್ಗಮ್ಯತೇ ತದಾ ॥೨೪೫॥

ಶಿವಲಿಂಗಾಘಾತಹೇತುದರ್ಶನೇ ತ್ವಸುಖಂ ಭವೇತ್ ।
ಕಿಂ ಚಾತ್ರ ಯದಿ ಭಾಗ್ಯೇನ ಶರೀರಂ ಚೇತ್ಪತಿಷ್ಯತಿ ॥೨೪೬॥

ತದಾ ಮುಕ್ತಿರನಾಯಾಸಾದ್ಭವಿಷ್ಯತಿ ಮಮ ಧ್ರುವಂ ।
ಯದಿ ಸ್ಯಾಚ್ಛಿವಲಿಂಗಸ್ಯ ಸಂನಿಧೌ ಮರಣಂ ತದಾ ॥೨೪೭॥

ಮುಕ್ತಿಕಾಂತಾ ಕರಾಕ್ರಾಂತಾ ಸದ್ಯ ಏವ ಭವಿಷ್ಯತಿ ।
ಮರಣಂ ದುರ್ಲಭಂ ಪುಂಸಾಂ ಶಿವಲಿಂಗಸ್ಯ ಸನ್ನಿಧೌ ।
ತತ್ರ ಚೇನ್ಮರಣಂ ಪುಂಸಾಂ ಸಂಸಾರೋ ನ ಪುನರ್ಧ್ರುವಂ ॥೨೪೮॥

ಶೀರ್ಯಮಾಣಸ್ವಭಾವಸ್ಯ ಶರೀರಸ್ಯಾಸ್ಯ ರಕ್ಷಣಂ ।
ಅಸ್ಮಿನ್ಕಾಲೇ ಕಥಂ ಕಾರ್ಯಂ ಪರಲೋಕಾರ್ಥಿನಾ ಮಯಾ ॥೨೪೯॥

---

ಮಹಾದೇವನನ್ನು ಕಾಪಾಡಲು ಯಾರುತಾನೆ ಪ್ರಯತ್ನಮಾಡಿಯಾರು! ಹೊರಗೆ ಹೋಗುವುದಾದರೆ ಕೊಂಚವೂ ಸುಖವು ದೊರೆಯಲಾರದು. ॥೨೪೪-೨೪೫॥

ಶಿವಲಿಂಗಕ್ಕೆ ತೊಂದರೆ ಸಂಭವಿಸುತ್ತಿರುವುದನ್ನು ನೋಡಿ ಯಾರಿಗೆತಾನೇ ಸುಖವುಂಟಾದೀತು? ಅಲ್ಲದೇ ಒಂದುವೇಳೆ ಅದೃಷ್ಟವಶದಿಂದ ಈ ಶರೀರವು ಬಿದ್ದು ಹೋಗುವುದಾದರೆ ಆಗ ಅನಾಯಾಸವಾಗಿ ನನಗೆ ಮುಕ್ತಿಯುಂಟಾಗುವುದರಲ್ಲಿ ಸಂದೇಹವೇ ಇಲ್ಲ. ಒಂದುವೇಳೆ ಆ ಶಿವಲಿಂಗದ ಸಮುಕ್ಷಮದಲ್ಲಿಯೇ ನನಗೆ ಮರಣಸಂಭವಿಸುವುದಾದರೆ ಕೂಡಲೇ ಮೋಕ್ಷಾಂಗನೆಯು ತಾನೇ ಬಂದು ಕೈಹಿಡಿಯುವಳು. ॥೨೪೬-೨೪೭॥

ಶಿವಲಿಂಗದ ಸಮುಕ್ಷಮದಲ್ಲಿ ಪುರುಷರಿಗೆ ಮರಣಸಂಭವಿಸುವುದು ವಿಶೇಷ ದುರ್ಲಭವು. ಒಂದುವೇಳೆ ಹಾಗೆ ಮರಣ ಸಂಭವಿಸಿದರೆ ಅಂತಹವರಿಗೆ ಪುನಃ ಈ ಸಂಸಾರ ಬಂಧನವೇ ಪುನಃ ಒದಗಲಾರದು. ಯಾವಾಗಲೂ ನಾಶವಾಗಲು ಸಿದ್ಧವೇ ಆಗಿರುವಂತಹ ಸ್ವಭಾವವುಳ್ಳ ಈ ಶರೀರವನ್ನು ಇಂತಹ ಸಂದರ್ಭದಲ್ಲಿ ಪರಲೋಕಾಪೇಕ್ಷಿಯಾಗಿರುವ ನಾನು ಹೇಗೆತಾನೇ ಕಾಪಾಡಲಿ? ॥೨೪೮-೨೪೯॥

ಯದಿ ಮೃತ್ಯುಃ ಸಮಾಯಾತಿ ತದಾ ರಕ್ಷಣಮಸ್ಯ ತು ।
ಕರ್ತುಂ ನ ಶಕ್ಯತೇ ನೂನಮುಪಾಯೈಃ ಕೋಟಿಶಃ ಕೃತೈಃ ॥೨೫೦॥

ಮೃತ್ಯೋರಾಗಮನೇ ಕುತ್ರ ಕರ್ತವ್ಯಂ ಸ್ಯಾತ್ಪಲಾಯನಂ ।
ಕೃತೇ ಪಲಾಯನೇ ತೇನ ತ್ಯಜ್ಯತೇಽಪಿ ನ ಸರ್ವಥಾ ॥೨೫೧॥

ಮೃತ್ಯುಂಜಯಂ ವಿನಾಽನ್ಯಸ್ತು ನ ಮೃತ್ಯುಭಯನಾಶಕಃ ।
ಯಸ್ಯ ಮೃತ್ಯುಭಯಂ ನಾಸ್ತಿ ಸ ತು ಮೃತ್ಯುಂಜಯಃ ಸ್ಮೃತಃ॥೨೫೨॥

ಏತಸ್ಯೈವ ಮಹೇಶಸ್ಯ ಮೃತ್ಯೋರ್ನಾಸ್ತಿ ಭಯಂ ತತಃ ।
ಶಿವ ಏವ ಹಿ ದೇವೇಷು ಮೃತ್ಯುಂಜಯ ಇತಿ ಸ್ಮೃತಃ ॥೨೫೩॥

ಮೃತ್ಯುಪಾಶವಶಾಃ ಸರ್ವೇ ವಿಷ್ಣುಬ್ರಹ್ಮಾದಯಃ ಸುರಾಃ ।
ತತಸ್ತದರ್ಚನಾತ್ಪುಂಸಾಂ ಮೃತ್ಯುಭೀತಿರ್ನ ನಶ್ಯತಿ ॥೨೫೪॥

ಅತೋ ಮೃತ್ಯುಂಜಯಸ್ಯೈವ ಪೂಜನಂ ಮೃತ್ಯುನಾಶಕಂ ।
ಮೃತ್ಯುಂಜಯಸ್ಯ ಪೂಜಾಪಿ ಕರ್ತವ್ಯಾ ಭಕ್ತಿಪೂರ್ವಕಂ ॥೨೫೫॥

---

ಮೃತ್ಯುವು ಸಂಭವಿಸಿದ್ದೇ ಆದರೆ ಕೋಟ್ಯಂತರ ಉಪಾಯಗಳನ್ನೇ ಮಾಡಿದರೂ ಆಗ ಈ ಶರೀರವನ್ನು ನಿಶ್ಚಯವಾಗಿಯೂ ಕಾಪಾಡಲು ಸಾಧ್ಯವೇ ಇಲ್ಲ. ಮೃತ್ಯುವು ಹಿಂಬಾಲಿಸುತ್ತಿರುವಾಗ ಎಲ್ಲಿಗೆತಾನೇ ಓಡುವುದು ? ಓಡಿಹೋದರೆ ಆಗ ಮೃತ್ಯುವೇನಾದರೂ ಬಿಟ್ಟುಬಿಡುವುದೇ ? ||೨೫೦-೨೫೧||

ಆ ಮೃತ್ಯುಂಜಯನನ್ನು ಹೊರತು ಮತ್ತಾರೂ ಈ ಮೃತ್ಯುಭಯವನ್ನು ಹೋಗಲಾಡಿಸಲಾರರು. ಮೃತ್ಯುಭಯಕ್ಕೊಳಪಡದಿರುವವನು ಮಾತ್ರ ಮೃತ್ಯುಂಜಯ ನೆನಿಸುವನು. ಆ ಮಹೇಶ್ವರನೊಬ್ಬನಿಗೆ ಮಾತ್ರ ಮೃತ್ಯುವಿನ ಭಯವಿಲ್ಲ. ಎಲ್ಲಾ ದೇವತೆಗಳಲ್ಲೂ ಆ ಶಿವನೊಬ್ಬನೇ ಮೃತ್ಯುಂಜಯನೆನಿಸಿರುವನು. ||೨೫೨-೨೫೩||

ವಿಷ್ಣು ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಈ ಮೃತ್ಯುವಿನ ಬಲೆಗೆ ಅಧೀನರಾಗಿರುವುದರಿಂದ ಅವರನ್ನು ಪೂಜೆಮಾಡಿದರೆ ಪುರುಷರಿಗೆ ಈ ಮೃತ್ಯು ಭಯವು ನಾಶವಾಗಲಾರದು. ಆದ್ದರಿಂದ ಆ ಮೃತ್ಯುಂಜಯನೆನಿಸಿದ ಮಹೇಶ್ವರನ ಪೂಜೆಯೊಂದೇ ಈ ಮೃತ್ಯುವನ್ನು ನಾಶಮಾಡಬಲ್ಲದು. ಆದರೆ ಮೃತ್ಯುಂಜಯನ ಪೂಜೆಯನ್ನು ಮಾತ್ರ ಭಕ್ತಿಯಿಂದ ಮಾಡಬೇಕು. ||೨೫೪-೨೫೫||

ಬಹಿರ್ದೇಹಸ್ಯ ರಕ್ಷಾರ್ಥಮಿದಾನೀಂ ಯದಿ ಗಮ್ಯತೇ ।
ತದಾ ಮೃತ್ಯುಂಜಯೇ ಭಕ್ತಿರ್ಮಮ ಕಾವಾ ಭವಿಷ್ಯತಿ ॥೨೫೬॥

ಮೃತ್ಯುಂಜಯೋಽನ್ಯಭಕ್ತಸ್ಯ ನ ಮೃತ್ಯುಭಯನಾಶಕಃ ।
ತತೋಽನ್ಯಭಕ್ತಿಸ್ತ್ಯಾಜ್ಯೈವ ಶ್ರೀಮೃತ್ಯುಂಜಯಪೂಜಕೈಃ ॥೨೫೭॥

ಶ್ರೀಮೃತ್ಯುಂಜಯಭಕ್ತಸ್ಯ ಮೃತ್ಯುರ್ನಾಸ್ತ್ಯೇವ ಸರ್ವಥಾ ।
ತತೋ ಮಯಾ ಪ್ರಯತ್ನೇನ ಸ್ಥಾತವ್ಯಂ ಶಿವಸಂನಿಧೌ ॥೨೫೮॥

ಇತ್ಯುಕ್ತ್ವಾ ಸ ದೃಢೋ ಭಿಲ್ಲಃ ಪುನಃ ಸಂಪೂಜ್ಯ ಮಾಂ ತಥಾ ।
ಸ್ವಾಂಗಂ ವಿತಾನವಚ್ಚಕ್ರೇ ಶಿವಲಿಂಗೋಪರಿ ಸ್ಥಿತಃ ॥೨೫೯॥

ತದಾರವೋ ಮಹಾನಾಸೀತ್ಪಾಷಾಣಭ್ರಂಶಸಂಭವಃ ।
ತಥಾಪ್ಯತಿದೃಢೋ ಭಿಲ್ಲೋ ಧೈರ್ಯೇಣೈವ ಹಿ ಸಂಸ್ಥಿತಃ ॥೨೬೦॥

ತದಾನೀಂ ತಾದೃಶಂ ದೃಷ್ಟ್ವಾ ಸರ್ವೇತೇ ಋಷಿಪುಂಗವಾಃ ।
ಅತಿವಿಸ್ಮಯಮಾಪನ್ನಾಸ್ತುಷ್ಟುವುರ್ಭಿಲ್ಲಮಾದರಾತ್ ॥೨೬೧

---

ಈಗ ನಾನು ಈ ಶರೀರವನ್ನು ಕಾಪಾಡಲು ಹೊರಗೆ ಹೋಗುವುದಾದರೇ ಆಗ ಆ ಮೃತ್ಯುಂಜಯನಲ್ಲಿ ಹೇಗೆ ತಾನೇ ನನ್ನ ಭಕ್ತಿಯಿದ್ದೀತು ? ಮೃತ್ಯುಂಜಯನಾದರೋ ಇತರ ವಿಷ್ಣ್ವಾದಿ ದೇವತೆಗಳ ಭಕ್ತರ ಮೃತ್ಯುಭಯವನ್ನೆಂದಿಗೂ ಹೋಗಲಾಡಿಸುವುದಿಲ್ಲವಾದ್ದರಿಂದ ಆ ದೇವದೇವನನ್ನು ಪೂಜೆ ಮಾಡುವವರು ಮತ್ತಾರಲ್ಲಿಯೂ ಭಕ್ತಿಯನ್ನಿಡಬಾರದು. ॥೨೫೬-೨೫೭॥

ಆ ಮೃತ್ಯುಂಜಯನ ಭಕ್ತನಿಗೆ ಖಂಡಿತವಾಗಿಯೂ ಮೃತ್ಯುವೇ ಇಲ್ಲ. ಆದ್ದರಿಂದ ನಾನು ಈ ಶಿವಸಂನಿಧಿಯಲ್ಲಿ ಅವಶ್ಯವಾಗಿ ನಿಲ್ಲಲೇಬೇಕು, ಎಂದು ದೃಢ ಮನಸ್ಸಿನಿಂದ ಹೇಳಿ ಆ ಭಿಲ್ಲನು ಪುನಃ ನನ್ನನ್ನು ಪೂಜೆಮಾಡಿ ತನ್ನ ಶರೀರವನ್ನು ಆ ಶಿವಲಿಂಗದ ಮೇಲೆ ಅಡ್ಡಲಾಗಿ ಮಾಡಿ ನಿಂತನು. ॥೨೫೮-೨೫೯॥

ಆಗ ಆ ಕಲ್ಲುಗಳು ಬೀಳುವುದರಿಂದುಂಟಾಗುವ ಧ್ವನಿಯು ಜೋರಾಗಿ ಕೇಳಬಂದಿತು. ಆದರೂ ಆ ದೃಢಮನಸ್ಸುಳ್ಳ ಬೇಡನು ಧೈರ್ಯದಿಂದಲೇ ಇದ್ದನು. ಆಗ ಆ ರೀತಿಯಾಗಿ ಧೈರ್ಯದಿಂದ ನಿಂತಿರುವ ಭಿಲ್ಲನನ್ನು ನೋಡಿ ಆ ಋಷಿಶ್ರೇಷ್ಠ

ಧನ್ಯೋಽಸಿ ಕೃತಕೃತ್ಯೋಽಸಿ ಕೃತಾರ್ಥೋಽಸಿ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತ್ವಯಿ ರಾಜತೇ ॥೨೬೨॥

ಭಾಗ್ಯಸ್ಯ ತವ ನಾಂತೋಽಸ್ತಿ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತ್ವಯಿ ರಾಜತೇ ॥೨೬೩॥

ತವ ಧನ್ಯತರೋ ದೇಹಃ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತವ ರಾಜತೇ ॥೨೬೪॥

ತವೈವ ಜೀವನಂ ಧನ್ಯಂ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತವ ರಾಜತೇ ॥೨೬೫॥

ತವೈವ ಜನ್ಮ ಸಫಲಂ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತ್ವಯಿ ರಾಜತೇ ॥೨೬೬॥

ತವೈವ ಜನನೀ ಧನ್ಯಾ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತ್ವಯಿ ರಾಜತೇ ॥೨೬೭॥

---

ರೆಲ್ಲರೂ ಬಹಳ ಆಶ್ಚರ್ಯಹೊಂದಿ ಅವನನ್ನು ಆದರದಿಂದ ಸ್ತೋತ್ರ ಮಾಡಿದರು. ॥೨೬೦-೨೬೧॥

ಅಯ್ಯ ಭಿಲ್ಲನೇ, ನೀನೇ ಧನ್ಯನು. ಕೃತಕೃತ್ಯನೂ ನೀನೇ ಆಗಿರುವೆ. ಆ ಸದಾಶಿವನಲ್ಲಿ ನಿನಗೆ ಈರೀತಿಯಾದ ಭಕ್ತಿಯಿರುವುದರಿಂದ ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲವೆಂಬುದು ಸತ್ಯವೇ ಹೊರತು ಇದರಲ್ಲಿ ಲೇಶವಾದರೂ ಸಂದೇಹವಿಲ್ಲವೆಂದು ತಿಳಿ. ॥೨೬೨-೨೬೩॥

ಸತ್ಯವಾಗಿಯೂ ನಿನ್ನ ದೇಹವೇ ಧನ್ಯವು. ಆ ಸದಾಶಿವನಲ್ಲಿಯೇ ನಿನ್ನ ಈರೀತಿಯಾದ ಸ್ಥಿರಭಕ್ತಿಯು ಪ್ರಕಾಶಿಸುತ್ತಿರುವುದರಿಂದ ಸತ್ಯವಾಗಿಯೂ ನಿನ್ನ ಬಾಳ್ವೆಯೇ ಧನ್ಯವಾದುದು ಎನ್ನುವುದರಲ್ಲಿ ಸಂಶಯವೇ ಇಲ್ಲವೆಂದು ತಿಳಿ. ॥೨೬೪-೨೬೫॥

ಸತ್ಯವಾಗಿ ನಿನ್ನ ಜನ್ಮವೇ ಸಫಲವೆಂದು ತಿಳಿ. ಆ ಸದಾಶಿವನಲ್ಲಿ ನಿನಗೆ ಈ ರೀತಿಯಾದ ಭಕ್ತಿಯಿರುವುದರಿಂದ ನಿನ್ನನ್ನು ಪಡೆದ ಜನನಿಯೇ ಧನ್ಯಳೆನ್ನು ವುದರಲ್ಲಿ ಸಂದೇಹವೇ ಇಲ್ಲ. ॥೨೬೬-೨೬೭॥

ತಸ್ಯೈವ ಜನಕೋ ಧನ್ಯಃ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತ್ವಯಿ ರಾಜತೇ ॥೨೬೮॥

ತಸ್ಯೈವ ಕುಲಮುತ್ಕೃಷ್ಟಂ ಸತ್ಯಂ ಸತ್ಯಂ ನ ಸಂಶಯಃ ।
ಯತಃ ಸದಾಶಿವೇ ಭಕ್ತಿರೀದೃಶೀ ತ್ವಯಿ ರಾಜತೇ ॥೨೬೯॥

ಶಕ್ತಿಸ್ತ್ವಮಾನುಷೀ ಸೇಯಂ ಧೈರ್ಯಮೇತದಮಾನುಷಂ ।
ಭಕ್ತಿರೇತಾದೃಶೀ ಲೋಕೇ ನ ಕುತ್ರಾಪಿ ಶ್ರುತಾ ಧ್ರುವಂ ॥೨೭೦॥

ಯಸ್ಯೇತಾದೃಶೀ ಭಕ್ತಿರ್ಮಹಾದೇವೇ ಸುರೋತ್ತಮೇ ।
ತಸ್ಯ ಹಸ್ತಗತೈವಾಸ್ತಿ ಮುಕ್ತಿಕಾಂತಾ ನ ಸಂಶಯಃ ॥೨೭೧॥

ತ್ವಯೇದಂ ಮಾನುಷಂ ರೂಪಂ ಧೃತಮಸ್ತಿ ಶಿವಪ್ರಿಯ ।
ಭವಾನ್ಕಶ್ಚನ ದೇವೋಽಸಿ ದೇವಮಧ್ಯೇ ನ ಸಂಶಯಃ ॥೨೭೨॥

ದೇವೇಷ್ವಪೀದೃಶೋ ಭಕ್ತಃ ಶಂಕರಸ್ಯ ಜನಾರ್ದನಃ ।
ಶಿವಾರ್ಚನಪರೋ ಜಾತಸ್ತತ್ತ್ವವೇತ್ತಾ ಯತೋ ಹರಿಃ ॥೨೭೩॥

---

ಆ ಸದಾಶಿವನಲ್ಲಿ ನಿನಗೆ ಈ ರೀತಿಯಾದ ಭಕ್ತಿಯಿರುವುದರಿಂದ ನಿನ್ನ ತಂದೆಯೇ ಸತ್ಯವಾಗಿ ಧನ್ಯನು. ನಿನ್ನ ಕುಲವೇ ಉತ್ಕೃಷ್ಟವೆಂಬುದರಲ್ಲಿ ಸಂಶಯವೇ ಇಲ್ಲ. ॥೨೬೮-೨೬೯॥

ಮನುಷ್ಯನ ಯೋಗ್ಯತೆಗೆ ಮೀರಿದ ಈ ಶಕ್ತಿಯೂ ಮತ್ತು ಧೈರ್ಯವೂ ಅಸಾಧಾರಣವಾಗಿರುವುದು. ಈ ರೀತಿಯಾದ ಭಕ್ತಿಯು ಈ ಲೋಕದಲ್ಲಿ ನಿಶ್ಚಯವಾಗಿ ಮತ್ತೆಲ್ಲಿಯೂ ಇಲ್ಲವೆಂದು ತಿಳಿ. ದೇವೋತ್ತಮನಾದ ಮಹಾದೇವನಲ್ಲಿ ಈ ರೀತಿಯಾದ ಭಕ್ತಿಯು ಇದ್ದದ್ದೇ ಆದರೆ ಅಂತಹವನಿಗೆ ಮೋಕ್ಷಾಂಗನೆಯು ಕೈವಶಳಾಗಿಯೇ ಇರುವುದರಲ್ಲಿ ಸಂದೇಹವೇ ಇಲ್ಲ. ॥೨೭೦-೨೭೧॥

ಅಯ್ಯ ಶಿವನಿಗೆ ತುಂಬಾ ಪ್ರೀತಿಕರನಾದ ಭಿಲ್ಲನೇ, ನೀನು ಕೇವಲ ಈ ಮನುಷ್ಯ ಶರೀರವನ್ನು ಮಾತ್ರ ಧರಿಸಿರುವೆ. ನೀನು ದೇವತೆಗಳ ಮಧ್ಯದಲ್ಲಿ ಒಬ್ಬನಾಗಿರುವೆಯೆಂಬುದರಲ್ಲಿ ಸಂದೇಹವೇ ಇಲ್ಲ. ದೇವತೆಗಳಲ್ಲಿಯೂ ಈರೀತಿಯಾದ ಶಂಕರಭಕ್ತನೆಂದರೆ ಆ ಜನಾರ್ದನನೇ ಆಗಿರುವನು. ಆ ವಿಷ್ಣುವು ರಹಸ್ಯ

ವಿದಿತ್ವಾ ತತ್ತ್ವತೋ ವಿಷ್ಣುರ್ದೇವದೇವಂ ಸದಾಶಿವಂ ।
ಪೂಜಯಾಮಾಸ ಬಹುಧಾ ತಪಶ್ಚರಣಪೂರ್ವಕಂ ॥೨೭೪॥

ವಿಷ್ಣುಃ ಸ್ವನೇತ್ರಕಮಲಂ ಸಮುತ್ಪಾಟ್ಯ ಪ್ರಯತ್ನತಃ ।
ಚಕಾರ ಮುದಿತೋ ಭಕ್ತ್ಯಾ ಶಿವಪಾದಾಂಬುಜಾರ್ಚನಂ ॥೨೭೫॥

ಅನೇಕಕಲ್ಪಪರ್ಯಂತಂ ಪುರಾ ನಾರಾಯಣಃ ಸ್ವಯಂ ।
ಚಕ್ರೇ ಶಂಕರಮುದ್ದಿಶ್ಯ ತಪಶ್ಚರ್ಯಾಂ ಪ್ರಯತ್ನತಃ ॥೨೭೬॥

ಸ ಏವ ವಿಷ್ಣುಃ ಶೈವೇಂದ್ರೋ ಗೃಹೀತ್ವಾ ಮಾನುಷೀಂ ತನುಂ ।
ಏವಂ ಶಿವಾರ್ಚನಪರಸ್ತಿಷ್ಠತ್ಯತ್ರ ನ ಸಂಶಯಃ ॥೨೭೭॥

---

ವನ್ನು ಚೆನ್ನಾಗಿ ಬಲ್ಲವನಾದ್ದರಿಂದ ತಿಳಿದು ಆ ಪರಶಿವನನ್ನು ಪೂಜೆಮಾಡುವುದರಲ್ಲಿ ಯಾವಾಗಲೂ ಆಸಕ್ತನಾದನು. ॥೨೭೨-೨೭೩॥

ತತ್ತ್ವವನ್ನರಿತು ದೇವಾದಿದೇವನಾದ ಸದಾಶಿವನನ್ನು ವಿಷ್ಣುವು ನಾನಾ ವಿಧವಾದ ತಪಸ್ಸುಗಳನ್ನಾಚರಿಸುತ್ತಾ ಪೂಜೆ ಮಾಡಿದನು. ಆ ವಿಷ್ಣುವು ಒಂದುಸಲ ನಿಯಮದಿಂದ ಸಹಸ್ರ ಕಮಲಗಳನ್ನು ತಂದು ಪರಮೇಶ್ವರನ ಪಾದಪೂಜೆ ಮಾಡ ಬೇಕೆಂದಿರಲು ಆಗ ಪರಮೇಶ್ವರನು ಇವನ ಭಕ್ತಿಯನ್ನು ಪರೀಕ್ಷಿಸಲೋಸುಗ ಒಂದನ್ನು ಬಚ್ಚಿಟ್ಟುಕೊಂಡನು. ಆಗ ವಿಷ್ಣುವು ಪೂಜೆ ಮಾಡಲು ಪ್ರಾರಂಭ ಮಾಡಿ ಎಷ್ಟು ಹುಡುಕಿದರೂ ಒಂದು ಸಾಲದಿರುವುದನ್ನು ನೋಡಿ ಕೊಂಚ ಯೋಚಿಸಿ, "ಲೋಕದಲ್ಲಿ ನನ್ನನ್ನು ಎಲ್ಲರೂ ಕಮಲಲೋಚನನೆನ್ನುವರು. ಆದ್ದರಿಂದ ಆ ಕಮಲದ ಸ್ಥಾನದಲ್ಲಿ ನನ್ನ ಈ ಕಣ್ಣನ್ನೇ ಕಿತ್ತು ಪೂಜೆ ಮಾಡುತ್ತೇನೆ" ಎಂದು ಬಲಾತ್ಕಾರವಾಗಿ ಅದನ್ನು ಕಿತ್ತು ಸಂತೋಷದಿಂದಲೂ, ಭಕ್ತಿಯಿಂದಲೂ ಶಿವನ ಪಾದಗಳಿಗೆ ಪೂಜೆ ಮಾಡಿದನು. ॥೨೭೪-೨೭೫॥

ಹಿಂದೆ ಆ ನಾರಾಯಣನು ಅನೇಕ ಕಲ್ಪಕಾಲಗಳವರೆಗೆ ತಾನೇ ಶ್ರೀಶಂಕರ ನನ್ನುದ್ದೇಶಿಸಿ ವಿಶೇಷ ನಿಯಮದಿಂದ ತಪಸ್ಸು ಮಾಡಿದನು. ಅದೇ ವಿಷ್ಣುವೇ ಶಿವಭಕ್ತಶ್ರೇಷ್ಠನೆನಿಸಿ, ಈ ಮನುಷ್ಯ ಶರೀರವನ್ನು ಹೊಂದಿ ಹೀಗೆ (ಭಿಲ್ಲ ರೂಪಿನಲ್ಲಿ) ಶಿವಪೂಜೆ ಮಾಡುತ್ತಾ ಇಲ್ಲಿ ಕುಳಿತಿರುವನೆಂಬುದರಲ್ಲಿ ಸಂಶಯವೇ ಇಲ್ಲ. ॥೨೭೬-೨೭೭॥

ಕಥಮೇತಾದೃಶಂ ಧೈರ್ಯಂ ಮಾನುಷಸ್ಯ ಭವಿಷ್ಯತಿ ।
ಯದ್ಭ್ರಶ್ಯಮಾನಪಾಷಾಣೇಷ್ವಸ್ಯಾಸೀತ್ಸುಸ್ಥಿರಂ ಮನಃ ॥೨೭೮॥

ಏವಂ ಸ್ತುತ್ವಾ ಸ್ಥಿತಾಃ ಸರ್ವೇ ಭಿಲ್ಲಮೇನಂ ಮುನೀಶ್ವರಾಃ ।
ಭಿಲ್ಲಸ್ತು ಮನ್ಮನಾ ಭೂತ್ವಾ ಮಾಂ ಧ್ಯಾಯನ್ನೇವ ಸಂಸ್ಥಿತಃ ॥೨೭೯॥

ತತೋ ಮುನಿವರೈರ್ದೃಷ್ಟೋ ಯಥಾಸ್ಥಾನಂ ಶಿವಾಲಯಃ ।
ತತೋ ಬಭೂವ ವಿಮಲಾ ಪುಷ್ಪವೃಷ್ಟಿರ್ಮನೋಹರಾ ॥೨೮೦॥

ತತಃ ಸಭಿಲ್ಲಃ ಸಂತುಷ್ಟಃ ಪುನರಭ್ಯರ್ಚ್ಯ ಮಾಂ ಮುದಾ ।
ವಿಸ್ಮಿತೋ ನಿರ್ಯಯೌ ಮಂದಂ ಮುಹುರ್ಮಾಂ ಸ ವಿಲೋಕಯತ್ ॥೨೮೧॥

ಭಿಲ್ಲಂ ವಿಲೋಕ್ಯ ಮುನಯಃ ತಮೇವ ಬಹಿರಾಗತಂ ।
ಪುಷ್ಪಾದ್ಯೈಃ ಪೂಜಯಾಮಾಸುರ್ವಿನಯಾನತಕಂಧರಂ ॥೨೮೨॥

ತತಃ ಸಂಪೂಜ್ಯ ಮಾಂ ಭಕ್ತ್ಯಾ ಬಿಲ್ವಪತ್ರಾದಿಸಾಧನೈಃ ।
ಜಗ್ಮುಃ ಸ್ವಸ್ವಾಲಯಂ ಸರ್ವೇ ಶಂಸಂತಸ್ತಸ್ಯ ವಿಕ್ರಮಂ ॥೨೮೩॥

---

ಕಲ್ಲುಗಳು ಒಡೆದು ಬೀಳುತ್ತಿದ್ದರೂ ಹೆದರದೇ ಗಟ್ಟಿ ಮನಸ್ಸಿನಿಂದ ಕೂಡಿರುವಂತಹ ಧೈರ್ಯವು ಮನುಷ್ಯಮಾತ್ರದವನಿಗೆ ಹೇಗೆತಾನೇ ಸಂಭವಿಸೀತು? ಎಂಬುದಾಗಿ ಆ ಮುನಿಪುಂಗವರೆಲ್ಲಾ ಬೇಡನನ್ನು ಸ್ತೋತ್ರಮಾಡಿ ನಿಂತಿರಲು, ಆ ಭಿಲ್ಲನು ಅದೊಂದನ್ನೂ ಕೇಳದೇ ನನ್ನಲ್ಲಿಯೇ ಮನಸ್ಸುಳ್ಳವನಾಗಿ ನನ್ನನ್ನೇ ಧ್ಯಾನ ಮಾಡುತ್ತಾ ಹಾಗೆಯೇ ಇದ್ದನು. ॥೨೭೮-೨೭೯॥

ಆಮೇಲೆ ಸ್ವಲ್ಪಹೊತ್ತಿನಲ್ಲಿಯೇ ಹಿಂದಿನಂತೆಯೇ ಆ ಶಿವದೇವಾಲಯವು ಆದದ್ದನ್ನು ಋಷಿಶ್ರೇಷ್ಠರೆಲ್ಲರೂ ಕಂಡರು. ಆಗ ಮನೋಹರವಾದ ಹೂಮಳೆಯಾಯಿತು. ಅದರಿಂದ ಬೇಡನು ಸಂತುಷ್ಟನಾಗಿ ಪುನಃ ನನ್ನನ್ನು ಸಂತೋಷದಿಂದ ಪೂಜೆಮಾಡಿ ಆಶ್ಚರ್ಯಹೊಂದಿ ಮೆಲ್ಲಮೆಲ್ಲಗೆ ಅಲ್ಲಿಂದ ಹೊರಹೊರಟನು. ॥೨೮೦-೨೮೧॥

ಆಗ ಹೊರಗಡೆ ಬಂದ ಆ ಭಿಲ್ಲನನ್ನು ನೋಡಿ, ವಿನಯದಿಂದ ತಲೆಬಾಗಿ ನಿಂತಿರುವ ಅವನನ್ನೇ ಹೂವು, ಪತ್ರೆ ಮುಂತಾದ ಪೂಜಾ ದ್ರವ್ಯಗಳಿಂದ ಆ ಮುನಿಗಳು ಪೂಜೆಮಾಡಿ ಅನಂತರ ನನ್ನನ್ನೂ ಭಕ್ತಿಯಿಂದ ಅದೇ ಬಿಲ್ವದಳ, ಹೂ

ಏತಾದೃಶಾಸ್ತು ಮದ್ಭಕ್ತಾಃ ಕೋಟಿಶಃ ಸಂತಿ ಶೋಭನೇ ।
ತಸ್ಮಿನ್ನೇವ ಶಿವಕ್ಷೇತ್ರೇ ಮದರ್ಚನಪರಾಯಣಾಃ ॥೨೮೪॥

॥ ಶ್ರೀ ಪಾರ್ವತ್ಯುವಾಚ ॥

ಕೋಽಯಂ ಪೂರ್ವಭವೇ ಶಂಭೋ ಕುತ್ರ ವಾ ಸಂಸ್ಥಿತಃ ಪುರಾ ।
ಕಥಮೇತಾದೃಶೀ ಭಕ್ತಿಸ್ತ್ವಯಿ ತಸ್ಯ ವದ ಪ್ರಭೋ ॥೨೮೫॥

॥ ಶ್ರೀ ಸದಾಶಿವ ಉವಾಚ ॥

ಅಯಂ ಪೂರ್ವಭವೇ ದೇವಿ ಕುಕ್ಕುಟೋ ಮಾಂಸಭಕ್ಷಕಃ ।
ಭಿಲ್ಲೇನ ಕೇನಚಿತ್ಕೋಽಪಿ ಪೋಷಿತೋ ಹಿಮವದ್ಗಿರೌ ॥೨೮೬॥

ಸ ಭಿಲ್ಲಃ ಪ್ರತ್ಯಹಂ ಧನ್ವೀ ವನೇ ಹತ್ವಾ ಬಹೂನ್ಮೃಗಾನ್ ।
ಉತ್ತಮಂ ಮಾಂಸಮಾದಾಯ ಪಚತಿ ಪ್ರೀತಿಪೂರ್ವಕಂ ॥೨೮೭॥

---

ಮುಂತಾದ ಸಲಕರಣೆಗಳಿಂದ ಪೂಜಿಸಿ ಎಲ್ಲರೂ ಆ ಬೇಡರವನ ಪರಾಕ್ರಮವನ್ನು ಹೊಗಳುತ್ತಾ ತಮ್ಮತಮ್ಮ ವಾಸಸ್ಥಳಗಳಿಗೆ ಹೋದರು. ಶೋಭನಾಂಗಿಯಾದ ದೇವಿಯೇ, ಆ (ಕಾಲಹಸ್ತಿ) ಕ್ಷೇತ್ರದಲ್ಲಿ ನನ್ನ ಪೂಜೆಯಲ್ಲಿಯೇ ನಿರತರಾಗಿರುವ ಇಂತಹ ಭಕ್ತರು ಕೋಟ್ಯಂತರಮಂದಿ ಇರುವರು. ॥೨೮೨-೨೮೩-೨೮೪॥

ಆಗ ಪಾರ್ವತಿಯು, ಶಂಭುವೇ, ಈ ಬೇಡನು ಹಿಂದಿನ ಜನ್ಮದಲ್ಲಿ ಯಾರು? ಎಲ್ಲಿ ವಾಸಮಾಡುತ್ತಿದ್ದನು? ನಿನ್ನಲ್ಲಿ ಈರೀತಿಯಾದ ಭಕ್ತಿಯು ಇವನಿಗೆ ಹೇಗೆ ಉಂಟಾಯಿತೆಂಬುದನ್ನು ತಿಳಿಸೆಂದು ಮಹಾದೇವನನ್ನು ಪ್ರಾರ್ಥಿಸಿದಳು. ॥೨೮೫॥

ಆಗ ಸದಾಶಿವನು ಈ ಬೇಡನ ಹಿಂದಿನ ವೃತ್ತಾಂತವನ್ನು ತಿಳಿದು— ದೇವಿ, ಇವನು ಹಿಂದಿನ ಜನ್ಮದಲ್ಲಿ ಮಾಂಸವನ್ನು ತಿಂದು ಜೀವಿಸುತ್ತಿದ್ದ ನಾಯಿಯು. ಅದರಲ್ಲಿಯೂ ಹಿಮವತ್ಪರ್ವತದ ತಪ್ಪಲಲ್ಲಿ ವಾಸಮಾಡುತ್ತಿದ್ದ ಒಬ್ಬ ಬೇಡನು ಇದನ್ನು ಸಾಕುತ್ತಿದ್ದನು. ॥೨೮೬॥

ಆ ಬೇಡನು ಬಿಲ್ಲುಗಾರನಾದುದರಿಂದ ಪ್ರತಿದಿನವೂ ಕಾಡಿನಲ್ಲಿ ಅನೇಕ ಮೃಗಗಳನ್ನು ಕೊಂದು ಉತ್ತಮವಾದ ಮಾಂಸವನ್ನು ತಂದು ಪ್ರೀತಿಪುರಸ್ಸರವಾಗಿ ಅದನ್ನು ಬೇಯಿಸುತ್ತಿದ್ದನು. ಅನಂತರ ಅದು ಬೆಂದು ಸ್ವಲ್ಪ ತಣ್ಣಗಾದಮೇಲೆ ಅದಕ್ಕೆ ತುಪ್ಪವನ್ನು ಬೆರಸಿ ಉತ್ತಮವಾದ ಆ ಮಾಂಸವನ್ನು ಮೊದಲು ನನಗೆ

ತತೋ ಮಂದೋಷ್ಣಮಾದಾಯ ಸಘೃತಂ ಮಾಂಸಮುತ್ತಮಂ ।
ಮಹ್ಯಂ ನಿವೇದ್ಯ ಯತ್ನೇನ ಸ್ವಯಮಶ್ನಾತಿ ಸಾದರಂ ॥೨೮೮॥

ಮಹ್ಯಂ ನಿವೇದಿತಂ ಮಾಂಸಮನ್ಯಸ್ಮೈ ನ ದದಾತಿ ಸಃ ।
ಸ್ವಯಮೇವಾತಿಯತ್ನೇನ ಪ್ರಾಶ್ನಾತಿ ಪ್ರೀತಿಪೂರ್ವಕಂ ॥೨೮೯॥

ತದ್ಭಕ್ಷ್ಯಮಾಣಮಾಂಸಸ್ಯ ಕಶ್ಚಿಲ್ಲೇಶಃ ಕದಾಚನ ।
ಪಪಾತ ಭೂಮೌ ತನ್ಮಾಂಸಂ ಕುಕ್ಕುಟೇನ ಹಿ ಭಕ್ಷಿತಂ ॥೨೯೦॥

ತತಃ ಸ ಭಿಲ್ಲಸ್ತಂ ಶೀಘ್ರಂ ಜಘಾನ ಕ್ರೋಧಸಂಕುಲಃ ।
ತತಃ ಸ ಕುಕ್ಕುಟಃ ಪ್ರಾಪ ಭಿಲ್ಲಜನ್ಮೈವ ಸತ್ವರಂ ॥೨೯೧॥

ಭಿಲ್ಲಜನ್ಮ ಸಮಾಸಾದ್ಯ ಸ ತು ಜಾತಿಸ್ಮರೋಽಭವತ್ ।
ತತೋ ಬಾಲ್ಯಂ ಸಮಾರಭ್ಯ ಶಿವಪೂಜಾಪರೋಽಭವತ್ ॥೨೯೨॥

ಕುಕ್ಕುಟಸ್ಯ ಸ್ಥಿತಾ ಪೂರ್ವಂ ಮಾಂಸಭಕ್ಷಣವಾಸನಾ ।
ತಯಾ ವಾಸನಯಾ ಮಾಂಸಂ ಸಂಪಾದಯತಿ ಸಾದರಂ ॥೨೯೩॥

---

ನಿವೇದನಮಾಡಿ ಅನಂತರ ತಾನು ನಿಯಮಬದ್ಧನಾಗಿ ಆದರದಿಂದ ಅದನ್ನು ತಿನ್ನು ತ್ತಿದ್ದನು. ॥೨೮೭-೨೮೮॥

ಈ ಬೇಡನು ನನಗೆ ನಿವೇದನಮಾಡಿದ ಮಾಂಸವನ್ನು ಮತ್ತಾರಿಗೂ ಕೊಡುತ್ತಿರಲಿಲ್ಲ. ತಾನೇ ತುಂಬಾ ಪ್ರೀತಿಯಿಂದ ನಿಯಮಬದ್ಧನಾಗಿ ಅದನ್ನು ತಿನ್ನು ತ್ತಿದ್ದನು. ಒಂದುದಿವಸ ಇವನು ತಿನ್ನುತ್ತಿದ್ದ ಮಾಂಸದ ಒಂದುಚೂರು ಭೂಮಿಯ ಮೇಲೆ ಬೀಳಲು ಆಗ ಈ ನಾಯಿಯು ಅದನ್ನು ತಿಂದಿತು. ॥೨೮೯-೨೯೦॥

ಆಗ ಬೇಡನು ಕೂಡಲೇ ಕೋಪಭರಿತನಾಗಿ ಆ ನಾಯಿಯನ್ನು ಕೊಂದು ಬಿಟ್ಟನು. ಶಿವಪ್ರಸಾದಭಕ್ಷಣೆಯಿಂದ ಆ ನಾಯಿಯು ಬೇಡರ ಜನ್ಮವನ್ನೇ ತಾಳಿತು. ಭಿಲ್ಲಜನ್ಮ ತಾಳಿದರೂ ಹಿಂದಿನ ಜಾತಿಸ್ಮರಣೆಯು ಮಾತ್ರ ಇದಕ್ಕೆ ಇದ್ದೇ ಇದ್ದಿತು. ಬಾಲ್ಯದಿಂದಲೂ ಈ ಬೇಡರ ಜನ್ಮವನ್ನು ತಾಳಿದಮೇಲೆ ಯಾವಾಗಲೂ ಶಿವಪೂಜಾ ತತ್ಪರನೇ ಆಗಿದ್ದನು. ॥೨೯೧-೨೯೨॥

ನಾಯಿಗೆ ತನ್ನ ಹಿಂದಿನ ಜನ್ಮದ ಮಾಂಸವನ್ನು ತಿನ್ನುವ ವಾಸನೆಯಿದ್ದುದ ರಿಂದ ಅದೇ ಸಂಸ್ಕಾರದಿಂದಲೇ ಈ ಜನ್ಮದಲ್ಲಿ ಬೇಡನಾಗಿದ್ದರೂ ಆದರದಿಂದ

ತತ್ತು ಮಹ್ಯಂ ನಿವೇದ್ಯೈವ ಭಕ್ಷಯತ್ಯನ್ವಹಂ ಮುದಾ ।
ಸಂಪೂಜ್ಯ ಸಾದರಂ ಭಕ್ತ್ಯಾ ಲಿಂಗರೂಪಿಣಮವ್ಯಯಂ ॥೨೯೪॥

ಅತೀತಜ್ಞಾನವಾನೇನ ಜಾತೋ ಭಿಲ್ಲೋ ಗಿರೀಂದ್ರಜೇ ।
ತಸ್ಯ ನಾನಾಗತಜ್ಞಾನಂ ತತ್ರ ಕಾರಣಮುಚ್ಯತೇ ॥೨೯೫॥

ಮಹ್ಯಮನ್ನಂ ಪ್ರಯತ್ನೇನ ನಿವೇದ್ಯಾಶ್ನಾತಿ ಯಃ ಸದಾ ।
ಸ ಭೂಪಾಲಃ ಸರ್ವವೇತ್ತಾ ಭವತ್ಯೇವ ಹಿ ಸರ್ವಥಾ ॥೨೯೬॥

ಅತೀತಾನಾಗತಜ್ಞಾನಂ ಭೂಪಾಲತ್ವಂ ಚ ಶಾಶ್ವತಂ ।
ಜಾತಿಸ್ಮರತ್ವಂ ಸೌಂದರ್ಯಂ ಮನ್ನೈವೇದ್ಯಸ್ಯ ಭಕ್ಷಣಾತ್ ॥೨೯೭॥

ಮನ್ನೈವೇದ್ಯಮನೂಚ್ಛಿಷ್ಟಮನ್ಯಾನುಚ್ಛಿಷ್ಟಮುತ್ತಮಂ ।
ಯೋಽಶ್ನಾತಿ ಸ ತು ಸರ್ವಜ್ಞಃ ಸ ಭೂಪಾಲೋಽಭಿಜಾಯತೇ ॥೨೯೮॥

---

ಮಾಂಸವನ್ನು ಸಂಪಾದಿಸುತ್ತಿದ್ದನು. ಆದರೆ ತಾನು ಸಂಪಾದಿಸುವ ಮಾಂಸವನ್ನು, ಲಿಂಗಸ್ವರೂಪಿಯೂ, ನಾಶರಹಿತನೂ ಆದ ನನ್ನನ್ನು ಭಕ್ತ್ಯಾದರಗಳಿಂದ ಪೂಜೆ ಮಾಡಿ, ನನಗೆ ನಿವೇದನಮಾಡಿಯೇ ತಾನು ತಿನ್ನುತ್ತಿದ್ದನು. ॥೨೯೩-೨೯೪॥

ಗಿರಿರಾಜಕುಮಾರಿಯೇ, ಈ ಭಿಲ್ಲನಿಗೆ ಯಾವಾಗಲೂ ಭೂತ (ಕಳೆದು ಹೋದ) ವಿಷಯದ ಜ್ಞಾನವಿದ್ದಿತೇ ಹೊರತು, ಭವಿಷ್ಯ (ಮುಂದಿನ) ಜ್ಞಾನವಿರಲಿಲ್ಲ. ಆದಕ್ಕೆ ಕಾರಣವನ್ನು ಹೇಳುವೆನು ಕೇಳು. ನನಗೆ ನಿಯಮದಿಂದ ಅನ್ನವನ್ನು ನಿವೇದನಮಾಡಿ ಅನಂತರ ತಾನು ಊಟಮಾಡುವವನು ಎಲ್ಲವನ್ನೂ ತಿಳಿದ ರಾಜನಾಗಿ ಹುಟ್ಟುತ್ತಾನೆ. ॥೨೯೫-೨೯೬॥

ಭೂತಭವಿಷ್ಯದ್ವರ್ತಮಾನಗಳನ್ನು ತಿಳಿಯುವಿಕೆ, ರಾಜತನ, (ಶಾಶ್ವತವಾದ) ರಾಜಪದವಿ, ಹಿಂದಿನ ಜಾತಿಸ್ಮರಣೆಯುಳ್ಳದ್ದು ಮತ್ತು ಸೌಂದರ್ಯ ಇವುಗಳೆಲ್ಲಾ ನನಗೆ ನಿವೇದನಮಾಡಿದ ಪದಾರ್ಥಗಳನ್ನೇ ತಿನ್ನುವುದರಿಂದುಂಟಾಗುವುವು. ಮತ್ತಾವ ದೇವತೆಗಳಿಗೂ ನಿವೇದನಮಾಡದೇ ನನಗೆ ನಿವೇದನಮಾಡಿ ಉಳಿದ ಭಾಗವನ್ನು ಉತ್ತಮವೆಂದು ತಿಳಿದು ತಿನ್ನುವವನು, ಸರ್ವಜ್ಞನೂ, ರಾಜನೂ ಆಗುತ್ತಾನೆ. ॥೨೯೭-೨೯೮॥

ಅನ್ಯೋಚ್ಛಿಷ್ಟಂ ಕುಕ್ಕುಟೇನ ಮನ್ನೈವೇದ್ಯಂ ಚ ಭಕ್ಷಿತಂ ।
ತೇನಾತೀತಜ್ಞಾನಮಾಸೀನ್ಮಯಿ ಭಕ್ತಿಶ್ಚ ಶಾಶ್ವತೀ ॥೨೯೯॥

ಯಯಾ ಭಕ್ತ್ಯಾ ಮುನಿಶ್ರೇಷ್ಠಾಃ ಲಜ್ಜಿತಾಃ ಸಾಧುವೃತ್ತಯಃ ।
ಭಕ್ತಿಸ್ತು ತಾದೃಶೀ ಪ್ರಾಪ್ತಾ ಮನ್ನೈವೇದ್ಯಸ್ಯ ಭಕ್ಷಣಾತ್ ॥೩೦೦॥

ತತಃ ಪರಮಯಂ ಭಿಲ್ಲಃ ಸರ್ವಭೂಚಕ್ರಪಾಲಕಃ ।
ಬಭೂವ ಸರ್ವವೇತ್ತಾ ಚ ಸರ್ವಸೌಭಾಗ್ಯಸಂಯುತಃ ॥೩೦೧॥

ಸ್ವರ್ಗಲೋಕಾದಿಲೋಕೇಷು ಚಚಾರ ಸ ನರಾಧಿಪಃ ।
ವಿಷ್ಣುಬ್ರಹ್ಮಾದಿಭಿರ್ನಿತ್ಯಂ ಪೂಜಿತಶ್ಚ ಬಭೂವ ಸಃ ॥೩೦೨॥

ರಾಜ್ಯಾಧಿಪತ್ಯಂ ಸಂಪ್ರಾಪ್ಯ ಸೋಽಯಂ ಪ್ರತ್ಯಹಮಾದರಾತ್ ।
ರತ್ನೈರ್ಲಕ್ಷಮಿತೈರ್ನಿತ್ಯಂ ಚಕಾರ ಮಮ ಪೂಜನಂ ॥೩೦೩॥

ಅಷ್ಟಲಕ್ಷಮಿತೈರ್ನಿತ್ಯಂ ಸ್ವರ್ಣಪುಷ್ಪೈಶ್ಚ ಸಾದರಂ ।
ಪೂಜಯಾಮಾಸ ಭಕ್ತ್ಯಾಽಯಂ ಮಾಮನಾದ್ಯಂತಮವ್ಯಯಂ॥೩೦೪॥

---

ನನಗೆ ನಿವೇದನಮಾಡಿದ ಮಾಂಸವು ಮತ್ತೊಬ್ಬನ ಉಚ್ಛಿಷ್ಟವಾದರೂ ಅದನ್ನು ತಿಂದುದರಿಂದ ಇವನಿಗೆ ಭೂತವಿಷಯಕಜ್ಞಾನವೂ ನನ್ನಲ್ಲಿ ದೃಢವಾದ ಭಕ್ತಿಯೂ ಉಂಟಾದುವು. ಈ ಭಕ್ತಿಯಿಂದ ಮುನಿಶ್ರೇಷ್ಠರೂ ಸಾಧುಸ್ವಭಾವವುಳ್ಳ ಮುನಿಪುಂಗವರೂ ನಾಚಿಕೆಹೊಂದುತ್ತಿರುವರು. ಈ ಭಕ್ತಿಯು ನನ್ನ ನೈವೇದ್ಯವನ್ನು ತಿಂದುದರಿಂದ ಈ ಭಿಲ್ಲನಿಗೆ ಉಂಟಾಯಿತು. ॥೨೯೯-೩೦೦॥

ಅನಂತರ ಮುಂದಿನ ಜನ್ಮದಲ್ಲಿ ಇದೇ ಬೇಡನು ಸಕಲ ಭೂಮಂಡಲಾಧಿಪತಿಯೂ, ಸರ್ವಜ್ಞನೂ, ಸಕಲ ಸೌಭಾಗ್ಯಸಂಪನ್ನನೂ ಆಗಿ ಸ್ವರ್ಗ ಮುಂತಾದ ಲೋಕಗಳಲ್ಲಿ ಸಂಚಾರ ಮಾಡಿದನು. ಆಗ ವಿಷ್ಣು, ಬ್ರಹ್ಮ ಮುಂತಾದವರೂ ಸಹ ಇವನನ್ನು ಪೂಜೆಮಾಡಿದರು. ॥೩೦೧-೩೦೨॥

ಇವನು ರಾಜ್ಯಾಧಿಕಾರವನ್ನು ಹೊಂದಿದಮೇಲೆ ಪ್ರತಿದಿನವೂ ಆದರದಿಂದ ಲಕ್ಷ ರತ್ನಗಳಿಂದ ನನ್ನನ್ನು ಪೂಜೆ ಮಾಡುತ್ತಿದ್ದನು. ಅಲ್ಲದೇ ಎಂಟುಲಕ್ಷ ಚಿನ್ನದ ಹೂಗಳಿಂದ ನಿತ್ಯವೂ ಆದರಪೂರ್ವಕವಾಗಿ ಭಕ್ತಿಯಿಂದ ಆದ್ಯಂತರಹಿತನೂ, ನಿತ್ಯನೂ ಆದ ನನ್ನನ್ನು ಪೂಜೆಮಾಡಿದನು. ॥೩೦೩-೩೦೪॥

ದೀಪಾನ್ಲಕ್ಷಾವಧಿ ಪ್ರೀತ್ಯಾ ಕೃಷ್ಣಗೋಘೃತಪೂರಿತಾನ್ ।
ದದಾತಿ ಮಹ್ಯಮನಿಶಂ ತಥಾ ಕರ್ಪೂರದೀಪಕಾನ್ ॥೩೦೫॥

ಏವಮತ್ಯಂತಯತ್ನೇನ ಮದರ್ಚನಪರಾಯಣಃ ।
ಕೃತ್ವಾ ರಾಜ್ಯಂ ತತಃ ಪುತ್ರೇ ರಾಜ್ಯಂ ಸರ್ವಂ ನ್ಯವೇದಯತ್ ॥೩೦೬॥

ತತೋ ದಕ್ಷಿಣಕೈಲಾಸೇ ನಿತ್ಯಂ ಕೃತ್ವಾ ಮದರ್ಚನಂ ।
ಬಹುಕಾಲಮುವಾಸಾಯಂ ತತಸ್ತತ್ರ ತನುಂ ಜಹೌ ॥೩೦೭॥

ತತಸ್ತಸ್ಮೈ ಮಯಾ ದತ್ತೋ ಮೋಕ್ಷೋಽಪಿ ವರವರ್ಣಿನಿ ।
ಮುಕ್ತೋ ಭಿಲ್ಲಸ್ತಥಾನ್ಯೇಽಪಿ ಮುಕ್ತಾಸ್ತತ್ರ ಮದರ್ಚಕಾಃ ॥೩೦೮॥

ವಿಶ್ವಸ್ಯ ಮಾಂ ಪ್ರಯತ್ನೇನ ಯಸ್ತು ಸಂಪೂಜಯಿಷ್ಯತಿ ।
ಸ ಭುಕ್ತ್ವಾ ರಾಜ್ಯಮನಿಶಂ ಅಂತೇ ಮುಕ್ತಿಂ ಪ್ರಯಾಸ್ಯತಿ ॥೩೦೯॥

ರಾಜ್ಯಪ್ರದೋಽಹಂ ಶಂಕಸ್ಯಾಪ್ಯನ್ವಹಂ ಪೂಜಿತೋಽಂಬಿಕೇ ।
ಮುಕ್ತಿದಶ್ಚ ನ ಸಂದೇಹಃ ಸತ್ಯಂ ಸತ್ಯಂ ನ ಸಂಶಯಃ ॥೩೧೦॥

---

ಕಪಿಲಗೋವಿನ ತುಪ್ಪದಿಂದ ಪೂರ್ಣವಾದ ಲಕ್ಷಗಟ್ಟಲೆ ದೀಪಗಳನ್ನೂ ಹಾಗೆಯೇ ಕರ್ಪೂರದೀಪಗಳನ್ನೂ ಅನವರತವೂ ನನಗೆ ಸಮರ್ಪಿಸುತ್ತಿದ್ದನು. ಹೀಗೆ ವಿಶೇಷ ನಿಯಮದಿಂದ ನನ್ನ ಪೂಜಾನಿರತನಾದ ಇವನು ರಾಜ್ಯಭಾರಮಾಡಿ ಅನಂತರ ತನಗೆ ವಯಸ್ಸಾಗಲು ರಾಜ್ಯವನ್ನು ತನ್ನ ಮಗನಿಗೆ ಸಮರ್ಪಿಸಿದನು. ॥೩೦೫-೩೦೬॥

ತನ್ನ ಮಗನಲ್ಲಿ ರಾಜ್ಯಭಾರವನ್ನು ವಹಿಸಿ ತಾನು ಅಲ್ಲಿಂದ ದಕ್ಷಿಣಕೈಲಾಸಕ್ಕೆ ಬಂದು ನಿತ್ಯವೂ ನನ್ನ ಪೂಜೆ ಮಾಡುತ್ತಾ ಅಲ್ಲಿಯೇ ಬಹಳಕಾಲ ನನ್ನ ಸೇವಾಪರನಾಗಿದ್ದು ಅನಂತರ ಶರೀರತ್ಯಾಗ ಮಾಡಿದನು. ಎಲೌ ಸುಂದರಾಂಗಿಯೇ, ಆಗ ಅವನಿಗೆ ನಾನು ಮೋಕ್ಷವನ್ನು ಕೊಟ್ಟೆನು. ದೇವಿ, ಈ ಬೇಡನಂತೆಯೇ ಆ ದಕ್ಷಿಣ ಕೈಲಾಸದಲ್ಲಿ ಇನ್ನೂ ಎಷ್ಟೋಮಂದಿ ನನ್ನ ಪೂಜಾನಿರತರು ಮುಕ್ತಿಹೊಂದಿರುವರು. ॥೩೦೭-೩೦೮॥

ನನ್ನಲ್ಲಿ ವಿಶ್ವಾಸವಿಟ್ಟು ಬಹು ನಿಯಮದಿಂದ ನನ್ನನ್ನು ಪೂಜೆಮಾಡುವವರು ಅನವರತವೂ ರಾಜ್ಯಭೋಗವನ್ನನುಭವಿಸಿ ಕೊನೆಯಲ್ಲಿ ಮುಕ್ತಿಯನ್ನು ಹೊಂದು

ಶರಣ್ಯೋಽಹಂ ವೇದವೇದ್ಯೋ ಭುಕ್ತಿಮುಕ್ತಿಪ್ರದಾಯಕಃ ।
ನ ಮದನ್ಯೋ ಮುಕ್ತಿದಾತಾ ಭುಕ್ತಿದಾತಾ ಚ ಸರ್ವಥಾ ॥೩೧೧॥

ಮದನ್ಯಾರ್ಚನಸಂಸಕ್ತಾಃ ಪ್ರತಿಜನ್ಮನಿ ದುರ್ಭಗಾಃ ।
ಭವಿಷ್ಯಂತಿ ಭ್ರಷ್ಟಪುಣ್ಯಾಃ ನಾನಾಕುತ್ಸಿತಯೋನಿಜಾಃ ॥೩೧೨॥

ವಿಶ್ವಸ್ಯ ಮಾಂ ಪ್ರಯತ್ನೇನ ಸರ್ವದಾ ಮಾಮುಪಾಸತೇ ।
ಭೂರಿಭಾಗ್ಯಾಶ್ರಿತೋ ಮರ್ತ್ಯಸ್ತದನ್ಯೋಽನ್ಯಮುಪಾಸತೇ ॥೩೧೩॥

ಯಸ್ಯಾನುಗ್ರಹಮಿಚ್ಛಾಮಿ ತಸ್ಮೈ ರಾಜ್ಯಂ ದದಾಮ್ಯಹಂ ।
ಮೋಕ್ಷಮಂತೇ ಪ್ರಯಚ್ಛಾಮಿ ಪ್ರತಿಜ್ಞೇಯಂ ಮಮ ಪ್ರಿಯೇ ॥೩೧೪॥

---

ತ್ತಾರೆ. ಯಾವಾಗಲೂ ನನ್ನನ್ನು ಪೂಜೆಮಾಡುವ ಚಂಡಾಲನಿಗಾದರೂ ರಾಜ್ಯವನ್ನೂ, ಮೋಕ್ಷವನ್ನೂ ಕೊಡುತ್ತೇನೆಂಬುದರಲ್ಲಿ ಸತ್ಯವಾಗಿಯೂ ಸಂದೇಹವೇ ಇಲ್ಲವೆಂದು ತಿಳಿ. ॥೩೦೯-೩೧೦॥

ವೇದಗಳಿಂದ ತಿಳಿಯಲ್ಪಡತಕ್ಕವನೂ, ಶರಣಾಗತರನ್ನು ರಕ್ಷಣೆಮಾಡುವವನೂ ಇಹದಲ್ಲಿ ಸಕಲ ಭೋಗಗಳನ್ನೂ, ಪರದಲ್ಲಿ ಶಾಶ್ವತವಾದ ಮೋಕ್ಷವನ್ನೂ ಕೊಡುವವನೂ ನಾನೇ ಆಗಿರುವೆನು. ಮೋಕ್ಷವನ್ನೂ ಸಕಲ ಭೋಗಗಳನ್ನೂ ನಾನಲ್ಲದೇ ಮತ್ತಾರೂ ಕೊಡಲಾರರು. ನನ್ನನ್ನು ಬಿಟ್ಟು ಇತರ ವಿಷ್ಣ್ವಾದಿ ದೇವತೆಗಳನ್ನು ಪೂಜಿಸುವುದರಲ್ಲಿ ಆಸಕ್ತರಾದವರು ಪ್ರತಿಜನ್ಮದಲ್ಲಿಯೂ ಭಾಗ್ಯಹೀನರಾಗಿ ಅನೇಕ ನೀಚಜನ್ಮಗಳಲ್ಲಿ ಪುಣ್ಯವಿಲ್ಲದ್ದರಿಂದ ಜನಿಸಿ ನರಳುವರು. ॥೩೧೧-೩೧೨॥

ವಿಶೇಷ ಭಾಗ್ಯಶಾಲಿಯಾದ ಮನುಷ್ಯನು ಮಾತ್ರ ನನ್ನಲ್ಲಿ ವಿಶ್ವಾಸವಿಟ್ಟು ನಿಯಮದಿಂದ ನನ್ನನ್ನು ಯಾವಾಗಲೂ ಸೇವಿಸುತ್ತಾನೆ. ಭಾಗ್ಯಹೀನನಾದವನು ನನಗಿಂತ ಬೇರೆಯವರನ್ನು ಪೂಜೆಮಾಡುತ್ತಾನೆ. ನಾನು ಅನುಗ್ರಹಮಾಡಲಪೇಕ್ಷಿಸಿದವನಿಗೇ ರಾಜ್ಯವನ್ನು ಪ್ರೀತಿಯಿಂದ ಕೊಡುತ್ತೇನೆ. ಎಲೌ ಪ್ರೇಯಸಿ, ಕೊನೆಯಲ್ಲಿ ಆತನಿಗೇ ಮೋಕ್ಷವನ್ನೂ ಕೊಡುತ್ತೇನೆಂಬುದಾಗಿ ನನ್ನ ಪ್ರತಿಜ್ಞೆಯಿರುವುದು. ॥೩೧೩-೩೧೪॥

ಭುಕ್ತಿಮುಕ್ತಿಪ್ರದಂ ಮತ್ವಾ ಮಾಮೇವ ಗತಕಲ್ಮಷಾಃ ।
ಭಜಂತಿ ಸತತಂ ಭಕ್ತ್ಯಾ ಭವಬಂಧವಿಮೋಚಕಂ ॥೩೧೫॥

ತತ್ರ ದಕ್ಷಿಣಕೈಲಾಸೇ ಪುರಾ ಕಶ್ಚಿದ್ದ್ವಿಜೋತ್ತಮಃ ।
ಮಾಮಭ್ಯರ್ಚ್ಯ ಸ್ಥಿತಃ ಪ್ರೀತ್ಯಾ ಬಿಲ್ವಪತ್ರಾದಿಸಾಧನೈಃ ॥೩೧೬॥

ತಸ್ಯ ಪತ್ನೀ ಬಭೂವೈಕಾ ಸುಭಗಾ ಯುವತೀ ಪ್ರಿಯಾ ।
ತಯಾ ಸಹಾಯಂ ಬಹುಧಾ ನ ಚ ಚಕ್ರೇ ಹ್ಯವ ಸಂಗಮಂ ॥೩೧೭॥

ಅಯಂ ನಿರಂತರಂ ಸೇವಾಂ ಕರೋತಿ ಮಮ ಸದ್ಮನಿ ।
ದೂರೀಚಕಾರ ಸತತಂ ರಜಾಂಸಿ ಶಿವಚಿಂತಕಃ ॥೩೧೮॥

ಸುವರ್ಣಮುಖರೀತೋಯೈರಯಮನ್ವಹಮಾದರಾತ್ ।
ಅಭಿಷಿಚ್ಯ ಸ್ಥಿತಃ ಪೂರ್ವಂ ರುದ್ರಾಧ್ಯಾಯಪುರಃಸರಂ ॥೩೧೯॥

---

ನಾನೇ ಸಕಲ ಭೋಗಗಳನ್ನೂ ಮತ್ತು ಮುಕ್ತಿಯನ್ನೂ ಕೊಡುವೆನೆಂದು ತಿಳಿದು ಕಲ್ಮಷರಹಿತರಾದವರು ಈ ಸಂಸಾರಬಂಧನವನ್ನು ತೊಲಗಿಸುವ ನನ್ನನ್ನೇ ಯಾವಾಗಲೂ ಭಕ್ತಿಯಿಂದ ಸೇವಿಸುತ್ತಾರೆ. ಹಿಂದೆ ಒಬ್ಬ ಬ್ರಾಹ್ಮಣೋತ್ತಮನು ಆ ದಕ್ಷಿಣಕೈಲಾಸದಲ್ಲಿ ಪ್ರೀತಿಯಿಂದ ಬಿಲ್ವಪತ್ರೆ ಮುಂತಾದ ಸಾಧನಗಳಿಂದ ನನ್ನನ್ನು ಪೂಜೆಮಾಡುತ್ತಾ ನೆಲಸಿದ್ದನು. ॥೩೧೫-೩೧೬॥

ಆವನಿಗೆ ಸುಂದರಾಂಗಿಯೂ, ಯುವತಿಯೂ, ಪ್ರೀತಿಪಾತ್ರಳೂ ಆದ ಒಬ್ಬ ಹೆಂಡತಿಯಿದ್ದಳು. ಹೀಗೆ ಸುಂದರಾಂಗಿಯಾಗಿ ಪ್ರೇಮಾಸ್ಪದಳಾಗಿರುವ ಪತ್ನಿ ಯಿದ್ದರೂ ಆತನು ಅವಳೊಡನೆ ಎಂದೂ ಸಂಭೋಗವನ್ನು ಮಾಡಲಿಲ್ಲ. ಯಾವಾಗಲೂ ನನ್ನ ದೇವಾಲಯದಲ್ಲೇ ನನ್ನ ಸೇವೆ ಮಾಡುತ್ತಲೇ ಕಾಲಕಳೆಯುತ್ತಿದ್ದನು. ಸದಾ ಪರಶಿವನನ್ನೇ ಧ್ಯಾನಮಾಡುತ್ತಿದ್ದ ಇವನು ಆ ರಜಸ್ಸನ್ನೇ ತಿರಸ್ಕಾರ ಮಾಡಿಬಿಟ್ಟಿದ್ದನು. ॥೩೧೭-೩೧೮॥

ಅವನು ಆ ಸುವರ್ಣಮುಖರೀ ನದಿಯ ನೀರಿನಿಂದ ಪ್ರತಿನಿತ್ಯವೂ ಆದರ ಪೂರ್ವಕವಾಗಿ ನನಗೆ ರುದ್ರಾಧ್ಯಾಯ ಮಂತ್ರವನ್ನು ಹೇಳಿಕೊಂಡು ಅಭಿಷೇಕ ಮಾಡುತ್ತಾ, ಅನಂತರ ಕೋಮಲವಾದ ಬಿಲ್ವಪತ್ರೆಗಳಿಂದ ಆದರವಿಟ್ಟು ನನ್ನನ್ನು

ಕೋಮಲೈರ್ಬಿಲ್ವಪತ್ರೈರ್ಮಾಂ ಪೂಜಯಾಮಾಸ ಸಾದರಂ ।
ಪುಷ್ಪೈರನ್ಯೈಶ್ಚ ಸತತಂ ಪದ್ಮೈರ್ನೀಲೋತ್ಪಲೈರಪಿ ॥೩೨೦॥

ಚಕಾರಾನುಕ್ಷಣಂ ವಿಪ್ರೋ ಭಸ್ಮನೋದ್ಧೂಳನಂ ಮುದಾ ।
ಉದ್ಧೂಳಿತಂ ವಿಲೋಕ್ಯಾಂಗಂ ಹೃಷ್ಟೋಽಭೂತ್ಸರ್ವದಾ ದ್ವಿಜಃ ॥೩೨೧॥

ಭಾಲಂ ತ್ರಿಪುಂಡ್ರರೇಖಾಭಿರಲಂಕೃತಮಹರ್ನಿಶಂ ।
ಸ್ಮೃತ್ವಾ ಸ್ಮೃತ್ವಾತಿಸಂತುಷ್ಟೋ ನಿತ್ಯಂ ನಿತ್ಯಂ ಚಕಾರ ಸಃ ॥೩೨೨॥

ಶಿವೇತಿ ನಾಮ ವಿಪುಲಂ ಸದಾ ಜಪ್ತ್ವೈವ ಸಂಸ್ಥಿತಃ ।
ರುದ್ರಾಕ್ಷಧಾರಣೇ ತಸ್ಯ ಪ್ರೀತಿರತ್ಯುತ್ತಮಾ ಸ್ಥಿತಾ ॥೩೨೩॥

ಭಸ್ಮರುದ್ರಾಕ್ಷಸಂಛನ್ನೋ ಯದಾ ಮಾಮರ್ಚಯತ್ಯಯಂ ।
ತದಾ ಸಂತುಷ್ಟಹೃದಯಃ ಕರೋತ್ಯಭ್ಯರ್ಚನಂ ಮುದಾ ॥೩೨೪॥

---

ಪೂಜೆಮಾಡುತ್ತಿದ್ದನು. ಹಾಗೆಯೇ ಹೂವು, ಕಮಲಪುಷ್ಪ, ಕನ್ನೈದಿಲೆ ಮುಂತಾದ ಕುಸುಮಗಳಿಂದ ನನ್ನನ್ನು ಯಾವಾಗಲೂ ಪೂಜೆಮಾಡುತ್ತಿದ್ದಳು. ॥೩೧೯-೩೨೦॥

ಪ್ರತಿಕ್ಷಣದಲ್ಲಿಯೂ ಆ ಬ್ರಾಹ್ಮಣನು ಪ್ರೀತಿಯಿಂದ ವಿಭೂತಿಯನ್ನು ಲೇಪನ ಮಾಡಿಕೊಂಡು, ಹಾಗೆ ಲೇಪಿಸಿಕೊಂಡಿರುವ ತನ್ನ ಅವಯವಗಳನ್ನು ನೋಡಿ ಸಂತೋಷಭರಿತನಾಗುತ್ತಿದ್ದನು. ಹಗಲೂ ರಾತ್ರಿ ಭಸ್ಮತ್ರಿಪುಂಡ್ರಗಳಿಂದ ಶೋಭಿಸುತ್ತಿದ್ದ ಹಣೆಯನ್ನು ನೋಡಿ ನಿತ್ಯವೂ ಅದರ ಸ್ಮರಣೆಯಿಂದ ಸಂತುಷ್ಟಳಾಗುತ್ತಿದ್ದಳು. ॥೩೨೧-೩೨೨॥

ಯಾವಾಗಲೂ ಪರಿಶುದ್ಧವಾದ ಆ ಶಿವನಾಮವನ್ನೇ ಆತನು ಜಪಿಸುತ್ತಿದ್ದನು. ಅವನಿಗೆ ರುದ್ರಾಕ್ಷವನ್ನು ಧರಿಸುವುದರಲ್ಲಿ ತುಂಬಾ ಉತ್ತಮವಾದ ಪ್ರೀತಿಯಿದ್ದಿತು. ಭಸ್ಮ ರುದ್ರಾಕ್ಷ ಇವುಗಳಿಂದ ಅಲಂಕೃತನಾಗಿ ಇವನು ಸಂತೋಷದಿಂದ ನನ್ನನ್ನು ಪೂಜೆಮಾಡುತ್ತಿದ್ದನು. ॥೩೨೩-೩೨೪॥

ಶಿವದ್ರೋಹಿಗಳನ್ನು ದೂರದಲ್ಲಿ ನೋಡಿದಕೂಡಲೇ ಪಾಪಪರಿಹಾರಕ್ಕಾಗಿ ಸೂರ್ಯನನ್ನು ನೋಡುತ್ತಿದ್ದನು. ಒಂದೊಂದು ಸಲ ವೇಗದಿಂದ ಬರುತ್ತಿದ್ದಾಗ ಶಿವ

ಅಶೈವಾನ್ದೂರತೋ ದೃಷ್ಟ್ವಾ ಕರೋತಿ ರವಿದರ್ಶನಂ ।
ಅಶೈವಂ ಸಂಭ್ರಮಾತ್ಸ್ಪೃಷ್ಟ್ವಾ ಪ್ರಾಯಶ್ಚಿತ್ತಂ ಕರೋತಿ ಹಿ ॥೩೨೫॥

ಊರ್ಧ್ವಪುಂಡ್ರಾಂಕಿತಾನ್ವಿಪ್ರಾನ್ಸ ತು ಸಂತ್ಯಜ್ಯ ದೂರತಃ ।
ತ್ರಿಪುಂಡ್ರಚಿಹ್ನಿತೈರ್ವಿಪ್ರೈಶ್ಚಕಾರ ಪ್ರೀತಿಮುತ್ತಮಾಂ ॥೩೨೬॥

ಏತಾದೃಶಂ ವಿಲೋಕ್ಯೈನಂ ಪತ್ನೀಭೋಗಪರಾಙ್ಮುಖಂ ।
ರಾತ್ರಾವಾಕಾರಯಾಮಾಸ ಭೋಗಾರ್ಥಂ ಭೋಗಲೋಲುಪಾ ॥೩೨೭॥

ಸಾ ಶಯ್ಯಾಯಾಂ ವಿವಸನಾ ತದ್ಧಸ್ತೇ ಚಂದನಂ ದದೌ ।
ದದೌ ಮಾಲ್ಯಾನಿ ಚ ಪ್ರೀತ್ಯಾ ಸುಗಂಧೀನಿ ಮನೋಹರಾ ॥೩೨೮॥

ತದಾ ಸ ಶೈವೋಽತಿದೃಢಂ ಮಾತುಲಿಂಗಫಲೋಪಮಂ ।
ತಸ್ಯಾಃ ಕುಚಯುಗಂ ರಮ್ಯಂ ದದರ್ಶ ಪೃಥುಲಂ ಶಿವೇ ॥೩೨೯॥

ತತಸ್ತಸ್ಮಿನ್ಕುಚಯುಗೇ ಶಿವಲಿಂಗಭ್ರಮೋಽಭವತ್ ।
ತತಃ ಸ ಲಿಂಗ ಸದೃಶಂ ಪಸ್ಪರ್ಶ ಕುಚಮಂಡಲಂ ॥೩೩೦॥

---

ದ್ರೋಹಿಗಳ ಸ್ಪರ್ಶವುಂಟಾದರೆ ಆಗ ಪ್ರಾಯಶ್ಚಿತ್ತಮಾಡಿಕೊಳ್ಳುತ್ತಿದ್ದನು. ಆ ಬ್ರಾಹ್ಮಣನು ಊರ್ಧ್ವಪುಂಡ್ರಗಳನ್ನು ಧರಿಸಿರುವರನ್ನು ದೂರಮಾಡಿ ಯಾವಾಗಲೂ ಭಸ್ಮ ತ್ರಿಪುಂಡ್ರಧಾರಿಗಳಾಗಿರುವ ಬ್ರಾಹ್ಮಣರಲ್ಲೇ ಪ್ರೀತಿತೋರಿಸುತ್ತಿದ್ದನು. ॥೩೨೫-೩೨೬॥

ರತಿಕ್ರೀಡೆಯಲ್ಲಿ ಅಪೇಕ್ಷೆಯಿಲ್ಲದೇ ಇರುವ ತನ್ನ ಗಂಡನನ್ನು ನೋಡಿ ಉಪಭೋಗಕಾತರಳಾದ ಆ ಬ್ರಾಹ್ಮಣನ ಪತ್ನಿಯು ಒಂದುದಿನ ರಾತ್ರಿಯಲ್ಲಿ ತನ್ನ ಪತಿಯನ್ನು ಸಂಭೋಗಮಾಡಲು ಆಹ್ವಾನಿಸಿದಳು. ಆಗ ಮನೋಹರಳಾದ ಅವಳು ಸುಪ್ಪತ್ತಿಗೆಯಮೇಲೆ ಬಟ್ಟೆಯಿಲ್ಲದೇ ಬೆತ್ತಲೆಯಾಗಿಯೇ ಇದ್ದು ತನ್ನ ಗಂಡನ ಕೈಗೆ ಚಂದನವನ್ನೂ ಸುಗಂಧಭರಿತವಾದ ಹೂಮಾಲೆಯನ್ನೂ ಪ್ರೀತಿಯಿಂದ ಕೊಟ್ಟಳು. ॥೩೨೭-೩೨೮॥

ಗಿರಿಜೇ, ಆಗ ಆ ನನ್ನ ಭಕ್ತನು ಬಹಳ ಗಟ್ಟಿಯಾಗಿ ಮಾದಲದ ಹಣ್ಣಿನ ಆಕಾರದಿಂದಿರುವ ತನ್ನ ಹೆಂಡತಿಯ ದೊಡ್ಡ ಮನೋಹರವಾಗಿರುವ ಸ್ತನಗಳನ್ನು ನೋಡಿದನು. ಆಗ ಅವನಿಗೆ ಈ ಕುಚದ್ವಂದ್ವಗಳಲ್ಲಿ ಶಿವಲಿಂಗಭ್ರಾಂತಿಯುಂಟಾ

ತತಃ ಸ ಲಿಂಗಬುದ್ಧ್ಯೈವ ಗಂಧಮಾಲ್ಯಾದಿಭಿರ್ದ್ವಿಜಃ ।
ಪೂಜಯಾಮಾಸ ಯತ್ನೇನ ವಿಕಾರರಹಿತಸ್ತದಾ ॥೩೩೧॥

ತತಃ ಪ್ರದಕ್ಷಿಣಾದೀನಿ ಚಕಾರ ಪ್ರೀತಮಾನಸಃ ।
ತತಃ ಪೂಜಾಂ ಸಮಾಪ್ಯಾಯಂ ಸತ್ವರಂ ಬಹಿರಾಗತಃ ॥೩೩೨॥

ಬಹಿರ್ನಿರ್ಗತಮಾಲೋಕ್ಯ ತತ್ಪತ್ನೀ ದುಃಖಿತಾ ತದಾ ।
ಉವಾಚೇದಂ ವಚೋ ದೇವಿ ತಚ್ಛೃಣುಷ್ವ ಯಥಾಕ್ರಮಂ॥೩೩೩॥

ನಿರ್ವಿಕಾರಃ ಪತಿರಯಂ ಸರ್ವದಾ ಶಿವಚಿಂತಕಃ ।
ಮನೋನಿವೃತ್ತಿರೇತಸ್ಯ ವಿಷಯೇಭ್ಯಸ್ತು ಸರ್ವಥಾ ॥೩೩೪॥

ಭಾಗ್ಯವಾನ್ನಾತ್ರ ಸಂದೇಹೋ ಭಾಗ್ಯಮೀದೃಙ್ನ ಕಸ್ಯ ಚಿತ್ ।
ವೈರಾಗ್ಯಮೀದೃಶಂ ಲೋಕೇ ಬಹುಪುಣ್ಯತಪಃ ಫಲಂ ॥೩೩೫॥

---

ಯಿತು. ಶಿವಲಿಂಗಾಕಾರವಾಗಿರುವ ಆ ತನ್ನ ಪ್ರಿಯೆಯ ಕುಚಗಳೆರಡನ್ನೂ ಶಿವಲಿಂಗಬುದ್ಧಿಯಿಂದಲೇ ಮುಟ್ಟಿದನು. ॥೩೨೯-೩೩೦॥

ಹಾಗೆ ಸ್ಪರ್ಶಮಾಡಿದ ಮೇಲೂ ಆ ಬ್ರಾಹ್ಮಣನು ಸ್ತನಗಳೆರಡನ್ನೂ ಲಿಂಗವೆಂಬ ಬುದ್ಧಿಯಿಂದಲೇ ಭಾವಿಸಿ, ಗಂಧ, ಹೂ, ಮುಂತಾದುವುಗಳಿಂದ ಸ್ವಲ್ಪವೂ ವಿಕಾರವನ್ನೇ ಹೊಂದದೇ ನಿಯಮದಿಂದ ಪೂಜೆಮಾಡಿದನು. ಆಮೇಲೆ ಪ್ರೀತಿಯಿಂದ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಿ, ತನ್ನ ಪೂಜೆಯು ಮುಗಿದ ಕೂಡಲೇ ಜಾಗ್ರತೆಯಾಗಿ ಹೊರಗೆ ಬಂದನು. ॥೩೩೧-೩೩೨॥

ಹೀಗೆ ತನ್ನೊಡನೆ ವಿಹರಿಸದೇ ಹೊರಗೆ ಹೊರಟುಹೋದ ತನ್ನ ಗಂಡನನ್ನು ನೋಡಿ ಈತನ ಪತ್ನಿಯು ತುಂಬಾ ದುಃಖಿತಳಾಗಿ, ಹೀಗೆಂದಳು; ಅದನ್ನು ಕ್ರಮವಾಗಿ ಹೇಳುತ್ತೇನೆ ಕೇಳೆಂದು ಮಹೇಶ್ವರನು ಇಂತೆಂದನು. ದೇವಿ! ಸ್ವಲ್ಪವೂ ವಿಕಾರಕ್ಕೊಳಗಾಗದ ಈ ನನ್ನ ಪತಿಯು ಯಾವಾಗಲೂ ಶಿವನನ್ನೇ ಧ್ಯಾನಮಾಡುತ್ತಿರುವನು. ಈತನ ಮನಸ್ಸು ವಿಷಯಸುಖಗಳಿಂದ ಹಿಂತಿರುಗಿದೆ. ಇದು ಖಂಡಿತ. ॥೩೩೩-೩೩೪॥

ಸಂದೇಹವಿಲ್ಲದೇ ಈತನು ಭಾಗ್ಯಶಾಲಿಯೇ ಸರಿ. ಇಂತಹ ಭಾಗ್ಯವು ಬೇರೆ ಯಾರಿಗೂ ಇರುವುದಿಲ್ಲ. ಈರೀತಿಯಾದ ವೈರಾಗ್ಯವು ಲೋಕದಲ್ಲುಂಟಾಗಬೇಕಾದರೆ

ಸ್ವಾಧೀನಾಂ ತ್ಯಕ್ತವಸನಾಂ ಯುವತೀಮತಿಸುಂದರೀಂ ।
ಮಾಮಯಂ ವೀಕ್ಷ್ಯ ಸುಭಗೋ ವಿಕಾರಂ ನಾಪಿ ಸರ್ವಥಾ ॥೩೩೬॥

ಶಿವಲಿಂಗಮಯಂ ಸರ್ವಂ ಜಾನಾತ್ಯೇವಮುದಾರಧೀಃ ।
ಅಸ್ಮಿನ್ವಿಕಾರಲೇಶೋಽಪಿ ನ ಮಯಾ ದೃಶ್ಯತೇ ಧ್ರುವಂ ॥೩೩೭॥

ವಿಕಾರರಹಿತೇ ಪ್ರೀತಿಃ ಸ್ತ್ರೀಷು ನೈವ ಭವಿಷ್ಯತಿ ।
ವಿಕಾರತೋ ಯತಃ ಪ್ರೀತಿಃ ಸ್ತ್ರೀಷು ಪುಂಸಾಂ ಪ್ರಜಾಯತೇ ॥೩೩೮॥

ಬ್ರಹ್ಮಾಪಿ ಋಷ್ಯವಪುಷಾ ರೋಹಿದ್ಭೂತಾಂ ಸ್ವಕನ್ಯಕಾಂ ।
ವಿಕಾರಾಕ್ರಾಂತಹೃದಯಃ ಸದ್ಯೋ ರಂತುಮುಪಕ್ರಮೇ ॥೩೩೯॥

ವ್ಯಾಸಾದ್ಯೈರಪಿ ದುರ್ವೃತ್ತೈಃ ಕೃತಃ ಸ್ತ್ರೀಸಂಗ್ರಹೋ ಮುದಾ ।
ದುರ್ಲಭಃ ಪುರುಷಾಣಾಂ ತು ನಿತ್ಯಮಿಂದ್ರಿಯನಿಗ್ರಹಃ ॥೩೪೦॥

---

ಪೂರ್ವಾರ್ಜಿತ ಪುಣ್ಯದ ಫಲವೇ ಸರಿ. ತನಗೆ ಅಧೀನಳಾಗಿ, ಬಟ್ಟೆಯನ್ನುಡದೆ ಬೆತ್ತಲೆಯಾಗಿ ಬಂದಿರುವ ಸುಂದರಾಂಗಿಯಾದ ನನ್ನನ್ನು ಈ ಸೌಭಾಗ್ಯವಂತನು ನೋಡಿದರೂ ಕೊಂಚವೂ ವಿಕಾರವನ್ನೇ ಹೊಂದಲಿಲ್ಲವಲ್ಲಾ. ॥೩೩೫-೩೩೬॥

ಇವನು ತನ್ನ ಕಣ್ಣಿಗೆ ಕಾಣುವುದನ್ನೆಲ್ಲಾ ಭಕ್ತಿಯುಕ್ತಮನಸ್ಸುಳ್ಳವನಾದುದರಿಂದ ಶಿವಲಿಂಗಮಯವನ್ನಾಗಿಯೇ ತಿಳಿಯುತ್ತಾನೆ. ಈತನಲ್ಲಿ ಲೇಶವಾದರೂ ವಿಕಾರವು ನನ್ನ ಕಣ್ಣಿಗೆ ಯಾವ ರೀತಿಯಿಂದಲೂ ಕಾಣುವುದಿಲ್ಲ. ಸ್ತ್ರೀಯರಿಗೆ ತಮ್ಮ ಸೌಂದರ್ಯ, ಹಾವಭಾವ ವಿಲಾಸಗಳಿಂದ ವಿಕಾರಹೊಂದುವ ಪುರುಷರಿಂದ ಮಾತ್ರ ಪ್ರೀತಿಯುಂಟಾಗುವುದೇ ಹೊರತು, ಇಂದ್ರಿಯವಿಕಾರ ಹೊಂದದಿರುವ ಮನುಷ್ಯನ ಮೇಲೆ ಎಂದಿಗೂ ಪ್ರೀತಿಯುಂಟಾಗಲಾರದು. ॥೩೩೭-೩೩೮॥

ಬ್ರಹ್ಮನೂ ಸಹ ಮನ್ಮಥವಿಕಾರಕ್ಕೊಳಗಾಗಿ ಋಷಿಯ ಶರೀರದಿಂದ ಜಿಂಕೆಯ ವೇಷತಾಳಿದ ಮಗಳನ್ನೇ ಸಂಭೋಗಮಾಡಲು ಪ್ರಾರಂಭಿಸಿದನು. ಹೀಗೆಯೇ ದುಷ್ಟರಾದ ವ್ಯಾಸರೇ ಮುಂತಾದ ಮುನಿಗಳೂ ಹಿಂದೆ ಪ್ರೀತಿಯಿಂದ ಸ್ತ್ರೀಸಂಭೋಗ ಮಾಡಿರುವರು. ಪುರುಷರಿಗಾದರೋ ನಿತ್ಯವೂ ಇಂದ್ರಿಯನಿಗ್ರಹ ಮಾಡುವಿಕೆಯೆಂಬುದು ಅತ್ಯಂತ ಕಷ್ಟಸಾಧ್ಯ. ॥೩೩೯-೩೪೦॥

ವಿಷಯೇಭ್ಯಸ್ತು ಸರ್ವೇಭ್ಯಃ ಸ್ತ್ರೀರೂಪವಿಷಯೋ ಮಹಾನ್ ।
ಪುಂಸಾಂ ಸಂಮೋಹಯತ್ಯೇವ ವಿರಕ್ತಮಪಿ ಸತ್ವರಂ ॥೩೪೧॥

ವಿಷಯೇಭ್ಯಃ ಪರಾವೃತ್ತೋ ನಿರಾಹಾರೇ ಕದಾಚನ ।
ಸಾಹಾರೋ ವಿಷಯೇಭ್ಯಸ್ತು ಪರಾವೃತ್ತೋ ನ ದೃಶ್ಯತೇ ॥೩೪೨॥

ಭಾಗ್ಯಮೇತಸ್ಯ ವಿಪ್ರಸ್ಯ ತಪಶ್ಚರ್ಯಾಪಿ ಭೂಯಸೀ ।
ನಿವೃತ್ತೋಽಯಂ ನ ಸಂದೇಹಃ ಪ್ರವೃತ್ತಿರ್ನಾಸ್ಯ ದೃಶ್ಯತೇ ॥೩೪೩॥

ಏವಂ ನಿರ್ವೃತ್ತಚಿತ್ತಸ್ತು ಪುರುಷೋ ದುರ್ಲಭೋ ಭುವಿ ।
ವಿಷಯೇಭ್ಯೋ ನಿವೃತ್ತಶ್ಚೇಜ್ಜಿತಂ ತೇನ ನ ಸಂಶಯಃ ॥೩೪೪॥

ಅತಃ ಪರಂ ಕೃಶಾ ಕಾರ್ಯಾ ಮಯೇಯಂ ತನುರೀದೃಶೀ ।
ಶಿವಲಿಂಗೈಕನಿರತಾ ಶಿವಪೂಜಾಂ ಕರೋಮ್ಯಹಂ ॥೩೪೫॥

ಮಯಾಪಿ ಸರ್ವದಾ ಶಂಭುಃ ಪೂಜನೀಯಃ ಪ್ರಯತ್ನತಃ ।
ಶಿವಪೂಜೋಪಕರಣಂ ಶರೀರಂ ಜಾಯತಾಂ ಮಮ ॥೩೪೬॥

---

ಸ್ರಕ್ಚಂದನವನಿತಾರೂಪವಾದ ಎಲ್ಲಾ ವಿಷಯಸುಖಗಳಲ್ಲಿಯೂ ಈ ಸ್ತ್ರೀ ಸೌಂದರ್ಯರೂಪವಾದ ವಿಷಯವೇ ಬಹಳ ದೊಡ್ಡದು. ಈ ಸ್ತ್ರೀಸೌಂದರ್ಯವು ವೈರಾಗ್ಯಶಾಲಿಯಾದ ಪುರುಷನನ್ನು ಸಹ ಜಾಗ್ರತೆಯಾಗಿ ಮೋಹಗೊಳಿಸಿಬಿಡುವುದು. ಆಹಾರವಿಲ್ಲದೇ ಒಂದುದಿನ, ಈ ವಿಷಯಸುಖಗಳಿಂದ ವಿರಕ್ತನಾಗಿರಬಹುದು. ಆದರೆ ಆಹಾರವನ್ನು ತೆಗೆದುಕೊಂಡಮೇಲೆ ಈ ವಿಷಯಸುಖಗಳಲ್ಲಿ ವಿರಕ್ತಿ ಹೊಂದಿರುವವನು ಕಾಣುವುದೇಇಲ್ಲ. ||೩೪೧-೩೪೨||

ಈ ಬ್ರಾಹ್ಮಣನ ಭಾಗ್ಯವೇ ಭಾಗ್ಯವು. ಈತನು ಅಪಾರವಾದ ತಪಸ್ಸನ್ನಾಚರಿಸಿರುವುದರಿಂದ ಈತನಿಗೆ ಮುಂದೆ ಜನ್ಮವೇ ಇಲ್ಲವೆಂಬುದರಲ್ಲಿ ಸಂದೇಹವೇ ಇಲ್ಲ. ಈರೀತಿಯಾಗಿ ವಿರಕ್ತನಾಗಿರುವ ಮನುಷ್ಯನು ಲೋಕದಲ್ಲಿ ತುಂಬಾ ದುರ್ಲಭ. ವಿಷಯಸುಖಗಳನ್ನು ಜಯಿಸಿದರೆ ಅವನು ಎಲ್ಲವನ್ನೂ ಜಯಿಸಿದಂತೆಯೇ ಆಗುವುದೆಂಬುದರಲ್ಲಿ ಸಂಶಯವೇ ಇಲ್ಲ. ||೩೪೩-೩೪೪||

ಇನ್ನುಮುಂದೆ ಈರೀತಿಯಾಗಿರುವ (ಮನೋಹರವಾಗಿ ದೃಢಕಾಯವಾಗಿರುವ) ನನ್ನ ದೇಹವನ್ನು ಸಣ್ಣಗಾಗುವಂತೆ ಮಾಡಬೇಕು. ಆದ್ದರಿಂದ ನಾನೂ

ಕಿಂ ವಾ ಪುಷ್ಟೇನ ದೇಹೇನ ಯೌವನೇನಾಪಿ ಕಿಂ ಮಮ ।
ಯಾವದಸ್ತಿ ಬಲಂ ತಾವನ್ಮಹೇಶಂ ಪೂಜಯಾಮ್ಯಹಂ ॥೩೪೭॥

ಸತ್ಯಂ ಮೃನ್ಮಯಲಿಂಗಾನಾಂ ಶತಮಭ್ಯರ್ಚಯಾಮ್ಯಹಂ ।
ಪ್ರದಕ್ಷಿಣನಮಸ್ಕಾರಾನ್ ಕರಿಷ್ಯೇಽಹಂ ಯಥೇಚ್ಛಯಾ ॥೩೪೮॥

ಇದಾನೀಂ ಪಾರ್ವತೀನಾಥೋ ಯದಿ ನಾಭ್ಯರ್ಚ್ಯತೇ ಮಯಾ ।
ವಾರ್ಧಕೇ ಶಿವಪೂಜಾಯಾಂ ಶಕ್ತಿರ್ಮಮ ಕಥಂ ಭವೇತ್ ॥೩೪೯॥

ಕಿಂ ಚ ತಾವದಯಂ ದೇಹಃ ಸ್ಥಾಸ್ಯತೀತಿ ನ ನಿಶ್ಚಯಃ ।
ಏವಂ ಸತ್ಯಧುನಾ ಸಮ್ಯಕ್ಶಂಕರಂ ಪೂಜಯಾಮ್ಯಹಂ ॥೩೫೦॥

ಶಿವಪೂಜಾಪರಂ ಚಿತ್ತಂ ಯದ್ಯೇತನ್ನ ಭವಿಷ್ಯತಿ ।
ತದೇದಂ ಚಂಚಲಂ ಚಿತ್ತಮನ್ಯತ್ರೈವ ಪ್ರಯಾಸ್ಯತಿ ॥೩೫೧॥

---

ಶಿವಲಿಂಗಪೂಜೆಯಲ್ಲಿಯೇ ನಿರತಳಾಗಿ ಆ ದೇವದೇವನನ್ನು ಪೂಜಿಸುವೆನು. ನಾನೂ ಆ ಶಂಭುವನ್ನು ನಿಯಮದಿಂದ ಪೂಜೆ ಮಾಡಬೇಕು. ಈ ನನ್ನ ಶರೀರವು ಆ ಶಿವ ಪೂಜೆಗೆ ಒಂದು ಸಲಕರಣೆಯಾಗಲಿ. ||೩೪೫-೩೪೬||

ಕೊಬ್ಬಿರುವ ಈ ದೇಹ ಮತ್ತು ಯೌವನ ಇವುಗಳಿಂದ ಇನ್ನು ನನಗೆ ಏನು ತಾನೇ ಪ್ರಯೋಜನ? ದೇಹದಲ್ಲಿ ಶಕ್ತಿಯಿರುವವರೆಗೂ ಆ ಮಹೇಶನನ್ನು ಪೂಜೆ ಮಾಡುತ್ತೇನೆ. ನಿತ್ಯವೂ ನೂರು ಮಣ್ಣಿನ ಲಿಂಗಗಳನ್ನು ಪೂಜೆಮಾಡಿ ಅವುಗಳಿಗೆ ನನ್ನ ಮನಸ್ಸಿಗೆ ತೋರಿದಷ್ಟು ಪ್ರದಕ್ಷಿಣೆ ಮತ್ತು ನಮಸ್ಕಾರಗಳನ್ನು ಮಾಡುತ್ತೇನೆ. ||೩೪೭-೩೪೮||

ಯೌವನವಿರುವವರೆಗೂ ನಾನು ಆ ಪಾರ್ವತೀರಮಣನನ್ನು ಪೂಜೆ ಮಾಡದೇ ಹೋದರೆ ಮುಪ್ಪಿನಲ್ಲಿ ಆ ಶಿವನನ್ನು ಪೂಜೆಮಾಡಲು ನನಗೆ ಹೇಗೆ ಶಕ್ತಿಯುಂಟಾದೀತು? ಅದಲ್ಲದೇ ಅಲ್ಲಿಯವರೆಗೆ ಈ ಶರೀರವು ಇರುತ್ತದೆಂಬುದರಲ್ಲಿಯೂ ನಿಶ್ಚಯವಿಲ್ಲ. ಹೀಗಿರುವಾಗ ನಾನು ಈಗಲೇ ಆ ಶಂಕರನನ್ನು ಚೆನ್ನಾಗಿ ಪೂಜೆಮಾಡುವೆನು. ||೩೪೯-೩೫೦||

ಈ ಮನಸ್ಸು ಈಗ ಶಿವಪೂಜಾಸಕ್ತವಾಗದಿದ್ದರೆ ಚಂಚಲವಾದ್ದರಿಂದ ಇದು ಮತ್ತೆಲ್ಲಿಯಾದರೂ ಹೋಗಬಹುದು. ಆದ್ದರಿಂದ ಆ ಶಂಕರನ ಪೂಜೆಯನ್ನು ಬಿಟ್ಟು

ಪ್ರಕಾರೋಽತ್ರ ತು ನಾನ್ಯೋಽಸ್ತಿ ವಿನಾ ಶಂಕರಪೂಜಯಾ ।
ಚೇತಃ ಸ್ಥಿರೀಕರಿಷ್ಯಾಮಿ ಶಂಕರಸ್ಯೈವ ಪೂಜಯಾ ॥೩೫೨॥

ಶಿವಪೂಜಾಂ ವಿನಾ ಮುಕ್ತಿರ್ನ ಭವಿಷ್ಯತಿ ಸರ್ವಥಾ ।
ಅತಃ ಕರಿಷ್ಯೇ ನಿಯತಂ ಶ್ರೀಮಹಾದೇವಪೂಜನಂ ॥೩೫೩॥

ಮಹಾದೇವೋಽಖಿಲಾರಾಧ್ಯಃ ಕದಾಚಿದ್ಭಕ್ತವತ್ಸಲಃ ।
ಕರಿಷ್ಯತಿ ಕೃಪಾಸಿಂಧುಃ ಕೃಪಾಂ ಮಯಿ ನ ಸಂಶಯಃ ॥೩೫೪॥

ಪ್ರಸನ್ನೇ ದೇವದೇವೇಶೇ ಶಂಕರೇ ಲೋಕಶಂಕರೇ ।
ಸಂಸಾರಪಾಶನಾಶಸ್ತು ಭವಿಷ್ಯತ್ಯೇವ ನಾನ್ಯಥಾ ॥೩೫೫॥

ಪ್ರಸನ್ನೇ ಪಾರ್ವತೀನಾಥೇ ಕೀಟೋ ವಾ ಪುಲ್ಕಸೋಽಪಿವಾ ।
ಮುಚ್ಯತೇ ನಾತ್ರ ಸಂದೇಹೋ ಘೋರಸಂಸಾರಪಾಶತಃ ॥೩೫೬॥

ಸರ್ವಥಾ ವಿಷಯಾಸಕ್ತಂ ಯದಿ ಚಿತ್ತಂ ಭವಿಷ್ಯತಿ ।
ತದಾ ಕಥಂ ವಾ ಸಂಸಾರಸಾಗರೋತ್ತರಣಂ ಭವೇತ್ ॥೩೫೭॥

---

ಈಗ ಬೇರೆ ಯಾವರೀತಿಯೂ ಇಲ್ಲವೇಇಲ್ಲ. ಆ ಶಂಕರನನ್ನು ಪೂಜೆಮಾಡಿ ಮನಸ್ಸನ್ನು ದೃಢಮಾಡಿಕೊಳ್ಳುವೆನು. ॥೩೫೧-೩೫೨॥

ಶಿವಪೂಜೆಮಾಡದೇ ಖಂಡಿತವಾಗಿಯೂ ಮೋಕ್ಷ ದೊರೆಯುಲಾರದಾದ್ದರಿಂದ ನಿಯಮಬದ್ಧಳಾಗಿ ಆ ಮಹಾದೇವನನ್ನು ನಾನು ಪೂಜೆ ಮಾಡುವೆನು. ಸಕಲರಿಂದಲೂ ಪೂಜಾರ್ಹನಾಗಿರುವ ಆ ಮಹಾದೇವನು ಭಕ್ತವತ್ಸಲನೂ, ದಯಾಸಮುದ್ರನೂ ಆಗಿರುವುದರಿಂದ ದೀನಳಾದ ನನ್ನಮೇಲೆ ದಯೆ ಮಾಡುವುದರಲ್ಲಿ ಸಂಶಯವೇ ಇಲ್ಲ. ॥೩೫೩-೩೫೪॥

ದೇವದೇವಾಧಿಪನೂ, ಲೋಕಮಂಗಳಕರನೂ ಆದ ಶಂಕರನು ಪ್ರಸನ್ನನಾದರೆ ಈ ಸಂಸಾರಪಾಶವು ನಾಶವಾಗುವುದರಲ್ಲಿ ಸಂದೇಹವೇ ಇಲ್ಲ. ಆ ಪಾರ್ವತೀರಮಣನು ಪ್ರಸನ್ನನಾದರೆ ಕೀಟವಾಗಲೀ, ಚಂಡಾಲನಾಗಲೀ ಈ ಭಯಂಕರವಾದ ಸಂಸಾರಬಂಧನದಿಂದ ಸಂದೇಹವಿಲ್ಲದೇ ಬಿಡುಗಡೆ ಹೊಂದುವನು. ॥೩೫೫-೩೫೬॥

ವಿಷಯಸುಖಗಳಲ್ಲಿಯೇ ಈ ಮನಸ್ಸು ನೆಲಸುವುದಾದರೆ ಅದು ಹೇಗೆತಾನೇ ಈ ಸಂಸಾರದಿಂದ ಉದ್ಧಾರವಾದೀತು? ನನ್ನ ಅದೃಷ್ಟವಶದಿಂದಲೇ ನನ್ನ ಗಂಡನು

ಮಮ ಭಾಗ್ಯವಶಾದೇವ ಭರ್ತಾ ವಿಷಯನಿಸ್ಪೃಹಃ ।
ಅನ್ಯಥಾ ಘೋರಸಂಸಾರಾನ್ನಿವೃತ್ತಿಃ ಸ್ಯಾತ್ಕಥಂ ಮಮ ॥೩೫೮॥

ಗರ್ಭಧಾರಣಮುಖ್ಯಾನಿ ಸ್ತ್ರೀಣಾಂ ದುಃಖಾನಿ ಕೋಟಿಶಃ ।
ತಾನಿ ದುಃಖಾನಿ ಸರ್ವಾಣಿ ಸಹ್ಯಾನ್ಯೇವ ನ ಸರ್ವಥಾ ॥೩೫೯॥

ಪ್ರಸೂತಿವೇದನಾಯಾಸಾ ಬಹುಧಾ ದುಃಸಹಾಸ್ತತಃ ।
ಜೀವನಸ್ಯಾಪಿ ಸಂದೇಹೋ ಭವತ್ಯೇವ ಹಿ ವಸ್ತುತಃ ॥೩೬೦॥

ತದ್ದುಃಖಸಹನೇ ಪ್ರಾಪ್ಯಂ ಫಲಂ ನೈವ ಹಿ ದೃಶ್ಯತೇ ।
ತದ್ದುಃಖಸಹನೇ ಭೂಯೋ ದುಃಖಾಯ ಹಿ ಭವಿಷ್ಯತಿ ॥೩೬೧॥

ಮಹೇಶಸ್ಯ ಪ್ರಸಾದೋಽಸ್ತಿ ಮಯಿ ಸರ್ವಾತ್ಮನಾ ಯತಃ ।
ವಿರಕ್ತೋಽಯಮಭೂದ್ಭರ್ತಾ ತಪಸ್ಯಾಪರಮಾನಸಃ ॥೩೬೨॥

ಅತಃ ಪರಂ ತು ದುಃಖಾನಿ ಮಯಾ ಪ್ರಾಪ್ಯಾನಿ ನ ಧ್ರುವಂ ।
ದುಃಖನಾಶಾರ್ಥಮೇವಾಹಂ ಕರಿಷ್ಯೇ ಯತ್ನಮಾದರಾತ್ ॥೩೬೩॥

---

ವಿಷಯಸುಖಗಳಿಂದ ವಿರಕ್ತಿ ಹೊಂದಿರುವನು. ಹಾಗಿಲ್ಲದಿದ್ದರೆ ಈ ಭಯಂಕರವಾದ ಸಂಸಾರದಿಂದ ನನಗೆ ಹೇಗೆತಾನೇ ನಿವೃತ್ತಿಯುಂಟಾದೀತು? ॥೩೫೭-೩೫೮॥

ಸ್ತ್ರೀಯರಿಗೆ ಗರ್ಭಧಾರಣೆಯೇ ಮುಂತಾದ ದುಃಖಗಳು ಅನೇಕವಿರುವುವು. ಆ ದುಃಖಗಳನ್ನು ಸರ್ವಥಾ ಸಹಿಸಲು ಸಾಧ್ಯವೇ ಇಲ್ಲ. ಪ್ರಸವಕಾಲದಲ್ಲಿ ಆಗುವ ನೋವಿನಾಯಾಸವು ಬಹಳ ದುಃಸ್ಸಹವಾದುದು. ಒಂದೊಂದುವೇಳೆ ಇದರಿಂದ ಪ್ರಾಣಕ್ಕೆ ಅಪಾಯ ಸಂಭವಿಸಿದರೂ ಸಂಭವಿಸಬಹುದು. ॥೩೫೯-೩೬೦॥

ಆ ದುಃಖವನ್ನು ಸಹಿಸುವುದರಿಂದ ಫಲವೇನೂ ಉಂಟಾಗದಿದ್ದರೂ, ಮತ್ತೂ ಹೆಚ್ಚಿನ ದುಃಖವೇ ಉಂಟಾಗುತ್ತದೆ. ನನ್ನಮೇಲೆ ಆ ಮಹೇಶ್ವರನ ಪೂರ್ಣಾನುಗ್ರಹವಿರುವುದರಿಂದಲೇ ನನ್ನ ಗಂಡನು ವಿರಕ್ತನಾಗಿ ಯಾವಾಗಲೂ ತಪಶ್ಚರ್ಯೆಯಲ್ಲಿಯೇ ನಿರತವಾಗಿರುವ ಮನಸ್ಸಿನಿಂದ ಕೂಡಿರುವನು. ॥೩೬೧-೩೬೨॥

ಆದ್ದರಿಂದ ಇನ್ನುಮುಂದೆ ನನಗೆ ನಿಶ್ಚಯವಾಗಿ ದುಃಖವೇ ಇಲ್ಲ. ಆ ದುಃಖ ನಾಶವಾಗುವುದಕ್ಕೋಸ್ಕರವಾಗಿಯೇ ನಾನು ಈಗ ಆದರದಿಂದ ಪ್ರಯತ್ನಿಸು

ದುಃಖನಾಶೋಽಪಿ ನಾನ್ಯಸ್ಮಾದ್ವಿನಾ ಶಂಕರಪೂಜನಂ ।
ಅತ ಏವ ಮಹಾದೇವಂ ಪೂಜಯಾಮಿ ಯಥಾವಿಧಿ ॥೩೬೪॥

ನಾನಾವಿಧಾನಿ ದುಃಖಾನಿ ಪಾಪಜನ್ಯಾನಿ ವಸ್ತುತಃ ।
ತಾನಿ ಪಾಪಾನಿ ನಶ್ಯಂತಿ ಮಹೇಶಸ್ಯೈವ ಪೂಜಯಾ ॥೩೬೫॥

ಇತ್ಯುಕ್ತ್ವಾ ವಿಷಯೇಭ್ಯಃ ಸಾ ನಿವೃತ್ತಾ ನಿಯತೇಂದ್ರಿಯಾ ।
ಗೃಹಂ ದತ್ವಾ ಶಾಂಭವಾಯ ಪರಾವೃತ್ತಾ ತತೋ ಗೃಹಾತ್ ॥೩೬೬॥

ತತಃ ಪರಂ ಪ್ರಯತ್ನೇನ ಸುವರ್ಣಮುಖರೀಜಲೇ ।
ಸ್ನಾತ್ವಾ ಚಕಾರ ಯತ್ನೇನ ಭಸ್ಮನೋದ್ಧೂಳನಂ ಮುದಾ ॥೩೬೭॥

ಕೃತ್ವಾ ತ್ರಿಪುಂಡ್ರಮನಘಾ ಲಲಾಟಾದೌ ತತಃ ಪರಂ ।
ಸುವರ್ಣಾಭರಣಂ ತ್ಯಕ್ತ್ವಾ ಚಕ್ರೇ ರುದ್ರಾಕ್ಷಧಾರಣಂ ॥೩೬೮॥

---

ವೆನು. ಆ ಶಂಕರನ ಪೂಜೆಯಿಲ್ಲದೇ ಬೇರೆ ಯಾವುದರಿಂದಲೂ ಈ ದುಃಖವು ನಾಶವಾಗಲಾರದು. ಆದ್ದರಿಂದ ವಿಧಿಪ್ರಕಾರ ಮಹಾದೇವನನ್ನು ನಾನು ಪೂಜೆ ಮಾಡುತ್ತೇನೆ. ॥೩೬೩-೩೬೪॥

ಪಾಪಗಳಿಂದ ಹುಟ್ಟುವ ನಾನಾವಿಧವಾದ ದುಃಖಗಳೂ ಮತ್ತು ಅಂತಹ ಪಾಪಗಳೂ ಆ ಮಹೇಶ್ವರನ ಪೂಜೆಯಿಂದಲೇ ನಾಶವಾಗುವುವು, ಎಂದು ಹೇಳಿ ಆ ಸಾಧ್ವಿಯು ತಾನು ವಿಷಯಸುಖಗಳಿಂದ ನಿವೃತ್ತಳಾಗಿ ಜಿತೇಂದ್ರಿಯತನವನ್ನವಲಂಬಿಸಿ ತಾನು ವಾಸಿಸುತ್ತಿದ್ದ ಮನೆಯನ್ನು ಒಬ್ಬ ಶಾಂಭವನಿಗೆ ಕೊಟ್ಟು ತಾನು ಮನೆಯಿಂದ ಹೊರಟುಹೋದಳು. ॥೩೬೫-೩೬೬॥

ಅನಂತರ ನಿಯಮದಿಂದ ಆ ಸುವರ್ಣಮುಖರೀ ನದಿಯ ನೀರಿನಲ್ಲಿ ಸ್ನಾನ ಮಾಡಿ, ವಿಧಿಪ್ರಕಾರ ಸಂತೋಷದಿಂದ ಭಸ್ಮವನ್ನು ಲೇಪನಮಾಡಿಕೊಂಡು ಹಣೆಯೇ ಮುಂತಾದ ಸ್ಥಳಗಳಲ್ಲಿ ಭಸ್ಮತ್ರಿಪುಂಡ್ರಧಾರಣೆಮಾಡಿ ಚಿನ್ನದ ಆಭರಣಗಳನ್ನೆಲ್ಲಾ ತೆಗೆದುಹಾಕಿ ಅದರ ಸ್ಥಾನದಲ್ಲಿ ರುದ್ರಾಕ್ಷಗಳನ್ನು ಧರಿಸಿದಳು. ॥೩೬೭-೩೬೮॥

ಚಕಾರಾಭರಣಂ ಶುದ್ಧಾ ರುದ್ರಾಕ್ಷೈರೇವ ಸಾದರಂ ।
ಕಂಠಕರ್ಣಾದಿದೇಶೇಷು ಭಕ್ತಿಶ್ರದ್ಧಾಪುರಸ್ಸರಂ ॥೩೯॥

ತತಸ್ತೀರ್ಥಜಲಂ ರಮ್ಯಂ ಬಿಲ್ವಪತ್ರಾಣಿ ಚಾದರಾತ್ ।
ಗೃಹೀತ್ವಾ ಸಾವಧಾನೇನ ಮಮ ಪೂಜಾಂ ಚಕಾರ ಸಾ ॥೩೭೦॥

ತತಃ ಪ್ರದಕ್ಷಿಣಾದೀನಿ ಕೃತ್ವಾ ಮೌನೇನ ಭಕ್ತಿತಃ ।
ನಿಮೀಲಿತಾಕ್ಷೀ ಮದ್ಗೇಹೇ ಸಂವಿಷ್ಟಾ ಮಯಿ ತತ್ಪರಾ ॥೩೭೧॥

ತತೋ ದದರ್ಶ ಶೈವೇಂದ್ರಂ ಕೃಪಾಲುಂ ಶಿವತತ್ಪರಂ ।
ತಂ ಪ್ರಣಮ್ಯ ಬಭಾಷೇ ಸಾ ಕೃತಾಂಜಲಿಪುಟಾ ಶಿವೇ ॥೩೭೨॥

॥ ಸುಭಗಾ ಉವಾಚ ॥

ಶೈವೋತ್ತಮ ಕೃಪಾಲುಸ್ತ್ವಂ ಶಿವಪೂಜಾಪರಾಯಣಃ ।
ಶಿವಪೂಜಾ ಕಥಂ ಕಾರ್ಯಾ ವದ ತನ್ಮಹ್ಯಮಾದರಾತ್ ॥೩೭೩॥

---

ಶುದ್ಧಳಾದ ಆ ಸಾಧ್ವಿಯು ರುದ್ರಾಕ್ಷಗಳಿಂದಲೇ ಆಭರಣಗಳನ್ನು ಮಾಡಿಕೊಂಡು ಆದರದಿಂದಲೂ, ಭಕ್ತಿಶ್ರದ್ಧಾ ಪುರಸ್ಸರವಾಗಿಯೂ ಅದನ್ನು ಕೊರಳು, ಕಿವಿ ಮುಂತಾದ ಕಡೆಗಳಲ್ಲಿ ಅಲಂಕರಿಸಿಕೊಂಡಳು. ಪವಿತ್ರವಾದ ಆ ತೀರ್ಥದ ನೀರನ್ನೂ ಬಿಲ್ವಪತ್ರೆಗಳನ್ನೂ ಆದರದಿಂದ ತಂದು ನನ್ನನ್ನು ಆದರದಿಂದ ಸಾವಧಾನವಾಗಿ ಪೂಜೆಮಾಡಿದಳು. ॥೩೬೯-೩೭೦॥

ಗಿರಿಜೇ, ಅನಂತರ ಮೌನದಿಂದಲೂ, ಭಕ್ತಿಯಿಂದಲೂ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಿ ನನ್ನ ಮನೆಯಲ್ಲಿಯೇ (ಗರ್ಭಗುಡಿಯಲ್ಲಿಯೇ) ಕಣ್ಣುಮುಚ್ಚಿ ನನ್ನನ್ನೇ ಧ್ಯಾನಮಾಡುತ್ತಾ ಕುಳಿತಳು. ಸ್ವಲ್ಪಹೊತ್ತಿನ ಮೇಲೆ ಇವಳು ದಯಾಳುವೂ, ಶಿವಧ್ಯಾನ ನಿರತನೂ ಆದ ಒಬ್ಬ ಶಾಂಭವನನ್ನು ಕಂಡು ಅವನಿಗೆ ನಮಸ್ಕಾರ ಮಾಡಿ ಕೈಜೋಡಿಸಿ ಅವನೊಡನೆ ಹೀಗೆ ಮಾತನಾಡಿದಳು. ॥೩೭೧-೩೭೨॥

ದಯಾಳುವಾದ ಶೈವಭಕ್ತಾಗ್ರೇಸರನೇ, ನೀನು ಶಿವಪೂಜಾ ಪರಾಯಣನಾಗಿರುವೆ. ಮಹಾನುಭಾವ, ಶಿವಪೂಜೆಯನ್ನು ಮಾಡುವ ಕ್ರಮವನ್ನು ನನಗೆ ಆದರದಿಂದ ತಿಳಿಸು, ಎಂದು ಪ್ರಾರ್ಥಿಸಿದ ಆ ಸುಭಗಾನಾರಿಯ ಮಾತುಗಳನ್ನು ಕೇಳಿ

ಇತಿ ತದ್ವಚನಂ ಶ್ರುತ್ವಾ ಸ ಶೈವೋ ಮತ್ಪರಾಯಣಃ ।
ತಾಮುವಾಚ ಪ್ರಹೃಷ್ಟಾತ್ಮಾ ಭೂತಿಧಾರಣಭೂಷಣಾಂ ॥೩೭೪॥

॥ ಶೈವ ಉವಾಚ ॥

ಧನ್ಯಾಸಿ ಕೃತಕೃತ್ಯಾಸಿ ಯತಸ್ತ್ವಂ ಶಿವತತ್ಪರಾ ।
ಶಿವಪೂಜಾವಿಧಿಂ ವಕ್ಷ್ಯೇ ಶೃಣು ಮೋಕ್ಷದಮಾದರಾತ್ ॥೩೭೫॥

ಶೌಚಾದಿಕಂ ನಿವೃತ್ಯಾದೌ ಸ್ನಾತ್ವೋದ್ಧೂಲ್ಯೈವ ಭಸ್ಮನಾ ।
ತ್ರಿಪುಂಡ್ರಧಾರಣಂ ಕಾರ್ಯಂ ತತೋ ರುದ್ರಾಕ್ಷಧಾರಣಂ ॥೩೭೬॥

ತತಃ ಪರಂ ಬಾಣಲಿಂಗಂ ಮೃನ್ಮಯಂ ಲಿಂಗಮೇವ ವಾ ।
ಪೂಜನೀಯಂ ಪ್ರಯತ್ನೇನ ಬಿಲ್ವಪತ್ರಾದಿಭಿರ್ಮುದಾ ॥೩೭೭॥

ಪಂಚಾಕ್ಷರೇಣ ಕರ್ತವ್ಯಂ ಸ್ತ್ರೀಭಿಃ ಶಂಕರಪೂಜನಂ ।
ಷಡಕ್ಷರೇಣ ಕರ್ತವ್ಯಂ ಪುರುಷೈಸ್ತು ಪ್ರಯತ್ನತಃ ॥೩೭೮॥

---

ನನ್ನ ಧ್ಯಾನದಲ್ಲಿಯೇ ಆಸಕ್ತನಾಗಿದ್ದ ಆ ಶೈವನು ಸಂತೋಷಭರಿತನಾಗಿ ವಿಭೂತಿಯನ್ನು ಧರಿಸಿದ್ದುದರಿಂದ ಅಲಂಕೃತಳಾಗಿರುವ ಆ ಸಾಧ್ವಿಯನ್ನು ಕುರಿತು ಇಂತೆಂದನು. ॥೩೭೩-೩೭೪॥

ಸಾಧ್ವಿಯೇ, ಆ ಪರಶಿವನಲ್ಲಿ ತತ್ಪರಳಾಗಿರುವ ನೀನೇ ಧನ್ಯಳು. ಕೃತಕೃತ್ಯಳೂ ನೀನೇ ಆಗಿರುವೆ. ಮೋಕ್ಷಪ್ರದವಾದ ಶಿವಪೂಜಾ ವಿಧಿಯನ್ನು ನಿನಗೆ ತಿಳಿಸುವೆನು, ಆದರದಿಂದ ಕೇಳುವಳಾಗು ಎಂದು ಹೀಗೆ ನುಡಿದನು. ಮೊದಲು ಶೌಚಾದಿಕರ್ಮಗಳನ್ನು ನೆರವೇರಿಸಿ ಅನಂತರ ಸ್ನಾನಮಾಡಬೇಕು. ಆಮೇಲೆ ವಿಭೂತಿಯನ್ನು ಅಂಗಾಂಗಗಳಿಗೆಲ್ಲಾ ಲೇಪನಮಾಡಿಕೊಂಡು, ಭಸ್ಮತ್ರಿಪುಂಡ್ರವನ್ನೂ, ರುದ್ರಾಕ್ಷಗಳನ್ನೂ ನಿಯಮದಿಂದ ಧರಿಸಬೇಕು. ॥೩೭೫-೩೭೬॥

ಅನಂತರ ಬಾಣಲಿಂಗವನ್ನಾಗಲೀ, ಮಣ್ಣಿನ ಲಿಂಗವನ್ನಾಗಲೀ ಸಂಪಾದಿಸಿ, ಬಿಲ್ವಪತ್ರೆ, ಹೂವು ಮುಂತಾದ ಸಾಧನಗಳಿಂದ ನಿಯಮಪೂರ್ವಕವಾಗಿ ಸಂತೋಷದಿಂದ ಅದನ್ನು ಪೂಜಿಸಬೇಕು. ಸ್ತ್ರೀಯರು 'ನಮಃ ಶಿವಾಯ' ಎಂಬ ಶಿವಪಂಚಾಕ್ಷರ ಮಂತ್ರದಿಂದಲೂ, ಪುರುಷರು 'ಓಂ ನಮಃ ಶಿವಾಯ' ಎಂಬ ಷಡಕ್ಷರಮಹಾ

ಸ್ಪರ್ಶಃ ಪಾರ್ಥಿವಲಿಂಗಸ್ಯ ಬಾಣಲಿಂಗಸ್ಯ ಚಾದರಾತ್ ।
ಸ್ತ್ರೀಭಿಃ ಕಾರ್ಯಃ ಸ್ಥಾವರಸ್ಯ ಲಿಂಗಸ್ಯ ತು ನ ಸರ್ವಥಾ ॥೩೭೯॥

ವಿಹಿತಶ್ಚರಲಿಂಗೇಷು ಸ್ಪರ್ಶಃ ಸ್ತ್ರೀಣಾಂ ಪ್ರಯತ್ನತಃ ।
ನ ಸ್ಥಾವರೇಷು ಲಿಂಗೇಷು ಸತ್ಯಮೇತನ್ಮಯೋಚ್ಯತೇ ॥೩೮೦॥

ಸ್ಥಾವರೇಷ್ವಪಿ ಲಿಂಗೇಷು ಯತ್ರ ದಿವ್ಯಂ ಭವಿಷ್ಯತಿ ।
ತತ್ರ ಪರ್ವಾಣಿ ಕರ್ತವ್ಯಂ ಸ್ಪರ್ಶನಂ ಸ್ತ್ರೀಭಿರಾದರಾತ್ ॥೩೮೧॥

ಸ್ತ್ರೀಭಿಃ ಸ್ಪರ್ಶೋಽಪಿ ಕರ್ತವ್ಯಃ ಪಂಚಾಕ್ಷರಪುರಃಸರಂ ।
ಪೂಜಾಪ್ಯನ್ಯಾ ಯಥಾಯೋಗ್ಯಂ ಪಂಚಾಕ್ಷರಪುರಃಸರಂ ॥೩೮೨॥

ಪಂಚಾಕ್ಷರಃ ಪರೋ ಮಂತ್ರಃ ಸರ್ವಮಂತ್ರಶಿರೋಮಣಿಃ ।
ಸ್ತ್ರೀಭಿರಪ್ಯನ್ವಹಂ ಜಪ್ಯಃ ಸಹಸ್ರಂ ವಿಧಿಪೂರ್ವಕಂ ॥೩೮೩॥

---

ಮಂತ್ರದಿಂದಲೂ ನಿಯಮದಿಂದ ಶಂಕರನನ್ನು ಪೂಜೆಮಾಡಬೇಕು. ॥೩೭೭-೩೭೮॥

ಸ್ತ್ರೀಯರು ಪಾರ್ಥಿವಲಿಂಗ (ಮಣ್ಣಿನ) ಮತ್ತು ಬಾಣಲಿಂಗವನ್ನು ಆದರ ದಿಂದ ಮುಟ್ಟಬಹುದು. ಆದರೆ ಸ್ಥಾವರಲಿಂಗವನ್ನು ಮಾತ್ರ ಎಂದಿಗೂ ಹೆಂಗಸರು ಮುಟ್ಟಬಾರದು. ಚರಲಿಂಗಗಳಲ್ಲಿ (ಸ್ಥಳಾಂತರವನ್ನು ಹೊಂದಿಸಬಹುದಾದ ಲಿಂಗ ಅಥವಾ ಶೈವಧರ್ಮದಲ್ಲಿರುವ ಶಾಂಭವ.) ಈ ಲಿಂಗಸ್ಪರ್ಶವು ಮಾತ್ರ ಸ್ತ್ರೀಯ ರಿಗೆ ನಿಯಮದಿಂದ ಹೇಳಲ್ಪಟ್ಟಿದೆ. ಸ್ಥಾವರಲಿಂಗಸ್ಪರ್ಶವು ಎಂದಿಗೂ ಸ್ತ್ರೀಯರಿಗೆ ಹೇಳಿಲ್ಲ. ಇದು ಸತ್ಯವೆಂದು ನಾನು ಹೇಳುವೆನು. ॥೩೭೯-೩೮೦॥

ಸ್ಥಾವರವಾದ ಶಿವಲಿಂಗಗಳಲ್ಲಿಯೂ ದಿವ್ಯವಾದ (ದೇವಲೋಕ ಸಂಬಂಧ ವುಳ್ಳ) ವುಗಳಾದರೆ ಆಗ ಪರ್ವಕಾಲಗಳಲ್ಲಿ ಮಾತ್ರ ಸ್ತ್ರೀಯರು ಆದರದಿಂದ ಅವುಗ ಳನ್ನು ಮುಟ್ಟಬಹುದು. ಶಿವಪಂಚಾಕ್ಷರ ಮಂತ್ರಪೂರ್ವಕವಾಗಿ ಸ್ತ್ರೀಯರಿಗೆ ಶಿವಲಿಂಗ ಸ್ಪರ್ಶವೂ ಸಹ ಹೇಳಲ್ಪಟ್ಟಿದೆ. ಅಲ್ಲದೇ ಪಂಚಾಕ್ಷರ ಮಂತ್ರ ಪೂರ್ವಕವಾದ ಪೂಜೆಯೂ ಅವರವರ ಯೋಗ್ಯತಾನುಸಾರವಾಗಿಬೇರೆ ಹೇಳಿದೆ. ॥೩೮೧-೩೮೨॥

ಸಕಲ ಮಂತ್ರಗಳಿಗೂ ಚೂಡಾಮಣಿಪ್ರಾಯವಾಗಿರುವ ಶಿವಪಂಚಾಕ್ಷರ ಮಂತ್ರವು ಸ್ತ್ರೀಯರಿಗೆ ಉತ್ಕೃಷ್ಟವಾದುದು. ಹೆಂಗಸರು ಇದನ್ನು ಪ್ರತಿದಿನವೂ ವಿಧಿ

ಪಂಚಾಕ್ಷರಪ್ರಭಾವಸ್ತು ನ ಜ್ಞಾತೋ ಮಾದೃಶೈರ್ಜನೈಃ ।
ಕಿಂ ತು ವೇದ ಮಹಾದೇವಸ್ತಸ್ಯಭಾವಂ ಯಥಾರ್ಥತಃ ॥೩೮೪॥

ಜಪ್ತೇ ಪಂಚಾಕ್ಷರೇ ಶುದ್ಧೇ ನಶ್ಯತ್ಯಘಕುಲಂ ಕ್ಷಣಾತ್ ।
ಪಂಚಾಕ್ಷರೋ ಮಹಾಮಂತ್ರಃ ಸ ಶಿವಾತ್ಮಕ ಏವ ಹಿ ॥೩೮೫॥

ಇತ್ಯುಕ್ತಾ ಸುಭಗಾ ಸಾಧ್ವೀ ತಂ ಪ್ರಣಮ್ಯ ಪುನರ್ದ್ವಿಜಂ ।
ಮಹ್ಯಂ ಪಂಚಾಕ್ಷರಂ ದೇಹೀತ್ಯಾಬಭಾಷೇ ಕೃತಾಂಜಲಿಃ ॥೩೮೬॥

ಸ ಶೈವೇಂದ್ರಃ ಕೃಪಾಸಿಂಧುಸ್ತತಸ್ತಸ್ಯೈ ಯಥಾವಿಧಿ ।
ದದೌ ಪಂಚಾಕ್ಷರಂ ಶುದ್ಧಂ ಸರ್ವಪಾಪೌಘನಾಶಕಂ ॥೩೮೭॥

ತತಸ್ತದಾಜ್ಞಯಾ ಸಾಧ್ವೀ ತಂ ಪ್ರಣಮ್ಯ ಯಥಾವಿಧಿ ।
ನಿತ್ಯಂ ಪಾರ್ಥಿವಲಿಂಗಾನಿ ಪೂಜಯಾಮಾಸ ಸಾದರಂ ॥೩೮೮॥

---

ಪೂರ್ವಕವಾಗಿ ಸಾವಿರಬಾರಿ ಜಪ ಮಾಡಬೇಕು. ಆ ಶಿವಪಂಚಾಕ್ಷರ ಮಂತ್ರ ಮಹಿಮೆಯು ನಮ್ಮಂತಹ ಜನಗಳಿಗೆ ತಿಳಿಯಲು ಸಾಧ್ಯವಿಲ್ಲ. ಆ ಮಹಾದೇವನೊಬ್ಬನು ಮಾತ್ರ ಸರಿಯಾಗಿ ಅದರ ಮಹಿಮೆಯನ್ನರಿತಿರುವನು. ॥೩೮೩-೩೮೪॥

ಶುದ್ಧವಾದ ಆ ಶಿವಪಂಚಾಕ್ಷರಮಂತ್ರವನ್ನು ಜಪಿಸಿದರೆ ಕ್ಷಣಕಾಲದಲ್ಲಿ ಪಾಪರಾಶಿಗಳೆಲ್ಲವೂ ನಾಶವಾಗುವುವು. ಆ ಪಂಚಾಕ್ಷರ ಮಂತ್ರವು ಶಿವಸ್ವರೂಪವೇ ಆಗಿರುವುದು ಎಂದು ಆ ಶೈವನು ಹೇಳಲು, ಸಾಧ್ವಿಯಾದ ಆ ಸುಭಗಾದೇವಿಯು ಪುನಃ ಆ ಬ್ರಾಹ್ಮಣನಿಗೆ ನಮಸ್ಕಾರಮಾಡಿ, ನನಗೆ ಆ ಶಿವಪಂಚಾಕ್ಷರಮಂತ್ರವನ್ನು ಪದೇಶಿಸಬೇಕೆಂದು ಕೈಮುಗಿದು ಕೇಳಿಕೊಂಡಳು. ॥೩೮೫-೩೮೬॥

ಆಗ ದಯಾಸಮುದ್ರನಾದ ಆ ಶಾಂಭವಾಗ್ರೇಸರನು ಸುಭಗಾದೇವಿಗೆ ವಿಧಿಪ್ರಕಾರ ಸಕಲಪಾಪಗಳನ್ನೂ ನಾಶಮಾಡುವ, ಪರಿಶುದ್ಧವಾದ ಶಿವಪಂಚಾಕ್ಷರ ಮಂತ್ರೋಪದೇಶ ಮಾಡಿದನು. ಅನಂತರ ಆ ಸಾಧ್ವಿಯು ಅವನ ಅಪ್ಪಣೆಯನ್ನು ಪಡೆದು ನಿಯಮಾನುಸಾರ ಶೈವೇಂದ್ರನಿಗೆ ನಮಸ್ಕಾರಮಾಡಿ ನಿತ್ಯವೂ ಆದರದಿಂದ ಪಾರ್ಥಿವಲಿಂಗಗಳನ್ನು ಪೂಜೆ ಮಾಡುತ್ತಿದ್ದಳು. ॥೩೮೭-೩೮೮॥

ಏತಾದೃಶೀಂ ಸುಶೀಲಾಂ ತಾಂ ದೃಷ್ಟ್ವಾ ಸರ್ವೇ ಮುನೀಶ್ವರಾಃ ।
ಧನ್ಯೇಯಂ ಪೂಜನೀಯೇತಿ ಸಂವದಂತಃ ಸ್ಥಿತಾಸ್ತದಾ ॥೩೮೯॥

ಏವಂ ಸ್ಥಿತಾ ಸುಶೀಲಾ ಸಾ ತನ್ಮನೋದ್ರಷ್ಟುಮೇಕದಾ ।
ಮಯಾ ಪುರುಷರೂಪೇಣ ಗತಂ ಲೀಲಾವಿಹಾರಿಣಾ ॥೩೯೦॥

ಸಾ ಚಾಪ್ರತಿಮಸೌಂದರ್ಯಂ ಮಯಿ ದೃಷ್ಟ್ವಾ ತತಃ ಪರಂ ।
ನಿಮೀಲಿತಾಕ್ಷಿಯುಗಲಾ ಶಿವಧ್ಯಾನಂ ಚಕಾರಂ ಸಾ ॥೩೯೧॥

ತದೈವೋಕ್ತಮಿದಂ ವಾಕ್ಯಂ ಮಯಾ ಸಾದರಮಂಬಿಕೇ ।
ಕೇನಾಪಿ ತನ್ಮನೋವೃತ್ತಿರನ್ಯಥಾ ನ ಬಭೂವ ಹಿ ॥೩೯೨॥

ತವೇದಂ ಯೌವನಂ ಬಾಲೇ ಪರಿಪೂರ್ಣಮಿತಿ ಸ್ಫುಟಂ ।
ಈದೃಶಂ ಯೌವನಂ ಕ್ವಾಪಿ ನ ದೃಷ್ಟಂ ಸರ್ವಥಾ ಮಯಾ ॥೩೯೩॥

ತವೈವ ಮುಖಚಂದ್ರೋऽಯಂ ಪರಿಪೂರ್ಣಕಲಃ ಸದಾ ।
ಸ ತು ಕ್ಷೀಣಕಲಶ್ಚಂದ್ರಃ ನ ತು ಪೂರ್ಣಃ ಕದಾಚನ ॥೩೯೪॥

---

ಈರೀತಿಯಾಗಿ ಸಾಧುಸ್ವಭಾವದಿಂದ ಕೂಡಿರುವ ಇವಳನ್ನು ನೋಡಿ ಮುನಿ ಶ್ರೇಷ್ಠರೆಲ್ಲಾ ಇವಳೇ ಧನ್ಯಳು, ಪೂಜಾರ್ಹಳೂ ಆಗಿರುವಳೆಂದು ಹೇಳತೊಡಗಿದರು. ಈರೀತಿಯಾಗಿ ಈ ಸುಶೀಲೆಯಿರುತ್ತಿರಲು ಒಂದುದಿನ ಲೀಲಾವಿಹಾರಿಯಾದ ನಾನು ಇವಳ ಮನಸ್ಸನ್ನು ಪರೀಕ್ಷಿಸಲೋಸುಗ ಪುರುಷರೂಪದಿಂದ ಅಲ್ಲಿಗೆ ಹೋದೆನು. ॥೩೮೯-೩೯೦॥

ಆಗ ಅಸಾಧಾರಣವಾದ ನನ್ನ ಸೌಂದರ್ಯವನ್ನು ನೋಡಿ ಕೂಡಲೇ ಆಕೆಯು ಎರಡು ಕಣ್ಣುಗಳನ್ನೂ ಮುಚ್ಚಿ ಶಿವಧ್ಯಾನಮಾಡತೊಡಗಿದಳು. ಆಗ ನಾನು ಮುಂದೆ ಹೇಳುವಂತೆ ಮಾತನಾಡಿದೆನು. ಅಂಬಿಕೇ, ಆದರಿಂದಲೂ ಅವಳ ಮನಸ್ಸ್ಥೈರ್ಯವು ಕೆಡಲಿಲ್ಲ. ॥೩೯೧-೩೯೨॥

“ಬಾಲಿಕೇ, ಈ ನಿನ್ನ ಸೌಂದರ್ಯವು ಪರಿಪೂರ್ಣವಾಗಿ ಎದ್ದು ತೋರುತ್ತಿರುವುದು. ಈ ರೀತಿಯಾದ ಯವ್ವನವನ್ನು ನಾನೆಲ್ಲಿಯೂ ಖಂಡಿತವಾಗಿಯೂ ಕಾಣಲಿಲ್ಲ. ನಿನ್ನ ಮುಖಚಂದ್ರನೇ ಪರಿಪೂರ್ಣವಾದ ಹದಿನಾರು ಕಲೆಗಳಿಂದಲೂ

ತವೇದಮಕ್ಷಿಯುಗಲಂ ಧಿಕ್ಕೃತಾಮಲಪಂಕಜಂ ।
ಭಾಲಪಟ್ಟನಿಭಂ ವಸ್ತು ನ ಕುತ್ರಾಪ್ಯಸ್ತಿ ವಸ್ತುತಃ ॥೩೯೫॥

ತವ ಸೀಮಂತರೇಖೇಯಂ ಕೇನ ವಾ ಸದೃಶೀ ಭವೇತ್ ।
ಭ್ರಮಾದ್ಭ್ರಮರಪುಂಜೋಽಪಿ ಧಿಕ್ಕೃತಃ ಕೇಶಪಾಶತಃ ॥೩೯೬॥

ನಾಸೇಯಂ ತಿಲಪುಷ್ಪಾಣಿ ಧಿಕ್ಕರೋತ್ಯೇವ ಸರ್ವಥಾ ।
ಕುಚಯುಗ್ಮಮಿದಂ ಯತ್ತೇ ತದ್ದೃಷ್ಟಂ ನ ಕದಾಚನ ॥೩೯೭॥

ತ್ರಿವಲ್ಯುಪರಿ ನೀಲೇಯಂ ರೋಮಾವಲ್ಯಪಿ ರಾಜತೇ ।
ಅಯಂ ಜಘನದೇಶೋಽಪಿ ಬಾಲೇ ಸರ್ವಸುಖಪ್ರದಃ ॥೩೯೮॥

ತ್ವದ್ರೂಪಸದೃಶಂ ರೂಪಂ ನಾನುಭೂತಂ ಮಯಾ ಧ್ರುವಂ ।
ರಂಭೋರ್ವಶ್ಯಾದಿರೂಪಂ ಚ ನೇದೃಶಂ ಹಿ ಭವಿಷ್ಯತಿ ॥೩೯೯॥

---

ಕೂಡಿರುವನು. ಆ ಪ್ರಸಿದ್ಧಚಂದ್ರನಾದರೋ ಯಾವಾಗಲೂ ಕ್ಷಯಹೊಂದುವ ಸ್ವಭಾವವುಳ್ಳವನು. ಅವನು ಎಂದಿಗೂ ಪೂರ್ಣನೆನಿಸಲಾರನು. ॥೩೯೩-೩೯೪॥

ಈ ನಿನ್ನ ಎರಡು ಕಣ್ಣುಗಳು ನಿರ್ಮಲವಾದ ಕಮಲಗಳನ್ನೂ ಧಿಕ್ಕರಿಸಿವೆ. ನಿನ್ನ ಹಲಗೆಯಂತಿರುವ ಹಣೆಗೆ ಸಮಾನವಾದ ವಸ್ತುವು ನಿಜವಾಗಿ ಬೇರೊಂದಿಲ್ಲ. ನಿನ್ನ ಬೈತಲೆರೇಖೆಯು ಯಾವುದರ ಸಾಮ್ಯವನ್ನೂ ಹೊಂದಲಾರದು. ಭ್ರಾಂತಿಯಿಂದ ದುಂಬಿಗಳ ಸಮೂಹವೂ ಸಹ ನಿನ್ನ ಕೂದಲಿನ ರಾಶಿಯನ್ನು ನೋಡಿ ಕಾಂತಿಯಲ್ಲಿ ಧಿಕ್ಕರಿಸಲ್ಪಡುವುದು. ॥೩೯೫-೩೯೬॥

ಈ ನಿನ್ನ ಮೂಗು ಎಳ್ಳು ಹೂವನ್ನು ತಿರಸ್ಕಾರಮಾಡುತ್ತಿರುವುದು. ನಿನ್ನ ಈ ಕುಚಗಳೆರಡಕ್ಕೆ ಸಮಾನವಾದುದನ್ನೆಲ್ಲಿಯೂ ಕಾಣೆನು. ತ್ರಿವಲಿಗಳ ಮೇಲೆ ಈ ರೋಮಪಂಕ್ತಿಗಳಾದರೋ ಪ್ರಕಾಶಿಸುತ್ತಿರುವುವು. ಬಾಲೆ, ಈ ಜಘನಪ್ರದೇಶವನ್ನು ನೋಡಿದರೆ ಇದು ಸಕಲ ಸೌಖ್ಯಗಳಿಗೂ ನಿಧಿಯಂತೆ ತೋರುತ್ತಿರುವುದು. ॥೩೯೭-೩೯೮॥

ನಿನ್ನ ರೂಪಿಗೆ ಸಮನಾದ ಸೌಂದರ್ಯವನ್ನು ನಾನೆಲ್ಲಿಯೂ ಖಂಡಿತವಾಗಿ ನನ್ನ ಅನುಭವದಲ್ಲಿ ಕಂಡಿಲ್ಲ. ರಂಭೆ, ಊರ್ವಶೀ ಮುಂತಾದ ಅಪ್ಸರೆಯರ ರೂಪವೂ ಹೀಗಿಲ್ಲ. ಎಲೌ ಬಾಲಿಕೇ, ಹೀಗಿರುವಾಗ ಇದೇನು ನೀನು ಮಾಡುತ್ತಿರು

ಏವಂ ಸತಿ ತ್ವಯಾ ಬಾಲೇ ಕಿಮಿದಂ ಕ್ರಿಯತೇ ವದ ।
ವರ ಮಾಂ ಸುಂದರಂ ಶೀಘ್ರಂ ವಿಲಂಬಂ ಮಾಕುರು ಪ್ರಿಯೇ ॥೪೦೦॥

ಧನಧಾನ್ಯಾದಿಸಂಪತ್ತಿರ್ಭೂರಿಯಸೀ ಮಮ ವಿದ್ಯತೇ ।
ಸಾಧನಾನಿ ಬಹೂನ್ಯೇವ ಭೋಗಾರ್ಥಂ ಸಂತಿ ಮದ್ಗೃಹೇ ॥೪೦೧॥

ಈದೃಶಂ ಯೌವ್ವನಂ ಪ್ರಾಪ್ಯ ಭೋಗೇಚ್ಛಾ ಕ್ರಿಯತೇ ಯದಿ ।
ತದಿದಂ ಯೌವನಂ ಧನ್ಯಂ ತ್ವನ್ಯಥಾ ತ್ವನ್ಯಥಾ ಧ್ರುವಂ ॥೪೦೨॥

ಇತ್ಯುಕ್ತಂ ಮದ್ವಚಃ ಶ್ರುತ್ವಾ ತಯೈವಂ ಸಮುದೀರಿತಂ ।
ತದಾ ನೇತ್ರೇ ನಿಮೀಲ್ಯೈವ ಪಶ್ಯಂತ್ಯಾ ಪೂಜಿತಂ ಶಿವೇ ॥೪೦೩॥

॥ ಸುಭಗಾ ಉವಾಚ ॥

ಮೈವಂ ವದಸ್ವ ವಿಪ್ರೇಂದ್ರ ಸಂಸಾರೇ ಮಾ ರತಿಂ ಕುರು ।
ಸಂಸಾರೋನ್ಮೂಲನಾಯೇಹ ಕುರು ಶಂಕರಪೂಜನಂ ॥೪೦೪॥

---

ವುದು? ಇದುಚಿತವೇ! ಸುಂದರನಾದ ನನ್ನನ್ನು ಜಾಗ್ರತೆಯಾಗಿ ವರಿಸು. ಪ್ರಿಯೇ, ಕೊಂಚವೂ ತಡಮಾಡಬೇಡ. ॥೩೯೯-೪೦೦॥

ನನಗೆ ಧನ, ಧಾನ್ಯ ಮುಂತಾದ ಐಶ್ವರ್ಯವು ಬೇಕಾದಷ್ಟಿರುವುದು. ಉಪಭೋಗಿಸಲು ಯೋಗ್ಯವಾದ ಅನೇಕ ಸಲಕರಣೆಗಳಿಗೆ ನನ್ನ ಮನೆಯಲ್ಲೇನೂ ಕೊರತೆಯೇ ಇಲ್ಲ. ಈರೀತಿಯಾದ ಯೌವನವಿರುವಾಗ ನೀನು ನನ್ನೊಡನೆ ಉಪಭೋಗಿಸಲಪೇಕ್ಷಿಸುವೆಯಾದರೆ ನಿಜವಾಗಿಯೂ ಈ ನಿನ್ನ ಯೌವನವು ಧನ್ಯವೇ ಸರಿ. ಇಲ್ಲದಿದ್ದರೆ ಇದರಿಂದೇನೂಪ್ರಯೋಜನವೇ ನಿನಗೆ ದೊರೆಯುವುದಿಲ್ಲ." ॥೪೦೧-೪೦೨॥

ಗಿರಿಜೇ, ಹೀಗೆ ನುಡಿದ ನನ್ನ ಮಾತುಗಳನ್ನು ಕೇಳಿ ಆ ಸುಭಗಾದೇವಿಯು ಕಣ್ಣುಗಳನ್ನು ಮುಚ್ಚಿಕೊಂಡೇ ಪೂಜೆಮಾಡುತ್ತಾ ನನ್ನನ್ನು ನೋಡಿ ಹೀಗೆ ನುಡಿದಳು. ॥೪೦೩॥

"ಅಯ್ಯಾ ಬ್ರಾಹ್ಮಣೋತ್ತಮನೇ, ಹೀಗೆ ನುಡಿಯಬೇಡ. ಸಂಸಾರದ ವಿಷಯದಲ್ಲಿ ನೀನು ಅಪೇಕ್ಷೆಪಡಬೇಡ. ಈ ಜನ್ಮದಲ್ಲಿ ಈ ಸಂಸಾರಬಂಧನವನ್ನು ಕಳೆದುಕೊಳ್ಳುವುದಕ್ಕೋಸ್ಕರವೇ ನೀನೂ ಶಂಕರನನ್ನು ಪೂಜೆಮಾಡು. ಮನುಷ್ಯನು ಸಾರ

ಅಸಾರತರಸಂಸಾರಪ್ರಚಾರಚತುರೋ ನರಃ ।
ಸ್ಮರ ಸ್ಮರ ಹರಂ ನಿತ್ಯಂ ಸ್ಮರಂ ಮಾಸ್ಮರ ಮಾಸ್ಮರ ॥೪೦೫॥

ಅಧೀತವೇದಶಾಸ್ತ್ರಾಣಾಂ ಕಥಮೇತಾದೃಶೀ ಮತಿಃ ।
ಅಜ್ಞಾನೇನ ರಥಂ ಜ್ಞಾನಮಾವೃತಂ ಸ್ಫುರದುಜ್ಜ್ವಲಂ ॥೪೦೬॥

ದುರ್ಲಭಂ ಪ್ರಾಪ್ಯ ಜನ್ಮೇದಂ ಬ್ರಾಹ್ಮಣ್ಯಂ ಮತಿಸತ್ತಮ ।
ಕಥಂ ನಾರಾಧ್ಯತೇ ನಿತ್ಯಂ ದೇವದೇವೋ ಮಹೇಶ್ವರಃ ॥೪೦೭॥

ನಿತ್ಯಮಸ್ಮಿನ್ನಪಿ ಕ್ಷೇತ್ರೇ ಸ್ಥಿತ್ವಾ ಸ್ಮರಹರೋ ಹರಃ ।
ನಾರಾಧ್ಯತೇ ಕಥಂ ಭಕ್ತ್ಯಾ ವಿಹಾಯ ವಿಷಯೇ ರತಿಂ ॥೪೦೮॥

ಭಜ ನಿತ್ಯಂ ಪ್ರಯತ್ನೇನ ಸಾಂಬಂ ಸಂಸಾರಮೋಚಕಂ ।
ಅನರ್ಥಹೇತುಸಂಸಾರೇ ನ ಕುರುಷ್ವ ರತಿಂ ದ್ವಿಜ ॥೪೦೯॥

---

ವಿಲ್ಲದ ಈ ಸಂಸಾರವನ್ನು ಪ್ರಚಾರಮಾಡುವುದರಲ್ಲಿ ತುಂಬಾ ನಿಪುಣನು. ಆದ್ದರಿಂದ ನಿತ್ಯವೂ ಆ ಪರಮೇಶ್ವರನನ್ನು ಸ್ಮರಣೆಮಾಡು. ಶಿವಶತ್ರುವಾದ ಮನ್ಮಥನನ್ನು ಸ್ಮರಿಸಬೇಡ. ॥೪೦೪-೪೦೫॥

ವೇದಶಾಸ್ತ್ರಗಳನ್ನಧ್ಯಯನ ಮಾಡಿದವರಿಗೂ ಇದೇನು ಇಂತಹ ಬುದ್ಧಿ ಯುಂಟಾಗುವುದು? ಅಜ್ಞಾನದಿಂದ ಉಜ್ವಲವಾಗಿ ಪ್ರಕಾಶಿಸುತ್ತಿದ್ದ ದಿವ್ಯಜ್ಞಾನ ವೇನಾದರೂ ಮುಚ್ಚಿಹೋಯಿತೇ. ಅಯ್ಯ ಮೇಧಾವಿಯೇ, ಬಹು ಕಷ್ಟಸಾಧ್ಯವಾದ ಈ ಬ್ರಾಹ್ಮಣ್ಯವನ್ನು ಹೊಂದಿಯೂ ನಿತ್ಯವೂ ದೇವಾದಿದೇವನಾದ ಆ ಮಹೇಶ್ವರ ನನ್ನು ಹೇಗೆ ಪೂಜೆಮಾಡದಿರುವೆ? ॥೪೦೬-೪೦೭॥

ಅಯ್ಯ ಬ್ರಾಹ್ಮಣನೇ, ಇದೇ ಕ್ಷೇತ್ರದಲ್ಲಿ ವಾಸಮಾಡುತ್ತಾ ನಿತ್ಯವೂ ಮನ್ಮಥ ನನ್ನು ನಾಶಮಾಡಿದ ಆ ಮಹೇಶ್ವರನನ್ನು, ವಿಷಯಸುಖಗಳಲ್ಲಿ ಅಪೇಕ್ಷೆಯನ್ನು ತೊರೆದು, ಭಕ್ತಿಯಿಂದ ಪೂಜೆಮಾಡು. ಅನರ್ಥಗಳಿಗೆ ಕಾರಣಭೂತವಾಗಿರುವ ಈ ಸಂಸಾರದಲ್ಲಿ ಅಪೇಕ್ಷೆಯಿಡದೇ ನಿತ್ಯವೂ ಈ ಸಂಸಾರಬಂಧನವನ್ನು ನೀಗುವ ಅಂಬಿಕಾರಮಣನನ್ನು ನಿಯಮದಿಂದ ಭಜನೆಮಾಡು. ॥೪೦೮-೪೦೯॥

ಸ್ಮರ ನಿಃಸಾರಸಂಸಾರತರುಮೂಲಮನಾತುರಃ ।
ಸ್ಮರಹಾರೀ ಪುರಾರೀ ಯಸ್ತಮಾರಾಧಯ ಸಾದರಂ ॥೪೧೦॥

ಸಂಸಾರಘೋರಕೂಪೇಷು ಪತಿತ್ವಾಪಿ ಮುಹುರ್ಮುಹುಃ ।
ಪುನಃ ಸಂಸಾರ ಕೂಪೇಷು ಪತನೇಚ್ಛಾ ಕಥಂ ತವ ॥೪೧೧॥

ಅಯುಕ್ತಂ ಕ್ರಿಯತೇ ಬ್ರಹ್ಮನ್ಯುಕ್ತಂ ನ ಕಿಮಪಿ ಧ್ರುವಂ ।
ಕಥಂ ಸಂಸಾರವೃದ್ಧ್ಯರ್ಥಂ ಯತ್ನೋಽದ್ಯ ಕ್ರಿಯತೇ ತ್ವಯಾ॥೪೧೨॥

ಅತ್ಯಂತಂ ದುರ್ಲಭಂ ಕ್ಷೇತ್ರಮಿದಂ ಬ್ರಹ್ಮಾದಿಸೇವಿತಂ ।
ಅತ್ರ ಸ್ಥಿತ್ವಾಪಿ ಸತತಂ ಕಥಂ ನಾರಾಧ್ಯತೇ ಶಿವಃ ॥೪೧೩॥

ನಿತ್ಯಂ ಶ್ರೀಕಾಲಹಸ್ತೀಶಂ ಸುವರ್ಣಮುಖರೀಜಲೈಃ ।
ಅಭಿಷಿಚ್ಯ ಪ್ರಯತ್ನೇನ ಬಿಲ್ವಪತ್ರೈಃ ಸಮರ್ಚಯ ॥೪೧೪॥

---

ಸಾರವಿಲ್ಲದ ಈ ಸಂಸಾರವೆಂಬ ಮರಕ್ಕೆ ಮೃತ್ಯುಪ್ರಾಯನಾಗಿರುವ ಆ ಮಹಾದೇವನನ್ನು ಸಾವಧಾನನಾಗಿ ಸ್ಮರಣೆಮಾಡು. ಮನ್ಮಥನನ್ನು ನಾಶಮಾಡಿದವನೂ, ತ್ರಿಪುರಾಸುರರ ಶತ್ರುವೂ ಆದ ಆ ಮಹೇಶ್ವರನನ್ನು ಆದರದಿಂದ ಪೂಜಿಸು. ಸಂಸಾರವೆಂಬ ಭಯಂಕರವಾದ ಬಾವಿಗಳಲ್ಲಿ ಪದೇಪದೇ ಬಿದ್ದಿದ್ದರೂ ತಿರುಗಿ ಈ ಸಂಸಾರ ರೂಪವಾದ ಬಾವಿಗೇ ಏಕೆ ಬೀಳಲು ಪ್ರಯತ್ನಿಸುತ್ತಿರುವೆ? ನೀನೇ ಹೇಳು. ॥೪೧೦-೪೧೧॥

ಅಯ್ಯ ಬ್ರಾಹ್ಮಣನೇ, ನೀನು ಈಗ ಹೇಳುತ್ತಿರುವುದು ಖಂಡಿತವಾಗಿಯೂ ಅಯುಕ್ತವೇ ಹೊರತು ಕೊಂಚವೂ ಇದರಲ್ಲಿ ಸತ್ಯಾಂಶವಿಲ್ಲ. ಈ ಸಂಸಾರವನ್ನು ಇನ್ನೂ ಹೆಚ್ಚಿಸಿಕೊಳ್ಳುವುದಕ್ಕೋಸ್ಕರ ಇದೇಕೆ ನೀನು ಪ್ರಯತ್ನಮಾಡುತ್ತಿರುವೆ? ಬ್ರಹ್ಮಾದಿದೇವತೆಗಳಿಂದಲೂ ಸೇವಿಸಲ್ಪಡುತ್ತಿರುವ ಈ ಕ್ಷೇತ್ರವು ತುಂಬಾ ದುರ್ಲಭವಾದುದು. ಇಲ್ಲಿಗೆ ಬಂದರೂ ದುಃಖನಾಶಕವಾದ ಶಿವನನ್ನು ಪೂಜೆಮಾಡದಿರಲು ಹೇಗೆ ನಿನಗೆ ಮನಸ್ಸುಂಟಾಯಿತು? ॥೪೧೨-೪೧೩॥

ನಿತ್ಯವೂ ಈ ಕಾಲಹಸ್ತೀಶ್ವರನನ್ನು ಸುವರ್ಣಮುಖರೀನದಿಯ ನೀರಿನಿಂದ ಅಭಿಷೇಕಮಾಡಿ, ನಿಯಮದಿಂದ ಬಿಲ್ವದಳಗಳನ್ನು ತಂದು ಆ ಮಹೇಶ್ವರನನ್ನು ಪೂಜಿಸು. ಅನಂತರ ಪ್ರದಕ್ಷಿಣೆ ನಮಸ್ಕಾರ ಮುಂತಾದವುಗಳನ್ನು ಮಾಡಿ ಆ ಸದಾ

ಪ್ರದಕ್ಷಿಣನಮಸ್ಕಾರೈಃ ಪ್ರೀಣಯಸ್ವ ಸದಾಶಿವಂ ।
ಜಪ ಪಂಚಾಕ್ಷರಂ ಶೈವಂ ಸಂಸಾರೋನ್ಮೂಲಕಾರಣಂ ॥೪೧೫॥

ಶರೀರಂ ಸಬಲಂ ತಿಷ್ಠತ್ಯಧುನಾ ಯೌವನೇ ತವ ।
ಸಹಸ್ರಂ ಕುರು ಸಾಷ್ಟಾಂಗಾನ್ಪ್ರಣಾಮಾಂಛಂಭವೇ ಮುದಾ ॥೪೧೬॥

ಬಲಂ ಯಾವಚ್ಛರೀರೇಽಸ್ತಿ ತಾವಚ್ಛಂಕರಮರ್ಚಯ ।
ನಿರ್ಬಲೇನ ಶರೀರೇಣ ಶಂಕರಾರ್ಚಾ ಕಥಂ ಭವೇತ್ ॥೪೧೭॥

ಶಂಕರಶ್ಚೇತ್ಕೃಪಾಸಿಂಧುರಧುನಾ ಪೂಜ್ಯತೇ ಸದಾ ।
ನಿಃಸಾರತರಸಂಸಾರತರುನಾಶೋ ಭವಿಷ್ಯತಿ ॥೪೧೮॥

ಪುರುಷಾರ್ಥೋಽಯಮೇವೈಕಃ ಪುರುಷಾಣಾಂ ದ್ವಿಜನ್ಮನಾಂ ।
ಯಃ ಸ್ವಭಾವೋ ಮಹಾದೇವಪದಪಂಕಜಸಾತ್ಕೃತಃ ॥೪೧೯॥

ಪೂಜಿತಃ ಸಂಸ್ಮೃತೋ ವಾಪಿ ಯೋ ದದಾತಿ ಪರಂ ಪದಂ ।
ತಮೇವ ದೇವದೇವೇಶಂ ಮಹೇಶಂ ಶರಣಂ ವ್ರಜ ॥೪೨೦॥

---

ಶಿವನಿಗೆ ಸಂತೋಷವನ್ನುಂಟುಮಾಡು. ಮತ್ತು ಈ ಸಂಸಾರಬಂಧವನ್ನು ತೊಲಗಿಸ ತಕ್ಕ ಶಿವಪಂಚಾಕ್ಷರಮಂತ್ರವನ್ನು ನಿತ್ಯವೂ ಜಪಮಾಡು. ॥೪೧೪-೪೧೫॥

ಈ ನಿನ್ನ ಶರೀರವು ಇನ್ನೂ ಯೌವನದಿಂದ ಕೂಡಿರುವುದರಿಂದ ಆ ಶಂಭುವಿಗೆ ಸಾವಿರಬಾರಿ ಸಾಷ್ಟಾಂಗ ಪ್ರಣಾಮವನ್ನು ಸಂತೋಷದಿಂದ ಮಾಡು. ಶರೀರದಲ್ಲಿ ನಿನಗೆ ಬಲವಿರುವವರೆಗೆ ಆ ಶಂಕರನನ್ನು ಪೂಜೆಮಾಡು. ಈ ಶರೀರದಲ್ಲಿ ಬಲವೇ ಇಲ್ಲದೇ ಹೋದಾಗ ಆ ಶಂಕರನ ಪೂಜೆಯನ್ನು ಹೇಗೆ ತಾನೇ ಮಾಡಲು ಸಾಧ್ಯವಾದೀತು ? ॥೪೧೬-೪೧೭॥

ಈಗ ದಯಾಸಮುದ್ರನಾದ ಶಂಕರನನ್ನು ಯಾವಾಗಲೂ ಪೂಜೆಮಾಡಿದರೆ ನಿಃಸಾರವಾದ ಈ ಸಂಸಾರವೆಂಬ ವೃಕ್ಷವು ನಾಶವಾಗುವುದು. ಬ್ರಾಹ್ಮಣರಿಗೆ ಆ ಮಹಾದೇವನ ಪಾದಕಮಲಗಳ ಸೇವೆಯೆಂಬುದೊಂದೇ ಪುರುಷಾರ್ಥವಾಗಿರುವುದು. ॥೪೧೮-೪೧೯॥

ತನ್ನ ಪೂಜೆ ಅಥವಾ ಸ್ಮರಣೆ ಇವುಗಳನ್ನು ಮಾಡುವುದರಿಂದಲೇ ಉತ್ತಮವಾದ ಸದ್ಗತಿಯನ್ನು ಕೊಡುವ ಸಕಲ ದೇವತೆಗಳಿಗೂ ಅಧಿಪತಿಯಾದ ಆ ಮಹೇ

ಯಥೇದಾನೀಂ ಮಯಿ ಪ್ರೀತಿಸ್ತಥಾ ಪ್ರೀತಿಂ ಸದಾಶಿವೇ ।
ಕುರು ಯತ್ನೇನ ವಿಪ್ರೇಂದ್ರ ತಾಂ ಪ್ರೀತಿಂ ಮಯಿ ಮಾಕುರು॥೪೨೧॥

ಮಯಿ ಚೇತ್ಕ್ರಿಯತೇ ಪ್ರೀತಿಃ ಸುಖಮಲ್ಪಂ ಭವಿಷ್ಯತಿ ।
ಸುಖಂ ಚೇಜ್ಞಾತಮತ್ಯಲ್ಪಮಂತೇ ನರಕಸಾಧನಂ ॥೪೨೨॥

ಪ್ರೀತಿಶ್ಚೇತ್ಕ್ರಿಯತೇ ನಿತ್ಯಂ ಶಂಕರೇ ಭಕ್ತಶಂಕರೇ ।
ತದಾ ಪ್ರಾಪ್ಯಂ ತ್ವಯಾ ವಿಪ್ರ ಸುಖಮಕ್ಷಯಮಸ್ಪಹಂ ॥೪೨೩॥

ಜನಾ ನಿಕ್ಷೇಪಲಾಭಾರ್ಥಂ ಯತ್ನಂ ಕುರ್ವಂತಿ ಸಾದರಂ ।
ತೇ ತು ಸ್ಫಟಿತಕಾಚಾರ್ಥಂ ಯತ್ನಂ ಕುರ್ವಂತಿ ಕಿಂ ವದ ॥೪೨೪॥

ಶಂಕರಃ ಸುಖನಿಕ್ಷೇಪಾನ್ಸ್ವಭಕ್ತೇಭ್ಯೋ ದದಾತಿ ಸಃ ।
ಅತಸ್ತ್ವಂ ಸುಖನಿಕ್ಷೇಪಾನ್ಲಭ ಶಂಕರಪೂಜಯಾ ॥೪೨೫॥

---

ಶ್ವರನನ್ನು ಶರಣುಹೊಂದು. ಅಯ್ಯ ಬ್ರಾಹ್ಮಣೋತ್ತಮ! ಈಗ ನನ್ನಲ್ಲಿಟ್ಟಿರುವ ಪ್ರೀತಿಯನ್ನು ಆ ಸದಾಶಿವನಲ್ಲಿ ತೋರಿಸಿ ಧನ್ಯನಾಗು, ನನ್ನಲ್ಲಿ ಮಾತ್ರ ಪ್ರೀತಿ ಯಿಡಬೇಡ. ॥೪೨೦-೪೨೧॥

ನನ್ನಲ್ಲಿ ನೀನು ಪ್ರೀತಿಯಿಡುವುದಾದರೆ ಅತ್ಯಲ್ಪ ಸುಖವು ಮಾತ್ರ ಉಂಟಾ ಗುವುದು. ಹಾಗೆ ಕೊಂಚ ಸುಖವುಂಟಾದರೂ ಕೊನೆಯಲ್ಲಿ ನರಕವು (ದುಃಖವು) ಮಾತ್ರ ತಪ್ಪುವುದಿಲ್ಲ. ಭಕ್ತರಿಗೆ ಮಂಗಳವನ್ನುಂಟುಮಾಡುವ ಆ ಶಂಕರನಲ್ಲಿ ಅನ ವರತವೂ ಪ್ರೀತಿಯಿರುವುದಾದರೆ ಆಗ ನಿನಗೆ ಯಾವಾಗಲೂ ನಾಶವಿಲ್ಲದ ಶಾಶ್ವತವಾದ ಸುಖವುಂಟಾಗುವುದೆಂದು ತಿಳಿ. ॥೪೨೨-೪೨೩॥

ಜನಗಳು ಹೂಳಿಟ್ಟ ನಿಧಿನಿಕ್ಷೇಪಾದಿಗಳನ್ನು ಹೊಂದಲು ತುಂಬಾ ಆದರದಿಂದ ಪ್ರಯತ್ನಿಸುವರು. ಇವರೆಲ್ಲರೂ ಒಡೆದ ಗಾಜಿನ ಚೂರನ್ನು ಹೊಂದಲು ಬಯಸಿ ದಂತಾಗುವುದಿಲ್ಲವೇ ನೀನೇ ಹೇಳು. (ಈ ದುಡ್ಡಿನಿಂದಲೂ ತೊಂದರೆಯೇ ಹೊರತು ಸುಖಲೇಶವಿಲ್ಲ. ಹಾಗಿರುವಾಗ ಗಾಜಿನ ಚೂರಿಗೂ ಸ್ತ್ರೀಗೂ ಆಸೆಪಡುವವನು ಮೂಢನೆಂದು ಹೀಗೆ ಹೇಳಿದೆ) ಆ ಶಂಕರನಾದರೋ ಸುಖರೂಪವಾದ ನಿಕ್ಷೇಪ ಗಳನ್ನು ತನ್ನ ಭಕ್ತರಿಗೆ ಕೊಡಲು ಸಿದ್ಧನಾಗಿರುವನಾದ್ದರಿಂದ ನೀನೂ ಆ ಶಂಕರ ನನ್ನು ಪೂಜೆಮಾಡಿ ಸುಖಪ್ರದವಾದ ಮುಕ್ತಿನಿಕ್ಷೇಪಗಳನ್ನು ಹೊಂದಲು ಪ್ರಯತ್ನ ಪಡು. ॥೪೨೪-೪೨೫॥

ಯಂ ಪ್ರಾಪ್ಯ ನ ನಿವರ್ತಂತೇ ಯೋಗಿನೋ ಯತವೃತ್ತಯಃ ।
ತಮೇವ ಭಜ ದೇವೇಶಂ ದೇವದೇವಮುಮಾಪತಿಂ ॥೪೨೬॥

ಸಾಂಬಮದ್ವಯಮಾನಂದಂ ಲಿಂಗರೂಪಂ ಭಜ ಪ್ರಭುಂ ।
ತಸ್ಯೈವ ಭಜನೇನ ತ್ವಂ ತಂ ಪ್ರಭುಂ ಪ್ರಾಪ್ಸ್ಯಸಿ ಧ್ರುವಂ ॥೪೨೭॥

ಪ್ರತ್ಯಗಾತ್ಮಾ ಸರ್ವಸಾಕ್ಷೀ ಲಿಂಗರೂಪೇಣ ತಿಷ್ಠತಿ ।
ತಮರ್ಚಯ ಪ್ರಯತ್ನೇನ ಭುಕ್ತಿಮುಕ್ತಿಪ್ರದಾಯಕಂ ॥೪೨೮॥

ಉಮಾಸಹಾಯಮಾನಂದಂ ಯಂ ಪ್ರೀತ್ಯಾ ನಾರ್ಚಯಿಷ್ಯತಿ ।
ನ ತಸ್ಯಾನಂದಲೇಶೋಽಪಿ ಸತ್ಯಂ ಸತ್ಯಂ ನ ಸಂಶಯಃ ॥೪೨೯॥

ಸರ್ವಾಂತರಗತಂ ಶರ್ವಂ ಸಾಕ್ಷಿಣಂ ಸರ್ವಕರ್ಮಣಾಂ ।
ನಾರಾಧಯಸಿ ವಿಪ್ರೇಂದ್ರ ಕಥಂ ವಾ ಸಾವಧಾನತಃ ॥೪೩೦॥

---

ಜಿತೇಂದ್ರಿಯರಾದ ಯೋಗಿಗಳು ಯಾರನ್ನು ಹೊಂದಿ ಪುನರ್ಜನ್ಮಹೊಂದಲಾರರೋ ಅಂತಹ ದೇವಾಧಿಪತಿಯೂ ದೇವದೇವನೂ ಆದ ಉಮಾರಮಣನನ್ನು ನೀನೂ ಸೇವಿಸು. ಅದ್ವಿತೀಯನೂ, ಆನಂದಸ್ವರೂಪನೂ ಲಿಂಗಾಕಾರವುಳ್ಳವನೂ ಸರ್ವಸಮರ್ಥನೂ ಆದ ಆ ಅಂಬಿಕಾರಮಣನನ್ನು ಸೇವೆಮಾಡು. ಅವನ ಭಜನೆಯಿಂದಲೇ ನಿನಗೆ ಆ ಪ್ರಭುವಿನ ಸಾನ್ನಿಧ್ಯವು ಖಂಡಿತವಾಗಿ ದೊರೆಯುವುದು. ||೪೨೬-೪೨೭||

ಮತ್ತೊಬ್ಬರಿಗೆ ಗೋಚರವಾಗದಂತಿರುವವನೂ, ನಾವು ಮಾಡುವ ಕರ್ಮಗಳನ್ನೆಲ್ಲಾ ಪ್ರತ್ಯಕ್ಷವಾಗಿ ನೋಡುವವನೂ ಆಗಿರುವ ಆ ಪರಮಾತ್ಮನು ಶಿವಲಿಂಗಸ್ವರೂಪದಿಂದಿರುತ್ತಾನೆ. ಸಕಲ ಭೋಗಗಳನ್ನೂ ಮೋಕ್ಷವನ್ನೂ ಕೊಡುವ ಆ ಮಹಾದೇವನನ್ನು ನಿಯಮದಿಂದ ಪೂಜೆಮಾಡು. ಆನಂದಸ್ವರೂಪನಾದ ಆ ಉಮಾರಮಣನನ್ನು ಪ್ರೀತಿಯಿಂದ ಪೂಜೆಮಾಡದೇ ಇರುವವನಿಗೆ ಸತ್ಯವಾಗಿಯೂ ಕೊಂಚವಾದರೂ ಆನಂದವುಂಟಾಗಲಾರದೆಂಬುದರಲ್ಲಿ ಸಂಶಯವೇ ಇಲ್ಲ. ||೪೨೮-೪೨೯||

ಅಯ್ಯ ಬ್ರಾಹ್ಮಣಶ್ರೇಷ್ಠನೇ, ಎಲ್ಲರ ಅಂತರಂಗದಲ್ಲಿಯೂ ನೆಲಸಿರುವವನೂ ಎಲ್ಲಾ ಕರ್ಮಗಳನ್ನೂ ನೋಡುತ್ತಿರುವವನೂ ಆದ ಆ ಶರ್ವನನ್ನು (ಪ್ರಳಯ

ನ ಪಶ್ಯಂತಿ ಮಹಾದೇವಂ ಸರ್ವಸಾಕ್ಷಿಣಮೀಶ್ವರಂ ।
ಅತ ಏವ ನ ಕುರ್ವಂತಿ ಮೂರ್ಖಾಃ ಶಂಕರಪೂಜನಂ ॥೪೩೧॥

ಅನಾಯಾಸೇನ ಸಂಪ್ರಾಪ್ಯಾ ಮುಕ್ತಿರ್ಯತ್ಪೂಜಯಾ ದ್ವಿಜ ।
ತಮರ್ಚಯ ಪ್ರಯತ್ನೇನ ಬಿಲ್ವಪತ್ರೈರ್ವನಸ್ಥಿತೈಃ ॥೪೩೨॥

ಸುವರ್ಣಮುಖರೀತೋಯೈರ್ಬಿಲ್ವಪತ್ರೈಶ್ಚ ಶಂಕರಂ ।
ಪೂಜಯಸ್ವ ಲಭಸ್ವೇಶಾದ್ಭುಕ್ತಿಮುಕ್ತೀ ದ್ವಿಜೋತ್ತಮ ॥೪೩೩॥

ಯಮರ್ಚಯಂತಿ ದೇವಾಶ್ಚ ತಮರ್ಚಯ ಮಹೇಶ್ವರಂ ।
ಯಂ ಭಜಂತಿ ಮುನೀಂದ್ರಾಶ್ಚ ತಂ ಭಜಸ್ವ ಮಹೇಶ್ವರಂ ॥೪೩೪॥

ನೀಲೋತ್ಪಲಾನಿ ಸಂತ್ಯತ್ರ ತೈರರ್ಚಯ ಸದಾಶಿವಂ ।
ತೈರರ್ಚಿತೋ ಮಹಾದೇವೋ ಭುಕ್ತಿಂ ಮುಕ್ತಿಂ ಪ್ರಯಚ್ಛತಿ ॥೪೩೫॥

---

ಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ಸಂಹಾರಮಾಡುವವನನ್ನು) ಸಾವಧಾನವಾಗಿ ನೀನೇಕೆ ಪೂಜೆಮಾಡುವುದಿಲ್ಲ. ಎಲ್ಲಕ್ಕೂ ಸಾಕ್ಷಿಯಾಗಿರುವ ಆ ಮಹಾದೇವನನ್ನು ತಿಳಿಯದೇ ಇರುವುದರಿಂದಲೇ ಮೂರ್ಖರಾದ ಕೆಲವರು ಆ ಶಂಕರನನ್ನು ಪೂಜೆಮಾಡುವುದಿಲ್ಲ. ॥೪೩೦-೪೩೧॥

ಬ್ರಾಹ್ಮಣನೇ, ಇಹದಲ್ಲಿ ಸಕಲಭೋಗಗಳೂ ಪರದಲ್ಲಿ ಮುಕ್ತಿಯೂ ಅನಾಯಾಸವಾಗಿ ದೊರೆಯುವ ಆ ಮಹಾದೇವನನ್ನೇ ಕಾಡಿನಲ್ಲಿ ಸುಲಭವಾಗಿ ದೊರೆಯುವ ಬಿಲ್ವಪತ್ರೆಗಳನ್ನು ತಂದು ನಿಯಮದಿಂದ ಪೂಜೆಮಾಡು. ಅಲ್ಲದೇ ಆ ಸುವರ್ಣಮುಖರೀ ನದಿಯ ನೀರಿನಿಂದ ಚೆನ್ನಾಗಿ ಅಭಿಷೇಕಮಾಡಿ ಅನಂತರ ಕೋಮಲವಾದ ಬಿಲ್ವಪತ್ರೆಗಳನ್ನು ಪೂಜಿಸಿ ಭುಕ್ತಿಯನ್ನೂ, ಮುಕ್ತಿಯನ್ನೂ ಆ ಮಹೇಶ್ವರನ ಅನುಗ್ರಹದಿಂದ ಪಡೆಯುವನಾಗು. ॥೪೩೨-೪೩೩॥

ದೇವತೆಗಳು ಪೂಜಿಸುವ ಆ ಮಹೇಶ್ವರನನ್ನು ನೀನೂ ಪೂಜೆಮಾಡು. ಮುನಿಶ್ರೇಷ್ಠರು ಭಜನೆಮಾಡುವ ಆ ಮಹಾದೇವನನ್ನೇ ನೀನೂ ಸೇವಿಸು. ಇಲ್ಲಿ ಯಥೇಚ್ಛವಾಗಿ ಕನ್ನೈದಿಲೆಗಳು ಬೆಳದಿರುವುವು. ಅವುಗಳನ್ನು ತಂದು ಆ ಸದಾಶಿವನನ್ನು ಪೂಜೆಮಾಡು. ಕನ್ನೈದಿಲೆಗಳಿಂದ ಪೂಜಿಸಲ್ಪಡುವ ಆ ಮಹಾದೇವನು ನಿನಗೆ ಎಲ್ಲಾ ಸುಖಗಳನ್ನೂ ಮತ್ತು ಮೋಕ್ಷವನ್ನೂ ಕೊಡುತ್ತಾನೆ. ॥೪೩೪-೪೩೫॥

ಪೂಜಯಿತ್ವಾ ಮಹಾದೇವಂ ಜಪ ಪಂಚಾಕ್ಷರಂ ಮುದಾ ।
ತೇನೈವ ಮೋಹವಿಚ್ಛಿತ್ತಿರ್ಭವಿಷ್ಯತಿ ತವ ಧ್ರುವಂ ॥೪೩೬॥

ಶತಶ್ರುತಿಸ್ಮೃತಂ ಪುಣ್ಯಂ ಜಪ ರುದ್ರಂ ದ್ವಿಜೋತ್ತಮ ।
ರುದ್ರಾಧ್ಯಾಯಜಪೇನೇಶಃ ಪ್ರೀಣಾತಿ ಭಗವಾಂಛಿವಃ ॥೪೩೭॥

ಮುಕ್ತಿಪ್ರದಂ ತ್ರಯಂ ಪ್ರಾಹುರ್ಮುನಯಃ ಶಿವತತ್ಪರಾಃ ।
ಲಿಂಗಾರ್ಚನಂ ರುದ್ರಜಪಃ ಪಂಚಾಕ್ಷರಜಪಸ್ತಥಾ ॥೪೩೮॥

ತಾಪತ್ರಯೋಪಶಮನಮೇತತ್ತ್ರಯಮತೋ ದ್ವಿಜ ।
ಕುರು ಯತ್ನೇನ ಸತತಂ ಸಂಸಾರೇ ಮಾ ರತಿಂ ಕುರು ॥೪೩೯॥

ಮಾಮೇಕಾಂತಸ್ಥಿತಾಮೇತಾಂ ವಿಪ್ರ ಮಾ ಮಾವಿಲೋಕಯ ।
ಯಾಹಿ ಯಾಹಿ ಯಥಾಕಾಮಂ ಯತ್ರ ಕುತ್ರಾಪಿ ಸತ್ವರಂ ॥೪೪೦॥

---

ಆ ಮಹಾದೇವನನ್ನು ಪೂಜೆಮಾಡಿ ಸಂತೋಷದಿಂದ ಶಿವಪಂಚಾಕ್ಷರ ಮಂತ್ರವನ್ನು ಜಪಮಾಡು. ಇದರಿಂದಲೇ ನಿಶ್ಚಯವಾಗಿ ನಿನ್ನ ಅಜ್ಞಾನವೆಲ್ಲಾ ನಾಶವಾಗುವುದು. ಅಯ್ಯ ಬ್ರಾಹ್ಮಣೋತ್ತಮನೇ, ನೂರಾರು ಶ್ರುತಿ, ಸ್ಮೃತಿಗಳಲ್ಲಿ ಪುಣ್ಯಕರವೆಂದು ಹೇಳಿರುವ ರುದ್ರಮಂತ್ರವನ್ನು ಜಪಿಸುವನಾಗು. ಭಗವಂತನಾದ ಪರಶಿವನು ನಿನ್ನ ಈ ರುದ್ರಾಧ್ಯಾಯ ಪಾರಾಯಣದಿಂದ ಪ್ರೀತಿಹೊಂದುತ್ತಾನೆ. ॥೪೩೬-೪೩೭॥

ಶಿವಲಿಂಗಪೂಜೆ, ರುದ್ರಮಂತ್ರಜಪ ಮತ್ತು ಶಿವಪಂಚಾಕ್ಷರಜಪ ಈ ಮೂರನ್ನೂ ಶಿವನಲ್ಲಿಯೇ ನಿರತರಾದ ಆ ಮುನಿಗಳು ಮುಕ್ತಿಪ್ರದವಾದವುಗಳೆಂದು ಹೇಳುವರು. ಅಯ್ಯ ವಿಪ್ರನೇ, ಈ ಮೂರೂ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ತಾಪ ತ್ರಯಗಳನ್ನೂ ಹೋಗಲಾಡಿಸುವುವಾದ್ದರಿಂದ ಯಾವಾಗಲೂ ವಿಶೇಷ ನಿಯಮ ದಿಂದ ಆ ಮೂರನ್ನೂ ಆಚರಿಸಿ, ಈ ಸಂಸಾರದಲ್ಲಿ ಅಭಿರುಚಿಯನ್ನು ಬಿಡು. ॥೪೩೮-೪೩೯॥

ಎಲೈ ಬ್ರಾಹ್ಮಣನೇ! ಏಕಾಂತದಲ್ಲಿರುವ ನನ್ನನ್ನು ಒಬ್ಬಂಟಿಗನಾಗಿ ನೀನು ನೋಡಬೇಡ. ಇಲ್ಲಿಂದ ನಿನ್ನ ಮನಸ್ಸಿಗೆ ತೋರಿದ ಕಡೆಗೆ ಕೂಡಲೇ ಹೊರಟು ಹೋಗು. ಏಕಾಂತದಲ್ಲಿ ವಾಸಮಾಡುತ್ತಿರುವ ಸ್ತ್ರೀಯನ್ನು ನೋಡಿ ಸತ್ಪುರುಷ

ಏಕಾಂತವಾಸಿನೀಂ ದೃಷ್ಟ್ವಾ ಸ್ತ್ರಿಯಂ ಸರ್ವೇಽಪಿ ಸಜ್ಜನಾಃ ।
ದೂರತೋ ಯಾಂತಿ ವಿಪ್ರೇಂದ್ರ ತ್ವಯಾ ಕಿಂ ಕ್ರಿಯತೇ ವದ॥೪೪೧॥

ವಿಷಯೇಭ್ಯೋ ನಿವೃತ್ತಾಂ ಮಾಂ ಬಲಾದ್ಯದಿ ವರಿಷ್ಯತಿ ।
ತುಭ್ಯಂ ಶಾಪೋ ಮಯಾ ದೇಯಃ ಸತ್ಯಮತ್ರಾನ್ಯಥಾತು ನ ॥೪೪೨॥

ಏವಂ ವದತಿ ಸಾ ದೇವೀ ದೃಷ್ಟ್ವಾ ಸಂಪೂಜಿತಂ ಶಿವಂ ।
ನಿವಾರಯೈನಮೀಶೇತಿ ಪೂಜಾಂ ಚಕ್ರೇ ಪುನಃ ಪುನಃ ॥೪೪೩॥

ತತಃ ಪರಮಹಂ ದೇವಿ ತಸ್ಮಿನ್ಲಿಂಗೇ ಮದಾತ್ಮಕೇ ।
ಆವಿರಾಸಂ ತ್ವಯಾ ಸಾಕಂ ವಿಷ್ಣುಬ್ರಹ್ಮಾದಿವಂದಿತಃ ॥೪೪೪॥

ತತಸ್ತುಷ್ಟಾವ ಬಹುಧಾ ಸೈವ ಮಾಂ ಸಾಂಬಮುತ್ತಮಂ ।
ವರಂ ಯಯಾಚೇ ಸಾ ಶಂಭೋ ತ್ವಯಿ ಭಕ್ತಿರ್ದೃಢಾಸ್ತ್ವಿತಿ॥೪೪೫॥

---

ರಾದವರೆಲ್ಲರೂ ದೂರಸರಿಯುವರು. ಅಯ್ಯ ಬ್ರಾಹ್ಮಣೋತ್ತಮನೇ! ಹೀಗಿರುವಾಗ ನೀನು ಹೀಗೆ ಮಾತನಾಡುತ್ತಿರುವುದುಚಿತವೇ! ನೀನೇ ಹೇಳು. ||೪೪೦-೪೪೧||

ವಿಷಯ ಸುಖಗಳಿಂದ ವಿರಕ್ತಳಾಗಿರುವ ನನ್ನನ್ನು ಒಂದುವೇಳೆ ನೀನು ಬಲಾತ್ಕಾರದಿಂದ ವರಿಸುವೆಯಾದರೆ ನಾನು ನಿನಗೆ ಅವಶ್ಯವಾಗಿ ಶಾಪಕೊಡುತ್ತೇನೆ. ಇದು ಸತ್ಯವೆಂದು ತಿಳಿ.'' ಎಂದು ಆ ಸುಭಗಾದೇವಿಯು ಹೇಳಿ ತಾನು ಪೂಜೆ ಮಾಡಿದ್ದ ಶಿವಲಿಂಗವನ್ನು ನೋಡುತ್ತಾ, ಹೇ ಈಶ್ವರ! ಈ ಕಾಮಿಯನ್ನು ನಿವಾರಣೆಮಾಡು ; ಎಂದು ಪ್ರಾರ್ಥಿಸುತ್ತಾ ಪುನಃ ಪುನಃ ಪೂಜೆಮಾಡಲಾರಂಭಿಸಿದಳು. ||೪೪೨-೪೪೩||

ದೇವಿ! ಅನಂತರ ನಾನು ಪ್ರಸನ್ನನಾಗಿ ಆ ಶಿವಲಿಂಗದಲ್ಲಿ ನಿನ್ನೊಡನೆ ವಿಷ್ಣು, ಬ್ರಹ್ಮ ಮುಂತಾದವರುಗಳಿಂದ ನಮಸ್ಕೃತನಾಗಿ ಪ್ರತ್ಯಕ್ಷನಾದೆನು. ಆಗ ಆ ಸುಭಗಾದೇವಿಯು ದೇವದೇವನಾದ ಅಂಬಿಕಾಪತಿಯಾದ ನನ್ನನ್ನು ನಾನಾಪ್ರಕಾರದಿಂದ ಸ್ತೋತ್ರಮಾಡಿದಳು. ಅಲ್ಲದೇ, 'ಶಂಭುವೇ! ನನಗೆ ಯಾವಾಗಲೂ ನಿನ್ನಲ್ಲಿ ದೃಢವಾದ ಭಕ್ತಿಯುಂಟಾಗಲಿ' ಎಂದು ವರ ಬೇಡಿದಳು. ||೪೪೪-೪೪೫||

ಪುನಃ ಸಂಪೂಜ್ಯ ಮಾಂ ಸಮ್ಯಗ್ಯಯಾಚೇ ಸಾ ವರಾಂತರಂ ।
ತ್ವಯ್ಯೇವಾಹರ್ನಿಶಂ ಚೇತಃ ಸ್ಥಿರಮಸ್ತ್ವಿತಿ ಸಾದರಂ ॥೪೪೬॥

ಇತ್ಯುಕ್ತ್ವಾ ನಮ್ರವದನಾ ಪಶ್ಯಂತೀ ಮತ್ಪದಾಂಬುಜಂ ।
ಪುನರಭ್ಯರ್ಚಯಾಮಾಸ ಬಿಲ್ವಪತ್ರಾದಿಭಿರ್ಮುದಾ ॥೪೪೭॥

ತತಸ್ತಸ್ಯೈ ವರಂ ದತ್ವಾ ಮಯಾ ತ್ವಂತರ್ಹಿತಂ ಶಿವೇ ।
ಏವಂ ಸಾ ಸುಭಗಾ ಸಾಧ್ವೀ ಸ್ಥಿತಾ ದೃಢಮನೋರಥಾ ॥೪೪೮॥

ತತಸ್ತತ್ರೈವ ಸುಭಗಾ ಸಾಮಾಮಭ್ಯರ್ಚ್ಯ ಸಾದರಂ ।
ತತ್ರೈವ ವಿಜಹೌ ಪ್ರಾಣಾನ್ಮಹಾದೇವೇತಿ ವಾದಿನೀ ॥೪೪೯॥

ತತಃ ಸಾ ಸರ್ವದುಃಖಾನಿ ವಿಹಾಯೈವ ಹಿ ತತ್ಕ್ಷಣೇ ।
ಪ್ರಾಪ ಮುಕ್ತಿಂ ಮತ್ಪ್ರಸಾದಾತ್ಸಾ ಮತ್ಪೂಜಾವಿಧೇಃ ಫಲಂ॥೪೫೦॥

---

ಅಲ್ಲದೇ ಪುನಃ ನನ್ನನ್ನು ಚೆನ್ನಾಗಿ ಪೂಜೆಮಾಡಿ "ನಿನ್ನಲ್ಲಿಯೇ ನನ್ನ ಮನಸ್ಸು ಹಗಲೂ ರಾತ್ರೀ ಎಡಬಿಡದೇ ಸ್ಥಿರವಾಗಿರಲಿ" ಎಂದು ಬೇರೊಂದು ವರವನ್ನೂ ಆದರದಿಂದ ಬೇಡಿದಳು. ಹೀಗೆ ವರವನ್ನು ಬೇಡಿ ಮುಖ ತಗ್ಗಿಸಿ ಕೊಂಡು ನನ್ನ ಪಾದಕಮಲಗಳನ್ನೇ ನೋಡುತ್ತಾ ತಿರುಗಿ ಬಿಲ್ವಪತ್ರೆ ಮುಂತಾ ದವುಗಳಿಂದ ನನ್ನನ್ನು ಸಂತೋಷದಿಂದ ಪೂಜೆಮಾಡಿದಳು. ॥೪೪೬-೪೪೭॥

ಆಗ ನಾನು ಅವಳು ಬೇಡಿದ ವರಗಳೆರಡನ್ನೂ ಕೊಟ್ಟು ಮರೆಯಾದನು. ಗಿರಿರಾಜಕುಮಾರಿಯೇ, ಹೀಗೆ ಪತಿವ್ರತೆಯಾದ ಆ ಸುಭಗಾದೇವಿಯು ದೃಢಮನಸ್ಕ ಳಾಗಿಯೇ ಇರುತ್ತಿದ್ದಳು. ಮುಂದೆ ಈ ಸುಭಗಾದೇವಿಯು ಅಲ್ಲಿಯೇ ನನ್ನನ್ನು ಆದರದಿಂದ ಪೂಜೆಮಾಡಿ, 'ಮಹಾದೇವ' ಎಂದು ನನ್ನ ದಿವ್ಯನಾಮವನ್ನೇ ಉಚ್ಚಾರಮಾಡುತ್ತಾ ಕೆಲವು ಕಾಲದ ನಂತರ ಪ್ರಾಣಬಿಟ್ಟಳು. ॥೪೪೮-೪೪೯॥

ಅನಂತರ ಅವಳು ಸಕಲ ದುಃಖಗಳನ್ನೂ ಕೂಡಲೇ ತೊರೆದು ನನ್ನ ಅನುಗ್ರಹದಿಂದ ಸ್ಥಿರಮುಕ್ತಿಯನ್ನು ಹೊಂದಿದಳು. ದೇವಿ! ಇದು ನನ್ನ ಪೂಜೆ ಯನ್ನು ವಿಧಿಪ್ರಕಾರ ಮಾಡಿದ ಫಲವೆಂದು ತಿಳಿ. ॥೪೫೦॥

ನರೋ ಭವತು ನಾರೀ ವಾ ಮಾಮಭ್ಯರ್ಚ್ಯ ಸದಾಶಿವಂ ।
ಧರ್ಮಮರ್ಥಂ ಚ ಕಾಮಂ ಚ ಪ್ರಾಪ್ಯ ಮುಕ್ತಿಂ ಚ ವಿಂದತಿ॥೪೫೧॥

ಶ್ರೀಮದ್ದಕ್ಷಿಣಕೈಲಾಸೇ ವಿಲಾಸಃ ಕ್ರಿಯತೇ ಮಯಾ ।
ಭಕ್ತಾಸ್ತತ್ರಾನುಗೃಹ್ಯಂತೇ ಶಿವೈಕಶರಣಾಃ ಶಿವೇ ॥೪೫೨॥

ಶ್ರೀಕಾಲಹಸ್ತೀಶ ಪಿನಾಕಪಾಣೇ
ಕಂದರ್ಪದರ್ಪಾಪಹ ಕಾಲಕಾಲ ।
ನಾರಾಯಣಾರಾಧಿತ ಪಾದಪದ್ಮೇ
ತ್ಯಹರ್ನಿಶಂ ತತ್ರ ವದಂತಿ ಶೈವಾಃ ॥೪೫೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ದಕ್ಷಿಣಕೈಲಾಸ ಮಹಿಮಾವರ್ಣನಂ ನಾಮೈಕೋನವಿಂಶೋಽಧ್ಯಾಯಃ

---

ಪುರುಷನಾಗಲೀ ಸ್ತ್ರೀಯಾಗಲೀ ಸದಾಶಿವನೆನಿಸಿದ ನನ್ನನ್ನು ಪೂಜೆಮಾಡಿ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಹೊಂದುತ್ತಾರೆ.

ಎಲೌ ಶೋಭನಾಂಗಿಯೇ, ನಾನು ಯಾವಾಗಲೂ ಸಂಪದ್ಭರಿತವಾದ ಈ ದಕ್ಷಿಣಕೈಲಾಸದಲ್ಲಿ ಸಂತೋಷದಿಂದ ವಿಹರಿಸುತ್ತಿರುವೆನು. ಶಿವಧ್ಯಾನನಿರತರಾದ ಭಕ್ತರನ್ನು ನಾನು ಇಲ್ಲಿ ಅನುಗ್ರಹಿಸುವೆನು. ॥೪೫೨॥

ಓ ಕಾಲಹಸ್ತೀಶ್ವರ! ಪಿನಾಕವೆಂಬ ಆಯುಧವನ್ನು ಕೈಯಲ್ಲಿ ಹಿಡಿದಿರುವ ನೀನು ಈ ಮನ್ಮಥನ ದರ್ಪವನ್ನು ಹೋಗಲಾಡಿಸಿದವನು. ಮೃತ್ಯುಸ್ವರೂಪನಾದ ಆ ಕಾಲನಿಗೆ (ಯಮನಿಗೇ) ನೀನು ಮೃತ್ಯುಪ್ರದನಾಗಿರುವೆ. ಹಗಲು ರಾತ್ರಿ ನಿನ್ನ ಪಾದಕಮಲಗಳನ್ನು ಶ್ರೀಮನ್ನಾರಾಯಣನು ಎಡಬಿಡದೇ ಪೂಜೆಮಾಡುತ್ತಿರುವನು ಮಹಾದೇವ, ಎಂದು ಈ ದಕ್ಷಿಣಕೈಲಾಸದಲ್ಲಿ ನನ್ನ ಭಕ್ತರು ಯಾವಾಗಲೂ ನನ್ನನ್ನು ಸ್ತುತಿಸುತ್ತಿರುವರು. ೪೫೩॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ದಕ್ಷಿಣಕೈಲಾಸ (ಕಾಲಹಸ್ತೀ) ಮಹಿಮೆಯ ವರ್ಣನೆಯೆಂಬ ಹತ್ತೊಂಬತ್ತನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಪೂರ್ವಾರ್ಧೇ

## ವಿಂಶೋಽಧ್ಯಾಯಃ

॥ ಶ್ರೀಶಿವ ಉವಾಚ ॥

ದೇವಿ ಕಾಂಚೀಪುರೀ ಕಾಚಿದ್ಯತ್ರ ವೇಗವತೀ ನದೀ ।
ತತ್ರ ವಾಸಮುಪೇಕ್ಷಂತೇ ನಿತ್ಯಂ ಬ್ರಹ್ಮಾದಯಃ ಸುರಾಃ ॥೧॥

ಏಕಾಂಬರಾಭಿಧಂ ಲಿಂಗಂ ತತ್ರಾಸ್ತ್ಯೇಕಂ ಮುದಾತ್ಮಕಂ ।
ತದ್ದರ್ಶನೇನ ಪಾಪಾನಿ ವಿನಶ್ಯಂತ್ಯೇವ ತತ್ಕ್ಷಣೇ ॥೨॥

ಕೋಟಿತೀರ್ಥಾಭಿಧಂ ತೀರ್ಥಂ ತತ್ರಾಸ್ತ್ಯೇಕಮಘಾಪಹಂ ।
ತತ್ರೈಕಮಜ್ಜನಾದೇವ ಬ್ರಹ್ಮಹತ್ಯಾ ವಿಮುಚ್ಯತೇ ॥೩॥

---

## ಇಪ್ಪತ್ತನೆಯ ಅಧ್ಯಾಯ

ದೇವಿ, ಕಾಂಚೀಪಟ್ಟಣದಲ್ಲಿ ವೇಗವತೀ ಎಂಬ ನದಿಯು ಹರಿಯುತ್ತಿರುವುದು. ಅಂತಹ ಕ್ಷೇತ್ರದಲ್ಲಿ ನಿತ್ಯವೂ ಬ್ರಹ್ಮಾದಿದೇವತೆಗಳೂ ವಾಸಮಾಡಬೇಕೆಂದು ಬಯಸುತ್ತಿರುವರು. ಅಲ್ಲಿ ನನ್ನ ಅಂಶದಿಂದ ಕೂಡಿದ ಏಕಾಂಬರವೆಂದು ಪ್ರಸಿದ್ಧವಾದ ಶಿವಲಿಂಗವಿರುವುದು. ಆ ಶಿವಲಿಂಗವನ್ನು ದರ್ಶನಮಾಡಿದ ಮರುಕ್ಷಣವೇ ಪಾಪಗಳೆಲ್ಲವೂ ನಾಶವಾಗಿ ಬಿಡುವುವು. ॥೧-೨॥

ಅಲ್ಲಿ ಪಾಪನಾಶಕವಾಗಿ ಕೋಟಿತೀರ್ಥವೆಂದು ಪ್ರಸಿದ್ಧವಾದ ಒಂದು ತೀರ್ಥವಿರುವುದು. ಆ ತೀರ್ಥದ ನೀರಿನಲ್ಲಿ ಒಂದೇಬಾರಿ ಮುಳುಗಿ ಸ್ನಾನಮಾಡುವುದರಿಂದಲೇ ಬ್ರಹ್ಮಹತ್ಯಾದೋಷವು ಸಹ ತೊಲಗುವುದು. ಪಿತೃಗಳ ಮುಕ್ತಿಗೋಸ್ಕರ

ತತ್ರ ಶ್ರಾದ್ಧಂ ವಿಧಾನೇನ ಕರ್ತವ್ಯಂ ಪಿತೃಮುಕ್ತಯೇ ।
ತರ್ಪಣೀಯಾಶ್ಚ ಪಿತರಃ ಕೋಟಿತೀರ್ಥೋದಕೈಃ ಶುಭೈಃ ॥೪॥

ಕೋಟಿತೀರ್ಥೇ ನರಃ ಸ್ನಾತ್ವಾ ಸಂಪೂಜ್ಯೈಕಾಂಬರೇಶ್ವರಂ ।
ಮುಚ್ಯತೇ ಸರ್ವಥಾ ದೇವಿ ಬ್ರಹ್ಮಹತ್ಯಾಯುತೈರಪಿ ॥೫॥

ತತ್ರೈವ ಮಾಮುಪಾಶ್ರಿತ್ಯ ಋಷಯೋ ಬ್ರಹ್ಮವಾದಿನಃ ।
ವಸಂತಿ ಬಹವಸ್ತೇಷಾಂ ಸಂಖ್ಯಾಂ ಕರ್ತುಂ ನ ಶಕ್ಯತೇ ॥೬॥

ಭಸ್ಮೋದ್ಧೂಳಿತಸರ್ವಾಂಗಾಸ್ತೇ ಸರ್ವೇ ನಿಯತೇಂದ್ರಿಯಾಃ ।
ರುದ್ರಾಕ್ಷಮಾಲಾಭರಣಾಸ್ತ್ರಿಪುಂಡ್ರಾಂಕಿತಮಸ್ತಕಾಃ ॥೭॥

ಮಚ್ಚಿತ್ತಾ ಮದ್ಗತಪ್ರಾಣಾ ಮದಾರಾಧನತತ್ಪರಾಃ ।
ಸ್ವಪ್ನೇಽಪ್ಯನ್ಯಂ ನ ಪಶ್ಯಂತಿ ಮಾಂ ವಿಹಾಯ ವರಾನನೇ ॥೮॥

ತತ್ಕ್ಷೇತ್ರಂ ಭೂರಿಭಾಗ್ಯೇನ ಪ್ರಾಪ್ನುವಂತಿ ನರಾಃ ಶಿವೇ ।
ತತ್ಪ್ರಾಪ್ತ್ಯರ್ಥಂ ತಪಶ್ಚರ್ಯಾಂ ಕುರ್ವಂತಿ ಋಷಯಃ ಸದಾ ॥೯॥

---

ಅಲ್ಲಿ ವಿಧಿಪೂರ್ವಕವಾಗಿ ಶ್ರಾದ್ಧಮಾಡಬೇಕು. ಮತ್ತು ಶುಭಕರವಾದ ಆ ಕೋಟಿತೀರ್ಥದ ನೀರುಗಳಿಂದ ಪಿತೃಗಳಿಗೆ ತರ್ಪಣಮಾಡಬೇಕು. ॥೩-೪॥

ದೇವಿ, ಕೋಟಿತೀರ್ಥದಲ್ಲಿ ಮನುಜನು ಸ್ನಾನಮಾಡಿ ಆ ಏಕಾಂಬರೇಶ್ವರನನ್ನು ಪೂಜೆಮಾಡಿದರೆ ಹತ್ತುಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದ್ದರೂ ಪಾಪಮುಕ್ತನಾಗುವನು. ಈ ಕ್ಷೇತ್ರದಲ್ಲಿ ನನ್ನನ್ನೇ ಆಶ್ರಯಿಸಿರುವ ಬ್ರಹ್ಮಜ್ಞಾನಿಗಳಾದ ಋಷಿಗಳನೇಕರು ವಾಸಮಾಡುತ್ತಿರುವರು. ಅವರನ್ನು ಇಷ್ಟೇ ಎಂದು ಎಣಿಸುವುದಕ್ಕೇ ಸಾಧ್ಯವಿಲ್ಲ. ॥೫-೬॥

ಅವರೆಲ್ಲರೂ ಮೈಗೆಲ್ಲಾ ಭಸ್ಮವನ್ನು ಲೇಪನಮಾಡಿಕೊಂಡು ಜಿತೇಂದ್ರಿಯರಾಗಿ ರುದ್ರಾಕ್ಷಮಾಲೆ, ಭಸ್ಮತ್ರಿಪುಂಡ್ರ ಇವುಗಳಿಂದಲಂಕೃತರಾಗಿರುವರು. ಯಾವಾಗಲೂ ನನ್ನನ್ನೇ ಮನಸ್ಸಿಟ್ಟು ತಮ್ಮ ಪ್ರಾಣವನ್ನೇ ನನ್ನಧೀನಮಾಡಿ ನನ್ನನ್ನು ಪೂಜಿಸುವುದರಲ್ಲಿಯೇ ನಿರತರಾಗಿರುವರು. ಸುಂದರವಾದ ಮುಖವುಳ್ಳ ದೇವಿಯೇ! ಕನಸಿನಲ್ಲಿ ಸಹ ಇವರು ನನ್ನನ್ನು ಹೊರತು ಬೇರೆಯವರನ್ನು ಕಾಣುತ್ತಿಲ್ಲ. ॥೭-೮॥

ಮಂಗಳಾಂಗಿಯೇ !ಹೆಚ್ಚಾದ ಭಾಗ್ಯಶಾಲಿಗಳು ಮಾತ್ರ ಈ ಕ್ಷೇತ್ರವನ್ನು

ಅನೇಕಯುಗಪರ್ಯಂತಂ ತತ್ರ ಘೋರತರಂ ತಪಃ ।
ಚಕಾರ ವಿಷ್ಣುರದ್ಯಾಪಿ ಮಾಮಾಸಾದ್ಯೈವ ತಿಷ್ಠತಿ ॥೧೦॥

ತತ್ರ ಮಾಂ ಪ್ರತ್ಯಹಂ ವಿಷ್ಣುರ್ಲಕ್ಷಬಿಲ್ವದಲೈರ್ನವೈಃ ।
ಕರೋತಿ ಪೂಜನಂ ಭಕ್ತ್ಯಾ ತ್ರಿಕಾಲಂ ಸಾವಧಾನತಃ ॥೧೧॥

ಪ್ರದೋಷಸಮಯೇ ವಿಷ್ಣುರ್ಮಾಮಭ್ಯರ್ಚ್ಯ ವಿಧಾನತಃ ।
ಸೇವಾಂ ಕರೋತಿ ಸಾನಂದಂ ಮೃದಂಗಮಭಿವಾದಯನ್ ॥೧೨॥

ವಿವಿಧೈಃ ಕುಸುಮೈಃ ಶುದ್ಧೈರ್ಬಿಲ್ವಪತ್ರೈಶ್ಚತುರ್ಮುಖಃ ।
ಮಾಮಭ್ಯರ್ಚ್ಯ ತತಃ ಸಾಯಂ ತಾಲಾನ್ವಾದಯತೇ ಶಿವೇ ॥೧೩॥

ವಾಗ್ದೇವೀ ವಲ್ಲಕೀಂ ಧೃತ್ವಾ ಸಾಯಮಭ್ಯರ್ಚ್ಯ ಮಾಂ ಶಿವಂ ।
ಕರೋತಿ ಗಾನಮಮಲಾ ಗಾನಶಾಸ್ತ್ರವಿಶಾರದಾ ॥೧೪॥

---

ಹೊಂದುತ್ತಾರೆ. ಯಾವಾಗಲೂ ಋಷಿಗಳು ಈ ಕ್ಷೇತ್ರವನ್ನು ಪಡೆಯಬೇಕೆಂದು ತಪಸ್ಸುಮಾಡುತ್ತಿರುವರು. ವಿಷ್ಣುವು ಹಿಂದೆ ಅಲ್ಲಿ ಅನೇಕಯುಗಗಳವರೆಗೂ ನನ್ನನ್ನು ಉದ್ದೇಶಿಸಿ ಘೋರವಾಗಿ ತಪಸ್ಸುಮಾಡಿದನು. ಅಲ್ಲದೇ ಈಗಲೂ ಅಲ್ಲಿಯೇ ನೆಲಸಿರುವನು. ॥೯-೧೦॥

ಅಲ್ಲಿ ವಿಷ್ಣುವು ಪ್ರತಿದಿನವೂ ಮೂರು ಸಂಧ್ಯಾಕಾಲಗಳಲ್ಲಿಯೂ ಹೊಸವಾದ ಲಕ್ಷ ಬಿಲ್ವದಳಗಳಿಂದ ಭಕ್ತಿಯುತನಾಗಿ ಸಾವಧಾನ ಮನಸ್ಸಿನಿಂದ ನನ್ನನ್ನು ಪೂಜೆಮಾಡುತ್ತಾನೆ. ಆ ವಿಷ್ಣುವು ಪ್ರದೋಷಕಾಲದಲ್ಲಿ ವಿಧಿಪೂರ್ವಕವಾಗಿ ನನ್ನನ್ನು ಪೂಜೆಮಾಡಿ ಆನಂದದಿಂದ ಮೃದಂಗಬಾರಿಸುತ್ತಾ ನನ್ನ ಸೇವೆಮಾಡುತ್ತಿರುವನು. ॥೧೧-೧೨॥

ಪಾರ್ವತಿಯೇ, ಬ್ರಹ್ಮನೂ ಸಾಯಂಕಾಲದಲ್ಲಿ ಬಗೆಬಗೆಯ ಹೂ ಮತ್ತು ಬಿಲ್ವಪತ್ರೆಗಳಿಂದ ನನ್ನನ್ನು ಭಕ್ತಿಯಿಂದ ಪೂಜೆಮಾಡಿ ಅನಂತರ ತಾಲ ಧ್ವನಿ ಮಾಡುತ್ತಾನೆ. ಸಂಗೀತಶಾಸ್ತ್ರನಿಪುಣಳೂ ಗಾನಲೋಲಳೂ ಪರಿಶುದ್ಧಳೂ ಆದ ಸರಸ್ವತಿಯೂ ಸಹ ವೀಣೆಯನ್ನು ಹಿಡಿದು ಸಾಯಂಕಾಲದಲ್ಲಿ ನನ್ನನ್ನು ಪೂಜೆ ಮಾಡಿದಮೇಲೆ ಮನೋಹರವಾಗಿ ಸಂಗೀತ ಹಾಡುತ್ತಾಳೆ. ॥೧೩-೧೪॥

ಇಂದ್ರಃ ಸಂಪೂಜ್ಯ ಮಾಂ ಸಾಯಂ ಬಿಲ್ವಪತ್ರಾದಿಭಿರ್ಮುದಾ ।
ಕರೋತಿ ವೈಣವಂ ವಾದ್ಯಂ ತತ್ತದ್ರಂಧ್ರನಿಷೇವಣಾತ್ ॥೧೫॥

ಶಚೀ ನೃತ್ಯಂ ಕರೋತ್ಯಗ್ರೇ ಸಾಯಮುನ್ನಹಮಾದರಾತ್ ।
ರಂಭಾದ್ಯೈಃ ಸಹ ಸಂತುಷ್ಟಾ ಸಾಯಂ ಸಂಪೂಜ್ಯ ಮಾಂ ಶಿವಂ॥೧೬॥

ಲಕ್ಷ್ಮೀಃ ಸಾಯಂ ಸಮಭ್ಯರ್ಚ್ಯ ಪೂರ್ಣವಚ್ಚಾಮರದ್ವಯಂ ।
ಗೃಹೀತ್ವಾ ತವ ಪಾರ್ಶ್ವಸ್ಥಾ ಭವತೀಮುಪಸೇವತೇ ॥೧೭॥

ದೇವಪತ್ನ್ಯಸ್ತಥಾನ್ಯಾಶ್ಚ ಸಾಯಂ ಸಂಪೂಜ್ಯ ಮಾಂ ಶಿವಂ ।
ಸೇವಾಂ ಕುರ್ವಂತಿ ಯತ್ನೇನ ತವೈವ ವರವರ್ಣಿನಿ ॥೧೮॥

ವಿಷ್ಣುಪ್ರಭೃತಯೋ ದೇವಾಃ ಸರ್ವೇಽಪಿ ಮಮ ಸೇವಕಾಃ ।
ಕುರ್ವಂತಿ ಸೇವಾಮನಿಶಂ ಸಾಯಂಕಾಲೇ ವಿಶೇಷತಃ ॥೧೯॥

ವಿಷ್ಣುಪ್ರಭೃತಿದೇವಾನಾಂ ಪತ್ನ್ಯೋ ಯಾಸ್ತಾಸ್ತು ಶೈಲಜೇ ।
ತವ ದಾಸ್ಯಸ್ತತಸ್ತಾಸ್ತೇ ಸೇವಾಂ ಕುರ್ವಂತಿ ಸಾದರಂ ॥೨೦॥

---

ಇಂದ್ರನೂ ಸಾಯಂಕಾಲದಲ್ಲಿ ನನ್ನನ್ನು ಪ್ರೀತಿಯಿಂದ ಬಿಲ್ವಪತ್ರೆ ಮುಂತಾದವುಗಳಿಂದ ಪೂಜೆಮಾಡಿ ಬಿದಿರಿನಿಂದ ಮಾಡಿದ ಕೊಳಲನ್ನು ಆಯಾ ರಂಧ್ರಗಳಿಗೆ ಉಚಿತವಾದ ಸ್ವರಸನ್ನಿವೇಶವುಂಟಾಗುವಂತೆ ಬಾರಿಸುತ್ತಾನೆ. ಅನಂತರ ಶಚೀದೇವಿಯು ಸಾಯಂಕಾಲದಲ್ಲಿ ರಂಭಾದ್ಯಪ್ಸರಸ್ತ್ರೀಯರೊಡನೆ ಸಂತೋಷದಿಂದ ನನ್ನನ್ನು ಪೂಜಿಸಿ ನನ್ನ ಮುಂದೆ ನಾಟ್ಯಮಾಡುತ್ತಾಳೆ. ॥೧೫-೧೬॥

ಲಕ್ಷ್ಮೀದೇವಿಯೂ ಸಾಯಂಕಾಲದಲ್ಲಿ ನನ್ನನ್ನು ಪೂಜೆಮಾಡಿ ಚಿನ್ನದ ಎರಡು ಚಾಮರಗಳನ್ನು ಹಿಡಿದು ನಿನ್ನ ಪಕ್ಕದಲ್ಲಿ ನಿಂತು ನಿನ್ನನ್ನು ಸೇವೆಮಾಡುತ್ತಾಳೆ. ಹಾಗೆಯೇ ಇತರ ದೇವತಾಸ್ತ್ರೀಯರೂ ಮತ್ತೆ ಕೆಲವರೂ ಸಾಯಂಕಾಲದ ಸಮಯದಲ್ಲಿ ಮಂಗಳಸ್ವರೂಪನಾದ ನನ್ನನ್ನು ಪೂಜೆಮಾಡುತ್ತಿರುವರಲ್ಲದೇ ನಿನ್ನ ಸೇವೆಯನ್ನೂ ವಿಶೇಷ ನಿಯಮದಿಂದ ಆಚರಿಸುತ್ತಿರುವರು. ॥೧೭-೧೮॥

ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ನನ್ನ ಸೇವಕರಾದ್ದರಿಂದ ವಿಶೇಷವಾಗಿ ಪ್ರದೋಷಕಾಲಗಳಲ್ಲಿ ಅವರು ನನ್ನನ್ನು ಯಾವಾಗಲೂ ಸೇವೆ ಮಾಡುತ್ತಿರುವರು. ಎಲೌ ಗಿರಿರಾಜಕುಮಾರಿಯೇ, ಆ ವಿಷ್ಣು, ಬ್ರಹ್ಮ ಮುಂತಾದ

ಕಾಮಾಕ್ಷೀರೂಪಮಾಸಾದ್ಯ ತ್ವಯಾ ತತ್ರ ಮನೋರಮೇ ।
ಸ್ಥೀಯತೇ ಸತತಂ ತ್ವಂ ತು ದೇವದೇವಾಂಗನಾರ್ಚಿತಾ ॥೨೦॥

ಕುಬೇರೇಣ ಪುರಾ ತತ್ರ ರತ್ನಸ್ತಂಭವಿರಾಜಿತಂ ।
ಶಿವಸ್ಥಾನಂ ಕೃತಂ ರಮ್ಯಂ ರತ್ನಗೋಪುರರಾಜಿತಂ ॥೨೨॥

ಪಂಚಕ್ರೋಶಮಿತಂ ಚಕ್ರೇ ಹೇಮಪ್ರಾಕಾರಮುತ್ತಮಂ ।
ಚಕ್ರೇ ಪ್ರಾಕಾರಶೃಂಗಾಣಿ ಶ್ರೇಷ್ಠರತ್ನಮಯಾನಿ ಸಃ ॥೨೩॥

ಸ್ಥೀಯತೇ ತತ್ರ ಸತತಂ ಮಯಾ ರತ್ನಶಿವಾಲಯೇ ।
ತಚ್ಛಿವಾಲಯರತ್ನಾನಾಂ ಪ್ರಭಯಾ ವ್ಯಾವೃತಾ ದಿಶಃ ॥೨೪॥

ಪುರಾ ಕದಾಚಿದ್ಧಿಮವಾನುಪಬರ್ಹಣಮುತ್ತಮಂ ।
ತುಭ್ಯಂ ಕರ್ತುಂ ಸಮಾರೇಭೇ ಮಹದೈಶ್ವರ್ಯಗರ್ವಿತಃ ॥೨೫॥

---

ದೇವತೆಗಳ ಹೆಂಡತಿಯರಾದರೋ ನಿನ್ನ ದಾಸಿಯರು. ಆದ್ದರಿಂದಲೇ ಅವರೆಲ್ಲರೂ ಆದರದಿಂದ ನಿನ್ನನ್ನು ಸೇವೆಮಾಡುತ್ತಿರುವರು. ||೧೯-೨೦||

ಪ್ರಿಯಳೇ, ಆ ಕಂಚಿಯಲ್ಲಿ ನೀನು ಕಾಮಾಕ್ಷೀದೇವಿಯ ರೂಪವನ್ನು ಹೊಂದಿ ಯಾವಾಗಲೂ ದೇವತೆಗಳಿಂದಲೂ, ದೇವತಾಸ್ತ್ರೀಯರಿಂದಲೂ ಪೂಜೆ ಹೊಂದುವಳಾಗಿ ನೆಲಸಿರುವೆ. ಅದೇ ಕಂಚಿಯಲ್ಲಿ ಹಿಂದೆ ಕುಬೇರನು ರತ್ನದ ಕಂಬಗಳಿಂದಲೂ ಮತ್ತು ರತ್ನಮಯವಾದ ಗೋಪುರಗಳಿಂದಲೂ ಪ್ರಕಾಶಿಸುತ್ತಿದ್ದ ಒಂದು ಮನೋಹರವಾದ ಶಿವದೇವಾಲಯವನ್ನು ಕಟ್ಟಿಸಿದನು. ||೨೧-೨೨||

ಅವನು ಐದುಕ್ರೋಶಪ್ರಮಾಣವುಳ್ಳ ಉತ್ತಮವಾದ ಪ್ರಾಕಾರವನ್ನು ಆ ಗುಡಿಗೆ ಚಿನ್ನದಿಂದಲೇ ಕಟ್ಟಿಸಿದನು. ಆ ಪ್ರಾಕಾರದ ಗೋಪುರಗಳನ್ನೆಲ್ಲಾ ಉತ್ತಮವಾದ ರತ್ನಗಳಿಂದಲೇ ನಿರ್ಮಾಣಮಾಡಿಸಿದನು. ದೇವಿ, ನಾನು ಅನವರತವೂ ಆ ಕುಬೇರನು ಕಟ್ಟಿಸಿರುವ ರತ್ನದ ಶಿವದೇವಾಲಯದಲ್ಲಿ ನೆಲಸಿರುವೆನು. ಎಲ್ಲಾ ದಿಕ್ಕುಗಳೂ ಆ ಶಿವಾಲಯಕ್ಕೆ ಹಾಕಿರುವ ರತ್ನಗಳ ಕಾಂತಿಯಿಂದ ಬೆಳಗುತ್ತಿವೆ. ||೨೩-೨೪||

ದೇವಿ, ಹಿಂದೆ ಒಂದುಸಲ ಹಿಮವಂತನು ಅತಿಶಯವಾದ ಐಶ್ವರ್ಯದಿಂದ ಗರ್ವಿತನಾಗಿ ನಿನಗೆ ಉತ್ತಮವಾದ ಉಡುಗೊರೆಯನ್ನು ಕೊಡಲು ಅಲ್ಲಿಗೆ ಬಂದನು. ಪ್ರಿಯೇ,

ಐಶ್ವರ್ಯಂ ತು ಪುರಾ ತಸ್ಮೈ ದತ್ತಮಸ್ತಿ ಮಯಾ ಶಿವೇ ।
ತದವಿಜ್ಞಾಯ ರತ್ನಾನಿ ತುಭ್ಯಂ ದಾತುಂ ಸಮಾರಭೇ ॥೨೬॥

ಕೋಟಿಶೋ ರತ್ನಭಾರಾಣಿ ಗೃಹೀತ್ವಾ ಸ ತತಃ ಪರಂ ।
ಆಜಗಾಮ ತತಃ ಕಾಂಚೀಂ ದೂರಾದೇವ ದದರ್ಶ ಸಃ ॥೨೭॥

ಹೇಮಪ್ರಾಕಾರಸಂಯುಕ್ತಾಂ ರತ್ನಗೋಪುರರಂಜಿತಾಂ ।
ದೃಷ್ಟ್ವಾ ಕಾಂಚೀಪುರೀಂ ರಮ್ಯಾಂ ವಿಸ್ಮಯಂ ಸಮುಪಾಗಮತ್ ॥೨೮॥

ಸಮಾಸಾದ್ಯ ತತಃ ಕಾಂಚೀಂ ಸ್ನಾತ್ವಾ ತೀರ್ಥೇಷು ಸಾದರಂ ।
ರತ್ನೈರಭ್ಯರ್ಚಯಾಮಾಸ ಹಿಮವಾನುತ್ತಮೈಸ್ತತಃ ॥೨೯॥

ಷಷ್ಟಿಕೋಟಿಸಹಸ್ರೈಸ್ತು ರತ್ನೈರ್ಮಾಮನ್ವಹಂ ಶಿವೇ ।
ಪೂಜಯನ್ನೇವ ಸತತಮಾಸಾಕಲ್ಪಮಾದರಾತ್ ॥೩೦॥

---

ನಿಮ್ಮ ತಂದೆಯಾದ ಆ ಹಿಮವಂತನಿಗೆ ನಾನೇ ಸಕಲ ಐಶ್ವರ್ಯಗಳನ್ನೂ ಕೊಟ್ಟವನು. ಈಗ ಅದನ್ನು ತಿಳಿಯದೇ ಅಹಂಕಾರಹೊಂದಿ ರತ್ನಗಳನ್ನು ನಿನಗೆ ಕೊಡಲು ಪ್ರಾರಂಭಿಸಿದನು. ॥೨೫-೨೬॥

ಆಗವನು ಕೋಟ್ಯಂತರ ರತ್ನಗಳನ್ನು ತೆಗೆದುಕೊಂಡು ಒಮ್ಮೆ ನಿನಗೆ ಕೊಡುವುದಕ್ಕೋಸ್ಕರ ಈ ಕಾಂಚೀ ಪಟ್ಟಣಕ್ಕೆ ಹೊರಟು ದೂರದಲ್ಲಿಯೇ ಚಿನ್ನದ ಪ್ರಾಕಾರ ಮತ್ತು ರತ್ನದ ಗೋಪುರಗಳಿಂದ ಶೋಭಿಸುತ್ತಿರುವ ಮನೋಹರವಾದ ಈ ಕಾಂಚಿಯನ್ನು ನೋಡಿ ತುಂಬಾ ಆಶ್ಚರ್ಯಪಟ್ಟನು. ॥೨೭-೨೮॥

ಆಮೇಲೆ ಕಾಂಚೀಪಟ್ಟಣಕ್ಕೆ ಬಂದು ಇಲ್ಲಿರುವ ಎಲ್ಲಾ ತೀರ್ಥಗಳಲ್ಲಿಯೂ ಆದರದಿಂದ ಸ್ನಾನಮಾಡಿ ಹಿಮವಂತನು ಅನಂತರ ಉತ್ತಮವಾದ ರತ್ನಗಳಿಂದ ಪೂಜೆಮಾಡಿದನು. ದೇವಿ, ಪ್ರತಿನಿತ್ಯವೂ ಆವನು ಅರವತ್ತುಕೋಟಿ ಸಾವಿರ ರತ್ನಗಳಿಂದ ನನ್ನನ್ನು ಪೂಜೆಮಾಡುತ್ತಾ ಕಲ್ಪಕಾಲದವರೆವಿಗೂ ಅದೇ ರೀತಿ ಪೂಜೆ ಮಾಡುತ್ತಿದ್ದನು. ॥೨೯-೩೦॥

ವಿಷ್ಣುನಾಪಿ ತಪಸ್ತಪ್ತಂ ಕೋಟಿತ್ರಯಯುಗಾವಧಿ ।
ಕಾಂಚ್ಯಾಮೇಕಾಂಘ್ರಿಣಾ ಸ್ಥಿತ್ವಾ ಮಾಮುದ್ದಿಶ್ಯ ಪ್ರಯತ್ನತಃ ॥೩೧॥

ಮದರ್ಚನರತಾಸ್ತತ್ರ ಬಹವಃ ಸಂತಿ ಶಾಂಕರಾಃ ।
ಮೋಕ್ಷಾರ್ಥಿನಸ್ತದಾ ತತ್ರ ಮಾಮೇಕಮಜರಾಮರಂ ॥೩೨॥

ತಪಸ್ಯಂತಂ ಮಹಾವಿಷ್ಣುಮೇಕಪಾದಂ ಜಿತೇಂದ್ರಿಯಂ ।
ಚತುರ್ಮುಖಃ ಸಮಭ್ಯೇತ್ಯ ಪಪ್ರಚ್ಛ ಸ ಕೃತಾಂಜಲಿಃ ॥೩೩॥

॥ ಬ್ರಹ್ಮೋವಾಚ ॥

ವಿಷ್ಣೋ ಸಂಪೂಜ್ಯತೇ ನಿತ್ಯಂ ತ್ವಯಾ ಕಿಂ ಧ್ಯಾಯತೇ ಮುದಾ ।
ಅತ್ರೈವಾತಿಪ್ರಯತ್ನೇನ ಸ್ಥೀಯತೇ ಕಿಂ ವದಸ್ವ ಮೇ ॥೩೪॥

॥ ವಿಷ್ಣುರುವಾಚ ॥

ಅಸ್ಯಾಂ ಕಾಂಚ್ಯಾಂ ಮಹಾದೇವಃ ಕಾಮಾಕ್ಷೀವಲ್ಲಭಃ ಪ್ರಭುಃ ।
ಲೀಲಾಂ ಕರೋತಿ ಸತತಮರ್ಚಿತಃ ಸಕಲೈಃ ಸುರೈಃ ॥೩೫॥

---

ವಿಷ್ಣುವೂ ಸಹ ಮೂರುಕೋಟಿಯುಗಗಳ ವರೆಗೆ ಇದೇ ಕಾಂಚಿಯಲ್ಲಿ ಒಂದೇ ಕಾಲಿನಲ್ಲಿ ನಿಂತು ನನ್ನನ್ನುದ್ದೇಶಿಸಿ ನಿಯಮದಿಂದ ತಪಸ್ಸುಮಾಡಿದನು. ದೇವಿ, ಇಲ್ಲಿ ನನ್ನ ಪೂಜೆಯಲ್ಲಿಯೇ ಆಸಕ್ತರಾಗಿರುವ ಅನೇಕ ಮಂದಿ ಶಂಕರನ ಭಕ್ತರು ಮುಪ್ಪುಸಾವುಗಳಿಲ್ಲದ ನನ್ನನ್ನು ಉದ್ದೇಶಿಸಿ ಮೋಕ್ಷವನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಸೇವೆಮಾಡುತ್ತಿರುವರು. ॥೩೧-೩೨॥

ಹೀಗೆ ಒಂದು ಕಾಲಿನಲ್ಲಿ ನಿಂತು ತಪಸ್ಸುಮಾಡುತ್ತಾ ಜಿತೇಂದ್ರಿಯನಾಗಿರುವ ಮಹಾವಿಷ್ಣುವನ್ನು ಒಂದು ಸಲ, ನಾಲ್ಕು ಮುಖವುಳ್ಳ ಬ್ರಹ್ಮನು, ಕೈಮುಗಿದು ಹೀಗೆ ಪ್ರಶ್ನೆ ಮಾಡಿದನು. ॥೩೩॥

ಅಯ್ಯ ವಿಷ್ಣುವೇ, ನಿತ್ಯವೂ ನೀನು ಯಾರನ್ನು ಪೂಜಿಸುತ್ತಿರುವೆ? ಸಂತೋಷದಿಂದ ಧ್ಯಾನಮಾಡುತ್ತಿರುವುದು ಯಾವನನ್ನು? ಇಲ್ಲಿಯೇ ಕಡುನಿಯಮದಿಂದ ನಿಂತು ತಪಸ್ಸುಮಾಡಲು ಕಾರಣವೇನೆಂಬುದನ್ನು ತಿಳಿಸಬೇಕೆಂದು ಬ್ರಹ್ಮನು ವಿಷ್ಣುವನ್ನು ಕೇಳಿದನು. ॥೩೪॥

ಆಗ ವಿಷ್ಣುವು ಬ್ರಹ್ಮನನ್ನು ಕುರಿತು, ಎಲೈ ಬ್ರಹ್ಮನೇ, ಈ ಕಾಂಚೀಪಟ್ಟಣದಲ್ಲಿ ಕಾಮಾಕ್ಷೀದೇವಿಯ ಪತಿಯಾದ ಮಹಾದೇವನು ಸಕಲ ದೇವತೆಗಳಿಂದಲೂ

ಉಮಾಸಹಾಯಃ ಸರ್ವೇಶೋ ಮಹಾದೇವೋ ಜಗತ್ಪ್ರಭುಃ ।
ಪೂಜ್ಯತೇ ಧ್ಯಾಯತೇ ನಿತ್ಯಂ ಮಯೇಶಪ್ರಣವೇನ ಹಿ ॥೩೬॥

ಸರ್ವೈಶ್ಚ ಶಂಕರಃ ಸಾಂಬಃ ಪೂಜನೀಯಃ ಪ್ರಯತ್ನತಃ ।
ತತೋ ಮಯಾಪಿ ಸತತಂ ಪೂಜ್ಯತೇ ಪಾರ್ವತೀಪತಿಃ ॥೩೭॥

ದೇವತಾಸಾರ್ವಭೌಮೋಽಯಂ ಸರ್ವದೇವಶಿಖಾಮಣಿಃ ।
ಸರ್ವವೇದಾಂತವೇದ್ಯೋಽಯಂ ಶಿವ ಏವೇತಿ ಹಿ ಶ್ರುತಿಃ ॥೩೮॥

ಶಿವಃ ಶಿವಾರ್ಥಿಭಿರ್ನಿತ್ಯಂ ಪೂಜನೀಯಃ ಪ್ರಯತ್ನತಃ ।
ತತಃ ಶಿವಾರ್ಥಿನಾ ನಿತ್ಯಂ ಮಯಾ ಸಂಪೂಜ್ಯತೇ ಶಿವಃ ॥೩೯॥

ದೇವಾನಾಂ ಮಾನವಾನಾಂ ಚ ಸಾಂಬಃ ಸಂಸಾರಮೋಚಕಃ ।
ಸಂಪೂಜಿತಃ ಕರೋತ್ಯೇವ ಸಂಸಾರತರುನಾಶನಂ ॥೪೦॥

---

ಪೂಜಿಸಲ್ಪಡುತ್ತಾ ವಿಹರಿಸುತ್ತಿರುವನು. ಉಮಾರಮಣನೂ, ಎಲ್ಲರಿಗೂ ಒಡೆಯನೂ ಜಗತ್ಪ್ರಭುವೂ ಆದ ಆ ಮಹಾದೇವನನ್ನೇ ನಾನು ಪೂಜೆಮಾಡುತ್ತಲೂ ಧ್ಯಾನ ಮಾಡುತ್ತಲೂ ತಪಸ್ಸುಮಾಡುತ್ತಿರುವೆನು. ||೩೫-೩೬||

ಅಂಬಿಕಾಸಮೇತನಾದ ಆ ಶಂಕರನು ಎಲ್ಲರಿಂದಲೂ ಪೂಜಾರ್ಹನಾಗಿರುವುದರಿಂದ ಆ ಪಾರ್ವತೀರಮಣನನ್ನು ನಾನೂ ಯಾವಾಗಲೂ ಪೂಜೆಮಾಡುತ್ತಿರುವೆನು. ದೇವತೆಗಳಲ್ಲೆಲ್ಲಾ ಸಾರ್ವಭೌಮನೂ, ದೇವತೆಗಳಿಗೆಲ್ಲಾ ಚೂಡಾಮಣಿಪ್ರಾಯನೂ ಮತ್ತು ಎಲ್ಲಾ ವೇದಾಂತಗಳಿಂದಲೂ ತಿಳಿಯಲ್ಪಡತಕ್ಕವನೂ ಆ ಶಿವನೆಂದೇ ಶ್ರುತಿಯಿರುವುದು. ||೩೭-೩೮||

ಮಂಗಳವನ್ನು ಬಯಸುವರೆಲ್ಲರೂ ಆ ಶಿವನನ್ನು ನಿಯಮದಿಂದ ನಿತ್ಯವೂ ಪೂಜೆಮಾಡಬೇಕಾಗಿರುವುದರಿಂದ ನಾನೂ ಮಂಗಳಪ್ರಾಪ್ತಿಗೋಸ್ಕರ ಆ ಶಿವನನ್ನು ನಿತ್ಯವೂ ಪೂಜೆಮಾಡುತ್ತಿರುವೆನು. ದೇವತೆಗಳಿಗೂ ಮನುಷ್ಯರಿಗೂ ಸಹ ಈ ಪರಶಿವನೇ ಸಂಸಾರಬಂಧನವನ್ನು ಬಿಡಿಸುವನೆಂದು ತಿಳಿಯಬೇಕು. ಈ ಸಾಂಬನನ್ನು ಚೆನ್ನಾಗಿ ಪೂಜೆಮಾಡಿದರೆ ಈ ಸಂಸಾರವೆಂಬ ವೃಕ್ಷವು ತಪ್ಪದೇ ನಾಶವಾಗುವುದು. ||೩೯-೪೦||

ಯಾವತ್ಪುಷ್ಟಿರ್ಬಲಂ ದೃಷ್ಟಿರ್ಯಾವದಾಯುರನಾಮಯಂ ।
ತಾವದ್ಯತ್ನೇನ ಸಂಪೂಜ್ಯೋ ನಿತ್ಯಂ ಸಾಂಬಃ ಸದಾಶಿವಃ ॥೪೧॥

ತಸ್ಯ ಹಸ್ತದ್ವಯಂ ಧನ್ಯಂ ಯೇನ ಸಾಂಬಸ್ಸದಾಶಿವಃ ।
ಪೂಜ್ಯತೇ ಬಿಲ್ವಪತ್ರಾದ್ಯೈಃ ಪ್ರತ್ಯಹಂ ಪ್ರೀತಿಪೂರ್ವಕಂ ॥೪೨॥

ತಸ್ಯೈವ ರಸನಾ ಧನ್ಯಾ ಯಯಾ ಸಾಂಬಃ ಸದಾಶಿವಃ ।
ಸ್ತೂಯತೇ ಸಾವಧಾನೇನ ಸಾನಂದಮಧುರೋಕ್ತಿಭಿಃ ॥೪೩॥

ತಸ್ಯೈವಾಕ್ಷಿಯುಗಂ ಧನ್ಯಂ ಯೇನ ಸಾಂಬಃ ಸದಾಶಿವಃ ।
ಸಂಪೂಜಿತಃ ಪ್ರಯತ್ನೇನ ದೃಶ್ಯತೇ ಪ್ರತ್ಯಹಂ ಮುದಾ ॥೪೪॥

ತಸ್ಯೈವ ಹಿ ಶಿರೋ ಧನ್ಯಂ ಯೇನ ಸಾಂಬಃ ಸದಾಶಿವಃ ।
ಪ್ರಣಮ್ಯಾತಿಪ್ರಯತ್ನೇನ ಪ್ರತ್ಯಹಂ ಪೂಜಿತೋ ಮುದಾ ॥೪೫॥

ತಸ್ಯೈವ ಹಿ ಮನೋ ಧನ್ಯಂ ಯೇನ ಸಾಂಬಃ ಸದಾಶಿವಃ ।
ಧ್ಯಾಯತೇ ಸರ್ವಕಾಲೇಷು ಕಾಲಮೃತ್ಯುವಿನಾಶಕಃ ॥೪೬॥

---

ಶರೀರಪುಷ್ಟಿ, ಶಕ್ತಿ, ದೃಷ್ಟಿಪಾಟವ, ರೋಗರುಜಿನಾದಿಗಳಿಲ್ಲದೆ ಆರೋಗ್ಯವಾದ ಜೀವನ ಇವುಗಳಿರುವ ವರೆಗೂ ನಿತ್ಯವೂ ಅಂಬಿಕಾಸಮೇತನಾದ ಆ ಸದಾಶಿವನನ್ನು ನಿಯಮದಿಂದ ಪೂಜೆಮಾಡಬೇಕು. ಪ್ರತಿನಿತ್ಯವೂ ಬಿಲ್ವಪತ್ರೆ, ಹೂ ಮುಂತಾದವುಗಳಿಂದ ಅಂಬಿಕಾಸಮೇತನಾದ ಆ ಸದಾಶಿವನನ್ನು ಪ್ರೀತಿಯಿಂದ ಪೂಜೆಮಾಡುವವನ ಎರಡು ಕೈಗಳೂ ನಿಜವಾಗಿ ಧನ್ಯವಾದವುಗಳು. ॥೪೧-೪೨॥

ಆನಂದಭರಿತವಾದ ಮಧುರವಚನಗಳಿಂದ ಸಾವಧಾನವಾಗಿ ಅಂಬಿಕಾಸಮೇತನಾದ ಆ ಸದಾಶಿವನನ್ನು ಸ್ತೋತ್ರಮಾಡುವವನ ನಾಲಿಗೆಯೂ, ನಿಯಮದಿಂದ ಪ್ರತಿನಿತ್ಯವೂ ಆ ಅಂಬಿಕಾಪತಿಯಾದ ಸದಾಶಿವನನ್ನು ಪೂಜೆಮಾಡಿ ದರ್ಶನಮಾಡುವವನ ಎರಡು ಕಣ್ಣುಗಳೂ, ಮತ್ತು ನಿತ್ಯವೂ ನಮಸ್ಕಾರಮಾಡಿ ಆ ದೇವನನ್ನು ಪ್ರೀತಿಯಿಂದ ಪೂಜೆಮಾಡುವವನ ತಲೆಯೂ ಸಹ ನಿಜವಾಗಿ ಧನ್ಯವಾದವುಗಳೇ ಸರಿ. ॥೪೩-೪೪-೪೫॥

ಭಯಂಕರವಾದ ಮೃತ್ಯುವನ್ನು ನಾಶಮಾಡುವ ಅಂಬಿಕಾಸಮೇತನಾದ ಆ ಸದಾಶಿವನನ್ನು ಯಾವಾಗಲೂ ಧ್ಯಾನಮಾಡುವವನ ಮನಸ್ಸೇ ಧನ್ಯವಾದುದು.

ಉದ್ಧೂಳಿತಾಂಗೋ ಯೋ ನಿತ್ಯಂ ಮಹೇಶಮುಪಸೇವತೇ ।
ತಸ್ಯ ಭಾಗ್ಯಸ್ಯ ನಾಂತೋಽಸ್ತಿ ಸತ್ಯಮೇವೋಚ್ಯತೇ ಮಯಾ ॥೪೭॥

ಯಸ್ತು ಸಾಂಬಂ ಮಹಾದೇವಂ ನಾಭ್ಯರ್ಚಯತಿ ಸಾದರಂ ।
ಸ ಘೋರತರಸಂಸಾರಸಾಗರಾನ್ನೋತ್ತರಿಷ್ಯತಿ ॥೪೮॥

ಶಂಭುರ್ನಾರಾಧಿತೋ ಯೇನ ಭಗವಾನ್ಭಕ್ತವತ್ಸಲಃ ।
ತೇನ ಸಂಪ್ರಾಪ್ಯತೇ ಭೂಯೋ ಗರ್ಭವಾಸೋ ನ ಸಂಶಯಃ ॥೪೯॥

ಗರ್ಭವಾಸಭಯಂ ಯಸ್ಯ ಭವಿಷ್ಯತಿ ಚತುರ್ಮುಖ ।
ತಸ್ಯ ತದ್ಭಯನಾಶಸ್ತು ನ ವಿನಾ ಶಂಭುಪೂಜಯಾ ॥೫೦॥

ಶಂಭೋ ಶಂಭೋ ಮಹೇಶೇತಿ ಯೇ ವದಂತ್ಯನಿಶಂ ಮುದಾ ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೫೧॥

ಶಿವೇತಿ ಪರಮೇಶೇತಿ ಯೇ ವದಂತ್ಯನಿಶಂ ಮುದಾ ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೫೨॥

---

ನಿತ್ಯವೂ ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿಕೊಂಡು ಆ ಮಹೇಶ್ವರನನ್ನು ಸೇವೆಮಾಡುವವನ ಭಾಗ್ಯಕ್ಕೆ ಎಣೆಯೇ ಇಲ್ಲವೆಂದು ಸತ್ಯವಾಗಿ ನಾನು ಹೇಳುವೆನು. ॥೪೬-೪೭॥

ಅಂಬಿಕಾಸಮೇತನಾದ ಆ ಮಹಾದೇವನನ್ನು ಆದರದಿಂದ ಪೂಜೆಮಾಡದೇ ಇರುವವನು ಈ ಅತ್ಯಂತ ಭಯಂಕರವಾದ ಸಂಸಾರಸಾಗರದಿಂದ ಎಂದಿಗೂ ಉದ್ಧಾರ ವಾಗಲಾರನು. ॥೪೮॥

ಭಕ್ತರಲ್ಲಿ ವಿಶೇಷ ಪ್ರೀತಿಯುಳ್ಳ ಆ ಶಂಭುವನ್ನು ಪೂಜೆಮಾಡದಿರುವವನು ಪುನಃ ಗರ್ಭವಾಸವನ್ನು (ಜನ್ಮವನ್ನು) ಹೊಂದುವುದರಲ್ಲಿ ಸಂಶಯವೇ ಇಲ್ಲ. ಅಯ್ಯಾ ಚತುರ್ಮುಖಬ್ರಹ್ಮನೇ, ಈ ರೀತಿಯಾದ ಗರ್ಭವಾಸದ ಭಯವಿರುವ ರೆಲ್ಲರಿಗೂ ಶಂಭುವನ್ನು ಪೂಜೆಮಾಡಿದಲ್ಲದೇ ಅದರ ಹೆದರಿಕೆಯು ಖಂಡಿತ ಹೋಗುವುದಿಲ್ಲವೆಂದು ತಿಳಿದುಕೋ. ॥೪೯-೫೦॥

ಶಂಭು, ಶಂಭು, ಮಹೇಶ್ವರ, ಶಿವ, ಪರಮೇಶ್ವರ, ಮೃತ್ಯುಂಜಯ, ಅಮರೇಶ್ವರ ಎಂಬುದಾಗಿ ಅನವರತವೂ ಆ ಸದಾಶಿವನ ದಿವ್ಯನಾಮಗಳನ್ನು

ಮೃತ್ಯುಂಜಯಾಮರೇಶೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೩॥

ಮಹಾದೇವ ಮಹೇಶೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೪॥

ತ್ರಿಯಂಬಕೇತಿ ಶರ್ವೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೫॥

ಶಂಕರೋಮಾಸಹಾಯೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೬॥

ಕಾಲಾಗ್ನಿರುದ್ರವೀರೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೭॥

ತ್ರಿಪುರಾರೇ ಮಖಾರೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೮॥

ತ್ರಿಲೋಚನೇತಿ ಭರ್ಗೇತಿ ಯೇ ವದಂತ್ಯನಿಶಂ ಮುದಾ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೩೯॥

---

ಉಚ್ಚಾರಮಾಡುವವರನ್ನು ಬಿಟ್ಟು ಉಳಿದವರೆಲ್ಲರಿಗೂ ಈ ಗರ್ಭವಾಸರೂಪವಾದ ಭಯವು ತಪ್ಪಿದ್ದೇ ಅಲ್ಲ. ||೩೧-೩೨-೩೩||

ಮಹಾದೇವ, ಮಹೇಶ್ವರ, ತ್ರಿಯಂಬಕ, (ಮೂರುಕಣ್ಣುಳ್ಳವನು) ಶರ್ವ, (ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ಸಂಹಾರಮಾಡುವನು) ಶಂಕರ, (ಮಂಗಳಕರ) ಉಮಾರಮಣನೆಂಬುದಾಗಿ ಆ ಮಹಾದೇವನ ದಿವ್ಯನಾಮಗಳನ್ನು ಸಂತೋಷದಿಂದುಚ್ಚಾರಮಾಡುವವರಿಗಲ್ಲದೇ ಉಳಿದವರಿಗೆಲ್ಲಾ ಪುನಃ ಗರ್ಭವಾಸಭಯವುಂಟೇ ಉಂಟು. ||೩೪-೩೫-೩೬||

ಪ್ರಳಯಕಾಲದ ಅಗ್ನಿಯಂತೆ ಭಯಂಕರವಾಗಿರುವವನು, ವೀರನು, ತ್ರಿಪುರರೆಂಬ ರಾಕ್ಷಸರನ್ನು ನಿಗ್ರಹಿಸಿದವನು, ದಕ್ಷಬ್ರಹ್ಮನ ಯಾಗಕ್ಕೆ ಶತ್ರುವು, ಮುಕ್ಕಣ್ಣನು, ಪ್ರಪಂಚದ ಸೃಷ್ಟಿಸ್ಥಿತಿಸಂಹಾರಕಾರ್ಯಗಳನ್ನೆಸಗುವನು ಎಂದು ಳ್ಳೆ

ಪಿನಾಕಪಾಣೇ ಸೋಮೇತಿ ಯೇ ವದಂತ್ಯನಿಶಂ ಮುದಾ ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೬೦॥

ಚಂದ್ರಚೂಡೇತಿ ಭೀಮೇತಿ ಯೇ ವದಂತ್ಯನಿಶಂ ಮುದಾ ।
ನ ತೇಷಾಂ ಗರ್ಭಭೀರ್ಭೂಯಸ್ತದನ್ಯೇಷಾಂ ತು ಗರ್ಭಭೀಃ ॥೬೧॥

ಯಸ್ಯ ಸ್ಮರಣಮಾತ್ರೇಣ ಸದ್ಯಃ ಸಂಸಾರನಾಶನಂ ।
ತಸ್ಯ ದೇವಾಧಿದೇವಸ್ಯ ಶಿವಸ್ಯ ಸ್ಮರಣಂ ಪರಂ ॥೬೨॥

ಯಸ್ಯ ದೇವಾಧಿದೇವಸ್ಯ ಪೂಜನಂ ಸರ್ವಕಾಮದಂ ।
ತಸ್ಯ ದೇವಾಧಿದೇವಸ್ಯ ಶಿವಸ್ಯೈವಾರ್ಚನಂ ಪರಂ ॥೬೩॥

ನ ಯನ್ನಾಮಸಮಂ ನಾಮ ಶ್ರುತೌ ಶ್ರುತ್ಯಂತ ಏವ ವಾ ।
ತಸ್ಯ ದೇವಾಧಿದೇವಸ್ಯ ನಾಮ ಸ್ಮರ್ತ್ಯವ್ಯಮೈಶ್ವರಂ ॥೬೪॥

ಶಿವಪೂಜಾಂ ವಿಹಾಯಾನ್ಯನ್ನಾಸ್ತಿ ಮೋಕ್ಷಸ್ಯ ಕಾರಣಂ ।
ಸತ್ಯಂ ಸತ್ಯಮಿದಂ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೬೫॥

---

ಮಹಾದೇವನ ದಿವ್ಯನಾಮಗಳನ್ನುಚ್ಚಾರಮಾಡುವರಿಗೆ ಹೊರತು ಉಳಿದವರಿಗೆಲ್ಲಾ ಈ ಗರ್ಭವಾಸದುಃಖವು ತಪ್ಪಿದ್ದಲ್ಲ. ॥೫೭-೫೮-೫೯॥

ಪಿನಾಕವೆಂಬ ಬಿಲ್ಲನ್ನು ಕೈಯಲ್ಲಿ ಹಿಡಿದಿರುವವನೂ, ಉಮಾಸಮೇತನೂ, ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ವಿರೋಧಿಗಳಿಗೆ ಭಯಂಕರಪ್ರಾಯನೂ ಎಂದು ಆ ಮಹಾದೇವನ ದಿವ್ಯನಾಮಗಳನ್ನುಚ್ಚಾರಮಾಡುವವರಿಗೆ ಬಿಟ್ಟು ಉಳಿದವರಿಗೆಲ್ಲಾ ಈ ಗರ್ಭವಾಸವೆಂಬುದು ಪುನಃ ತಪ್ಪಿದ್ದೇ ಅಲ್ಲ. ॥೬೦-೬೧॥

ಸ್ಮರಣೆಮಾಡಿದ ಮಾತ್ರದಿಂದಲೇ ಈ ಸಂಸಾರಬಂಧನವು ನಾಶವಾಗುವ ಆ ದೇವಾಧಿದೇವನಾದ ಪರಶಿವನ ಸ್ಮರಣೆಯೇ ತುಂಬಾ ಉತ್ಕೃಷ್ಟವಾದುದು. ದೇವಾಧಿದೇವನಾದ ಆ ಶಿವನ ಪೂಜೆಯು ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವುದು. ಆ ದೇವಾಧಿದೇವನೆನಿಸಿದ ಶಿವನ ಪೂಜೆಯೇ ಉತ್ಕೃಷ್ಟವೆನಿಸಿರುವುದು. ॥೬೨-೬೩॥ .

ವೇದ ಅಥವಾ ವೇದಾಂತಗಳಲ್ಲಿ ಯಾವ ದೇವಾಧಿದೇವನಾದ ಈಶ್ವರನ ನಾಮಗಳಿಗೆ ಸಮಾನನಾದ ನಾಮಗಳೇ ಇಲ್ಲವೋ ಅಂತಹ ಮಹೇಶ್ವರನ ನಾಮವನ್ನು

ಧರ್ಮಾರ್ಥಕಾಮಮೋಕ್ಷಾಣಾಂ ಸಾಧನಂ ಶಿವಪೂಜನಂ ।
ಧರ್ಮಾದಿಸಿದ್ಧಿರ್ನಾಸ್ತ್ಯೇವ ವಿನಾ ಶಂಕರಪೂಜಯಾ ॥೬೬॥

ಯಃ ಶಂಕರೇತಿ ಸರ್ವೇಷಾಂ ಪೂಜನಸ್ಮರಣಾದಿಭಿಃ ।
ಸ ಶಂಕರಃ ಪೂಜನೀಯೋ ನಿಯಮೇನಾನ್ವಹಂ ಮುದಾ ॥೬೭॥

ಧರ್ಮಾರ್ಥಕಾಮಮೋಕ್ಷಾಸ್ತು ಮನೋಜ್ಞೈಃ ಶಂಕರಾರ್ಚನಾತ್ ।
ಲಭ್ಯತೇ ಸರ್ವಥಾ ಬ್ರಹ್ಮನ್ನನ್ಯಥಾ ನ ಕದಾಚನ ॥೬೮॥

ಶಿವಾನ್ಯಃ ಶಂಕರೋ ನಾಸ್ತಿ ದೇವೇಷ್ವನ್ಯೇಷು ವಾ ವಿಧೇ ।
ಸ ಏವ ಶಂಕರಸ್ತಸ್ಮಾತ್ತಸ್ಯೈವಾಭ್ಯರ್ಚನಂ ವರಂ ॥೬೯॥

ಶಂಕರಂ ಯೋಽರ್ಚಯೇನ್ನಿತ್ಯಂ ಶಂಕರಂ ಸರ್ವಸಾಧನೈಃ ।
ಶಂಕರಸ್ತಸ್ಯ ನಿಯಮಾಚ್ಛಂಕರಸ್ತು ಭವಿಷ್ಯತಿ ॥೭೦॥

---

ಸ್ಮರಣೆಮಾಡಬೇಕು. ಶಿವಪೂಜೆಯನ್ನು ಬಿಟ್ಟು ಮೋಕ್ಷಪ್ರಾಪ್ತಿಗೆ ಬೇರೆ ಕಾರಣವೇ ಇಲ್ಲ. ಇದು ಸತ್ಯವು. ಭುಜವನ್ನೆತ್ತಿ ಇದು ಸತ್ಯವೆಂದು ಸಾರಿ ಸಾರಿ ಹೇಳುವೆನು. ||೬೪-೬೫||

ಈ ಶಿವಪೂಜೆಯೆಂಬುದು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಸಾಧನಭೂತವಾಗಿರುವುದು. ಆ ಶಂಕರನ ಪೂಜೆಯಿಲ್ಲದೇ ಧರ್ಮವೇ ಮೊದಲಾದವುಗಳು ಸಿದ್ಧಿಸಲಾರವು. ಪೂಜೆ ಮತ್ತು ಸ್ಮರಣೆ ಮುಂತಾದವುಗಳಿಂದ ಎಲ್ಲರಿಗೂ ಸುಖವನ್ನುಂಟುಮಾಡುವ ಆ ಶಂಕರನನ್ನು ಪ್ರತಿದಿನವೂ ನಾವು ಪ್ರೀತಿಯಿಂದ ಪೂಜೆಮಾಡಬೇಕು. ||೬೬-೬೭||

ಅಯ್ಯ ಬ್ರಹ್ಮನೇ, ಈ ಧರ್ಮಾರ್ಥ ಕಾಮ ಮೋಕ್ಷಗಳೂ ನನಗೆ ಶಂಕರನ ಪೂಜೆಯಿಂದ ಸಿದ್ಧಿಸಿವೆಯೇ ಹೊರತು ಬೇರೆ ಯಾವುದರಿಂದಲೂ ಇಲ್ಲವೆಂದು ಭಾವಿಸು. ಎಲೈ ವಿಧಿಯೇ, ದೇವತೆಗಳಲ್ಲಾಗಲೀ, ಇತರರಲ್ಲಾಗಲೀ ಆ ಶಿವನಿಗಿಂತ ಬೇರೆಯವರಾರೂ ಮಂಗಳಕರರಲ್ಲವೆಂದು ತಿಳಿ. ಅವನೇ ಸುಖವನ್ನುಂಟುಮಾಡುವನಾದ್ದರಿಂದ ಆ ಶಿವನ ಪೂಜೆಯೇ ಶ್ರೇಷ್ಠವಾದದ್ದು. ||೬೮-೬೯||

ಎಲ್ಲಾ ಸಲಕರಣೆಗಳನ್ನೂ ಸಿದ್ಧಪಡಿಸಿಕೊಂಡು ಮಂಗಳಕರವಾದ ಶಂಕರನನ್ನು ನಿತ್ಯವೂ ಪೂಜೆಮಾಡುವವನಿಗೆ ಆ ಶಂಕರನು ಅವಶ್ಯವಾಗಿ ಸುಖಕರನಾಗು

ಶಂಕರೇತಿ ಮುದಾ ಯಸ್ತು ವದಿಷ್ಯತ್ಯನುವಾಸರಂ ।
ಸ ತು ಧನ್ಯತರೋ ಜ್ಞೇಯಃ ಸತ್ಯಂ ಸತ್ಯಂ ಮಯೋಚ್ಯತೇ ॥೨೦॥

ಸಂಸಾರಸಾಗರಂ ತರ್ತುಂ ತರಿರ್ನಾಮೈವ ಶಾಂಕರಂ ।
ತದನ್ಯಸ್ತು ನ ಸಂಸಾರಘೋರಸಾಗರತಾರಕಂ ॥೨೨॥

ಶಾಂಕರಂ ನಾಮ ವಿಮಲಂ ಮಿಷ್ಟಾನ್ನಿಷ್ಟತರಂ ವಿಧೇ ।
ತನ್ನಾಮ ಮುಕ್ತಿದಂ ಭವ್ಯಂ ಸಂಸಾರಭಯನಾಶಕಂ ॥೨೩॥

ಶಂಕರಸ್ಮರಣಂ ನಿತ್ಯಂ ತಥಾ ಶಂಕರಪೂಜನಂ ।
ತತ್ತ್ಯಾಗೇ ನರಕಾವಾಸೋ ಭವತ್ಯೇವ ನ ಸಂಶಯಃ ॥೨೪॥

ಕೃತಾದಯೋ ಯುಗಾ ಯೇ ತು ತೇಷು ಸರ್ವೇಷು ಸರ್ವದಾ ।
ಪೂಜನೀಯೋ ಮಹಾದೇವೋ ಬ್ರಾಹ್ಮಣಾದ್ಯೈಃ ಸುರೈರಪಿ ॥೨೫॥

ಹರಃ ಸ್ಮರಹರೋ ಬ್ರಹ್ಮನ್ಘೋರಸಂಸಾರತಾರಕಃ ।
ಹತಸ್ಮರೋ ಮಹೇಶೇನ ನ ಸಂಸಾರಪ್ರವರ್ತಕಃ ॥೨೬॥

---

ವನು. ಪ್ರತಿದಿನವೂ 'ಶಂಕರ' ಎಂದು ದಿವ್ಯನಾಮವನ್ನು ಪ್ರೀತಿಯಿಂದ ಉಚ್ಚಾರ ಮಾಡುವವನು ತುಂಬಾ ಧನ್ಯನೆಂಬುದು ಸತ್ಯವು. ಈ ಸಂಸಾರವೆಂಬ ದೊಡ್ಡ ಸಾಗರವನ್ನು ದಾಟಬೇಕಾದರೆ ಆ ಶಂಕರನ ನಾಮುಗಳೆಂಬ ನಾವೆಯೊಂದು ಸಾಧನವೇ ಹೊರತು ಮಿಕ್ಕ ಯಾವುವೂ ಈ ಘೋರಸಂಸಾರವನ್ನು ಎಂದಿಗೂ ನಾಶಮಾಡ ಲಾರವು. ॥೨೦-೨೧-೨೨॥

ಅಯ್ಯ ಬ್ರಹ್ಮನೇ, ಶಂಕರನ ನಿರ್ಮಲವಾದ ದಿವ್ಯನಾಮವು ತುಂಬಾ ರುಚಿ ಕರವಾದುದು. ಮುಕ್ತಿಪ್ರದವಾದ ಈ ದಿವ್ಯನಾಮವು ಸಂಸಾರದ ಭಯವನ್ನು ನಾಶ ಮಾಡುವುದು. ಆ ಶಂಕರನ ಸ್ಮರಣೆ ಮತ್ತು ಪೂಜೆ ಇವುಗಳನ್ನು ಬಿಡುವುದರಿಂದ ನರಕವಾಸವು ಖಂಡಿತವಾಗಿಯೂ ಉಂಟಾಗುವುದೆಂಬುದರಲ್ಲಿ ಸಂಶಯವೇ ಇಲ್ಲ. ॥೨೩-೨೪॥

ಕೃತ, ತ್ರೇತ, ದ್ವಾಪರ ಮತ್ತು ಕಲಿಯುಗಗಳಲ್ಲೆಲ್ಲಾ ಆ ಮಹಾದೇವನನ್ನು ಯಾವಾಗಲೂ ಬ್ರಾಹ್ಮಣನೇ ಮೊದಲಾದ ಸಕಲ ಮಾನವರೂ ದೇವತೆಗಳೂ ಪೂಜಿಸಬೇಕು. ಮನ್ಮಥನನ್ನು ನಾಶಮಾಡಿದ ಆ ಪರಮೇಶ್ವರನು ಈ ಘೋರವಾದ

ಪರಂ ತ್ವವ್ಯಭಿಚಾರೇಣ ಭಕ್ತಿಃ ಕಾರ್ಯಾ ಮಹೇಶ್ವರೇ ।
ಸಾ ನಾಶಯತಿ ಸಂಸಾರಂ ಭಕ್ತಿರವ್ಯಭಿಚಾರಿಣೀ ॥೭೭॥

ಯಥಾ ಪತಿವ್ರತಾ ಶುದ್ಧಾ ನಾನ್ಯಂ ಕಾಮಯತೇ ತಥಾ ।
ಶಾಂಕರಃ ಶಂಕರಾದನ್ಯಂ ನಾರ್ಚಯತ್ಯೇವ ಸರ್ವಥಾ ॥೭೮॥

ಶಾಂಕರಃ ಶಂಕರಾದನ್ಯಂ ಯದ್ಯರ್ಚಯತಿ ಮೋಹತಃ ।
ಸ ಶಾಂಕರಃ ಕಥಂ ಭೂಯಾ ನ ಶಿವೈಕಪರೋ ಯತಃ ॥೭೯॥

ಮೋಕ್ಷೋಽಪಿ ಶಾಂಕರಸ್ಯೈವ ಮೋಕ್ಷೋ ನಾನ್ಯಸ್ಯ ಸರ್ವಥಾ ।
ಸತ್ಯಮೇತತ್ಪುನಃ ಸತ್ಯಂ ಶಪಥಃ ಕ್ರಿಯತೇ ಮಯಾ ॥೮೦॥

ಏತಾವತ್ಕಾಲಪರ್ಯಂತಂ ಶಾಂಕರಾನ್ಯಸ್ಯ ಸರ್ವಥಾ ।
ನ ಜಾತಾ ಮುಕ್ತಿರಗ್ರೇಽಪಿ ನ ಭವಿಷ್ಯತಿ ವಸ್ತುತಃ ॥೮೧॥

---

ಸಂಸಾರದುಃಖವನ್ನು ನಾಶಮಾಡುವನು. ಮನ್ಮಥನೂ ಸಹ ತನ್ನನ್ನು ನಾಶಮಾಡಿದ ಮಹಾದೇವನ ಭಕ್ತರ ವಿಷಯದಲ್ಲಿ ಭಯದಿಂದ ಪೀಡಿಸುತ್ತಿಲ್ಲವಾದ್ದರಿಂದ ಈ ಸಂಸಾರವು ಈಶ್ವರಭಕ್ತರಿಗೆ ಎಂದಿಗೂ ಪ್ರವರ್ತಿಸುವುದಿಲ್ಲ. ||೭೫-೭೬||

ಕೃಪಾಳುವಾದ ಮಹೇಶ್ವರನಲ್ಲಿ ಭಕ್ತಿತೋರಿಸಬೇಕು. ಈ ಭಕ್ತಿಯು ಸಂಸಾರಬಂಧನವನ್ನು ತಪ್ಪದೇ ನಾಶಮಾಡುವುದು. ಪರಿಶುದ್ಧಳಾದ ಪತಿವ್ರತೆಯು ತನ್ನ ಪತಿಯನ್ನಲ್ಲದೆ ಮತ್ತಾರನ್ನೂ ಅಪೇಕ್ಷಿಸದಿರುವಂತೆ ಆ ಶಂಕರನ ಭಕ್ತನು ಲೋಕಶಂಕರನನ್ನು ಬಿಟ್ಟು ಮತ್ತಾರನ್ನೂ ಖಂಡಿತವಾಗಿಯೂ ಪೂಜೆಮಾಡುವುದಿಲ್ಲ. ||೭೭-೭೮||

ಶಾಂಭವನಾದವನು ಶಂಕರನನ್ನಲ್ಲದೆ ಅಜ್ಞಾನದಿಂದ ಮತ್ತಾರನ್ನಾದರೂ ಪೂಜೆಮಾಡುವುದಾದರೆ ಶಂಕರನಲ್ಲಿಯೇ ನಂಬಿಕೆಯಿಲ್ಲ. ಅವನು ಹೇಗೆತಾನೆ ಶಾಂಭವನಾಗುವನು? ಮೋಕ್ಷವೂ ಸಹ ಆ ಶಂಕರನ ಭಕ್ತರಿಗೇ ಹೊರತು ಉಳಿದವರಿಗೆ ಎಂದಿಗೂ ದೊರೆಯಲಾರದು. ಇದು ಸತ್ಯವೆಂದು ನಾನು ಶಪಥಮಾಡಿ ಹೇಳುತ್ತೇನೆ. ||೭೯-೮೦||

ಇಲ್ಲಿಯವರೆಗೂ ಶಂಕರನ ಭಕ್ತರಲ್ಲದವರಿಗೆ ಎಂದಿಗೂ ಮೋಕ್ಷವುಂಟಾಗಿಲ್ಲ. ಇನ್ನು ಮುಂದೂ ವಸ್ತುತಃ ಅದು ಬರುವುದಿಲ್ಲ. ಶಿವಭಕ್ತರಲ್ಲದವರೆಲ್ಲರೂ

ಅಶಾಂಕರಸ್ತು ಸರ್ವೇಽಪಿ ನರಕೇಷು ವಸಂತಿ ಹಿ ।
ತೇಷಾಂ ತು ನಿರ್ಗಮೋ ನಾಸ್ತಿ ಕಲ್ಪಕೋಟಿಶತೈರಪಿ ॥೮೨॥

ಯಮೇನ ತು ಕೃತಃ ಪೂರ್ವಂ ಶಪಥಃ ಕ್ರೂರಚಕ್ಷುಷಾ ।
ಮತ್ಸನ್ನಿಧೌ ಸ ಶಪಥಃ ಕೀದೃಶಸ್ತಂ ವದಾಮ್ಯಹಂ ॥೮೩॥

॥ ಯಮ ಉವಾಚ ॥

ಅಶಾಂಕರಾನ್ಪಾತಯಾಮಿ ನರಕೇಷ್ವನಿಶಂ ಧ್ರುವಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೮೪॥

ಅಶಾಂಕರಾನಯಃಪಿಂಡೈಃ ಸಂತಪ್ತೈಸ್ತಾಡಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೮೫॥

ಅಶೈವಾಂಸ್ತಪ್ತಶಸ್ತ್ರೌಘೈರತ್ಯುಚ್ಚೈಸ್ತಾಡಯಾಮ್ಯಹಂ ।
ಅತ್ರಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೮೬॥

ಅಶೈವಾನ್ವಾಲುಕಾಯಂತ್ರೇ ಸಂತಪ್ತೇ ಭರ್ಜಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೮೭॥

---

ನರಕಗಳಲ್ಲಿ ಬೀಳುವರು. ಇವರಿಗೆ ಕೋಟ್ಯಂತರಕಲ್ಪಗಳು ಕಳೆದರೂ ಅಲ್ಲಿಂದ ಬಿಡುಗಡೆ ಇಲ್ಲ. ॥೮೧-೮೨॥

ಶಿವದ್ರೋಹಿಗಳ ವಿಷಯದಲ್ಲಿ ತುಂಬಾ ಕ್ರೂರನಾದ ಆ ಯಮನು ನನ್ನ ಸಮಕ್ಷಮದಲ್ಲಿಯೇ ಪ್ರತಿಜ್ಞೆಮಾಡಿದ್ದನ್ನು ವಿವರಿಸುವೆನು ಕೇಳು. ॥೮೩॥

"ಶಂಕರನ ಭಕ್ತರಲ್ಲದವರನ್ನು ಅನವರತವೂ ನಾನು ನಿರ್ದಯನಾಗಿ ನರಕಗಳಲ್ಲಿ ತಳ್ಳುವೆನು. ಈ ವಿಷಯದಲ್ಲಿ ಎಲ್ಲವನ್ನೂ ಸ್ವತಃ ನೋಡುವ ಆ ಮಹಾದೇವನೇ ಸಾಕ್ಷಿಯಾಗಿರುವನು. ಶಂಕರದ್ರೋಹಿಗಳನ್ನು ಕಾದ ಕಬ್ಬಿಣದ ಗುಂಡುಗಳಿಂದ ಚೆನ್ನಾಗಿ ನಾನು ಹೊಡೆಯುತ್ತೇನೆಂಬುದರಲ್ಲಿ, ನಿತ್ಯಮಂಗಳ ವಿಗ್ರಹನೂ, ಎಲ್ಲವನ್ನೂ ಸ್ವತಃ ನೋಡುವವನೂ ಆದ ಆ ಮಹಾದೇವನೇ ಸಾಕ್ಷಿಯು. ॥೮೪-೮೫॥

ಶಿವದ್ರೋಹಿಗಳಾದವರನ್ನು ಕಾದ ದೊಡ್ಡದೊಡ್ಡ ಆಯುಧಗಳ ಸಮೂಹದಿಂದ ನಾನು ಹೊಡೆಯುತ್ತೇನೆ. ಮತ್ತು ಕಾದ ಶೂಲಯಂತ್ರಕ್ಕೆ ಏರಿಸುವೆನು. ಈ

ಅಶೈವಾನ್ಪೂಯಕುಂಡೇಷು ಸರ್ವದಾ ಪಾತಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೮೮॥

ಅಶೈವಾನಾಯಸಸ್ತಂಭೇ ಬದ್ಧ್ವಾ ಸಂತಾಡಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೮೯॥

ಅಶೈವಾನ್ಮಲಕುಂಡೇಷು ಸರ್ವದಾ ಪಾತಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೦॥

ಅಶೈವಾನಗ್ನಿಕುಂಡೇಷು ಸರ್ವದಾ ಪಾತಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೧॥

ಅಶೈವಾಂಸ್ತಪ್ತಶಸ್ತ್ರಾಗ್ರೇ ಸರ್ವದಾ ಪಾತಯಾಮ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೨॥

ಅಶಾಂಕರಾನ್ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಬ್ರಹ್ಮಘ್ನಮಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೩॥

---

ವಿಷಯದಲ್ಲಿ ಸದಾಶಿವನೂ ಸರ್ವಸಾಕ್ಷಿಯೂ ಆದ ಆ ಮಹಾದೇವನೇ ಸಾಕ್ಷಿಯಾಗಿರುವನು. ॥೮೬-೮೭॥

ಶಿವದ್ರೋಹಿಗಳನ್ನು ಕೀವಿನ ಕುಂಡಗಳಲ್ಲಿ ತಳ್ಳುತ್ತಲೂ, ಕಬ್ಬಿಣದ ಕಂಬಗಳಿಗೆ ಕಟ್ಟಿ ಚೆನ್ನಾಗಿ ಹೊಡೆಯುತ್ತಲೂ ಹಿಂಸೆಕೊಡುವೆನೆಂಬುದರಲ್ಲಿ ಎಲ್ಲವನ್ನೂ ನೋಡುತ್ತ ನಿತ್ಯಮಂಗಳಸ್ವರೂಪಿಯಾಗಿರುವ ಆ ಮಹಾದೇವನೇ ಸಾಕ್ಷಿಯೆಂದು ತಿಳಿ. ॥೮೮-೮೯॥

ಶಿವದ್ರೋಹಿಗಳನ್ನು ಯಾವಾಗಲೂ ಅಮೇಧ್ಯಕುಂಡಗಳಲ್ಲಿಯೂ ಅಗ್ನಿಕುಂಡಗಳಲ್ಲಿಯೂ ನಾನು ತಳ್ಳುತ್ತೇನೆ. ಅಲ್ಲದೇ ಕಾದ ಆಯುಧಗಳ ತುದಿಗಳಿಂದ ಚುಚ್ಚಿ ಹಿಂಸೆಮಾಡುತ್ತೇನೆ. ಈ ವಿಷಯದಲ್ಲಿ ನಿತ್ಯಮಂಗಳಸ್ವರೂಪನೂ ಎಲ್ಲವನ್ನೂ ಸ್ವತಃ ನೋಡುತ್ತಿರುವನೂ ಆದ ಆ ಮಹಾದೇವನೇ ಸಾಕ್ಷಿಯು. ॥೯೦-೯೧-೯೨॥

ನಾನು ಸಕಲಕರ್ಮಗಳನ್ನೂ ಸ್ವತಃ ನೋಡುತ್ತಾ ನಿತ್ಯಮಂಗಳಸ್ವರೂಪನಾಗಿರುವ ಆ ಮಹಾದೇವನ ಸಾಕ್ಷಿಯಾಗಿ ಬ್ರಹ್ಮಹತ್ಯಾ ಮತ್ತು ಸ್ನೇಹಿತನ

ಅಶಾಂಕರಾನ್ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಮಿತ್ರಘ್ನಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೪॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಪುತ್ರಘ್ನಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೫॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ತಾತಘ್ನಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೬॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಬಾಲಘ್ನಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೭॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಮದ್ಯಪಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೮॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಭ್ರೂಣಘ್ನಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೯೯॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ವೀರಘ್ನಮುಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೦॥

---

ಕೊಲೆ ಇವುಗಳನ್ನು ಮಾಡಿದವನನ್ನು ಬಿಟ್ಟರೂ ಶಂಕರದ್ರೋಹಿಯಾದವರನ್ನೆಂದಿಗೂ ಖಂಡಿತ ಬಿಡಲಾರೆನು. ॥೯೩-೯೪॥

ಮಗ, ತಂದೆ ಮತ್ತು ಹುಡುಗರು ಇವರನ್ನು ಕೊಂದವರನ್ನು ಒಂದುವೇಳೆ ಬಿಟ್ಟರೂ, ಶಂಕರನ ವಿಷಯದಲ್ಲಿ ಭಕ್ತಿತೋರಿಸದೇ ಶಿವದ್ರೋಹಿಗಳಾಗಿರುವರನ್ನು ಎಲ್ಲವನ್ನೂ ನೋಡುತ್ತಾ ನಿತ್ಯಮಂಗಳಸ್ವರೂಪನಾಗಿರುವ ಆ ಮಹಾದೇವನ ಸಾಕ್ಷಿಯಾಗಿಯೂ ಬಿಡಲಾರೆನು. ॥೯೫-೯೬-೯೭॥

ಹೆಂಡ ಕುಡಿಯುವವನು, ಭ್ರೂಣಹತ್ಯಾದೋಷಕ್ಕೊಳಗಾದವನೂ (ಅಂದರೆ ಗರ್ಭಪಿಂಡವನ್ನು ಅಥವ ಚಿಕ್ಕಮಕ್ಕಳನ್ನು ಕೊಂದವನೂ) ವೀರರನ್ನು ಕೊಂದವನೂ, ಇವರನ್ನೆಲ್ಲಾ ಒಂದುವೇಳೆ ಬಿಟ್ಟರೂ ಆ ಮಹಾದೇವನ ಸಾಕ್ಷಿಯಾಗಿಯೂ ಶಂಕರನಲ್ಲಿ ದ್ರೋಹಿಗಳೆನಿಸಿರುವರನ್ನು ಮಾತ್ರ ಎಂದೆಂದಿಗೂ ನಾನು ಬಿಡಲಾರೆನು. ॥೯೮-೯೯-೧೦೦॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ರಾಜಘ್ನಮಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೧॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಸ್ವರ್ಣಾಪಹಾರಿಣಃ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೨॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ರಕ್ಷ್ಯೇಽನ್ಯವನಿತಾಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೩॥

ಅಶಾಂಕರಂ ನ ಸಂತ್ಯಕ್ಷ್ಯೇ ತ್ಯಕ್ಷ್ಯೇ ಭೂಚೋರಮಪ್ಯಹಂ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೪॥

ಅಶೈವಾನ್ಸ್ದಲಯಾಮ್ಯೇವ ತಪ್ತಘೋರಘರಟ್ಟನೈಃ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೫॥

ಅಶೈವಾಂಸ್ತಪ್ತಮುಸಲೈಃ ಕಂಡಯಾಮಿ ಪುನಃ ಪುನಃ ।
ಅತ್ರ ಸಾಕ್ಷೀ ಮಹಾದೇವಃ ಸರ್ವದ್ರಷ್ಟಾ ಸದಾಶಿವಃ ॥೧೦೬॥

---

ರಾಜನನ್ನು ಕೊಲೆಮಾಡಿದವನು, ಚಿನ್ನವನ್ನು ಕದ್ದವನು, ಕಂಡವರ ಹೆಂಗಸರನ್ನು ಕೊಂಡವನು ಇವರನ್ನು ಬೇಕಾದರೂ ನಾನು ಬಿಡಬಲ್ಲೆನು. ಆದರೆ ಎಲ್ಲವನ್ನೂ ನೋಡುತ್ತಿರುವ ಆ ನಿತ್ಯಮಂಗಳವಿಗ್ರಹನಾದ ಮಹಾದೇವನ ಸಾಕ್ಷಿಯಾಗಿ ಶಂಕರದ್ರೋಹಿಯನ್ನು ಮಾತ್ರ ಬಿಡಲಾರೆನು. ॥೧೦೧-೧೦೨-೧೦೩॥

ಭೂಮಿಯನ್ನಪಹರಿಸಿದವನನ್ನಾದರೂ ನಾನು ಬಿಡುವೆನು. ಶಿವದ್ರೋಹಿಗಳನ್ನೆಂದಿಗೂ ಬಿಡುವುದಿಲ್ಲ. ಅವರನ್ನು ಕಾದ ಭಯಂಕರವಾದ ಗರಗಸಗಳಿಂದ ಚೂರುಮಾಡುತ್ತಾ ಚೆನ್ನಾಗಿ ಕಾದಿರುವ ಮುಸಲಾಯುಧಗಳಿಂದ ತುಂಡುತುಂಡಾಗಿ ಕತ್ತರಿಸಿಬಿಡುವೆನು. ಈ ವಿಷಯದಲ್ಲಿ ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುತ್ತಿರುವ ನಿತ್ಯಮಂಗಳವಿಗ್ರಹನಾದ ಆ ಮಹಾದೇವನೇ ಸಾಕ್ಷಿಯಾಗಿರುವನು. ॥೧೦೪-೧೦೫-೧೦೬॥

ಉಪೇಂದ್ರೋ ವಾ ಮಹೇಂದ್ರೋ ವಾ ಯಶ್ಚ ಕಶ್ಚಿದಶಾಂಕರಃ ।
ತವಮಾನೀಯ ಶಿತೈಃ ಶಸ್ತ್ರೈಸ್ತಾಡಯಿಷ್ಯೇ ನ ಸಂಶಯಃ ॥೧೦೭॥

ಇತಿ ಪೂರ್ವಂ ಯಮೇನೋಕ್ತಃ ಶಪಥಶ್ಚ ಕೃತಸ್ತದಾ ।
ತತ್ಕೃತಃ ಶಪಥೋ ಮಿಥ್ಯಾ ಕದಾಪಿ ನ ಭವಿಷ್ಯತಿ ॥೧೦೮॥

ಮಯಾ ತು ಶಂಕರಸ್ಯೈವ ಪೂಜನಂ ಕ್ರಿಯತೇ ಮುದಾ ।
ಮಮ ಪೂಜ್ಯತಮಃ ಕೋಽಪಿ ಶಂಕರಾನ್ಯೋ ನ ದೃಶ್ಯತೇ ॥೧೦೯॥

ದೇವದೇವೋತ್ತಮಃ ಶಂಭುಸ್ಸರ್ವದೇವಶಿಖಾಮಣಿಃ ।
ಸ ಯೇನ ಪೂಜ್ಯತೇ ನಿತ್ಯಂ ಸ ತು ಧನ್ಯತರೋ ಧ್ರುವಂ ॥೧೧೦॥

ಶಂಕರಪ್ರವಣಂ ಚಿತ್ತಂ ಯಸ್ಯ ಜಾತಂ ಭವಿಷ್ಯತಿ ।
ನ ತಸ್ಮಾದಧಿಕೋ ಧನ್ಯಃ ಸತ್ಯಂ ಸತ್ಯಂ ನ ಸಂಶಯಃ ॥೧೧೧॥

ಯಸ್ಯಾಸ್ತಿ ಶಂಕರೇ ಭಕ್ತಿರವಿಚ್ಛಿನ್ನಾ ಜಗತ್ಪ್ರಭೌ ।
ತಸ್ಯ ಮೋಕ್ಷಾಂಗನಾಪಾಂಗಭೃಂಗಸಂಗಃ ಸದಾ ಭವೇತ್ ॥೧೧೨॥

---

ಶಿವದ್ರೋಹಿಯಾದವನು ವಿಷ್ಣುವಾಗಲೀ, ಇಂದ್ರನಾಗಲೀ ಯಾರೇಬೇಕಾದರೂ ಆಗಲೀ ಅವರನ್ನೆಳತಂದು ಹರಿತವಾದ ಕತ್ತಿಗಳಿಂದ ಸಂದೇಹವಿಲ್ಲದೇ ಹೊಡೆಯುತ್ತೇನೆ"ಂದು ಹಿಂದೆ ಯಮನು ಪ್ರತಿಜ್ಞೆಮಾಡಿದ್ದನು. ಅಯ್ಯ ಬ್ರಹ್ಮನೇ, ಆ ಯಮನ ಪ್ರತಿಜ್ಞೆಯು ಎಂದಿಗೂ ಸುಳ್ಳಾಗಲಾರದೆಂದು ತಿಳಿ '' ಎಂದು ವಿಷ್ಣುವು ಬ್ರಹ್ಮನಿಗೆ ಹೇಳಿದನು. ॥೧೦೭-೧೦೮॥

ಅಯ್ಯ ಬ್ರಹ್ಮನೇ, ನಾನು ಆ ಶಂಕರನನ್ನೇ ಪ್ರೀತಿಯಿಂದ ಪೂಜೆಮಾಡುತ್ತೇನೆ. ನನಗೆ ಅತ್ಯಂತ ಪೂಜ್ಯವಾದ ದೈವವು ಆ ಶಂಕರನಲ್ಲದೇ ಬೇರೆಯಲ್ಲ. ದೇವದೇವೋತ್ತಮನೂ, ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನೂ ಆದ ಆ ಶಂಭುವನ್ನು ನಿತ್ಯವೂ ಪೂಜೆಮಾಡುವವನೇ ನಿಜವಾಗಿ ಧನ್ಯನು. ॥೧೦೯-೧೧೦॥

ಆ ಶಂಕರನಲ್ಲಿಯೇ ತಲ್ಲೀನವಾಗಿರುವ ಮನಸ್ಸುಳ್ಳವನಿಗಿಂತಲೂ ಹೆಚ್ಚಾದ ಧನ್ಯಶಾಲಿಯು ಸತ್ಯವಾಗಿಯೂ ಇಲ್ಲವೆಂದು ಸ್ವಲ್ಪವೂ ಸಂದೇಹವಿಲ್ಲದೇ ಹೇಳುವೆನು. ಜಗದೊಡೆಯನಾದ ಆ ಶಂಕರನಲ್ಲಿ ತಡೆಯಿಲ್ಲದ ಭಕ್ತಿಯುಳ್ಳವನಿಗೆ ಯಾವಾಗಲೂ ಮೋಕ್ಷವೆಂಬ ಅಂಗನೆಯ ಕಡೆಗಣ್ಣೆಂಬ ಭ್ರಮರಗಳ ಸಹವಾಸವೂ ತಪ್ಪದೇ

ಸ ಏವ ಮುಕ್ತಿಕಾಂತಾಯಾಃ ಕಾಂತ ಇತ್ಯುಚ್ಯತೇ ಬುಧೈಃ ।
ಯಃ ಕರೋತಿ ಮಹಾದೇವೇ ಭಕ್ತಿಮವ್ಯಭಿಚಾರಿಣೀಂ ॥೧೧೩॥

ಮಹಾದೇವಸಮೋ ದೇವೋ ನ ಭೂತೋ ನ ಭವಿಷ್ಯತಿ ।
ವಯಂ ಯಸ್ಯ ಮಹೇಶಸ್ಯ ದಾಸಾಃ ಸರ್ವೇಽಪಿ ಪದ್ಮಜ ॥೧೧೪॥

ಯೋ ದೇವೇಷು ಮಹಾನ್ ದೇವಃ ಸ ಮಹಾದೇವ ಉಚ್ಯತೇ ।
ತತ್ತುಲ್ಯೋಽನ್ಯಃ ಕಥಂ ಭೂಯಾದ್ದೇವೇಷ್ವನ್ಯೇಷು ವಾ ವಿಧೇ ॥೧೧೫॥

ಮನುಷ್ಯೇಷು ಯಥಾಶ್ರೇಷ್ಠೋ ಬ್ರಾಹ್ಮಣೋ ಬ್ರಹ್ಮವಿತ್ತಮಃ ।
ತಥೈವ ಶ್ರೀಮಹಾದೇವೋ ದೇವೇಷು ಶ್ರೇಷ್ಠ ಉಚ್ಯತೇ ॥೧೧೬॥

ಚತುಷ್ಪದೇಷು ಗೌಃ ಶ್ರೇಷ್ಠಾ ಯಥಾ ಸ್ಪೃಷ್ಟ್ವಾಘನಾಶಿನೀ ।
ತಥೈವ ಶ್ರೀಮಹಾದೇವೋ ದೇವೇಷು ಶ್ರೇಷ್ಠ ಉಚ್ಯತೇ ॥೧೧೭॥

---

ಉಂಟಾಗುವುದು. (ಅಂದರೆ ಮೋಕ್ಷಾಂಗನೆಯು ಈಶ್ವರಪೂಜಕರನ್ನು ತನ್ನ ಭ್ರಮರದಂತಿರುವ ಕಪ್ಪಾದ ಅಪಾಂಗದೃಷ್ಟಿಯನ್ನು ಬೀರಿ ವರಿಸುವಳೆಂದು ಭಾವವು) ॥೧೧೧-೧೧೨॥

ಅಯ್ಯ ಕಮಲಸಂಭವನೇ, ಆ ಮಹಾದೇವನಲ್ಲಿ ಎಡಬಿಡದೆ ಭಕ್ತಿಯನ್ನು ಇಟ್ಟಿರುವವನೇ ಮೋಕ್ಷಾಂಗನೆಯ ಪತಿಯೆಂದು ಪಂಡಿತರು ಹೇಳುವರು. ಆ ಮಹಾದೇವನಿಗೆ ಸಮನಾದ ಮತ್ತೊಬ್ಬ ದೇವರು ಎಂದಿಗೂ ಇಲ್ಲವೆಂದು ತಿಳಿ. ನಾವೆಲ್ಲರೂ ಆ ಮಹೇಶ್ವರನ ದಾಸರು. ॥೧೧೩-೧೧೪॥

ಅಯ್ಯ ಬ್ರಹ್ಮನೇ, ದೇವತೆಗಳಲ್ಲಿ ದೊಡ್ಡವನಾದವನಿಗೆ ಮಹಾದೇವನೆಂದು ಹೆಸರು ಬಂದಿರುವುದು. ಹೀಗಿರುವಾಗ ಇತರ ದೇವತೆಗಳಲ್ಲಿ ಅಥವಾ ಗಂಧರ್ವಾದಿಗಳಲ್ಲಿ ಈ ಮಹಾದೇವನಿಗೆ ಸಮನಾದವನು ಹೇಗೆ ತಾನೇ ಇದ್ದಾನು? ಮನುಷ್ಯರಲ್ಲೆಲ್ಲಾ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಂತೆ ಆ ಮಹಾದೇವನು ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂದು ಕರೆಯಲ್ಪಡುವನು. ॥೧೧೫-೧೧೬॥

ನಾಲ್ಕುಕಾಲಿನ ಪ್ರಾಣಿಗಳಲ್ಲೆಲ್ಲಾ ಸ್ಪರ್ಶಮಾತ್ರದಿಂದ ಸಕಲ ಪಾಪಗಳನ್ನೂ ನಾಶಮಾಡಬಲ್ಲ ಹಸುವಿನಂತೆ ಆ ಮಹಾದೇವನು ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂದು

ಲೋಹೇಷು ಕಾಂಚನಂ ಶುದ್ಧಂ ಯಥಾಶ್ರೇಷ್ಠಮಿತಿ ಶ್ರುತಂ ।
ತಥೈವ ಶ್ರೀಮಹಾದೇವೋ ದೇವೇಷು ಶ್ರೇಷ್ಠ ಉಚ್ಯತೇ ॥೧೧೮॥

ಸಾಗರೇಷು ಯಥಾಶ್ರೇಷ್ಠಃ ಕ್ಷೀರಾಬ್ಧಿರಿತಿ ಸಂಶ್ರುತಃ ।
ತಥೈವ ಶ್ರೀಮಹಾದೇವೋ ದೇವೇಷು ಶ್ರೇಷ್ಠ ಉಚ್ಯತೇ ॥೧೧೯॥

ಮುಕ್ತಿಕ್ಷೇತ್ರೇಷು ಸರ್ವೇಷು ಕಾಶೀ ಶ್ರೇಷ್ಠಾ ಯಥಾ ಶ್ರುತಾ ।
ತಥೈವ ಶ್ರೀಮಹಾದೇವೋ ದೇವೇಷು ಶ್ರೇಷ್ಠ ಉಚ್ಯತೇ ॥೧೨೦॥

ಯಥಾ ಸ್ವರ್ಗಾದಿಲೋಕೇಷು ಕೈಲಾಸಃ ಶ್ರೇಷ್ಠ ಉಚ್ಯತೇ ।
ತಥೈವ ಶ್ರೀಮಹಾದೇವೋ ದೇವೇಷು ಶ್ರೇಷ್ಠ ಉಚ್ಯತೇ ॥೧೨೧॥

ಏತಾದೃಶೋ ಮಹಾದೇವೋ ವೇದವೇದಾಂತಸಂಶ್ರುತಃ ।
ಸ್ಮರ್ತವ್ಯಃ ಪೂಜನೀಯಶ್ಚ ಸರ್ವಥಾ ಸರ್ವದಾ ಜನೈಃ ॥೧೨೨॥

ಮಹಾದೇವಮನಭ್ಯರ್ಚ್ಯ ಯೋ ಮೋಕ್ಷಮಭಿವಾಂಛತಿ ।
ತಾದೃಶಸ್ಯ ತು ಸಾ ವಾಂಛಾ ನಿಷ್ಫಲೈವ ಭವಿಷ್ಯತಿ ॥೧೨೩॥

---

ಹೇಳಲ್ಪಡುವನು. ಲೋಹಗಳಲ್ಲೆಲ್ಲಾ ಪರಿಶುದ್ಧವಾದ ಚಿನ್ನದಂತೆ ದೇವತೆಗಳಲ್ಲೆಲ್ಲಾ ಆ ಮಹಾದೇವನು ಶ್ರೇಷ್ಠನೆನಿಸಿರುವನು. ॥೧೧೭-೧೧೮॥

ಸಾಗರಗಳಲ್ಲೆಲ್ಲಾ ಕ್ಷೀರಸಮುದ್ರದಂತೆಯೂ, ಮೋಕ್ಷಪ್ರದವಾದ ಕ್ಷೇತ್ರಗಳಲ್ಲೆಲ್ಲಾ ಕಾಶಿಯಂತೆಯೂ, ಸ್ವರ್ಗ ಮುಂತಾದ ಲೋಕಗಳಲ್ಲಿ ಕೈಲಾಸಲೋಕವು ಶ್ರೇಷ್ಠವೆನಿಸಿ ಪ್ರಖ್ಯಾತವಾಗಿರುವಂತೆಯೂ, ಆ ಮಹಾದೇವನು ದೇವತೆಗಳಲ್ಲೆಲ್ಲಾ ಶ್ರೇಷ್ಠನೆನಿಸಿರುವನು. ॥೧೧೯-೧೨೦-೧೨೧॥

ವೇದ ಮತ್ತು ವೇದಾಂತಗಳಲ್ಲಿ ಪ್ರಸಿದ್ಧನಾಗಿರುವ ಈ ಮಹಾದೇವನನ್ನು ಜನಗಳು ಯಾವಾಗಲೂ ಸ್ಮರಣೆಮಾಡುತ್ತಾ ಅವಶ್ಯವಾಗಿ ಪೂಜೆಮಾಡಬೇಕು. ಆ ಮಹಾದೇವನನ್ನು ಪೂಜೆಮಾಡದೇ ಮೋಕ್ಷವನ್ನಪೇಕ್ಷೆಮಾಡುವವನ ಬಯಕೆಯು ವ್ಯರ್ಥವಾಗುವುದು ಖಂಡಿತ. ॥೧೨೨-೧೨೩॥

ಮೋಕ್ಷಹೇತುರ್ಮಹಾದೇವಸ್ತಸ್ಮಾನ್ಮೋಕ್ಷಾರ್ಥಿಭಿರ್ಜನೈಃ ।
ಮಹಾದೇವಃ ಪ್ರಯತ್ನೇನ ಪೂಜನೀಯೋಽನ್ವಹಂ ಮುದಾ ॥೧೨೪॥

ಮಹಾದೇವಃ ಸುರಾಧ್ಯಕ್ಷೋ ಮೋಕ್ಷದಾತಾ ತತಃ ಸದಾ ।
ಪೂಜ್ಯತೇ ಸರ್ವಭಾವೇನ ಮಯಾ ಸಾದರಮನ್ವಹಂ ॥೧೨೫॥

ಮಹಾದೇವಮುಪಾಶ್ರಿತ್ಯ ಸರ್ವದಾ ನಿವಸಾಮ್ಯಹಂ ।
ತಾರಯಿಷ್ಯತಿ ಸಂಸಾರಾನ್ಮಾಮತ್ಯಂತಕೃಪಾನಿಧಿಃ ॥೧೨೬॥

ಮತ್ಪಿತಾ ಭಗವಾಂಛಂಭುರ್ಮಾತಾ ಸುಭಗಾ ಶಿವಾ ।
ಕುಮಾರಗಣನಾಥೌ ತು ವಿಧೇ ಮದ್ಭ್ರಾತರಾವುಭೌ ॥೧೨೭॥

ಸಖಾಯಃ ಶಾಂಕರಾಃ ಸರ್ವೇ ತತ್ತಲ್ಲೋಕನಿವಾಸಿನಃ ।
ಶಂಭುರೇವ ಕೃಪಾಂಭೋಧಿರಾರಾಧ್ಯಂ ದೈವತಂ ಮಮ ॥೧೨೮॥

---

ಮೋಕ್ಷದೊರೆಯಲು ಕಾರಣಭೂತನಾಗಿರುವ ಆ ಮಹಾದೇವನೇ ಆಗಿರುವುದರಿಂದ ಮೋಕ್ಷವನ್ನು ಬಯಸುವ ಜನಗಳು ನಿಯಮದಿಂದ ಆ ಮಹಾದೇವನನ್ನು ಯಾವಾಗಲೂ ಪ್ರೀತಿಯಿಂದ ಪೂಜೆಮಾಡಬೇಕು. ದೇವತೆಗಳಿಗೆಲ್ಲಾ ಅಧ್ಯಕ್ಷನಾಗಿರುವ ಮಹಾದೇವನು ತಾನೇ ಮೋಕ್ಷಪ್ರದನಾಗಿರುವುದರಿಂದ ನಾನು ಎಲ್ಲಾ ಭಾವನೆಗಳಿಂದಲೂ ಆದರಪೂರ್ವಕವಾಗಿ ಪ್ರತಿದಿನವೂ ಆ ಮಹಾದೇವನನ್ನು ಪೂಜೆಮಾಡುತ್ತಿರುವೆನು. ॥೧೨೪-೧೨೫॥

ನಾನು ಯಾವಾಗಲೂ ಆ ಮಹಾದೇವನನ್ನೇ ಆಶ್ರಯಿಸಿ ವಾಸಮಾಡುತ್ತಿರುವೆನು. ದಯಾಸಮುದ್ರನಾದ ಆ ಶಂಕರನು ನನ್ನನ್ನು ಈ ಸಂಸಾರದಿಂದ ಉದ್ಧಾರಮಾಡುತ್ತಾನೆ. ಭಗವಂತನಾದ ಆ ಶಂಕರನು ನನ್ನ ತಂದೆಯು, ಸೌಭಾಗ್ಯ ಸಂಪನ್ನಳಾದ ಆ ಪಾರ್ವತೀದೇವಿಯೇ ನನಗೆ ತಾಯಿ. ಅಯ್ಯ ಬ್ರಹ್ಮನೇ, ಷಣ್ಮುಖಸ್ವಾಮಿ ಮತ್ತು ಗಣಪತಿ ಇವರಿಬ್ಬರೂ ನನ್ನ ಸಹೋದರರೆಂದು ತಿಳಿ. ॥೧೨೬-೧೨೭॥

ಆಯಾ ಲೋಕಗಳಲ್ಲಿ ವಾಸಮಾಡುತ್ತಿರುವ ಆ ಶಂಕರನ ಭಕ್ತರೆಲ್ಲರೂ ನನ್ನ ಸ್ನೇಹಿತರು. ದಯಾಸಾಗರನಾದ ಆ ಶಂಭುವೇ ನನಗೆ ಪೂಜಾರ್ಹವಾದ ದೈವವಾಗಿರುವನು. ಇಂತಹ ಮಹಾಭಾಗ್ಯವು ನನಗೆ ದೊರೆತಿದ್ದು ನನ್ನ ಅಪಾರ ತಪಸ್ಸಿನ

ಏತಾದೃಶಂ ಮಹದ್ಭಾಗ್ಯಂ ಮಮ ಭೂರಿತಪಃ ಫಲಂ ।
ಈದೃಶಂ ಭಾಗ್ಯಮನ್ಯಸ್ಯ ಕದಾಪಿ ನ ಭವಿಷ್ಯತಿ ॥೧೨೯॥

ಸ್ವಪ್ನೇಽಪಿ ಭಗವಾಂಛಂಭುರ್ಭಕ್ತಭೀಮಭಯಾಪಹಃ ।
ಭೂರಿಭಾವುಕಭಾರೇಣ ದೃಶ್ಯತೇ ಸತತಂ ಮಯಾ ॥೧೩೦॥

ದೇವತಾಸಾರ್ವಭೌಮೋಽಯಂ ಭರ್ಗೋ ಭೀಮೋ ಭವಃ ಪ್ರಭುಃ ।
ಪ್ರಭವೋ ವಿಭವೋ ಭೂತಿಃ ಸಂಭೂತಿರ್ಭವಭಂಜಕಃ ॥೧೩೧॥

ಭೂರಿಭಾಗ್ಯಪ್ರಭಾವೇನ ಶಂಭೋರ್ಭಕ್ತಿಃ ಪ್ರಜಾಯತೇ ।
ನಾಲ್ಪಭಾಗ್ಯೇನ ಯದ್ಭಕ್ತ್ಯಾ ಭವಬಂಧವಿಮೋಚನಂ ॥೧೩೨॥

ಸುಭಗೈಃ ಸೇವತೇ ಶಂಭುರ್ಭಗವಾನ್ ಭಕ್ತವತ್ಸಲಃ ।
ಸಂಪ್ರಾಪ್ಯತೇ ಮೋಕ್ಷಲಕ್ಷ್ಮೀಃ ಸುಭಗೈಃ ಶಾಂಭವೈರ್ಜನೈಃ ॥೧೩೩॥

---

ಫಲವೇ ಸರಿ! ಇಂತಹ ಭಾಗ್ಯವೂ ಯಾವಾಗಲೂ ಮತ್ತಾರಿಗೂ ಬರಲಾರದು. ತನ್ನ ಭಕ್ತರಿಗೆ ಕನಸ್ಸಿನಲ್ಲುಂಟಾಗುವ ಭಯಂಕರವಾದ ಭಯಗಳನ್ನೆಲ್ಲಾ ಭಗವಂತನಾದ ಆ ಶಂಭುವು ಹೋಗಲಾಡಿಸುವನು. ನನ್ನ ವಿಷಯದಲ್ಲಾದರೋ ಅಪಾರವಾದ ಮಂಗಳಗಳ ಹೊರೆಯನ್ನೇ ಹೇರಿರುವನು. ॥೧೨೮-೧೨೯-೧೩೦॥

ದೇವತೆಗಳಿಗೆಲ್ಲಾ ಚಕ್ರವರ್ತಿಯಾದ ಈ ಪರಮೇಶ್ವರನು ಮನ್ಮಥ ಮತ್ತು ಯಮ ಮುಂತಾದವರನ್ನೆಲ್ಲಾ ಧ್ವಂಸಮಾಡಿದವನು. ವಿರೋಧಿಗಳಿಗೆ ಭಯಂಕರ ಸ್ವರೂಪನು. ಸಕಲ ಜಗದುತ್ಪತ್ತಿಗೆ ಕಾರಣನು. ಸರ್ವಸಮರ್ಥನು. ಸಂಸಾರ ಬಂಧನದಿಂದ ಬಿಡುಗಡೆ ಹೊಂದಿದವನು. ವಿಶೇಷ ವೈಭವವುಳ್ಳವನು. ಐಶ್ವರ್ಯವಂತನು, ಸಮಸ್ತ ಐಶ್ವರ್ಯಗಳಿಗೂ ಆಶ್ರಯನು, ಈ ಸಂಸಾರ ಪಾಶವನ್ನು ನಾಶಮಾಡುವವನು, ಲೋಕದಲ್ಲಿ ಅಪಾರವಾದ ಐಶ್ವರ್ಯಪ್ರಭಾವದಿಂದ ಆ ಶಂಭುವಿನಲ್ಲಿ ಭಕ್ತಿಯುಂಟಾಗುತ್ತದೆ. ಆ ಶಂಕರನ ಭಕ್ತಿಯು ಸ್ವಲ್ಪವಾದ ಅದೃಷ್ಟದಿಂದ ಎಂದಿಗೂ ಉಂಟಾಗಲಾರದು. ಈ ಮಹಾದೇವನಲ್ಲಿಡುವ ಭಕ್ತಿಯಿಂದ ಸಂಸಾರ ಬಂಧನವು ಬಿಡುಗಡೆಯಾಗುತ್ತದೆ. ॥೧೩೧-೧೩೨॥

ತುಂಬಾ ಮಹಿಮೆಯುಳ್ಳವರು ಮಾತ್ರ ಭಕ್ತರಲ್ಲಿ ಪ್ರೀತಿಯುಳ್ಳ ಆ ಭಗವಂತನಾದ ಶಂಭುವನ್ನು ಸೇವಿಸುತ್ತಾರೆ. ಅಂತಹ ಶೈವರಿಂದಲೇ ಆ ಮೋಕ್ಷಲಕ್ಷ್ಮಿಯು ಹೊಂದಲ್ಪಡುವಳು. ಶಂಭುವಿನ ಭಕ್ತರೇ ಪೂರ್ಣ ಭಾಗ್ಯವಂತರು. ಆ ದೇವನಲ್ಲಿ

ಶಾಂಭವಾ ಏವ ಸುಭಗಾ ಸುಭಗಾ ಶಂಭುಭಾವನಾ ।
ಯಯಾ ಭಾವನಯಾ ಸಾಕ್ಷಾನ್ಮೋಕ್ಷಲಕ್ಷ್ಮೀರವಾಪ್ಯತೇ ॥೧೩೪॥

ಅನನ್ಯಶರಣಾ ನಿತ್ಯಂ ಯೇಽರ್ಚಯಂತಿ ಮಹೇಶ್ವರಂ ।
ತೈರೇವ ಸರ್ವಸೌಖ್ಯಾನಿ ಪ್ರಾಪ್ತವ್ಯಾನಿ ನ ಸಂಶಯಃ ॥೧೩೫॥

ಉದ್ಧೂಲ್ಯ ಭಸ್ಮನಾಂಗಾನಿ ಸರ್ವದಾ ವಿಧಿಪೂರ್ವಕಂ ।
ಯಃ ಶಿವಾರಾಧನಂ ಕುರ್ಯಾತ್ಸ ಧನ್ಯಃ ಸತ್ಯಮುಚ್ಯತೇ ॥೧೩೬॥

ಯಸ್ತು ನಿತ್ಯಂ ಪ್ರಯತ್ನೇನ ಶಿವಸ್ಮರಣಮಾದರಾತ್ ।
ಕರೋತಿ ಭೂತಿಪೂತಾಂಗಃ ಸ ಧನ್ಯ ಇತಿ ಗೀಯತೇ ॥೧೩೭॥

ಪುರಾ ಕಶ್ಚನ ವಿಪ್ರೋಽಭೂದ್ಧಿಮವದ್ದೇಶಸಂಶ್ರಯಃ ।
ದದರ್ಶ ಶಾಂಕರಂ ನಿತ್ಯಂ ಶಿವಪೂಜಾಪರಾಯಣಂ ॥೧೩೮॥

ತಂ ದೃಷ್ಟ್ವಾ ದೂರತಃ ಸ್ಥಿತ್ವಾ ಪ್ರಣಮ್ಯ ಸ ಪುನಃ ಪುನಃ ।
ಕೃತಾಂಜಲಿಪುಟೋ ಭೂತ್ವಾ ಪಪ್ರಚ್ಛೈವಂ ದ್ವಿಜೋತ್ತಮಂ॥೧೩೯॥

---

ರುವ ಭಕ್ತಿಯೇ ಉತ್ತಮವಾದುದು. ಈ ಶಂಕರನಲ್ಲಿರುವ ಭಕ್ತಿಭಾವನೆಯಿಂದ ಮೋಕ್ಷಲಕ್ಷ್ಮಿಯು ಅವಶ್ಯವಾಗಿ ಒಲಿಯುತ್ತಾಳೆ. ॥೧೩೩-೧೩೪॥

ಮತ್ತಾವ ದೇವತೆಗಳಿಗೂ ಶರಣಾಗತರಾಗದೇ ಆ ಮಹೇಶ್ವರನನ್ನೇ ಪೂಜೆ ಮಾಡುವವರಿಗೆ ಸಕಲ ಸುಖಗಳೂ ಉಂಟಾಗುವುದರಲ್ಲಿ ಸಂದೇಹವೇ ಇಲ್ಲ. ಯಾವಾಗಲೂ ವಿಧಿಯನ್ನನುಸರಿಸಿ ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿಕೊಂಡು, ಶಿವಪೂಜೆಮಾಡುವವನೇ ಸತ್ಯವಾಗಿಯೂ ಧನ್ಯನೆನಿಸುವನು. ॥೧೩೫-೧೩೬॥

ನಿತ್ಯವೂ ನಿಯಮಪೂರ್ವಕವಾಗಿ ಶಿವಸ್ಮರಣೆಯನ್ನು ಆದರದಿಂದ ಮಾಡುತ್ತಾ ವಿಭೂತಿಯನ್ನು ಧರಿಸುತ್ತಿರುವ ಪರಿಶುದ್ಧನಾದ ಮಾನವನೇ ಧನ್ಯ ನೆನಿಸುವನು. ಹಿಂದೆ ಹಿಮವತ್ಪರ್ವತದ ಸಮೀಪದಲ್ಲಿರುವ ದೇಶಗಳಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಒಂದು ದಿನ ಈ ಬ್ರಾಹ್ಮಣನು ನಿತ್ಯವೂ ಶಿವಪೂಜಾನಿರತನಾದ ಒಬ್ಬ ಈಶ್ವರಭಕ್ತನನ್ನು ಕಂಡನು. ॥೧೩೭-೧೩೮॥

ಈ ಬ್ರಾಹ್ಮಣನು ಆ ಶಿವಪೂಜಕನನ್ನು ನೋಡಿ ದೂರದಲ್ಲಿಯೇ ನಿಂತು ಪದೇ ಪದೇ ಆತನಿಗೆ ನಮಸ್ಕಾರಮಾಡಿ ಕೈಜೋಡಿಸಿ ಆ ಬ್ರಾಹ್ಮಣೋತ್ತಮನನ್ನು ಕುರಿತು ಹೀಗೆ ಪ್ರಶ್ನೆ ಮಾಡಿದನು. ॥೧೩೯॥

॥ ವಿಪ್ರ ಉವಾಚ ॥

**ಶಾಂಕರೋತ್ತಮ ವಿಪ್ರೇಂದ್ರ ತವೇತದ್ದರ್ಶನಾದಹಂ ।**
ಕೃತಕೃತ್ಯಸ್ತು ಜಾತೋಽಸ್ಮಿ ಪುಲಕಾಂಕಿತವಿಗ್ರಹಃ ॥೧೪೦॥

ಮಯಾ ಕೃತಾನಿ ಪಾಪಾನಿ ನ ತೇಷಾಂ ಗಣನಾ ದ್ವಿಜ ।
ತತ್ಪಾಪನಾಶಕಂ ಪುಣ್ಯಂ ಯದಿ ಸ್ಯಾದ್ವದ ಶಾಂಕರ ॥೧೪೧॥

ಬ್ರಹ್ಮಹತ್ಯಾದಿ ಪಾಪಾನಿ ಕೃತಾನ್ಯೇವ ಘೃಣಾಂ ವಿನಾ ।
ಕಿಂ ತನ್ನಿವರ್ತಕಂ ವಿಪ್ರ ವೇದವೇದಾಂತಸಂಸ್ತುತಂ ॥೧೪೨॥

ಜ್ಞಾತ್ವೈವೈತಾನಿ ಪಾಪಾನಿ ಕೃತಾನಿ ದ್ವಿಜಸತ್ತಮ ।
ಅಜ್ಞಾನಾನ್ನ ಕೃತಾನ್ಯೇವ ತಾನಿ ಪಾಪಾನಿ ಸರ್ವಥಾ ॥೧೪೩॥

ಕಿಂ ಚಾತಿಸುಂದರೀ ಮಾತಾ ಯುವತೀ ಶಯನಸ್ಥಿತಾ ।
ಬಲಾದ್ಭುಕ್ತಾ ಮಯಾ ಪೂರ್ವಂ ಭೂಯೋ ಭೂಯೋಽತಿರಾಗತಃ ॥೧೪೪॥

---

ಶಂಕರನ ಭಕ್ತರಲ್ಲಿ ಶ್ರೇಷ್ಠನಾದ ಬ್ರಾಹ್ಮಣೋತ್ತಮನೇ, ನಿನ್ನ ಈ ದಿವ್ಯ ದರ್ಶನದಿಂದ ನನ್ನ ಮೈ ರೋಮಾಂಚನವಾಗಿದೆ. ನಾನು ನಿಜವಾಗಿ ಕೃತಕೃತ್ಯನಾಗಿರುವೆನು. ಅಯ್ಯ ಬ್ರಾಹ್ಮಣನೇ, ನಾನು ಮಾಡಿದ ಪಾಪಗಳಿಗೆ ಗಣನೆಯೇ ಇಲ್ಲವಾಗಿದೆ. ಆ ಪಾಪಗಳು ನಾಶವಾಗುವಂತಹ ಪುಣ್ಯಕರ್ಮವಿದ್ದಲ್ಲಿ ನೀನು ನಿಜವಾಗಿ ನನಗೆ ತಿಳಿಸು. ॥೧೪೦-೧೪೧॥

ಸ್ವಲ್ಪವೂ ಸ್ಮರಣೆಯೇ ಇಲ್ಲದೆ ಬ್ರಹ್ಮಹತ್ಯೆ, ಸುರಾಪಾನ, ಚಿನ್ನ ಕದಿಯುವುದು, ಗುರುಪತ್ನೀಸಮಾಗಮ ಮತ್ತು ಇವರ ಸಹವಾಸ ಮುಂತಾದ ಪಂಚಮಹಾಪಾಪಗಳನ್ನು ನಾನು ಮಾಡಿರುವೆನು. ಅಯ್ಯ ಬ್ರಾಹ್ಮಣನೇ, ವೇದವೇದಾಂತಗಳಲ್ಲಿ ಹೇಳಲ್ಪಟ್ಟಿರುವ ಪುಣ್ಯಕರ್ಮಗಳೇನಾದರೂ ಈ ಪಾಪಗಳನ್ನು ಹೋಗಲಾಡಿಸುವುದಾಗಿ ಇದ್ದರೆ ಅದನ್ನು ದಯವಿಟ್ಟು ತಿಳಿಸು. ಅಯ್ಯ ಬ್ರಾಹ್ಮಣೋತ್ತಮನೇ, ಈ ಪಾಪಗಳನ್ನೆಲ್ಲಾ ನಾನು ತಿಳಿದೇ ಮಾಡಿದವನೇ ಹೊರತು ತಿಳಿಯದೇ ಅಜ್ಞಾನದಿಂದ ಖಂಡಿತವಾಗಿಯೂ ಮಾಡಿಲ್ಲ. ॥೧೪೨-೧೪೩॥

ಹಿಂದೆ ನಾನು ಅತ್ಯಂತ ಸುಂದರಿಯೂ ಯೌವ್ವನಭರಿತಳೂ ಆದ ನನ್ನ ತಾಯಿಯು ಹಾಸಿಗೆಯ ಮೇಲೆ ಮಲಗಿರುವಾಗ ಬಲಾತ್ಕಾರವಾಗಿ ಆವಳನ್ನು

ಮೃತಿಕಾಲೋಽಪಿ ಸಂಪ್ರಾಪ್ತೋ ದುಃಸಹೋ ದುಃಖದಾಯಕಃ ।
ಕಿಂ ಕರ್ತವ್ಯಂ ಮಯಾ ವಿಪ್ರ ವದ ಕಾರುಣಿಕೋತ್ತಮ ॥೧೪೫॥

॥ ಶಾಂಕರ ಉವಾಚ ॥

ಕುರು ದೇವಾಧಿದೇವಸ್ಯ ಮಹಾದೇವಸ್ಯ ಪೂಜನಂ ।
ತತ್ಪೂಜಂಯೈವ ಪಾಪಾನಿ ವಿನಶ್ಯಂತಿ ನ ಸಂಶಯಃ ॥೧೪೬॥

ಕುರು ಶ್ರೌತಂ ಪ್ರಯತ್ನೇನ ಕೇವಲಂ ಭಸ್ಮಧಾರಣಂ ।
ವಿನಾ ತೇನ ದ್ವಿಜಾನಾಂ ತು ನಾಧಿಕಾರಃ ಶಿವಾರ್ಚನೇ ॥೧೪೭॥

ಯೇ ಶಂಕರಾರ್ಚಕಾ ನಿತ್ಯಂ ಭಸ್ಮೋದ್ಧೂಳಿತವಿಗ್ರಹಾಃ ।
ಶಿವೈಕನಾಮನಿರತಾಸ್ತೇ ಪೂಜ್ಯಾಃ ಶಮನಾದಿಭಿಃ ॥೧೪೮॥

ಯಮ ಶಂಕರಸಂವಾದಃ ಶ್ರುತಃ ಪೂರ್ವಂ ಮಯಾ ದ್ವಿಜ ।
ತಮೇವ ವಕ್ಷ್ಯೇ ಯತ್ನೇನ ಶೃಣು ಪಾಪಭಯಾಪಹಂ ॥೧೪೯॥

ಪುರಾ ಕಶ್ಚಿದ್ದ್ವಿಜಃ ಪಾಪೀ ಕೀಟಕೇಕುಷ್ಠದೂಷಿತಃ ।
ಉವಾಸ ಬ್ರಹ್ಮಹತ್ಯಾದಿ ಮಹಾಪಾಪರತಃ ಸದಾ ॥೧೫೦॥

---

ಕಾಮೋದ್ರೇಕದಿಂದ ಉಪಭೋಗಮಾಡಿದೆನು. ಈಗ ನನಗೆ ತುಂಬಾ ದುಃಖಪ್ರದವಾದ ಮರಣಕಾಲ ಬೇರೆ ಸಮೀಪಿಸಿದೆ. ಅಯ್ಯ, ದಯಾಮಯನಾದ ಬ್ರಾಹ್ಮಣನೇ, ಈಗ ನಾನು ಏನುಮಾಡಲಿ; ದಯವಿಟ್ಟು ತಿಳಿಸು; ಎಂದು ಆ ಬ್ರಾಹ್ಮಣನೂ ಶಂಕರ ಭಕ್ತನನ್ನು ಪ್ರಾರ್ಥಿಸಿದನು. ॥೧೪೪-೧೪೫॥

ಎಲೈ ಬ್ರಾಹ್ಮಣನೇ, ದೇವಾಧಿದೇವನಾದ ಆ ಮಹಾದೇವನನ್ನು ಪೂಜೆಮಾಡು. ಆ ಪೂಜೆಯಿಂದ ಪಾಪಗಳೆಲ್ಲವೂ ಸಂಶಯವಿಲ್ಲದೆ ನಾಶವಾಗುವುವು. ಶ್ರುತಿಪ್ರಸಿದ್ಧವಾದ ಭಸ್ಮಧಾರಣೆಯನ್ನು ವಿಶೇಷ ನಿಯಮದಿಂದ ಆಚರಿಸು. ಆ ಭಸ್ಮಧಾರಣೆ ಮಾಡದೇ ಬ್ರಾಹ್ಮಣರಿಗೆ ಶಿವಪೂಜೆಮಾಡಲು ಅಧಿಕಾರವೇ ಇಲ್ಲ. ಭಸ್ಮೋದ್ಧೂಳನ ಮಾಡಿಕೊಂಡು ನಿತ್ಯವೂ ಶಂಕರನ ಪೂಜಾನಿರತರಾಗಿರುವ ಶಿವಪೂಜಕರು ಯಮ ಮುಂತಾದವರೆಲ್ಲರಿಂದಲೂ ಪೂಜಾರ್ಹರಾಗಿರುವರು. ॥೧೪೬-೧೪೭-೧೪೮॥

ಬ್ರಾಹ್ಮಣನೇ, ಹಿಂದೆ ನಾನು ಕೇಳಿದ ಯಮ ಶಂಕರರ ಸಂವಾದವನ್ನೇ ಈಗ ನಿನಗೆ ತಿಳಿಸುವೆನು. ಸಕಲ ಪಾಪಭಯಗಳನ್ನೂ ಹೋಗಲಾಡಿಸುವ ಆ ಸಂವಾದ

ತಾದೃಶಸ್ಯಾಽಭವತ್ಪುತ್ರೋ ವಾರ್ಧಕೇ ಸೋಮವಾಸರೇ ।
ಶ್ರುತ್ವಾ ಸ ಪುತ್ರಮುತ್ಪನ್ನಮಾನಂದಂ ಪರಮಂ ಯಯೌ ॥೧೫೧॥

ಸೋಮವಾಸರಸಂಭೂತಂ ಸ ಪುತ್ರಂ ವೀಕ್ಷ್ಯ ಸಾದರಂ ।
ಸೋಮವಾಸರ ಇತ್ಯೇವ ತಸ್ಯ ನಾಮ ಚಕಾರ ಸಃ ॥೧೫೨॥

ತದಾ ಪ್ರಭೃತಿ ಯತ್ನೇನ ಪ್ರತ್ಯಹಂ ಸೋಮವಾಸರೇ ।
ಸೋಮವಾಸರ ಇತ್ಯಾಖ್ಯಾಂ ಗೃಹೀತ್ವಾ ಬಾಲಕಸ್ಯ ಸಃ ॥೧೫೩॥

ಸೋಮವಾಸರ ಭುಂಕ್ಷ್ವೇತಿ ವದತ್ಯನುದಿನಂ ಪಿತಾ ।
ಸೋಮವಾಸರ ತಿಷ್ಠೇತಿ ವದತ್ಯನುದಿನಂ ಮುದಾ ॥೧೫೪॥

ಏವಮೇವ ಪಿತಾ ನಿತ್ಯಂ ವ್ಯವಹಾರೇಷು ಸರ್ವದಾ ।
ತಮಾಕಾರಯತಿ ಪ್ರೀತ್ಯಾ ತನ್ನಾಮ್ನಾ ತತ್ಪಿತಾ ಮುದಾ ॥೧೫೫॥

---

ವನ್ನು ನೀನು ನಿಯಮದಿಂದ ಕೇಳು. ಹಿಂದೆ ಕೀಟಕ ದೇಶದಲ್ಲಿ ಕುಷ್ಠರೋಗದಿಂದ ದೂಷಿತನಾದ ಒಬ್ಬ ಬ್ರಾಹ್ಮಣನು ಬ್ರಹ್ಮಹತ್ಯ ಮುಂತಾದ ಮಹಾಪಾಪಗಳಿಂದ ದೂಷಿತನಾಗಿದ್ದನು. ॥೧೪೯-೧೫೦॥

ಅಂತಹವನಿಗೆ ಮುಪ್ಪಿನಕಾಲದಲ್ಲಿ ಸೋಮವಾರದ ದಿನ ಒಬ್ಬ ಮಗ ಹುಟ್ಟಿದನು. ಆ ಬ್ರಾಹ್ಮಣನು ತನಗೆ ಪುತ್ರೋತ್ಪತ್ತಿಯಾದ ಸಮಾಚಾರವನ್ನು ಕೇಳಿ ತುಂಬಾ ಆನಂದಭರಿತನಾದನು. ಅನಂತರ ಸೋಮವಾರದ ದಿವಸ ಹುಟ್ಟಿದ ಆ ಮಗನನ್ನು ನೋಡಿ ತಂದೆಯು ಆದರದಿಂದ ಅವನಿಗೆ 'ಸೋಮವಾಸರ' ಎಂದೇ ಹೆಸರಿಟ್ಟನು. ॥೧೫೧-೧೫೨॥

ಅದು ಮೊದಲು ತಂದೆಯು ಪ್ರತಿದಿನವೂ ಮಗನಾದ ಸೋಮವಾಸರನ ಹೆಸರನ್ನೇ ಹಿಡಿದು ಕರೆಯುತ್ತಾ ಸೋಮವಾಸರನೇ, ಊಟಮಾಡು, ಏಳು ಎಂಬುದಾಗಿ ಸಂತೋಷದಿಂದ ಮಗನನ್ನು ಸಂಬೋಧಿಸುತ್ತಾ ಸುಖದಿಂದಿದ್ದನು. ॥೧೫೩-೧೫೪॥

ಇದೇರೀತಿ ತಂದೆಯು ನಿತ್ಯವೂ ವ್ಯವಹಾರಮಾಡುವಾಗ ಯಾವಾಗಲೂ ಸೋಮವಾಸರ ಎಂಬ ಹೆಸರಿನಿಂದಲೇ ಪ್ರೀತಿಪೂರ್ವಕವಾಗಿ ಮಗನನ್ನು ಕರೆಯು

ಏವಮೇವ ಸ್ಥಿತಃ ಪೂರ್ವಂ ಕದಾಚಿತ್ಸರ್ಪದಂಶಿತಃ ।
ಬಭೂವ ಮೂರ್ಛಿತೋ ವಿಪ್ರಃ ಸ ವೃದ್ಧಃ ಕುಷ್ಠದೂಷಿತಃ ॥೧೫೬॥

ತತಃ ಪರಂ ಸೋಮವಾರ ಸೋಮವಾರೇತಿ ತಂ ಸುತಂ ।
ಆಕಾರ್ಯ ಸ ಮೃತಃ ಕುಷ್ಠೀ ವಿಷಪೂರಿತವಿಗ್ರಹಃ ॥೧೫೭॥

ತತಃ ಸಮಾಯಯುರ್ದೂತಾ ಯಮಸ್ಯಾತಿಬಲಾನ್ವಿತಾಃ ।
ಆಗತ್ಯ ನೇತುಮುದ್ಯುಕ್ತಾ ನಾನಾಶಸ್ತ್ರಾಸ್ತ್ರಪಾಣಯಃ ॥೧೫೮॥

ತದಾನೀಮಾಗತಃ ಕಶ್ಚಿಚ್ಛಿವಭಕ್ತಃ ಶಿವಾರ್ಚಕಃ ।
ಯಮದೂತಾನುವಾಚೇದಂ ಕಂಪಯನ್ಪೃಥಿವೀತಲಂ ॥೧೫೯॥

॥ ಶಿವಭಕ್ತ ಉವಾಚ ॥

ರೇರೇ ಯಮಭಟಾಃ ಕ್ರೂರಾ ಭವಂತೋ ಯಾಂತು ದೂರತಃ ।
ನ ನೇಯೋಽಯಂ ಭವದ್ಭಿಸ್ತು ಯತ್ನೋಽತ್ರ ತು ವೃಥಾ ಧ್ರುವಂ ॥೧೬೦॥

---

ತ್ತಿದ್ದನು. ಹೀಗೆಯೇ ಕೆಲವು ಕಾಲ ಕಳೆಯಲು ಹಿಂದೆ ಒಂದುದಿನ ಕುಷ್ಠರೋಗಿಯಾದ ಈ ಬಾಲಕನ ತಂದೆಯು ಹಾವಿನಿಂದ ಕಚ್ಚಲ್ಪಟ್ಟು ಮೂರ್ಛೆಹೊಂದಿದನು. ॥೧೫೫-೧೫೬॥

ಆಗಲೂ ಸೋಮವಾರ ಸೋಮವಾರ ಎಂದು ತನ್ನ ಮಗನನ್ನು ಕರೆಯುತ್ತಲೇ ಆ ತೊನ್ನುಬಡಿದ ಬ್ರಾಹ್ಮಣನು ವಿಷವೇರಿದ ಶರೀರವುಳ್ಳವನಾಗಿ ಸತ್ತುಹೋದನು. ಕೂಡಲೇ ಪ್ರಬಲರಾದ ಯಮಭಟರು ಅವನ ಸಮೀಪಕ್ಕೆ ಬಂದು ನಾನಾವಿಧವಾದ ಶಸ್ತ್ರಗಳನ್ನು ಕೈಯ್ಯಲ್ಲಿ ಹಿಡಿದು ಎಳೆದೊಯ್ಯಲು ಪ್ರಾರಂಭಿಸಿದರು. ॥೧೫೭-೧೫೮॥

ಅದೇ ಸಮಯದಲ್ಲಿ ಶಿವಪೂಜಾನಿರತನಾದ ಶಾಂಭವನೊಬ್ಬನು ಅಲ್ಲಿಗೆ ಬಂದು ಗರ್ಜಿಸಿ ಭೂಮಿಯು ನಡುಗುವಂತೆ ಮಾಡುತ್ತ, ಯಮಭಟರನ್ನು ಕುರಿತು ಇಂತೆಂದನು. ॥೧೫೯॥

"ಎಲೈ ಕ್ರೂರರಾದ ಯಮಭಟರಿರಾ, ನೀವು ದೂರ ಸರಿಯಿರಿ, ನೀವು ಬಲಾತ್ಕಾರವಾಗಿ ಈತನನ್ನೊಯ್ಯುವುದು ವ್ಯರ್ಥವೆಂದು ತಿಳಿಯಿರಿ. ಈತನಿಗೆ ಸೋಮವಾಸರನೆಂಬ ಒಬ್ಬ ಮಗನಿರುವನು. ಆ ಮಗನನ್ನು ಈತನು ಕೊನೆಯ

ಏತಸ್ಯ ತು ಸುತಃ ಸೋಽಯಂ ಯಸ್ಯಾಖ್ಯೋ ಸೋಮವಾಸರಃ ।
ವಿಹಾಯಾಸ್ಯಾಂತಿಮಂ ಬ್ರೂತೇ ವಾಸರೇತ್ಯಕ್ಷರತ್ರಯಂ ॥೧೬೧॥

ಸೋಮ ಇತ್ಯಮಲಂ ನಾಮ ಸರ್ವಪಾಪವಿನಾಶಕಂ ।
ಯನ್ನಾಮಸ್ಮರಣಾದೇವ ಮೋಕ್ಷಲಕ್ಷ್ಮೀರವಾಪ್ಯತೇ ॥೧೬೨॥

ಉಮಯಾ ಸಹಿತಃ ಸೋಮಃ ಸ ತು ದೇವಶಿಖಾಮಣಿಃ ।
ತನ್ನಾಮ ಯತ್ಸುತಸ್ಯಾಸ್ತಿ ನ ತಸ್ಯ ಯಮಯಾತನಾ ॥೧೬೩॥

ಯಃ ಕಶ್ಚಿತ್ಸತತಂ ಮರ್ತ್ಯಃ ಸ ಮುಕ್ತೋ ಭವತಿ ಧ್ರುವಂ ।
ಯೋ ಭಕ್ತ್ಯಾ ಶಾಂಕರಂ ನಾಮ ಗೃಹ್ಣಾತಿ ಪ್ರತ್ಯಹಂ ಭಟಾಃ ॥೧೬೪॥

ಗೃಹ್ಣಾತ್ಯಯಂ ತು ತನ್ನಾಮ ಪುತ್ರಬುದ್ಧ್ಯಾಪಿ ಯತ್ನತಃ ।
ತಥಾಪಿ ತಸ್ಯ ಪಾಪಾನಿ ವಿನಷ್ಟಾನ್ಯೇವ ಸರ್ವಥಾ ॥೧೬೫॥

ಯೇನ ಕೇನಾಪಿ ರೂಪೇಣ ನಾಮ ಗೃಹ್ಣಾತಿ ಶಾಂಕರಂ ।
ಯಃ ಶಿಷ್ಟೋ ನಷ್ಟಚರ್ಯೋ ವಾ ಸ ಮುಕ್ತೋ ಭವತಿ ಧ್ರುವಂ ॥೧೬೬॥

---

'ವಾಸರ' ಎಂಬ ಮೂರಕ್ಷರಗಳನ್ನು ಬಿಟ್ಟು 'ಸೋಮ' ಎಂಬ ಪವಿತ್ರವಾದ ನಾಮದಿಂದ ಪದೇಪದೇ ಕರೆಯುತ್ತಿದ್ದನು. ಪಾಪಧ್ವಂಸಕವಾದ ಈ ದಿವ್ಯನಾಮ ಸ್ಮರಣೆಯಿಂದ ಇವನಿಗೆ ಮೋಕ್ಷಲಕ್ಷ್ಮಿಯು ಅವಶ್ಯವಾಗಿ ದೊರಕುವಳು. ॥೧೬೦-೧೬೧-೧೬೨॥

ಉಮಾಸಮೇತನಾದ ಆ ಮಹಾದೇವನು ದೇವತೆಗಳಿಗೆಲ್ಲಾ ಚೂಡಾಮಣಿ ಪ್ರಾಯನಾಗಿರುವನು. ಆ ಮಹಾದೇವನ ಹೆಸರು (ಅಂದರೆ ಸೋಮನೆಂಬ ಹೆಸರು)ಳ್ಳ ಮಗನಿರುವವನಿಗೆ ನರಕಯಾತನೆಗಳೆಂದಿಗೂ ಇಲ್ಲ. ಓ ಯಮದೂತರೇ, ಯಾವಾಗಲೂ ಆ ಶಂಕರನ ದಿವ್ಯನಾಮಗಳನ್ನು ಎಡಬಿಡದೇ ಧ್ಯಾನಮಾಡುವವನು ಮೋಕ್ಷ ಹೊಂದುವುದರಲ್ಲಿ ಸಂದೇಹವೇ ಇಲ್ಲ. ಈತನಾದರೋ ಮಗನ ಉದ್ದೇಶವಾಗಿಯಾದರೂ ಆ ನಾಮವನ್ನುಚ್ಚಾರಮಾಡಿರುವುದರಿಂದ ಇವನಿಗೆ ಖಂಡಿತ ಎಲ್ಲಾ ಪಾಪಗಳೂ ನಷ್ಟವಾಗಿಯೇ ಇರುವುವು. ॥೧೬೩-೧೬೪-೧೬೫॥

ಶಿಷ್ಟಾಚಾರಸಂಪನ್ನನಾಗಲೀ, ಆಚಾರಹೀನನೇ ಆಗಲೀ ಯಾವರೀತಿಯಿಂದಲಾದರೂ ಆ ಶಂಕರನ ದಿವ್ಯನಾಮಗಳನ್ನುಚ್ಚಾರಮಾಡುವವನು ನಿಶ್ಚಯವಾಗಿ

ಸೋಮನಾಮದ್ವಯಂ ಶುದ್ಧಂ ಅನೇನೇಹ ಮೃತಿಕ್ಷಣೇ ।
ಗೃಹೀತಮತ ಏವಾದ್ಯ ಮುಕ್ತೋಽಯಂ ಭವತಿ ಧ್ರುವಂ ॥೧೬೭॥

ನ ಸ್ಪೃಷ್ಟವ್ಯೋ ಭವದ್ಭಿಸ್ತು ಕೃತಪಾಪೋಽಪ್ಯಯಂ ದ್ವಿಜಃ ।
ಪ್ರಯಾಂತು ಸತ್ವರಂ ದೂತಾಃ ಪ್ರಾಣೇಚ್ಛಾ ಯದಿ ಜಾಯತೇ ॥೧೬೮॥

ಏತಸ್ಮಿನ್ನಂತರೇ ಕಶ್ಚಿಚ್ಛಾಂಕರಃ ಶಂಕರೇರಿತಃ ।
ರಮ್ಯಂ ವಿಮಾನಮಾದಾಯ ಸತ್ವರಂ ಸಮುಪಸ್ಥಿತಃ ॥೧೬೯॥

ತದಾನೀಂ ತಂ ವಿಲೋಕ್ಯಾಪಿ ಶಾಂಕರಂ ಯಮಕಿಂಕರಾಃ ।
ಮೃತಂ ಬದ್ಧ್ವಾ ಸಮಾನೇತುಮುದ್ಯಮಂ ಚಕ್ರುರುದ್ಧತಾಃ ॥೧೭೦॥

ದೃಷ್ಟ್ವಾ ತದ್ಬಂಧನೋದ್ಯುಕ್ತಾನ್ಸ ತು ಶಂಕರಕಿಂಕರಃ ।
ಸಂಮೋಹನಾಸ್ತ್ರಮಾದಾಯ ಮೋಹಯಾಮಾಸ ತಾನ್ಭಟಾನ್ ॥೧೭೧॥

ತತೋ ವಿಮಾನೇ ರತ್ನಾಢ್ಯೇ ತಂ ಪ್ರವೇಶ್ಯ ಸ ಶಾಂಕರಃ ।
ಯಯೌ ಕೈಲಾಸನಿಲಯಂ ಸರ್ವದೇವಾಭಿವಂದಿತಂ ॥೧೭೨॥

---

ಮೋಕ್ಷಪಡೆಯುವನು. ಈತನು ಸಾಯುತ್ತಿದ್ದ ಹಿಂದಿನ ಕ್ಷಣದಲ್ಲಿ ಪರಿಶುದ್ಧವಾದ ಆ ಸೋಮನಾಮಗಳೆರಡನ್ನು ಚ್ಚರಿಸಿರುವನು. ಆದ್ದರಿಂದ ಈತನು ನಿಶ್ಚಯವಾಗಿಯೂ ಮುಕ್ತಿಹೊಂದಿಯೇ ಹೊಂದುವನು. ॥೧೬೬-೧೬೭॥

ಎಲೈ ಯಮಭಟರೇ! ಈ ಬ್ರಾಹ್ಮಣನು ಪಾಪಮಾಡಿದ್ದರೂ ನೀವು ಈತನನ್ನು ಮುಟ್ಟದೇ ದೂರಸಾಗಿರಿ. ನಿಮಗೆ ಇನ್ನೂ ಬದುಕಬೇಕೆಂಬ ಆಸೆ ಇದ್ದರೆ ಇಲ್ಲಿಂದ ಈಗಲೇ ಹೋಗಿ" ಎಂದು ಹೇಳುತ್ತಿರಲು, ಇದೇ ಸಂದರ್ಭದಲ್ಲಿಯೇ ಆ ಶಂಕರನಿಂದ ಕಳುಹಿಸಲ್ಪಟ್ಟ ಒಬ್ಬ ಶಂಕರ ಭಕ್ತನು ಮನೋಹರವಾದ ಒಂದು ವಿಮಾನವನ್ನೇರಿ ಜಾಗ್ರತೆಯಾಗಿ ಈ ಸ್ಥಳಕ್ಕೆ ಬಂದನು. ಆಗ ಹೀಗೆ ಬಂದ ಶಂಕರ ಕಿಂಕರನನ್ನು ನೋಡಿಯೂ ಆ ಯಮದೂತರು ಸತ್ತಿದ್ದ ಆ ಬ್ರಾಹ್ಮಣನನ್ನು ಕಟ್ಟಿ ಒಯ್ಯಲು ಉದ್ಧತರಾಗಿ ಪ್ರಯತ್ನಿಸಿದರು. ॥೧೬೯-೧೭೦॥

ಹೀಗೆ ಆ ಬ್ರಾಹ್ಮಣನನ್ನು ಕಟ್ಟಲು ಪ್ರಾರಂಭಿಸುತ್ತಿರುವುದನ್ನು ನೋಡಿ ಆ ಶಂಕರನ ಸೇವಕನು ಸಂಮೋಹನಾಸ್ತ್ರವನ್ನು ಹೂಡಿ ಆ ಯಮಭಟರನ್ನು ಮೂರ್ಛೆಗೊಳಿಸಿದನು. ಅನಂತರ ರತ್ನಖಚಿತವಾದ ವಿಮಾನದಲ್ಲಿ ಆ ಶಂಕರ

ತದಾನೀಂ ತಂ ವಿಲೋಕ್ಯೈನಂ ವಿಮಾನಸ್ಥಂ ದ್ವಿಜಂ ಯಮಃ ।
ಸಂಮೋಹಿತಾನ್ ಭಟಾನ್ದೃಷ್ಟ್ವಾ ಯಯೌ ಶಂಕರಸಂನಿಧಿಂ ॥೧೭೩॥

ದಂಡಮುದ್ರಾಂ ನಿಧಾಯಾಗ್ರೇ ವಿನಯಾವನತೋ ಯಮಃ ।
ಕೃತಾಂಜಲಿಪುಟಸ್ತಸ್ಥೌ ಮಹಾದೇವಸ್ಯ ಶೂಲಿನಃ ॥೧೭೪॥

ತತೋ ಯಮಂ ವಿಲೋಕ್ಯೈವಂ ಸರ್ವದೇವಶಿಖಾಮಣಿಃ ।
ಉವಾಚ ವಚನಂ ಸಾಂಬಃ ಶಿಕ್ಷಯನ್ನಮುಮಾದರಾತ್ ॥೧೭೫॥

॥ ಶ್ರೀಶಿವ ಉವಾಚ ॥

ಅನೇನ ತು ಕೃತಾಃ ಸಂತಿ ಭೂರಿಶಃ ಪಾಪಕೋಟಯಃ ।
ತಥಾಪ್ಯಯಂ ತು ನಿಷ್ಪಾಪೋ ಮನ್ನಾಮಸ್ಮರಣಾದಭೂತ್ ॥೧೭೬॥

ಸೋಮವಾಸರಸಂಭೂತಃ ಪುತ್ರೋಽಸ್ಯಾಭೂದ್ವಿಚಕ್ಷಣಃ ।
ಸೋಮವಾಸರ ಇತ್ಯೇವ ತನ್ನಾಮಾಯಂ ಚಕಾರ ಹಿ ॥೧೭೭॥

---

ದೂತನು ಆ ಬ್ರಾಹ್ಮಣನನ್ನು ಕೂರಿಸಿಕೊಂಡು ಸಕಲ ದೇವತೆಗಳಿಂದಲೂ ನಮಸ್ಕೃತವಾದ ಕೈಲಾಸಕ್ಕೆ ತೆರಳಿದನು. ॥೧೭೧-೧೭೨॥

ಆಗ ವಿಮಾನದಲ್ಲಿ ನಿಂತು ನೋಡುತ್ತಿದ್ದ ಯಮನು ತನ್ನ ಭಟರು ಹೀಗೆ ಶಂಕರಕಿಂಕರನಿಂದ ಮೂರ್ಛಿತರಾಗಿ ಬಿದ್ದದ್ದನ್ನು ನೋಡಿ, ವಿಮಾನದಲ್ಲಿ ಕುಳಿತು ಹೋಗುತ್ತಿದ್ದ ಆ ಬ್ರಾಹ್ಮಣನ ಹಿಂದೆ ತಾನೂ ಶಂಕರನ ಸಂನಿಧಾನಕ್ಕೆ ಹೋದನು. ಆಗ ಯಮನು ದಂಡಪ್ರಣಾಮಮಾಡಿ ವಿನಯದಿಂದ ಆ ಶಂಕರನಿಗೆ ತಲೆಬಾಗಿ ಕೈಜೋಡಿಸಿ ತ್ರಿಶೂಲಾಯುಧಧಾರಿಯಾದ ಮಹಾದೇವನ ಮುಂದೆ ನಿಂತುಕೊಂಡನು. ॥೧೭೩-೧೭೪॥

ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾದ ಆ ಅಂಬಿಕಾರಮಣನು ಯಮನನ್ನು ನೋಡಿ ಅವನನ್ನೇ ಉದ್ದೇಶಿಸುತ್ತಾ ಆದರದಿಂದ ಅವನೊಡನೆ ಹೀಗೆ ಮಾತನಾಡಿದನು. ॥೧೭೫॥

"ಎಲೈ ಯಮಧರ್ಮನೇ! ಇವನು ಅಪಾರವಾದ ಅನೇಕ ಕೋಟಿ ಪಾಪಗಳನ್ನು ಮಾಡಿದ್ದರೂ ನನ್ನ ದಿವ್ಯನಾಮಸ್ಮರಣೆಮಾಡಿದುದರಿಂದ ಇವನ ಪಾಪವೆಲ್ಲವೂ ನಿರ್ಮೂಲವಾಗಿದೆ. ಈತನಿಗೆ ಸೋಮವಾರದ ದಿನ ಹುಟ್ಟಿದ ಒಬ್ಬ ಬುದ್ಧಿವಂತ

ವ್ಯವಹಾರೇಷು ಸರ್ವೇಷು ತನ್ನಾಮ್ನಾ ಪುತ್ರಮನ್ವಹಂ ।
ಆಕಾರಯತ್ಯಯಂ ಯತ್ನಾತ್ಸುತವಾತ್ಸಲ್ಯತೋ ಯಮ ॥೧೭೮॥

ಸೋಮವಾಸರ ಇತ್ಯತ್ರ ಸೋಮ ಇತ್ಯಕ್ಷರದ್ವಯಂ ।
ಅನೇಕಪಾಪಸಂಘಾನಾಂ ವಿನಾಶಕರಮುತ್ತಮಂ ।೧೭೯॥

ಯದಾ ಯದಾಽಯಂ ತನ್ನಾಮಗ್ರಹಣೇ ಕುರುತೇ ಮನಃ ।
ತದಾ ತದಾ ಪಾಪರಾಶಿಃ ಸಕಂಪಮಿಹ ಸಂಸ್ಥಿತಃ ॥೧೮೦॥

ಯದೋಚ್ಚರತಿ ತನ್ನಾಮ ತದೈವಾಘಕುಲಂ ಮಹತ್ ।
ನಿರ್ಯಾತಿ ಕಂಪಮಾಪನ್ನಂ ನಿರ್ಗತಂ ತದ್ವಿನಶ್ಯತಿ ॥೧೮೧॥

ಪ್ರಸಂಗೇನಾಪಿ ಮನ್ನಾಮ ಸೋತ್ಸಾಹಂ ಯೋಽನುಶೀಲಯೇತ್ ।
ಸ ಪಾಪಮಾತ್ರರಹಿತೋ ಭವಿಷ್ಯತ್ಯೇವ ಸರ್ವಥಾ ॥೧೮೨॥

ಯಮ ಮನ್ನಾಮದಾವಾಗ್ನಿಃ ಪಾಪಾರಣ್ಯದವಾನಲಃ ।
ತಸ್ಮಿನ್ನುಚ್ಚರಿತೇ ನಾಮ್ನಿ ನಶ್ಯತ್ಯಘಕುಲಂ ಕ್ಷಣಾತ್ ॥೧೮೩॥

---

ನಾದ ಮಗನಿರುವನು. ಈತನಿಗೆ ತಂದೆಯು ಸೋಮವಾರ ಹುಟ್ಟಿದುದರಿಂದ 'ಸೋಮವಾರ' ಎಂದೇ ಹೆಸರಿಟ್ಟಿರುವನು. ಈ ಬ್ರಾಹ್ಮಣನು ಪ್ರತಿನಿತ್ಯವೂ ಪುತ್ರ ವಾತ್ಸಲ್ಯದಿಂದ ಅವನೊಡನೆ ವ್ಯವಹರಿಸುವಾಗಲೆಲ್ಲಾ ಪ್ರಯತ್ನಪೂರ್ವಕವಾಗಿ ಅದೇ ಹೆಸರಿನಿಂದ ಕರೆಯುತ್ತಿದ್ದನು. ॥೧೭೬-೧೭೭-೧೭೮॥

ಸೋಮವಾಸರ ಎನ್ನುವಲ್ಲಿ ಸೋಮ ಎಂಬೆರಡಕ್ಷರಗಳು ಅತ್ಯುತ್ತಮವಾದವು ಗಳೆನಿಸಿ ಅನೇಕ ಪಾಪಸಮೂಹಗಳನ್ನೇ ನಾಶಮಾಡುವ ಸಾಮರ್ಥ್ಯವುಳ್ಳವುಗಳು. ಅವನು ಈ ನಾಮವನ್ನು ಸ್ಮರಿಸಬೇಕೆಂದು ಮನಸ್ಸುಮಾಡಿದಾಗಲೆಲ್ಲಾ ಪಾಪ ಸಮೂಹವು ನಡುಗುತ್ತಾ ನಿಲ್ಲುತ್ತಿತ್ತು. ॥೧೭೯-೧೮೦॥

ಆ ನಾಮವನ್ನು ಉಚ್ಚಾರಮಾಡಿದಾಗಲೆಲ್ಲಾ ದೊಡ್ಡ ಪಾಪರಾಶಿಯು ನಡುಗುತ್ತಾ ಹೊರಹೊರಟು ನಾಶವಾಗುತ್ತಿದ್ದಿತು. ಅಯ್ಯ ಯಮನೇ, ಯಾವುದೇ ಒಂದು ಪ್ರಸಂಗದಲ್ಲಿಯಾದರೂ ನನ್ನ ದಿವ್ಯನಾಮವನ್ನು ಉತ್ಸಾಹದಿಂದ ಪರಿಶೀಲಿಸು ವನಿಗೆ ಪಾಪಸಂಬಂಧಲೇಶವೂ ಉಂಟಾಗಲಾರದು. ॥೧೮೧-೧೮೨॥

ಅಯ್ಯ ಯಮನೇ, ನನ್ನ ಹೆಸರೆಂಬ ಕಾಡುಗಿಚ್ಚು ಪಾಪಗಳೆಂಬ ದೊಡ್ಡ

ಕ್ವ ಪಾತಕಾನಿ ತಿಷ್ಠಂತಿ ಸ್ಮೃತೇ ಮನ್ನಾಮ್ನಿ ಸಾದರಂ ।
ತದ್ಯತಃ ಪಾಪಸಂಘಾನಾಂ ಮಹಾಶನಿರಿತಿ ಶ್ರುತಂ ॥೧೮೪॥

ಯಮ ಯಾವಂತಿ ಪಾಪಾನಿ ವಿನಾಶ್ಯಾನಿ ಮದಾಖ್ಯಯಾ ।
ತಾನಿ ಕ್ವಸಂತಿ ತಾವಂತಿ ಪಾತಕಾನಿ ವದಸ್ವ ಮೇ ॥೧೮೫॥

ಪುರಾ ಪರಾರ್ಧಪರ್ಯಂತಮಪಿ ಪಾಪಾನಿ ರೋಮಶಃ ।
ಕೃತ್ವಾಂತಕಾಲೇ ಮನ್ನಾಮ ಸ್ಮೃತ್ವಾ ಮದ್ರೂಪತಾಂ ಗತಃ ॥೧೮೬॥

ಯಥಾ ಕಾಲಾನಲಜ್ವಾಲಾಸಂದಗ್ಧಾ ಗಿರಿಕೋಟಯಃ ।
ತಥಾ ಮನ್ನಾಮಸಂದಗ್ಧಾ ಮಹಾಪಾತಕಕೋಟಯಃ ॥೧೮೭॥

ಚಂಡಾಲಮಪಿ ಮನ್ನಾಮಸ್ಮರಣಾಸಕ್ತಚೇತಸಂ ।
ಸಂಸಾರಸಾಗರಾದ್ಘೋರಾತ್ತಾರಯಾಮಿ ನ ಸಂಶಯಃ ॥೧೮೮॥

---

ಕಾಡನ್ನು ಸುಟ್ಟು ಭಸ್ಮಮಾಡುವುದರಲ್ಲಿ ಸಮರ್ಥವಾದ ದಾವಾಗ್ನಿಯಂತಿರುವುದು. ಆ ನನ್ನ ನಾಮವನ್ನುಚ್ಚಾರಮಾಡಿದರೆ ಪಾಪರಾಶಿಯೆಲ್ಲವೂ ಕ್ಷಣಕಾಲದಲ್ಲಿ ನಾಶವಾಗುವುದು. ಎಲೆ ಯಮಧರ್ಮನೇ, ಆದರದಿಂದ ನನ್ನ ಹೆಸರನ್ನುಚ್ಚಾರಮಾಡಿದರೆ ಪಾಪವೆಂಬುದೆಲ್ಲಿತಾನೇ ನಿಂತೀತು. ಈ ನನ್ನ ದಿವ್ಯನಾಮವು ಪಾಪಸಮೂಹಗಳಿಗೆಲ್ಲಾ ದೊಡ್ಡ ವಜ್ರಾಯುಧಪ್ರಾಯವಾಗಿರುವುದೆಂದು ಪ್ರಸಿದ್ಧಿ ಪಡೆದಿದೆ. ॥೧೮೩-೧೮೪॥

ಅಯ್ಯ ಯಮನೇ, ನನ್ನ ನಾಮಸ್ಮರಣೆಯಿಂದ ನಾಶವಾಗುವ ಪಾಪಗಳು ಇವನಿಗೆ ಮತ್ತೆಲ್ಲಿತಾನೇ ಬಂದಾವು? ನನಗೆ ಹೇಳು. ಹಿಂದೆ ರೋಮರೋಮಕನು ಅಸಂಖ್ಯಾತವಾದ ಪಾಪಗಳನ್ನು ಮಾಡಿ ಕೊನೆಗೆ ಮರಣಕಾಲದಲ್ಲಿ ನನ್ನ ಸ್ಮರಣೆ ಮಾಡಿ ಅನೇಕರು ನನ್ನ ರೂಪವನ್ನೇ ಹೊಂದಿರುವರು. ॥೧೮೫-೧೮೬॥

ಕೋಟ್ಯಂತರ ಬೆಟ್ಟಗಳು ಪ್ರಳಯಕಾಲದ ಬೆಂಕಿಯಿಂದ ಸುಟ್ಟುಹೋಗುವಂತೆ ನನ್ನ ನಾಮಸ್ಮರಣೆಯಿಂದ ಮಹಾಪಾಪಸಮೂಹವೆಲ್ಲವೂ ಸುಟ್ಟುಹೋಗುವುದು. ನನ್ನ ನಾಮಸ್ಮರಣೆಯಲ್ಲಿ ಆಸಕ್ತನಾಗಿರುವ ಚಂಡಾಲನನ್ನಾದರೂ ಈ ಭಯಂಕರವಾದ ಸಂಸಾರದಿಂದ ಸ್ವಲ್ಪವೂ ಸಂದೇಹವಿಲ್ಲದೇ ಉದ್ಧಾರಮಾಡುತ್ತೇನೆ. ॥೧೮೭-೧೮೮॥

ಅಂತಕಾಲೇ ಸ್ಮೃತಂ ಯೇನ ಮನ್ನಾಮಾಘೌಘನಾಶಕಂ ।
ತೇನ ತೀರ್ಣಸ್ತೂರ್ಣಮೇವ ಘೋರಸಂಸಾರಸಾಗರಃ ॥೧೮೯॥

ಮನ್ನಾಮಸ್ಮರಣಂನಾಮ ಮಮೈವ ಸ್ಮರಣಂ ಯಮ ।
ತತೋ ಮಯಿ ಸ್ಮೃತೇ ಕುತ್ರ ಪಾತಕಾನಾಮವಸ್ಥಿತಿಃ ॥೧೯೦॥

ತಾವದೇವ ಹಿ ಪಾಪಾನಿ ವಸಂತಿ ಪುರುಷೇ ಯಮ ।
ಸ್ಮೃತಂ ನ ಯಾವನ್ಮನ್ನಾಮ ಮಹಾಪಾತಕನಾಶಕಂ ॥೧೯೧॥

ತಾವದೇವ ವಿನಶ್ಯಂತಿ ಮಹಾಪಾತಕಕೋಟಯಃ ।
ಯಾವದೇವ ಹಿ ಮನ್ನಾಮಸ್ಮರಣಪ್ರವಣಂ ಮನಃ ॥೧೯೨॥

ಸೋಮ ಇತ್ಯತ್ರ ಸೋವರ್ಣೋಚ್ಚಾರಣಾದ್ಯಾಂತ್ಯಘಾದ್ರಯಃ ।
ಮವರ್ಣೋಚ್ಚಾರಣಾದ್ಭೂಯಸ್ತತ್ಪ್ರವೇಶಃ ಕಥಂ ಭವೇತ್॥೧೯೩॥

ಅಯಂ ಸ್ಮೃತ್ವಾ ಸೋಮನಾಮ ಮಹಾಪಾತಕನಾಶಕಂ ।
ತತಸ್ತನುಂ ಜಹೌ ತಸ್ಮಾದಯಂ ಮುಕ್ತೋ ನ ಸಂಶಯಃ ॥೧೯೪॥

---

ಕೊನೆಗಾಲದಲ್ಲಿ ಪಾಪನಾಶಕವಾದ ನನ್ನ ನಾಮಸ್ಮರಣೆಮಾಡುವವನು ನಿಶ್ಚಯವಾಗಿ ಘೋರವಾದ ಈ ಸಂಸಾರವೆಂಬ ಸಾಗರವನ್ನು ಜಾಗ್ರತೆಯಾಗಿ ದಾಟಿಯೇ ದಾಟುವನು. ಅಯ್ಯ ಯಮನೇ, ನನ್ನ ನಾಮಸ್ಮರಣೆಯೆಂದರೆ ನನ್ನ ಸ್ಮರಣೆಯೇ ಅಲ್ಲವೇ! ಹೀಗಿರುವಾಗ ನನ್ನ ಸ್ಮರಣೆಮಾಡಿದಮೇಲೆ ಪಾಪಗಳೆಲ್ಲಿ ತಾನೆ ನಿಂತಾವು ? ॥೧೮೯-೧೯೦॥

ಯಮಧರ್ಮರಾಜನೇ, ಮಹಾಪಾಪಗಳನ್ನೂ ನಾಶಮಾಡುವ ನನ್ನ ದಿವ್ಯ ನಾಮವನ್ನು ಸ್ಮರಣೆಮಾಡುವ ವರೆಗೆ ಮಾತ್ರ ಪುರುಷನಲ್ಲಿ ಪಾಪಗಳು ನೆಲಸಿರುವು ವೆಂದು ತಿಳಿ. ಮನಸ್ಸು ನನ್ನ ನಾಮಸ್ಮರಣೆಯಲ್ಲಿ ಆಸಕ್ತವಾಗುವ ವರೆಗೆ ಮಹಾ ಪಾಪಗಳೆಲ್ಲವೂ ನೆಲಸಿರುವುವು. ಸ್ಮರಣೆಮಾಡಿದ ಕ್ಷಣದಲ್ಲಿಯೇ ಅವೆಲ್ಲವೂ ಧ್ವಂಸ ವಾಗಿಬಿಡುವುವು ॥೧೯೧-೧೯೨॥

ಸೋಮ ಎಂಬ ಪದದಲ್ಲಿನ ಸೋ ಎಂಬ ವರ್ಣವನ್ನುಚ್ಚಾರಮಾಡುವುದ ರಿಂದಲೇ ಪಾಪವೆಂಬ ಬೆಟ್ಟಗಳೇ ಹೃದಯದಿಂದ ತೊಲಗುವಾಗ 'ಮ' ಎಂದು ಎರಡನೆಯ ಅಕ್ಷರವನ್ನುಚ್ಚರಿಸಿದರೆ ಪುನಃ ಆ ಪಾಪಗಳು ಮನುಷ್ಯನನ್ನು ಹೇಗೆತಾನೇ

ಹಿತಮನ್ಯದ್ವದಿಷ್ಯಾಮಿ ಯುಷ್ಮಾಕಂ ತವ ಸಾದರಂ ।
ಶಾಂಕರಾನನ್ವಹಂ ಭಕ್ತ್ಯಾ ಪೂಜಯಸ್ವ ಪ್ರಯತ್ನತಃ ॥೧೯೫॥

ಯೇ ಚಂದ್ರಶೇಖರ ಮಹೇಶ ಕೃಪಾನಿಧಾನ
ಶ್ರೀವಿಶ್ವನಾಥ ಕರುಣಾಕರ ಶಂಕರೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾಃ
ತೇ ಶಾಂಕರಾಸ್ತವ ಯುಷ್ಮಾನ್ಯಹಮರ್ಚನೀಯಾಃ ॥೧೯೬॥

ಯೇ ಭೀಮಭರ್ಗ ಭಗವನ್ ಭವ ಭವ್ಯರೂಪ
ಫಾಲೇಕ್ಷಣೇನ ಗಣಕೋಟಿ ನಿಭೇಶ್ವರೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯುಷ್ಮಾನ್ಯಹಮರ್ಚನೀಯಾಃ ॥೧೯೭॥

---

ಪ್ರವೇಶಿಸಿಯಾವು ? ಈತನು ಮಹಾಪಾಪಗಳನ್ನೂ ನಾಶಮಾಡುವ ಆಸೋಮನಾಮವನ್ನುಚ್ಚರಿಸಿ ಅನಂತರ ಪ್ರಾಣತ್ಯಾಗಮಾಡಿರುವನಾದಕಾರಣ ಇವನು ಸ್ಥಿರವಾದ ಮೋಕ್ಷಹೊಂದಿರುವನೆಂಬುದರಲ್ಲಿ ಸಂಶಯವೇ ಇಲ್ಲ. ॥೧೯೩-೧೯೪॥

ಚಂದ್ರನನ್ನು ತಲೆಯಲ್ಲಿ ಧರಿಸಿದವನು, ತುಂಬಾ ಐಶ್ವರ್ಯಸಂಪನ್ನನು, ದಯಾಸಿಂಧುವು, ಜಗದೊಡೆಯನು, ಕೃಪಾಮಯನು, ಮಂಗಳವನ್ನುಂಟುಮಾಡುವವನು ; ಎಂದು ನನ್ನ ದಿವ್ಯನಾಮಗಳನ್ನು ನಿತ್ಯವೂ ಉಚ್ಚರಿಸುತ್ತಾ ಶುಭ್ರವಾದ ವಿಭೂತಿಯನ್ನು ಹಣೆಯಲ್ಲಿ ಧರಿಸಿರುವ ಶಂಕರಭಕ್ತರನ್ನು ನೀನು ಪ್ರತಿದಿನವೂ ಪೂಜೆಮಾಡಬೇಕು. ॥೧೯೫-೧೯೬॥

ವಿರೋಧಿಗಳಿಗೆ ಭಯಂಕರಸ್ವರೂಪನೂ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನೂ, ಷಡ್ಗುಣೈಶ್ವರ್ಯಸಂಪನ್ನನೂ, ಸಕಲ ಜಗದುತ್ಪತ್ತಿಕಾರಣನೂ, ಮಂಗಳಸ್ವರೂಪನೂ, ಹಣೆಗಣ್ಣಿನಿಂದ ಅನೇಕ ಕೋಟಿ ಗಣಗಳಂತೆ ಕಾಂತಿಯುಳ್ಳವನೂ, ಸರ್ವಸಮರ್ಥನೂ, ಎಂದು ಹೇಳುತ್ತಾ ಶುಭ್ರವಾದ ವಿಭೂತಿಯನ್ನು ಹಣೆಯಲ್ಲಿ ಹಚ್ಚಿಕೊಂಡು ಸ್ಮರಣೆಮಾಡುವ ಆ ಶಂಕರಭಕ್ತರನ್ನು ನೀನು ಅವಶ್ಯವಾಗಿ ಪೂಜೆಮಾಡಲೇಬೇಕು. ॥೧೯೭॥

ಯೇ ವಿಶ್ವವಂದ್ಯ ವಿಬುಧೋತ್ತಮ ವಿಶ್ವಬಂಧೋ
ಕಾಲಾನಲಾಭ ನರಸಿಂಹನಿಪಾತನೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾಸ್ಮಹಮರ್ಚನೀಯಾಃ ॥೯೮॥

ಯೇ ಕಾಲಕಾಲ ಪುರಸೂದನ ಪುಣ್ಯಮೂರ್ತೇ
ವಿಶ್ವಂಭರಾಖಿಲಗುರೋ ಭಗವಂಛಿವೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾಸ್ಮಹಮರ್ಚನೀಯಾಃ ॥೯೯॥

ಯೇ ದೀನವತ್ಸಲ ಪರಾತ್ಪರ ದೇವದೇವ
ದೇವೋತ್ತಮೋತ್ತಮ ಸದಾಶಿವ ಸರ್ವಗೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾಸ್ಮಹಮರ್ಚನೀಯಾಃ ॥೧೦೦॥

---

ಪ್ರಪಂಚದ ಜನಗಳೆಲ್ಲರಿಂದಲೂ ನಮಸ್ಕೃತನೂ, ದೇವತೆಗಳಲ್ಲಿ ಉತ್ತಮನಾದವನೂ, ಜಗತ್ತಿಗೆಲ್ಲಾ ಬಂಧುವೂ, ಪ್ರಳಯಕಾಲದ ಅಗ್ನಿಯಂತೆ ಕಾಂತಿಯುಳ್ಳವನೂ, ನರಸಿಂಹಾವತಾರಿಯಾದ ವಿಷ್ಣುವನ್ನು ಕೆಡವಿದವನೂ, ಎಂದು ನಿತ್ಯವೂ ಹೇಳುತ್ತಾ ಹಣೆಯಲ್ಲಿ ಶುಭ್ರವಾದ ವಿಭೂತಿಯನ್ನಲಂಕರಿಸಿಕೊಂಡಿರುವ ಆ ಶಂಕರ ಭಕ್ತರನ್ನು ನೀನು ಪೂಜೆಮಾಡಬೇಕು. ॥೯೮॥

ಯಮನನ್ನು ನಿಗ್ರಹಿಸಿದವನೂ, ತ್ರಿಪುರಾಸುರಧ್ವಂಸಕನೂ, ಪುಣ್ಯಸ್ವರೂಪನೂ, ಪ್ರಪಂಚವನ್ನೆಲ್ಲಾ ಹೊತ್ತು ಕಾಪಾಡುವವನೂ ಸಕಲರಿಗೂ ಗುರುವೂ, ಷಡ್ಗುಣೈಶ್ವರ್ಯಸಂಪನ್ನನೂ, ಮಂಗಳಕರನೂ, ಎಂದು ನಿತ್ಯವೂ ಹಣೆಯಲ್ಲಿ ಶುಭ್ರವಾದ ಭಸ್ಮವನ್ನಲಂಕರಿಸಿಕೊಂಡು ನನ್ನ ದಿವ್ಯನಾಮಗಳನ್ನುಚ್ಚಾರಮಾಡುವ ಆ ಶಂಕರ ಭಕ್ತರನ್ನು ನೀನು ನಿತ್ಯವೂ ಪೂಜೆಮಾಡಬೇಕು. ॥೯೯॥

ದೈನ್ಯವುಳ್ಳವರಲ್ಲಿ ಪ್ರೀತಿಯುಳ್ಳವನೂ, ಅತ್ಯಂತ ಉತ್ಕೃಷ್ಟನೂ, ದೇವತೆಗಳಿಗೆಲ್ಲಾ ದೇವನೂ, ಅಲ್ಲದೇ ಅತ್ಯುತ್ತಮನೆನಿಸಿ ಮೆರೆಯುವವನೂ, ನಿತ್ಯಮಂಗಳಸ್ವರೂಪನೂ, ಸರ್ವ ವ್ಯಾಪಿಯೂ, ಎಂದು ನನ್ನನ್ನು ಹೊಗಳುತ್ತಾ ಭಸ್ಮಧಾರಣೆ

ಯೇ ಸರ್ಗರಕ್ಷಣವಿನಾಶವಿಧಾನಹೇತೋ
ಗೌರೀಮನೋರಮಣ ಸರ್ವಸುರಾಧಿಪೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾನ್ವಹಮರ್ಚನೀಯಾಃ ॥೨೦೧॥

ಯೇ ನಿತ್ಯ ನಿಷ್ಕಲ ನಿರಂಜನ ಭಾಸಮಾನ
ಮಾಯಾದ್ಯತೀತ ನಿಗಮಾಂತವಿಭೂಷಣೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾನ್ವಹಮರ್ಚನೀಯಾಃ ॥೨೦೨॥

ಯೇ ನೀಲಲೋಹಿತ ನಿರೀಶ್ವರ ನಿಷ್ಪ್ರಪಂಚ
ಪಂಚಾನನಾವ್ಯಯ ನಿರಂತರ ನಿರ್ಗುಣೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾನ್ವಹಮರ್ಚನೀಯಾಃ ॥೨೦೩॥

---

ಯಿಂದಲಂಕೃತರಾಗಿರುವ ಶಂಕರಭಕ್ತರನ್ನು ನೀನು ನಿಯಮದಿಂದ ಪ್ರತಿನಿತ್ಯವೂ ಪೂಜೆಮಾಡಬೇಕು. ॥೨೦೦॥

ಸಕಲಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಕಾರ್ಯಗಳಿಗೆ ಕಾರಣಭೂತನಾಗಿರುವನೂ, ಗೌರೀದೇವಿಯ ಮನಸ್ಸನ್ನು ಆನಂದಗೊಳಿಸುವನೂ, ಸಕಲದೇವತೆಗಳಿಗೂ ಅಧಿಪತಿಯೂ ಎಂದು ಹೇಳುತ್ತಾ ಹಣೆಯಲ್ಲಿ ಶುಭ್ರವಾದ ಭಸ್ಮವನ್ನು ಧರಿಸಿಕೊಂಡಿರುವ ಆ ನನ್ನ ಭಕ್ತರು ನಿನ್ನಿಂದ ಪ್ರತಿನಿತ್ಯವೂ ಪೂಜಾರ್ಹರೆಂದು ತಿಳಿ. ॥೨೦೧॥

ನಿತ್ಯಸ್ವರೂಪನೂ, ಕಲಂಕರಹಿತನೂ, ನಿರ್ಲಿಪ್ತನೂ, ಪ್ರಕಾಶಿಸುತ್ತಿರುವನೂ, ಮಾಯೆಯೇ ಮುಂತಾದುವುಗಳನ್ನು ಮೀರಿ ಅಜ್ಞಾನಕ್ಕೆ ಆಶ್ರಯವಾಗದಿರುವನೂ, ವೇದಾಂತಗಳಿಗೆ ಅಲಂಕಾರಪ್ರಾಯನೂ ಎಂದು ನನ್ನ ದಿವ್ಯನಾಮಗಳನ್ನು ನಿತ್ಯವೂ ಉಚ್ಚಾರಮಾಡುತ್ತಾ ಶುಭ್ರವಾದ ಭಸ್ಮವನ್ನು ಹಣೆಯಲ್ಲಿ ಧರಿಸಿ ಪ್ರಕಾಶಿಸುತ್ತಿರುವ ಆ ನನ್ನ ಭಕ್ತರನ್ನು ನೀನು ಪ್ರತಿದಿನವೂ ನಿಯಮದಿಂದ ಪೂಜೆಮಾಡಬೇಕು. ॥೨೦೨॥

ಕೊರಳಲ್ಲಿಯೂ, ಕೂದಲುಗಳಲ್ಲಿಯೂ ಕೆಂಪುಬಣ್ಣವುಳ್ಳವನೂ, ಐಶ್ವರ್ಯಸಂಬಂಧವಿಲ್ಲದವನೂ, ಪ್ರಪಂಚಸಂಬಂಧವಿಲ್ಲದವನೂ, ಐದುಮುಖವುಳ್ಳವನೂ,

ಯೇ ವಿಷ್ಣು ಮುಖ್ಯಸುರವರ್ಗನಿಸರ್ಗಸೇವ್ಯ
ಸ್ವರ್ಗಾಪವರ್ಗಫಲವರ್ಗನಿಧಾಯಕೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾನ್ವಹಮರ್ಚನೀಯಾಃ ॥೨೦೪॥

ಯೇ ಸೋಮ ಮಂಗಳನಿಧಾನ ವಿಧಾನಹೇತೋ
ಕಾರುಣ್ಯಸಾಗರ ಶರಣ್ಯ ಗಣೇಶ್ವರೇತಿ ।
ನಿತ್ಯಂ ವದಂತಿ ಸಿತಕೇವಲಭಸ್ಮಫಾಲಾ
ಸ್ತೇ ಶಾಂಕರಾಸ್ತವ ಯಮಾನ್ವಹಮರ್ಚನೀಯಾಃ ॥೨೦೫॥

ಯದೇತದುಕ್ತಮಧುನಾ ಯಮಾತ್ಯಾದರಪೂರ್ವಕಂ ।
ತದನ್ವಹಂ ಸ್ಮರ ಪ್ರೀತ್ಯಾ ಸಾವಧಾನೇನ ಯತ್ನತಃ ॥೨೦೬॥

---

ನಾಶರಹಿತನೂ, ಗುಣಸಾಮಾನ್ಯಶೂನ್ಯನೂ ಎಂದು ನನ್ನ ದಿವ್ಯನಾಮಗಳನ್ನುಚ್ಚಾರ ಮಾಡುತ್ತಾ ಭಸ್ಮಾಲಂಕೃತಲಲಾಟರಾಗಿರುವ ಆ ನನ್ನ ಭಕ್ತರನ್ನು ನೀನು ಪ್ರತಿನಿತ್ಯವೂ ಪೂಜೆಮಾಡಬೇಕು. ॥೨೦೩॥

ಸ್ವಭಾವವಾಗಿ ವಿಷ್ಣುವೇ ಮುಂತಾದ ದೇವತಾವರ್ಗಗಳಿಂದ ಸೇವಿಸಲ್ಪಡುವನೂ, ಸ್ವರ್ಗ ಮೋಕ್ಷರೂಪವಾದ ಫಲಸಮೂಹವನ್ನುಂಟುಮಾಡುವವನೂ ಎಂದು ನಿತ್ಯವೂ ನನ್ನ ದಿವ್ಯನಾಮಗಳನ್ನುಚ್ಚಾರಮಾಡುತ್ತಾ ಹಣೆಯಲ್ಲಿ ಶುಭ್ರವಾದ ಭಸ್ಮವನ್ನಲಂಕರಿಸಿಕೊಂಡಿರುವ ಆ ನನ್ನ ಭಕ್ತರನ್ನು ನೀನು ಯಾವಾಗಲೂ ಪೂಜೆಮಾಡಬೇಕು. ॥೨೦೪॥

ಯಮನೇ, ಉಮಾದೇವಿಯ ಸಹಚಾರಿಯೂ, ಸಕಲಮಂಗಳಗಳಿಗೂ ಆಶ್ರಯನೂ, ಅಲ್ಲದೇ ಮಂಗಳಕ್ಕೆ ಕಾರಣಭೂತನೂ, ದಯಾಸಾಗರನೂ, ಶರಣಾಗತರಕ್ಷಕನೂ, ಗಣಗಳಿಗೆಲ್ಲಾ ಒಡೆಯನೂ, ಎಂದು ನಿತ್ಯವೂ ನನ್ನ ದಿವ್ಯನಾಮಗಳನ್ನುಚ್ಚಾರಮಾಡುತ್ತಾ ಶುಭ್ರವಾದ ವಿಭೂತಿಯನ್ನು ಹಣೆಯಲ್ಲಿ ಧರಿಸಿಕೊಂಡಿರುವ ಆ ಶಂಕರಭಕ್ತರನ್ನು ನೀನು ಪ್ರತಿದಿನವೂ ಪೂಜೆಮಾಡಬೇಕು. ॥೨೦೫॥

ಅಯ್ಯ ಯಮನೇ, ಈಗ ನಾನು ಹೇಳಿದ್ದನ್ನೆಲ್ಲಾ ಅತ್ಯಂತ ಆದರದಿಂದ ನಿಯಮಪೂರ್ವಕವಾಗಿ ಪ್ರೀತಿಯಿಂದ ಸಾವಧಾನಮನಸ್ಸುಳ್ಳವನಾಗಿ ಪ್ರತಿದಿನವೂ

ಮೃತ್ಯೋ ಹಿತಕರಾ ಏವ ಶಾಂಕರಾಃ ಸರ್ವದಾ ಮಮ ।
ಅತಸ್ತೇ ಸರ್ವದಾ ಪೂಜ್ಯಾ ತವ ಯತ್ನೇನ ಸಾದರಂ ॥೨೦೭॥

ಅಶಾಂಕರಾನ್ಪ್ರಯತ್ನೇನ ನರಕೇಷು ಯಥಾತಥಂ ।
ಪಾತಯ ಪ್ರೋಥಯಾಸ್ತ್ರೇಷು ತಪ್ತಭ್ರಾಷ್ಟ್ರೇಷು ಭಾಜಯ ॥೨೦೮॥

ಅಶಾಂಕರೇಭ್ಯಃ ಸತತಂ ದೇಹಿ ದುಃಖಾನ್ಯಸಂಶಯಂ ।
ಅಶಾಂಕರೇಷು ಶಮನ ಕೃಪಾಂ ಮಾ ಕುರು ಸರ್ವಥಾ ॥೨೦೯॥

ಅಶಾಂಕರಃ ಕೃಪಾಪಾತ್ರಂ ನ ಭವತ್ಯೇವ ಸರ್ವಥಾ ।
ಅಶಾಂಕರಾರ್ಥಮೇವೈತಾಃ ಪುರಾ ಸೃಷ್ಟಾ ಹಿ ಯಾತನಾಃ ॥೨೧೦॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಪ್ರಣಮ್ಯ ತ್ರಿಪುರಾಂತಕಂ ।
ಕೃತಾಂಜಲಿಪುಟೋ ಭೂತ್ವಾ ಬಭಾಷೇ ವಚನಂ ಯಮಃ ॥೨೧೧॥

---

ಸ್ಮರಣೆಮಾಡಿಕೋ. ಮೃತ್ಯುಸ್ವರೂಪನಾದ ಯಮನೇ, ಪೂಜ್ಯರಾದ ನನ್ನ ಭಕ್ತರು ಯಾವಾಗಲೂ ನನಗೆ ವಿಶೇಷ ಹಿತವನ್ನುಂಟುಮಾಡುವರಾಗಿರುವರು. ಅವರನ್ನು ನೀನು ಯಾವಾಗಲೂ ಆದರದಿಂದ ನಿಯಮಬದ್ಧನಾಗಿ ಪೂಜೆಮಾಡು॥೨೦೬-೨೦೭॥

ಎಲೈ ಯಮನೇ, ಶಂಕರನ ಭಕ್ತರಲ್ಲದವರನ್ನು ಮಾತ್ರ ಬಲಾತ್ಕಾರವಾಗಿ ನಿನ್ನ ಮನಸ್ಸಿಗೆ ತೋರಿದಂತೆ ಅನೇಕ ಬಗೆಯ ಅಸ್ತ್ರಗಳಿಂದ ಹೊಡೆಯುತ್ತಾ ಕಾದ ಭಾಂಡಗಳಲ್ಲಿ ತಳ್ಳುವನಾಗು. ಶಂಕರದ್ರೋಹಿಗಳಾದವರನ್ನು ಸ್ವಲ್ಪವೂ ದಯೆ ಗರೆಯದೇ ನಾನಾಬಗೆಯ ದುಃಖಗಳನ್ನು ಕೊಡು. ಅಯ್ಯ ಯಮನೇ, ಶಂಕರ ದ್ರೋಹಿಗಳಲ್ಲೆಂದಿಗೂ ದಯೆಯನ್ನೇ ತೋರಿಸಬೇಡ. ಎಂದೆಂದಿಗೂ ಅವರು ದಯೆಗೆ ಪಾತ್ರರಾಗುವುದಿಲ್ಲ. ಹಿಂದೆ ಈ ಶಂಕರದ್ರೋಹಿಗಳಿಗೋಸ್ಕರವೇ ಇಂತಹ ನರಕ ಯಾತನೆಗಳೆಲ್ಲಾ ಸೃಷ್ಟಿಮಾಡಲ್ಪಟ್ಟವು" ॥೨೦೮-೨೦೯-೨೧೦॥

ಹೀಗೆ ನುಡಿದ ಆ ಮಹೇಶ್ವರನ ಮಾತುಗಳನ್ನು ಕೇಳಿ ತ್ರಿಪುರಾಸುರ ವೈರಿಯಾದ ಪರಶಿವನಿಗೆ ಕೈಮುಗಿದು ನಮಸ್ಕಾರಮಾಡಿ ಪರಶಿವನೊಡನೆ ಆ ಯಮನು ಹೀಗೆಂದನು. ॥೨೧೧॥

॥ ಯಮ ಉವಾಚ ॥

ಮಹಾದೇವ ಕೃಪಾಸಿಂಧೋ ತ್ವದಾಜ್ಞಾ ಶಿರಸಾ ಧೃತಾ ।
ಸರ್ವದೇವೋತ್ತಮ ಶ್ರೀಮಂಛಾಸಿತೋಽಸ್ಮಿ ಸುರೋತ್ತಮ ॥೨೧೨॥

ತ್ರಿಷಷ್ಟಿಕೋಟಿ ದೂತಾ ಮೇ ಶಾಂಕರಾಸ್ತ್ರನಿವೋಹಿತಾಃ ।
ಪಾತಿತಾಃ ಸಂತಿ ನಿಃಸಂಜ್ಞಾ ಮೃತದೇಹಾ ಇವಾಧುನಾ ॥೨೧೪॥

ಅದ್ಯ ಶಂಭೋ ತದುತ್ಥಾನಂ ಯಥಾ ಭವತಿ ಸತ್ವರಂ ।
ತಥಾ ವಿದೇಹಿ ಕರುಣಾಂ ಕರುಣಾಕರ ಶಂಕರ ॥೨೧೫॥

॥ ಶಿವಭಕ್ತ ಉವಾಚ ॥

ಇತಿ ತದ್ವಚನಂ ಶ್ರುತ್ವಾ ತಥಾಸ್ತ್ವಿತ್ಯಾಹ ಶಂಕರಃ ।
ತತಃ ಸ ನಿರ್ಗತಃ ಕಾಲಃ ಶಂಕರಪ್ರೇಷಿತೋ ದ್ವಿಜ ॥೨೧೫॥

ಅತಃ ಶಿವೈಕಶರಣೋ ಭವಾನಪಿ ಭವ ದ್ವಿಜ ।
ಶಿವೈಕಶರಣಾನಾಂ ತು ನಾಸ್ತ್ಯೇವ ಯಮಯಾತನಾ ॥೨೧೬॥

---

"ದಯಾಸಮುದ್ರನಾದ ಮಹಾದೇವನೇ, ನಿನ್ನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತುಕೊಂಡಿರುವೆನು. ಸಕಲ ದೇವತೆಗಳಲ್ಲಿಯೂ ಉತ್ತಮನೂ, ಸಂಪದ್ಭರಿತನೂ ಆದ ದೇವತೋತ್ತಮನೇ, ನಿನ್ನಿಂದ ನಾನು ಶಿಕ್ಷಿಸಲ್ಪಟ್ಟಿರುವೆನು. ನನ್ನ ಅರವತ್ತು ಮೂರು ಕೋಟಿ ದೂತರು ನಿನ್ನ ಭಕ್ತನ ಒಂದು ಅಸ್ತ್ರದಿಂದ ಮೂರ್ಛಿತರಾಗಿ ಸ್ವಲ್ಪವೂ ಸಂಜ್ಞೆಯಿಲ್ಲದೇ ಸತ್ತವರಂತೆ ಬಿದ್ದಿರುವರು. ಎಲೈ ದಯಾಮಯನಾದ ಶಂಕರನೇ, ಈಗ ಅವರೆಲ್ಲರೂ ಎಚ್ಚರಗೊಳ್ಳುವಂತೆ ದಯೆಮಾಡಬೇಕು" ಎಂದು ಯಮನು ಶಂಕರನನ್ನು ಪ್ರಾರ್ಥಿಸಿದನು. ॥೨೧೨-೨೧೪-೨೧೫॥

ಬ್ರಾಹ್ಮಣನೇ, ಆ ಯಮನ ಮಾತನ್ನು ಕೇಳಿ ಶಂಕರನು ಹಾಗೆಯೇ ಹಾಗಲೆಂದು ಹೇಳಲು ಅನಂತರ ಆ ಯಮನು ಶಂಕರನ ಅಪ್ಪಣೆಯಂತೆ ಹಿಂದಿರುಗಿದನು. ಆದ್ದರಿಂದ ಓ ಬ್ರಾಹ್ಮಣನೇ, ನೀನೂ ಆ ಶಿವನಲ್ಲಿಯೇ ಶರಣಾಗತನಾಗು. ಶಿವನನ್ನು ಮರೆಹೊಕ್ಕಿರುವರಿಗೆ ಯಮಯಾತನೆಗಳು ಎಂದಿಗೂ ಇಲ್ಲ. ॥೨೧೫-೨೧೬॥

ಬಿಭೇತಿ ಶಾಂಕರಂ ದೃಷ್ಟ್ವಾ ಯಮೋಽಪಿ ಸತತಂ ದ್ವಿಜ ।
ತತೋ ಭಜ ಮಹಾದೇವಂ ಶಾಂಭವೋ ಭವ ಸರ್ವದಾ ॥೨೧೭॥

ಸಿತಕೇವಲಭಸ್ಮಾಂಗಃ ಶಿವೈಕಶರಣಃ ಸದಾ ।
ಭಜ ಶಂಕರಮಾನಂದಂ ಸರ್ವದೇವಶಿಖಾಮಣಿಂ ॥೨೧೮॥

ಅರ್ಚಯಸ್ವ ಮಹಾದೇವಂ ಸಾವಧಾನೇನ ಸರ್ವದಾ ।
ತ್ರಿಕಾಲಮಪ್ರಮಾದೇನ ಶಿವಧ್ಯಾನಪುರಃಸರಂ ॥೨೧೯॥

ಭಸ್ಮನೋದ್ಧೂಳಿತಾಂಗಾನಿ ಮಂತ್ರವತ್ಸಾವಧಾನತಃ ।
ಕುರು ತ್ರಿಪುಂಡ್ರಂ ತದನು ಭಾಲಾದ್ಯಂಗೇಷು ಸಾದರಂ ॥೨೨೦॥

ಜಾಬಾಲೋಕ್ತೇನ ಮಾರ್ಗೇಣ ಕುರು ರುದ್ರಾಕ್ಷಧಾರಣಂ ।
ಮಾ ರುದ್ರಾಕ್ಷವಿಭೂತಿಭ್ಯಾಂ ಪ್ರಮತ್ತೋ ಭವ ಸರ್ವದಾ ॥೨೨೧॥

ವಿಭೂತಿಧಾರಣಂ ನಿತ್ಯಂ ತಥಾ ರುದ್ರಾಕ್ಷಧಾರಣಂ ।
ಶಿವಾರ್ಚನಂ ತಥಾ ನಿತ್ಯಂ ಬ್ರಾಹ್ಮಣಾನಾಂ ವಿಶೇಷತಃ ॥೨೨೨॥

---

ಅಯ್ಯ ಬ್ರಾಹ್ಮಣನೇ! ಶಂಕರಭಕ್ತನನ್ನು ನೋಡಿ ಯಮನೂ ಸಹ ಯಾವಾಗಲೂ ಭಯಪಡುತ್ತಾನೆ. ಆದ್ದರಿಂದ ಆ ಮಹಾದೇವನನ್ನು ಸೇವಿಸುತ್ತಾ ಯಾವಾಗಲೂ ಈಶ್ವರಭಕ್ತನಾಗಿರು. ಶುಭ್ರವಾದ ಭಸ್ಮವನ್ನು ಅವಯವಗಳಿಗೆಲ್ಲಾ ಲೇಪನ ಮಾಡಿಕೊಂಡು ಶಿವಧ್ಯಾನನಿರತನಾಗಿ ಸಕಲ ದೇವತಾಸಾರ್ವಭೌಮನೆನಿಸಿರುವ ಆ ಶಂಕರನನ್ನು ಆನಂದದಿಂದ ಸೇವೆಮಾಡು. ॥೨೧೭-೨೧೮॥

ಬೆಳಗ್ಗೆ, ಮಧ್ಯಾಹ್ನ, ಮತ್ತು ಸಾಯಂಕಾಲಗಳಲ್ಲಿಯೂ ಆ ಪರಶಿವನ ಧ್ಯಾನಪೂರ್ವಕವಾಗಿ ಮಹಾದೇವನನ್ನು ಸಾವಧಾನವಾಗಿ ಪ್ರಮಾದವಿಲ್ಲದೇ ಪೂಜೆ ಮಾಡು. ಮಂತ್ರಪೂರ್ವಕವಾಗಿ ಅವಯವಗಳನ್ನೆಲ್ಲಾ ವಿಭೂತಿಯಿಂದ ಲೇಪನ ಮಾಡಿಕೋ. ಹಣೆಯೇ ಮುಂತಾದ ಅಂಗಗಳಲ್ಲಿ ಆದರದಿಂದ ಭಸ್ಮತ್ರಿಪುಂಡ್ರವನ್ನು ಧಾರಣೆಮಾಡು. ॥೨೧೯-೨೨೦॥

ಜಾಬಾಲ ಮಹರ್ಷಿಯು ಹೇಳಿರುವ ವಿಧಿಯಂತೆ ರುದ್ರಾಕ್ಷಿಗಳನ್ನು ಧರಿಸಿಕೋ? ಯಾವಾಗಲೂ ರುದ್ರಾಕ್ಷ, ಮತ್ತು ವಿಭೂತಿ ಇವುಗಳನ್ನು ಧಾರಣೆ ಮಾಡುವ ವಿಷಯದಲ್ಲಿ ಎಂದಿಗೂ ಪ್ರಮಾದ ಹೊಂದಬೇಡ. ವಿಭೂತಿ, ರುದ್ರಾಕ್ಷ,

ನಿಧನೇತ್ಯಾದಿ ಯೇ ಮಂತ್ರಾ ನಮೋಽಂತಾಃ ಪಾಪನಾಶಕಾಃ ।
ತೈರನ್ವಹಂ ಪೂಜನೀಯೋ ಲಿಂಗರೂಪೀ ಸದಾಶಿವಃ ॥೨೨೩॥

ದ್ವಿಜ ವೇದೇಷ್ವಶೇಷೇಷು ವಿಹಿತಂ ಲಿಂಗಪೂಜನಂ ।
ಸ ಧರ್ಮಃ ಸರ್ವಫಲದಃ ಸ್ವಯಂ ನಿತ್ಯೋಽಪಿ ಸರ್ವದಾ ॥೨೨೪॥

ಶಿವಲಿಂಗಾರ್ಚನಂ ನಿತ್ಯಂ ನಿತ್ಯಂ ಯೋ ನ ಕರಿಷ್ಯತಿ ।
ಸ ಯಾತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೨೨೫॥

ನಿತ್ಯಮಾರ್ದ್ರೈರನಾರ್ದ್ರೈರ್ವಾ ಬಿಲ್ವಪತ್ರೈಃ ಸದಾಶಿವಂ ।
ಪೂಜಯಸ್ವ ಮಹಾದೇವಂ ತಸ್ಮಾನ್ಮಾ ಪ್ರಮದೋ ಭವ ॥೨೨೬॥

ಬಿಲ್ವಪತ್ರೈರ್ಮಹಾದೇವಂ ಯೋ ನಿತ್ಯಂ ನಾರ್ಚಯಿಷ್ಯತಿ ।
ಸ ಕರ್ಮಭ್ರಷ್ಟ ಏವೇತಿ ವದಂತಿ ಶ್ರುತಯೋಽಖಿಲಾಃ ॥೨೨೭॥

---

ಇವುಗಳನ್ನು ಧರಿಸುವುದೂ, ಶಿವಪೂಜೆಮಾಡುವುದೂ ಸಹ ಬ್ರಾಹ್ಮಣನಿಗೆ ನಿತ್ಯ ಕರ್ಮಗಳೆಂದು ವಿಶೇಷವಾಗಿ ಹೇಳಿದೆ ॥೨೨೧-೨೨೨॥

ನಿಧನಪತಯೇ ನಮಃ ಎನ್ನುವ ಉಪನಿಷತ್ಪ್ರೋಕ್ತವಾದ ಮಂತ್ರಗಳು ಪಾಪನಾಶಕರಗಳಾಗಿರುವುದರಿಂದ ಅವುಗಳನ್ನುಚ್ಚರಿಸಿ ಲಿಂಗಸ್ವರೂಪಿಯಾದ ಆ ಸದಾಶಿವನನ್ನು ಪ್ರತಿನಿತ್ಯವೂ ಪೂಜೆಮಾಡಬೇಕು. ಬ್ರಾಹ್ಮಣನೇ! ಎಲ್ಲಾ ವೇದಗಳಲ್ಲಿಯೂ ಶಿವಲಿಂಗಪೂಜೆಯು ವಿಧಿಸಲ್ಪಟ್ಟಿದೆ. ಈ ಲಿಂಗಪೂಜಾಧರ್ಮವು ಸಕಲ ಫಲಗಳನ್ನೂ ಕೊಡುವುದಲ್ಲದೆ ಸ್ವತಃ ಶಾಶ್ವತವಾಗಿರುವುದು. ॥೨೨೩-೨೨೪॥

ನಿತ್ಯವಾಗಿರುವ (ಶಾಶ್ವತವಾಗಿರುವ) ಈ ಶಿವಲಿಂಗಪೂಜೆಯನ್ನು ದಿನವೂ ಮಾಡದವನು ಭಯಂಕರವಾದ ನರಕವನ್ನು ಹೊಂದಿ ಚಂದ್ರಸೂರ್ಯರಿರುವವರೆಗೆ ಅಲ್ಲಿ ಬಿದ್ದು ನರಳುವನು. ಆದ್ದರಿಂದ ಎಲೈ ಬ್ರಾಹ್ಮಣನೇ! ನಿತ್ಯವೂ ನೀರಿನಿಂದ ತೊಯ್ದ ಅಥವಾ ಒಣಗಿರುವ ಬಿಲ್ವಪತ್ರೆಗಳನ್ನು ತಂದು ಆ ಸದಾ ಮಂಗಳ ಸ್ವರೂಪನಾದ ಮಹಾದೇವನನ್ನು ಪೂಜೆಮಾಡು. ಇದರಲ್ಲಿ ಕೊಂಚವೂ ಹಿಂದೆಗೆಯಬೇಡ. ನಿತ್ಯವೂ ಬಿಲ್ವಪತ್ರೆಗಳಿಂದ ಆ ಮಹಾದೇವನನ್ನು ಪೂಜೆಮಾಡದಿರುವನನ್ನು ಕರ್ಮಭ್ರಷ್ಟನೆಂದು ಎಲ್ಲಾ ಶ್ರುತಿಗಳೂ ಸಾರುತ್ತಿರುವುವು. ॥೨೨೫-೨೨೬-೨೨೭॥

ಬಿಲ್ವಪತ್ರಾಣಿ ಶುದ್ಧಾನಿ ಸ್ವತಃ ಪರ‍್ಯುಷಿತಾನ್ಯಪಿ ।
ಶಂಕರಾರ್ಚನಯೋಗ್ಯಾನಿ ಭವಂತೀತ್ಯಸ್ತಿ ಹಿ ಶ್ರುತಿಃ ॥೨೨೮॥

ಸುವರ್ಣಂ ಬಿಲ್ವಪತ್ರಂ ಚ ರತ್ನಂ ಚ ರಜತಂ ತಥಾ ।
ನ ಹಿ ಪರ‍್ಯುಷಿತಂ ಯಸ್ಮಾಚ್ಛುದ್ಧಮೇವ ಸ್ವತಂ ಯತಃ ॥೨೨೯॥

ಅರ್ಪಿತಾನ್ಯಪಿ ಬಿಲ್ವಾನಿ ಪ್ರಕ್ಷಾಳ್ಯ ಚ ಪುನಃ ಪುನಃ ।
ಶಂಕರಾಯಾರ್ಪಣೀಯಾನಿ ನವಾನಿ ಯದಿ ನ ಕ್ವಚಿತ್ ॥೨೩೦॥

ಶಿವಲಿಂಗಂ ಸಮಭ್ಯರ್ಚ್ಯ ಬಿಲ್ವಪತ್ರೈಃ ಪ್ರಯತ್ನತಃ ।
ಭೋಕ್ತವ್ಯಮನ್ವಹಂ ವಿಪ್ರೈರನ್ಯಥಾ ಯಾಂತಿ ಯಾತನಾಂ ॥೨೩೧॥

ಶುಷ್ಕಂ ಶಾಠಿತಮಾದ್ರ್ರಂ ವಾ ಬಿಲ್ವಪತ್ರಂ ಶಿವಪ್ರಿಯಂ ।
ತಸ್ಮಾದರ್ಚಯ ಯತ್ನೇನ ಬಿಲ್ವಪತ್ರೈಃ ಸದಾಶಿವಂ ॥೨೩೨॥

ಅನಾಘ್ರಾತಂ ಬಿಲ್ವಪತ್ರಂ ಯಾದೃಶಂ ತಾದೃಶಂ ಶಿವೇ ।
ವಿನಿಕ್ಷಿಪ್ಯ ಮಹಾಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೨೩೩॥

---

ಬಿಲ್ವಪತ್ರೆಗಳು ಶುದ್ಧವಾಗಿರಲಿ, ಅಥವಾ ಧೂಳುಗಳಿಂದ ಮುಚ್ಚಿರಲಿ ಅವು ಆ ಶಂಕರನ ಪೂಜಾಯೋಗ್ಯವಾದವುಗಳೆಂದು ವೇದವು ನುಡಿಯುತ್ತಿರುವುದು. ಚಿನ್ನ, ಬಿಲ್ವಪತ್ರೆ, ರತ್ನ ಮತ್ತು ಬೆಳ್ಳಿ ಇವುಗಳು ಯಾವಾಗಲೂ ಸ್ವತಃ ಪರಿಶುದ್ಧವಾಗಿರುವುವೇ ಹೊರತು; ಎಂದಿಗೂ ಕಲ್ಮಷಯುಕ್ತವಾದವುಗಳಲ್ಲ. ನಿರ್ಮಾಲ್ಯ ಬಿಲ್ವಪತ್ರೆಗಳನ್ನೇ ಚೆನ್ನಾಗಿ ತೊಳೆದು ಶಿವನಿಗೆ ಸಮರ್ಪಿಸಬಹುದು. ಹೊಸ ಬಿಲ್ವಪತ್ರೆಗಳು ದೊರೆಯದಿದ್ದಾಗ ಈರೀತಿ ನಿರ್ಮಾಲ್ಯವನ್ನು ತೊಳೆದು ಪೂಜಿಸಬಹುದು. ॥೨೨೮-೨೨೯-೨೩೦॥

ಪ್ರತಿದಿನವೂ ಬ್ರಾಹ್ಮಣರು ಬಿಲ್ವಪತ್ರೆಗಳಿಂದ ಶಿವಲಿಂಗವನ್ನು ನಿಯಮಬದ್ಧರಾಗಿ ಪೂಜಿಸಿ ಅನಂತರ ಊಟಮಾಡಬೇಕು. ಹಾಗೆ ಮಾಡದಿದ್ದರೆ ನರಕಯಾತನೆಗಳನ್ನನುಭವಿಸಬೇಕಾಗಿ ಬರುವುದು. ಬಿಲ್ವಪತ್ರೆಯು ಒಣಗಿರಲಿ, ಹಸಿಯಾಗಿರಲಿ ಅಥವ ಕೊಯ್ದಿರಲಿ ಶಿವನಿಗೆ ಪ್ರೀತಿಕರವಾಗಿರುವುದರಿಂದ ಅವುಗಳನ್ನು ತಂದು ಸದಾಶಿವನಿಗೆ ಪೂಜೆಮಾಡಲೇಬೇಕು. ಮೂಸಿನೋಡದೇ ಯಾವರೀತಿಯಾವ ಬಿಲ್ವ

ಸದಾಶಿವಂ ಬಿಲ್ವಪತ್ರೈರಚ್ಛಿದ್ರೈಃ ಕೋಮಲೈರ್ನವೈಃ ।
ಯಃ ಪೂಜಯತಿ ಯತ್ನೇನ ಸ ಮೋಕ್ಷಮಧಿಗಚ್ಛತಿ ॥೨೩೪॥

ಬಿಲ್ವಪತ್ರೈರ್ನವೈರ್ನಿತ್ಯಂ ಯಃ ಪೂಜಯತಿ ಶಂಕರಂ ।
ಸ ಧನ್ಯ ಇತಿ ವೇದಾಂತೈಃ ಸರ್ವೈರಪ್ಯುಪಬೃಂಹಿತಂ ॥೨೩೫॥

ಮಹಾದೇವಂ ಪ್ರಯತ್ನೇನ ಪ್ರಾತರ್ಬಿಲ್ವದಲೈರ್ನವೈಃ ।
ಸಂಪೂಜ್ಯ ಮೋದತೇ ಯಸ್ತು ಸ ಧನ್ಯ ಇತಿ ಗೀಯತೇ ॥೨೩೬॥

ಏವಮೇವ ಹಿ ಮಧ್ಯಾಹ್ನೇ ಸಾಯಾಹ್ನೇಽಪಿ ಸದಾಶಿವಂ ।
ಸ ಬಿಲ್ವಪತ್ರೈರಭ್ಯರ್ಚ್ಯ ಧನ್ಯೋ ಭವತಿ ಮಾನವಃ ॥೨೩೭॥

ಬಿಲ್ವಪತ್ರಾರ್ಚನಾತ್ಪ್ರೀತೋ ಯಥಾ ಭವತಿ ಶಂಕರಃ ।
ತಥಾ ನಾನ್ಯೇನ ಸುಪ್ರೀತೋ ಭವಿಷ್ಯತಿ ಮಹೇಶ್ವರಃ ॥೨೩೮॥

ತತಃ ಪೂಜಯ ಯತ್ನೇನ ಮಹಾದೇವಂ ಸುರೋತ್ತಮಂ ।
ಮಹಾಪಾಪವಿನಿರ್ಮುಕ್ತೋ ಭವಿಷ್ಯಸಿ ನ ಸಂಶಯಃ ॥೨೩೯॥

---

ಪತ್ರೆಗಳಿಂದಲಾದರೂ ಮಹಾದೇವನನ್ನು ಪೂಜೆಮಾಡಿದರೆ ಮಹಾಪಾತಕಗಳಿಂದ ಮಾನವನು ಬಿಡುಗಡೆಹೊಂದುವನು. ॥೨೩೧-೨೩೨-೨೩೩॥

ಮೃದುವಾದ ಹೊಸಬಿಲ್ವದಳಗಳಿಂದ ನಿಯಮಪೂರ್ವಕವಾಗಿ ಆ ಸದಾಶಿವನನ್ನು ಪೂಜೆಮಾಡುವವನು ಮೋಕ್ಷವನ್ನು ಹೊಂದುವನು. ಹೊಸಹೊಸದಾಗಿರುವ ಬಿಲ್ವಪತ್ರೆಗಳಿಂದ ನಿತ್ಯವೂ ಗೌರೀಶಂಕರರನ್ನು ಪೂಜೆಮಾಡುವವನನ್ನು ಎಲ್ಲಾ ವೇದಾಂತಗಳೂ ಧನ್ಯನೆಂದು ಸಾರುತ್ತಿರುವುವು. ಪ್ರಾತಃಕಾಲದಲ್ಲಿ ನಿಯಮಪೂರ್ವಕವಾಗಿ ಹೊಸಬಿಲ್ವದಳಗಳಿಂದ ಮಹಾದೇವನಿಗೆ ಪೂಜೆಮಾಡಿ ಸಂತೋಷಪಡುವವನು ಧನ್ಯನೆಂದು ಸರ್ವರಿಂದಲೂ ಸ್ತೋತ್ರಮಾಡಲ್ಪಡುವನು. ॥೨೩೪-೨೩೫-೨೩೬॥

ಹೀಗೆಯೇ ಮಧ್ಯಾಹ್ನದಲ್ಲಿಯೂ ಮತ್ತು ಸಾಯಂಕಾಲದಲ್ಲಿಯೂ ಆ ಸದಾಶಿವನನ್ನು ಬಿಲ್ವದಳಗಳಿಂದ ಪೂಜೆಮಾಡಿ ಮಾನವನು ಧನ್ಯನಾಗುತ್ತಾನೆ. ಆ ಮಹೇಶ್ವರನು ಬಿಲ್ವಪತ್ರೆಯಿಂದ ಪೂಜಿಸಿದರೆ ಪ್ರೀತನಾಗುವಹಾಗೆ ಮತ್ತಾವುದರಿಂದಲೂ ಸಂತೋಷ ಹೊಂದಲಾರನು. ಆದ್ದರಿಂದ ದೇವೋತ್ತಮನಾದ ಆ ಮಹಾದೇವನನ್ನು ನೀನೂ ವಿಶೇಷ ನಿಯಮದಿಂದ ಪೂಜೆಮಾಡು. ಎಲ್ಲಾ ಮಹಾಪಾಪ

॥ ವಿಷ್ಣುರುವಾಚ ॥

ಇತ್ಯುಕ್ತಸ್ತೇನ ಶೈವೇನ ತಂ ಪ್ರಣಮ್ಯ ಶಿವಾರ್ಚಕಂ ।
ಉದ್ಧೂಲ್ಯ ಭಸ್ಮನಾಂಗಾನಿ ಶಿವಪೂಜಾಪರೋಽಭವತ್ ॥೨೪೦॥

ಉದ್ಧೂಳನತ್ರಿಪುಂಡ್ರಾಭ್ಯಾಂ ಕೇವಲಾಭ್ಯಾಮಲಂಕೃತಃ ।
ರುದ್ರಾಕ್ಷಧಾರಣಂ ಕೃತ್ವಾ ಸ ಚಕಾರ ಶಿವಾರ್ಚನಂ ॥೨೪೧॥

ತತಃ ಶಿವಪ್ರಸಾದೇನ ನಿರ್ಮುಕ್ತಃ ಸರ್ವಪಾತಕೈಃ ।
ಪ್ರಪೇದೇ ಗಣನಾಥತ್ವಂ ಶಿವಲಿಂಗಾರ್ಚನಾದ್ವಿಧೇ ॥೨೪೨॥

ಅತಃ ಪ್ರಯತ್ನತಃ ಕಾರ್ಯಂ ಶಿವಲಿಂಗಾರ್ಚನಂ ವಿಧೇ ।
ಶಿವಲಿಂಗಾರ್ಚನಂ ನಿತ್ಯಮಕುರ್ವನ್ಪ್ರತ್ಯವೈತಿ ಹಿ ॥೨೪೩॥

ದೇವಾನಾಂ ಮಾನವಾನಾಂ ಚ ಋಷೀಣಾಮಪಿ ವಸ್ತುತಃ ।
ಶಿವ ಏವ ಪ್ರಯತ್ನೇನ ಪೂಜ್ಯೋ ಭವತಿ ಸಂತತಂ ॥೨೪೪॥

ಶಿವಲಿಂಗಾರ್ಚನತ್ಯಾಗೇ ಮುಕ್ತಿರತ್ಯಂತದುರ್ಲಭಾ ।
ತತಃ ಕುರು ಪ್ರಯತ್ನೇನ ಶಿವಲಿಂಗಾರ್ಚನಂ ವಿಧೇ ॥೨೪೫॥

---

ಗಳಿಂದಲೂ ಬಿಡುಗಡೆ ಹೊಂದುವೆಯೆಂಬುದರಲ್ಲಿ ಸಂಶಯಪಡಬೇಡವೆಂದು ಶಾಂಭವನು ಬ್ರಾಹ್ಮಣನಿಗೆ ಹೇಳಿದನು. ॥೨೩೭-೨೩೮-೨೩೯॥

ಶಾಂಭವನಿಂದ ಹಾಗೆ ಹೇಳಲ್ಪಟ್ಟಮೇಲೆ ಆ ಬ್ರಾಹ್ಮಣನು ಶಿವಪೂಜಕನಿಗೆ ನಮಸ್ಕಾರಮಾಡಿ, ತಾನೂ ಭಸ್ಮವನ್ನು ಮೈಗೆಲ್ಲಾ ಲೇಪನಮಾಡಿಕೊಂಡು, ಶಿವ ಪೂಜಾನಿರತನಾದನು. ಕೇವಲ ಭಸ್ಮೋದ್ಧೂಳನ, ಮತ್ತು ಭಸ್ಮತ್ರಿಪುಂಡ್ರಗಳನ್ನು ಅಲಂಕರಿಸಿಕೊಂಡು ವಿಧಿಪೂರ್ವಕವಾಗಿ ರುದ್ರಾಕ್ಷಿಯನ್ನು ಧರಿಸಿ, ಅನಂತರ ಶಿವ ಪೂಜೆಮಾಡಿದನು. ಅಯ್ಯ ಬ್ರಹ್ಮನೇ! ಆ ಬ್ರಾಹ್ಮಣನು ಶಿವಲಿಂಗಪೂಜೆಮಾಡಿ, ಪರಶಿವನ ಅನುಗ್ರಹದಿಂದ ಸಕಲ ಪಾಪಗಳನ್ನೂ ಕಳೆದುಕೊಂಡು ಕೊನೆಗೆ ತಾನೂ ಶಿವಗಣಗಳಿಗೆ ಒಡೆಯನಾದನು. ॥೨೪೦-೨೪೧-೨೪೨॥

ಅಯ್ಯ ಬ್ರಹ್ಮನೇ! ಆದ್ದರಿಂದ ನಿಯಮಪೂರ್ವಕವಾಗಿ ಶಿವಲಿಂಗವನ್ನು ಪೂಜೆಮಾಡಬೇಕು. ನಿತ್ಯವೂ ಶಿವಲಿಂಗಪೂಜೆ ಮಾಡದವನು ಕರ್ಮಭ್ರಷ್ಟ ನಾಗುತ್ತಾನೆ. ದೇವತೆಗಳು ಋಷಿಗಳು ಮತ್ತು ಮನುಷ್ಯರು ಎಲ್ಲರಿಗೂ ನಿಜವಾಗಿ

ದದಾತಿ ಶಂಕರೋ ಮುಕ್ತಿಂ ಸ್ವಭಕ್ತೇಭ್ಯಸ್ತಥಾ ಸತಿ ।
ಕುರ್ಧು ಭಕ್ತಿಂ ಮಹಾದೇವೇ ಲಭ ಮುಕ್ತಿಮನಾಮಯಂ ॥೨೪೬॥

ವಿಧೇ ಕಾರ್ಯಂ ವಿಹಾಯಾನ್ಯತ್ಸ್ಮರ ಶಂಕರಮನ್ವಹಂ ।
ಸ್ಮೃತೇ ತು ಶಂಕರೇ ನಿತ್ಯಂ ಸಂಸಾರೀ ನ ಭವಿಷ್ಯಸಿ ॥೨೪೭॥

ಸಂಸಾರತರಣೋಪಾಯಃ ಶಂಕರಸ್ಮರಣಂ ವಿಧೇ ।
ತತಃ ಸ್ಮರಾನ್ವಹಂ ಭಕ್ತ್ಯಾ ಶಂಕರಂ ಲೋಕಶಂಕರಂ ॥೨೪೮॥

ವಿಚಾರ್ಯ ವೇದವೇದಾಂತಾನ್ಸೇತಿಹಾಸಾನತಂದ್ರಿತೈಃ ।
ಸಂಪೂಜ್ಯ ಶಿವ ಏವೇತಿ ನಿಶ್ಚಿತಂ ಮುನಿಭಿಃ ಪುರಾ ॥೨೪೯॥

ತತಃ ಪೂಜಯ ಯತ್ನೇನ ಮಹಾದೇವಮತಂದ್ರಿತಃ ।
ತಸ್ಮಿನ್ಸಂಪೂಜಿತೇ ನಿತ್ಯಂ ಮುಕ್ತಿರ್ಭವತಿ ಸರ್ವಥಾ ॥೨೫೦॥

---

ಆ ಶಿವನೇ ಅನವರತವೂ ಪೂಜಾರ್ಹನಾಗಿರುವನು. ಶಿವಲಿಂಗಪೂಜೆಮಾಡದೇ ಮೋಕ್ಷಪ್ರಾಪ್ತಿಯು ದುರ್ಲಭವಾಗಿರುವುದರಿಂದ ನೀನು ನಿಯಮದಿಂದ ಆ ಶಿವಲಿಂಗವನ್ನು ಪೂಜೆಮಾಡು. ॥೨೪೩-೨೪೪-೨೪೫॥

ಶಂಕರನು ತನ್ನ ಭಕ್ತರಿಗೆ ಮೋಕ್ಷವನ್ನು ಕರುಣಿಸುವನಾದ್ದರಿಂದ ನೀನೂ ಆ ಶಂಕರನಲ್ಲಿ ಸುಖಪ್ರದವಾದ ಮೋಕ್ಷವನ್ನು ಪಡೆಯಲು ಭಕ್ತಿಯಿಡು. ಅಯ್ಯ ವಿಧಿಯೇ! ಇತರ ಕೆಲಸಗಳನ್ನೆಲ್ಲಾ ಬಿಟ್ಟು ಯಾವಾಗಲೂ ಆ ಶಂಕರನನ್ನೇ ಸ್ಮರಣೆಮಾಡು. ನಿತ್ಯವೂ ಮಹಾದೇವನನ್ನು ಸ್ಮರಿಸುವುದರಿಂದ ನಿನಗೆ ಈ ಸಂಸಾರ ಬಂಧನವೇ ಉಂಟಾಗುವುದಿಲ್ಲ. ಈ ಸಂಸಾರದಿಂದ ಉದ್ಧಾರವಾಗಲು ಶಂಕರನ ಸ್ಮರಣೆಯೇ ಉಪಾಯವಾಗಿರುವುದೆಂದು ತಿಳಿ. ಆದ್ದರಿಂದ ಎಲೈ ಬ್ರಹ್ಮನೇ! ದಿನವೂ ಭಕ್ತಿಯಿಂದ ಜಗನ್ಮಂಗಳಕರನಾದ ಪರಮೇಶ್ವರನನ್ನು ಸ್ಮರಣೆಮಾಡು. ॥೨೪೬-೨೪೭-೨೪೮॥

ವೇದಗಳು, ವೇದಾಂತ, ಮತ್ತು ಇತಿಹಾಸಾದಿಗಳನ್ನೆಲ್ಲಾ ಸ್ವಲ್ಪವೂ ಆಲಸ್ಯವಿಲ್ಲದೇ ಚೆನ್ನಾಗಿ ಪರ್ಯಾಲೋಚಿಸಿ ಮುನಿಗಳು ಹಿಂದೆ ಶಿವನನ್ನೇ ಸದಾ ಪೂಜೆಮಾಡಬೇಕೆಂದು ನಿಶ್ಚಯಿಸಿರುವರು. ಓ ಬ್ರಹ್ಮದೇವ! ಆದ್ದರಿಂದ ಸರ್ವೋತ್ತಮನಾದ ಮಹಾದೇವನನ್ನು ನೀನು ಪೂಜೆಮಾಡು. ಆ ದೇವದೇವನನ್ನು ಪೂಜೆಮಾಡುವುದರಿಂದ ಖಂಡಿತವಾಗಿ ನಿನಗೆ ಮೋಕ್ಷಪ್ರಾಪ್ತಿಯಾಗುವುದು. ॥೨೪೯-೨೫೦॥

ಪ್ರಸನ್ನೇ ಪಾರ್ವತೀನಾಥೇ ಚತುರ್ವರ್ಗಫಲಪ್ರದೇ ।
ಕಿಮಲಭ್ಯಂ ವದ ಬ್ರಹ್ಮನ್ನ ಕಿಂಚಿದಪಿ ಸರ್ವಥಾ ॥೨೫೧॥

ಯಂ ಪಶ್ಯತಿ ಮಹಾದೇವಃ ಸಾದರಂ ಕರುಣಾನಿಧಿಃ ।
ತಮುದ್ಧರತ್ಯಯತ್ನೇನ ಘೋರಸಂಸಾರಸಾಗರಾತ್ ॥೨೫೨॥

ಶಂಕರಃ ಕರುಣಾಸಿಂಧುರ್ಯದಿ ಪಶ್ಯತಿ ಸಾದರಂ ।
ಕೀಟಂ ಪತಂಗಮನ್ಯಂ ವಾ ತಂ ಮೋಚಯತಿ ಸರ್ವಥಾ ॥೨೫೩॥

ಪ್ರಸನ್ನೇ ಸತ್ಯುಮಾಕಾಂತೇ ಮಶಕೋ ವಾ ಗಜೋಽಥವಾ ।
ಪ್ರಾಪ್ನೋತಿ ಪರಮಂ ಸ್ಥಾನಂ ಯೋಗಿನಾಮಪಿ ದುರ್ಲಭಂ ॥೨೫೪॥

ಅನೇಕಜನ್ಮಭಿರ್ಘೋರಂ ಯದಿ ತಪ್ತಂ ತಪಸ್ತದಾ ।
ಪ್ರಸೀದತಿ ಮಹಾದೇವಃ ಸಾಂಬಃ ಸ್ವರ್ಗಾಪವರ್ಗದಃ ॥೨೫೫॥

ಶಿವನಾಮಮಣಿಃ ಕಂಠೇ ಯಸ್ಯ ತಿಷ್ಠತಿ ಸರ್ವದಾ ।
ಸ ನೀಲಕಂಠತಾಮೇತಿ ಸತ್ಯಮೇವೋಚ್ಯತೇ ಮಯಾ ॥೨೫೬॥

---

ಬ್ರಹ್ಮನೇ ! ಧರ್ಮಾರ್ಥಕಾಮಮೋಕ್ಷರೂಪವಾದ ಫಲಗಳನ್ನು ಕೊಡುವ ಆ ಪಾರ್ವತೀರಮಣನು ಪ್ರಸನ್ನನಾದರೆ ಏನು ತಾನೇ ದುರ್ಲಭವೆನಿಸೀತು! ದಯಾ ಸಮುದ್ರನಾದ ಮಹಾದೇವನು ಆದರದಿಂದ ನೋಡುವವರನ್ನೆಲ್ಲಾ ಅವಶ್ಯವಾಗಿ ಈ ಭಯಂಕರವಾದ ಸಂಸಾರವೆಂಬ ಸಾಗರದಿಂದ ಉದ್ಧಾರಮಾಡಿಯೇ ಮಾಡುತ್ತಾನೆ. ಕರುಣಾಮಯನೆನಿಸಿದ ಮಹಾದೇವನು ಆದರದಿಂದ ನೋಡುವ ಪಕ್ಷಿಯಾಗಲೀ ಅಥವಾ ಹುಳುವೇ ಆಗಲೀ ಒಂದುವೇಳೆ ಬೇರೆಯವರೇ ಆಗಲೀ ಅವರನ್ನೆಲ್ಲಾ ಖಂಡಿತವಾಗಿ ಅವನು ಬಿಡುಗಡೆ ಮಾಡಿಯೇ ಮಾಡುತ್ತಾನೆ. ॥೨೫೧-೨೫೨-೨೫೩॥

ಆ ಉಮಾರಮಣನು ಪ್ರಸನ್ನನಾದರೆ ನೊಣವಾಗಲೀ ಆನೆಯಾಗಲೀ ಅಥವಾ ಮತ್ತಾವ ಪ್ರಾಣಿಯೇಬೇಕಾದರೂ ಆಗಲೀ ದೊಡ್ಡದೊಡ್ಡ ಯೋಗಿಗಳಿಗೂ ಹೊಂದಲಸಾಧ್ಯವಾದ ಉತ್ತಮವಾದ ಸದ್ಗತಿಯನ್ನು ಹೊಂದುವುದರಲ್ಲಿ ಸಂದೇಹ ವಿಲ್ಲ. ಅನೇಕ ಜನ್ಮಗಳಲ್ಲಿ ಭಯಂಕರವಾದ ತಪಸ್ಸನ್ನು ಮಾಡಿದಾತನಿಗೆ ಮಾತ್ರ ಅಂಬಿಕಾಪತಿಯಾದ ಆ ಮಹಾದೇವನು ಪ್ರಸನ್ನನಾಗಿ ಸ್ವರ್ಗ, ಮೋಕ್ಷರೂಪವಾದ

ಶ್ರೀನೀಲಕಂಠ ಶ್ರೀಕಂಠ ಶಿತಿಕಂಠೇತಿ ವಾದಿನಃ ।
ವೈಕುಂಠಂ ತೃಣವತ್ಕೃತ್ವಾ ತಿಷ್ಠಂತಿ ಖಲು ಸರ್ವದಾ ॥೨೫೭॥

ಸಂಪೂಜ್ಯ ಶಂಕರಂ ನಿತ್ಯಂ ಶಿವನಾಮಾಮೃತಂ ಪಿಬ ।
ಶಿವನಾಮಾಮೃತಾದನ್ಯಸ್ಯ ಭವತ್ಯಮೃತಂ ವಿಧೇ ॥೨೫೮॥

ಪುರಾ ಕಾಂಚೀಪುರೀವಾಸೀ ಕಶ್ಚಿದ್ರಾಜಾ ಬಲೋನ್ನತಃ ।
ವಿಶ್ವಾಭಿದೋ ದದರ್ಶೈಕಂ ಶಿವಾಚಾರರತಂ ದ್ವಿಜಂ ॥೨೫೯॥

ಸ ರಾಜಾ ಶಾಂಕರಂ ವಿಪ್ರಂ ಪ್ರಣಮ್ಯಾಭ್ಯರ್ಚ್ಯ ಸಾದರಂ ।
ಕೃತಾಂಜಲಿಪುಟೋ ಭೂತ್ವಾ ಪಪ್ರಚ್ಛ ವಿನಯಾನ್ವಿತಃ ॥೨೬೦॥

ವಿಪ್ರ ಶಂಕರತತ್ವಜ್ಞ ಶಂಕರಾರ್ಚಕ ಶಾಂಕರ ।
ತ್ವದ್ದರ್ಶನೇನ ಸಂತುಷ್ಟಮಭೂದದ್ಯ ಮನೋ ಮಮ ॥೨೬೧॥

---

ಫಲಗಳನ್ನು ಕೊಡುವನು. ಶಿವನಾಮವೆಂಬ ರತ್ನವನ್ನು ಯಾವಾಗಲೂ ಕೊರಳಲ್ಲಿ ಧರಿಸಿರುವನು ಸತ್ಯವಾಗಿ ಆ ನೀಲಕಂಠಸ್ವರೂಪವನ್ನೈದುವನೆಂದು ನಾನು ಹೇಳುವೆನು. ॥೨೫೪-೨೫೫-೨೫೬॥

"ಶ್ರೀ ನೀಲಕಂಠ, ಶ್ರೀಕಂಠ, ಶಿತಿಕಂಠ" ಎಂಬುದಾಗಿ ಶಿವನ ದಿವ್ಯನಾಮಗಳನ್ನು ಉಚ್ಚಾರಮಾಡುವವರು ಆ ವೈಕುಂಠವನ್ನೂ ಹುಲ್ಲಿಗಿಂತಲೂ ಕಡೆಮಾಡಿ ಯಾವಾಗಲೂ ಸಂತೋಷಭರಿತರಾಗಿರುವರು. ಆದ್ದರಿಂದ ಶಂಕರನನ್ನು ನಿತ್ಯವೂ ಪೂಜೆಮಾಡಿ ಆ ಶಿವನಾಮಗಳೆಂಬ ಅಮೃತಪಾನಮಾಡು. ಅಯ್ಯ ಬ್ರಹ್ಮನೇ, ಶಿವನಾಮವೆಂಬ ಅಮೃತಕ್ಕಿಂತಲೂ ಅತಿಶಯವಾದ ಅಮೃತವು ಬೇರೆ ಇದೆಯೆ?॥೨೫೭-೨೫೮॥

ಹಿಂದೆ ಕಾಂಚೀಪಟ್ಟಣದಲ್ಲಿ ವಿಶೇಷ ಬಲಶಾಲಿಯಾದ ವಿಶ್ವಾಭಿದನೆಂಬ ರಾಜನೊಬ್ಬನು, ಶಿವಪೂಜಾನಿರತನಾದ ಬ್ರಾಹ್ಮಣನೊಬ್ಬನನ್ನು ನೋಡಿದನು. ಆಗ ಆ ರಾಜನು ಶೈವಧರ್ಮನಿರತನಾದ ಬ್ರಾಹ್ಮಣನಿಗೆ ನಮಸ್ಕಾರಮಾಡಿ ಆದರದಿಂದ ಪೂಜಿಸಿದನಂತರ ವಿನೀತನಾಗಿ ಕೈಜೋಡಿಸಿ ಇಂತೆಂದನು. ॥೨೫೯-೨೬೦॥

॥ ವಿಶ್ವಾಭಿದ ಉವಾಚ ॥

ದಶವರ್ಷಸಹಸ್ರಾಣಿ ದಶವರ್ಷಾಯುತಾನಿ ಚ ।
ಗತಾನಿ ಶಾಸತೋ ರಾಜ್ಯಂ ಮಮ ಶತ್ರುವಿವರ್ಜಿತಂ ॥೨೬೨॥

ಭುಕ್ತಂ ಮಯಾಽಯುತಂ ಸ್ತ್ರೀಣಾಂ ಸುಂದರೀಣಾಂ ಯಥಾಸುಖಂ।
ಜಾತಾ ದಶಶತಂ ಪುತ್ರಾ ವೇದಶಾಸ್ತ್ರವಿಶಾರದಾಃ ॥೨೬೩॥

ಕುಬೇರೇಣಾಸ್ತಿ ಸಖ್ಯಂ ಮೇ ಸರ್ವದಾ ಪ್ರೀತಿಪೂರ್ವಕಂ ।
ಧನಾನಿ ಸಂತ್ಯನಂತಾನಿ ರತ್ನಾನಿ ವಿವಿಧಾನಿ ಚ ॥೨೬೪॥

ಐರಾವತಸಮಾಃ ಸಂತಿ ಕೋಟಿಶೋ ದ್ವಿರದಾ ಮಮ ।
ಉಚ್ಚೈಃಶ್ರವಸಮಾಃ ಸಂತಿ ತುರಂಗಾಃ ಕೋಟಿಶೋ ಮಮ ॥೨೬೫॥

ಕಾಮಧೇನುಸಮಾಃ ಸಂತಿ ಮಮ ಗಾವೋಽಪಿ ಕೋಟಿಶಃ ।
ಅನ್ಯಾನ್ಯನನ್ಯಲಭ್ಯಾನಿ ಸಂತಿ ವಸ್ತೂನಿ ಕೋಟಿಶಃ ॥೨೬೬॥

---

"ಅಯ್ಯ ಶೈವತತ್ವವನ್ನರಿತ ಬ್ರಾಹ್ಮಣನೇ, ಶಂಕರಪೂಜಕನಾದ ನಿನ್ನ ದರ್ಶನದಿಂದ ಈಗ ನನ್ನ ಮನಸ್ಸು ಸಂತೋಷಭರಿತವಾಯಿತು. ನಾನು ಶತ್ರುಗಳ ಭಯವಿಲ್ಲದೇ ರಾಜ್ಯವಾಳಲು ಆರಂಭಿಸಿ ಲಕ್ಷಾಂತರವರ್ಷಗಳಾದವು. ॥೨೬೧-೨೬೨॥

ನಾನು ಹತ್ತುಸಾವಿರ ಸುಂದರಾಂಗಿಯರನ್ನುಪಭೋಗಿಸಿರುವೆನು. ಅವರಲ್ಲಿ ಹುಟ್ಟಿರುವ ಸಾವಿರಮಂದಿ ಮಕ್ಕಳು ವೇದಶಾಸ್ತ್ರನಿಪುಣರಾಗಿ ನನಗೆ ಆನಂದವನ್ನುಂಟುಮಾಡುತ್ತಿರುವರು. ಕುಬೇರನೊಡನೆ ಪ್ರೀತಿಪೂರ್ವಕವಾದ ಸ್ನೇಹವಿರುವುದರಿಂದ ನನ್ನಲ್ಲಿ ನಾನಾವಿಧವಾದ ಧನಕನಕರತ್ನಾದ್ಯೈಶ್ವರ್ಯಗಳು ಯಥೇಚ್ಛವಾಗಿರುವುವು. ನನಗೆ ಇಂದ್ರನ ಐರಾವತಕ್ಕೆ ಸಮನಾಗಿರುವ ಕೋಟ್ಯಂತರ ಆನೆಗಳೂ, ಉಚ್ಚೈಃಶ್ರವಸ್ಸಿಗೆ(ಇಂದ್ರನ ಕುದುರೆ) ಸದೃಶವಾಗಿರುವ ಕೋಟ್ಯಂತರ ಉತ್ತಮವಾದ ಕುದುರೆಗಳೂ ಇರುವುವು. ॥೨೬೩-೨೬೪-೨೬೫॥

ದೇವಲೋಕದ ಕಾಮಧೇನುವಿಗೆ ಸಮಾನವಾದ ಅಸಂಖ್ಯವಾದ ಗೋವುಗಳೂ, ಮತ್ತೆಲ್ಲಿಯೂ ಹೊಂದಲಸಾಧ್ಯವಾದ ಇನ್ನೂ ಅನೇಕ ಕೋಟ್ಯಂತರ ವಸ್ತುಗಳೂ ನನ್ನಲ್ಲಿರುವುವು. ಅಯ್ಯ ಬ್ರಾಹ್ಮಣನೇ, ಚಿನ್ನ, ರತ್ನ ಮುಂತಾದ

ಸುವರ್ಣರತ್ನಕೋಶಾದಿ ವರ್ಧತೇ ಪ್ರತ್ಯಹಂ ಮಮ ।
ಜಾಯತೇಽನುಕ್ಷಣಂ ವಿಪ್ರ ಭಾಗ್ಯವೃದ್ಧಿರ್ಮಮಾಧುನಾ ॥೨೬೭॥

ಏತಾದೃಶಂ ಮಹದ್ಭಾಗ್ಯಂ ಕಥಂ ಜಾತಂ ಮಮ ದ್ವಿಜ ।
ಕಿಂ ವಾ ಕೃತಂ ಮಯಾ ಪುಣ್ಯಂ ತತ್ಸರ್ವಂ ವದ ಶಾಂಕರ ॥೨೬೮॥

॥ ಶಾಂಕರ ಉವಾಚ ॥

ಭಿಲ್ಲಃ ಪೂರ್ವಭವೇ ರಾಜನ್ಭವಾನತಿಬಲಾನ್ವಿತಃ ।
ತದಾ ಭಿಲ್ಲಶರೀರೇಣ ಪಾತಕಂ ಬಹುಧಾಕೃತಂ ॥೨೬೯॥

ಮಾಂಸಾರ್ಥಮತಿಯತ್ನೇನ ಬಹವೋ ಹಿಂಸಿತಾ ಮೃಗಾಃ ।
ಭಕ್ಷಿತಂ ಬಹುಧಾ ಮಾಂಸಮುತ್ಕೃತ್ತಮಮನಾಕುಲಂ ॥೨೭೦॥

ಕಿಂಚಾರಣ್ಯಂ ಸಮಾಶ್ರಿತ್ಯ ಸಶರೇಣ ಸ್ಥಿತಂ ತ್ವಯಾ ।
ತದಾ ತದಾ ತು ಬಹವೋ ನಿಹತಾಃ ಬ್ರಾಹ್ಮಣಾಃ ಪುರಾ ॥೨೭೧॥

---

ಕೋಶಗಳಿಂದ ನಿಬಿಡವಾಗಿರುವ ನನ್ನ ಭಾಗ್ಯವು ದಿನದಿನಕ್ಕೂ ಅಭಿವೃದ್ಧಿಯಾಗುತ್ತಿರುವುದು. ವಿಪ್ರೋತ್ತಮ, ಇಂತಹ ಅಪಾರಭಾಗ್ಯವು ನನಗೆ ಹೇಗೆ ಉಂಟಾಯಿತು? ನಾನು ಹಿಂದೆ ಏನು ಪುಣ್ಯಮಾಡಿದ್ದೆನೋ ಅದನ್ನು ಈಶ್ವರಭಕ್ತನಾದ ನೀನು ವಿಸ್ತಾರವಾಗಿ ನನಗೆ ತಿಳಿಸು'' ಎಂದು ಆ ವಿಶ್ವಾಭಿದನೆಂಬ ರಾಜನು ಪ್ರಾರ್ಥಿಸಿದನು. ॥೨೬೬-೨೬೭-೨೬೮॥

ಅಯ್ಯ ರಾಜನೇ, ಹಿಂದಿನ ಜನ್ಮದಲ್ಲಿ ನೀನು ವಿಶೇಷ ಬಲಿಷ್ಠನಾದ ಬಿಲ್ಲುಗಾರನಾಗಿದ್ದು ನಾನಾಬಗೆಯಾದ ಪಾಪಗಳನ್ನು ಮಾಡಿದೆ. ಒಂದುಸಲ ಬಹಳ ಕಷ್ಟಪಟ್ಟು ಅನೇಕ ಪ್ರಾಣಿಗಳನ್ನು ಕೊಂದು ಅತ್ಯುತ್ತಮವಾದ ಜಿಂಕೆಯೇ ಮುಂತಾದ ಪ್ರಾಣಿಗಳ ಮಾಂಸವನ್ನು ಯಥೇಚ್ಛವಾಗಿ ತಿಂದು ಸಂತೋಷಪಡುತ್ತಿದ್ದೆ. ಹೀಗೆಯೇ ಕಾಲಕಳೆಯುತ್ತಿದ್ದಾಗ ಒಂದುಸಲ ಬಿಲ್ಲು ಬಾಣಗಳೊಡನೆ ಕಾಡಿಗೆ ಹೋಗಿ ಅನೇಕ ಬ್ರಾಹ್ಮಣರನ್ನು ಕೊಂದು ಹಿಂಸೆಪಡಿಸಿದೆ. ॥೨೬೯-೨೭೦-೨೭೧॥

ಗಿರಿಗಹ್ವರಮಾಶ್ರಿತ್ಯ ಬ್ರಾಹ್ಮಣಾ ಬಹವೋ ಹತಾಃ ।
ಕೃತೋ ಮಾರ್ಗನಿರೋಧಶ್ಚ ಬ್ರಾಹ್ಮಣಾನಾಂ ಪುರಾ ತ್ವಯಾ ॥೨೭೨॥

ಏವಮೇವ ಸ್ಥಿತಂ ಪೂರ್ವಮರಣ್ಯೇ ಕ್ರೂರಕರ್ಮಣಾ ।
ತ್ವಯೈತಾದೃಶಚಿತ್ತೇನ ದೃಷ್ಟೋ ಬಿಲ್ವಾರ್ಜನಪ್ರಿಯಃ ॥೨೭೩॥

ಸ ವನೇ ಬಿಲ್ವಪತ್ರಾಣಿ ಸಂಪಾದ್ಯಾನ್ವಹಮಾದರಾತ್ ।
ಶಿವಲಿಂಗಂ ಸಮಭ್ಯರ್ಚ್ಯ ಪೂಜಯಿತ್ವಾ ಸ್ಥಿತಃ ಪುರಾ ॥೨೭೪॥

ತಥಾ(ವಾ)ಪಿ ಕೃತಪಾಪಸ್ಯ ತಥೈವಾಸೀತ್ತದಾ ಮತಿಃ ।
ಸಾ ಮತಿರ್ನಿರ್ಮಲಾ ನಿತ್ಯಾ ಸುದೃಢಾಸೀತ್ತದಾ ತವ ॥೨೭೫॥

ತ್ವಯಾಪ್ಯತ್ಯಂತಯತ್ನೇನ ಬಿಲ್ವಪತ್ರಾಣಿ ಸಾದರಂ ।
ಸಂಪಾದ್ಯಾಭ್ಯರ್ಚಿತಂ ಲಿಂಗಂ ತ್ರಿಕಾಲಂ ಸಾವಧಾನತಃ ॥೨೭೬॥

ಕೃತ್ವಾ ಕೃತ್ವಾಽಪಿ ಪಾಪಾನಿ ತ್ವಯಾ ಪ್ರತ್ಯಹಮಾದರಾತ್ ।
ಬಿಲ್ವಪತ್ರೈರ್ಮಹಾದೇವಃ ಪೂಜ್ಯತೇ ಯತ್ನಪೂರ್ವಕಂ ॥೨೭೭॥

---

ಬೆಟ್ಟ, ಗುಹೆ ಮುಂತಾದವುಗಳನ್ನಾಶ್ರಯಿಸಿ ಅನೇಕ ಮಂದಿ ಬ್ರಾಹ್ಮಣರನ್ನು ನೀನು ಧ್ವಂಸಮಾಡಿದೆ. ಅನೇಕ ಮಂದಿ ಬ್ರಾಹ್ಮಣರಿಗೆ ದಾರಿಯಲ್ಲಿ ತೊಂದರೆಮಾಡಿರುವೆ. ಹೀಗೆಯೇ ಕ್ರೂರವಾದ ಕಾರ್ಯಗಳನ್ನೇ ಎಸಗುತ್ತಾ ಕಾಡಿನಲ್ಲಿರಲು ಇದೇ ಹಿಂಸೆಮಾಡಬೇಕೆಂಬ ಮನಸ್ಸಿನಿಂದಲೇ ಇರಲು ಒಬ್ಬ ಬಿಲ್ವಪತ್ರೆಯನ್ನು ಕೊಯ್ಯುವುದರಲ್ಲಿ ಆಸಕ್ತಿ ಹೊಂದಿರುವವನ ದರ್ಶನವಾಯಿತು. ಆತನು ಕಾಡಿನಲ್ಲಿ ಪ್ರತಿನಿತ್ಯವೂ ಬಿಲ್ವಪತ್ರೆಗಳನ್ನು ಸಂಪಾದಿಸಿ ಶಿವಲಿಂಗವನ್ನು ನಿಯಮದಿಂದ ಪೂಜೆಮಾಡುತ್ತಾ ಕಾಲಯಾಪನೆಮಾಡುತ್ತಿದ್ದನು. ॥೨೭೨-೨೭೩-೨೭೪॥

ಇಂತಹ ಬ್ರಾಹ್ಮಣವಧೆಯೇ ಮುಂತಾದ ಮಹಾಪಾಪಗಳನ್ನೇ ಗಣನೆಯಿಲ್ಲದೇ ಮಾಡಿದ ನಿನಗೂ, ಅವನಂತೆಯೇ ನಾನೂ ಬಿಲ್ವಪತ್ರೆಗಳನ್ನು ಕೊಯ್ದು ಆ ಶಿವಲಿಂಗಪೂಜೆಮಾಡಬೇಕೆಂಬ ನಿರ್ಮಲವೂ ದೃಢವೂ ಆದ ಭಕ್ತಿಯುಂಟಾಯಿತು. ನೀನು ಅದರಂತೆಯೇ ಆದರದಿಂದ ಬಿಲ್ವಪತ್ರೆಗಳನ್ನು ಸಂಪಾದಿಸಿ ಬೆಳಗ್ಗೆ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಸಾವಧಾನವಾಗಿ ಶಿವಲಿಂಗಪೂಜೆ

ಬಿಲ್ವಪತ್ರಾರ್ಜನಂ ನಿತ್ಯಂ ಕುರ್ವತಸ್ತೇ ಕರದ್ವಯಂ ।
ಬಿಲ್ವಕಂಟಕಸಂವಿದ್ಧಮಸಭ್ಯಾಸಾದಭೂನ್ನೃಪ ॥೨೭೮॥

ಯದಾ ಯದಾ ಬಿಲ್ವಪತ್ರಂ ಸಾದರಂ ಗೃಹ್ಯತೇ ತ್ವಯಾ ।
ತದಾ ತದಾ ತನುರ್ಜಾತಾ ಬಿಲ್ವಕಂಟಕಸಂಶ್ರಿತಾ ॥೨೭೯॥

ಬಿಲ್ವಕಂಟಕಸಂವಿದ್ಧಾಂಗೋಪ್ಯನ್ವಹಂ ಪ್ರೀತಿಪೂರ್ವಕಂ ।
ಬಿಲ್ವಪತ್ರಾರ್ಜನಾತ್ಪೂರ್ವಂ ವಿರತೋ ನೈವ ಸಂಸ್ಥಿತಃ ॥೨೮೦॥

ವಸಂತೇ ಬಿಲ್ವಪತ್ರೇಷು ಪತಿತೇಷು ಪುರಾ ತ್ವಯಾ ।
ಬಿಲ್ವವೃಕ್ಷಾಗ್ರಮಾರೂಢಂ ಬಿಲ್ವಪತ್ರಾರ್ಥಮಾದರಾತ್ ॥೨೮೧॥

ತದಾನೀಂ ವಾಯುರಭವತ್ತದಾ ತೇನೈವ ಕಂಪಿಕಃ ।
ಭೂಮೌ ನಿಪತಿತಃ ಪೂರ್ವಂ ಭವಾಂಸ್ತ್ಯಕ್ತತನುಸ್ತತಃ ॥೨೮೨॥

---

ಮಾಡಿದೆ. ಆಮೇಲೆ ಎಂದಿನಂತೆಯೇ ಪ್ರಾಣಿಹಿಂಸೆ ಮುಂತಾದ ಪಾಪಗಳನ್ನು ಮಾಡುತ್ತಲೇ ಪ್ರತಿನಿತ್ಯವೂ ಬಿಲ್ವಪತ್ರೆಗಳಿಂದ ನಿಯಮಪೂರ್ವಕವಾಗಿ ಆ ಮಹಾದೇವನನ್ನು ಪೂಜೆಮಾಡಲು ಪ್ರಾರಂಭಿಸಿದೆ. ॥೨೭೫-೨೭೬-೨೭೭॥

ಅಯ್ಯ ರಾಜನೇ, ಅಭ್ಯಾಸವಿಲ್ಲದೇ ಇದ್ದದ್ದರಿಂದ ಬಿಲ್ವಪತ್ರೆಯನ್ನು ತರಲು ಹೋದಾಗ ನಿತ್ಯವೂ ನಿನ್ನ ಎರಡು ಕೈಗಳೂ ಬಿಲ್ವಪತ್ರೆಮರದ ಮುಳ್ಳುಗಳಿಂದ ಗಾಯವಾಗುತ್ತಿದ್ದಿತು. ಬಿಲ್ವಪತ್ರೆಗಳನ್ನು ಆದರದಿಂದ ನೀನು ತರಲು ಹೋದಾಗಲೆಲ್ಲಾ ನಿನ್ನ ಶರೀರಕ್ಕೆ ಆದರ ಮುಳ್ಳು ಚುಚ್ಚಿಕೊಳ್ಳುತ್ತಿದ್ದಿತು. ಹಾಗೆ ಮುಳ್ಳು ಚುಚ್ಚಿದರೂ ಪ್ರತಿದಿನವೂ ಪ್ರೀತಿಯಿಂದ ಮೊದಲು ಬಿಲ್ವಪತ್ರೆಗಳನ್ನು ಸಂಪಾದಿಸದೇ ನೀನು ಇರುತ್ತಿರಲಿಲ್ಲ. ॥೨೭೮-೨೭೯-೨೮೦॥

ಹಿಂದೆ ವಸಂತಋತುವಿನಲ್ಲಿ ಬಿಲ್ವಪತ್ರೆಗಳೆಲ್ಲಾ ಬಿದ್ದುಹೋಗಿದ್ದುದರಿಂದ ಒಂದುಸಲ ನೀನು ಮರದ ತುದಿಯಲ್ಲಿದ್ದ ಕೆಲವು ಬಿಲ್ವಪತ್ರೆಗಳನ್ನು ತರಲು ತುದಿಗೆ ಹತ್ತಿದೆ. ಆ ಸಂದರ್ಭದಲ್ಲಿ ಬಲವಾಗಿ ಗಾಳಿಬೀಸಿ ಆ ಗಾಳಿಯಿಂದ ಮರವೆಲ್ಲಾ ಚೆನ್ನಾಗಿ ಅಲ್ಲಾಡಲು ನೀನು ಆಯತಪ್ಪಿ ನೆಲದಮೇಲೆಬಿದ್ದು ಪ್ರಾಣತ್ಯಾಗಮಾಡಿದೆ. ॥೨೮೧-೨೮೨॥

ತದಾ ದುಂದುಭಯೋ ನೇದುಃ ಪುಷ್ಪವೃಷ್ಟಿರಭೂನ್ನೃಪ ।
ತ್ವದ್ದರ್ಶನಾರ್ಥಂ ಬ್ರಹ್ಮಾದ್ಯಾಸ್ತದಾ ತತ್ರ ಸಮಾಗತಾಃ ॥೨೮೩॥

ತತೋ ವಿಮಾನಮಾರುಹ್ಯ ಬ್ರಹ್ಮಲೋಕೇ ಗತಂ ತ್ವಯಾ ।
ಬ್ರಹ್ಮಲೋಕೇ ಸ್ಥಿತಂ ರಾಜನ್ನಾರ್ಧಕೋಟಿಯುಗಾಷ್ಟಕಂ ॥೨೮೪॥

ಯಾವತ್ಸ್ಥಿತಂ ಬ್ರಹ್ಮಲೋಕೇ ತಾವದತ್ಯಂತಯತ್ನತಃ ।
ಚಕಾರ ಪೂಜನಂ ತುಭ್ಯಂ ಬ್ರಹ್ಮಾ ಸಾದರಮನ್ವಹಂ ॥೨೮೫॥

ತತಃ ಪರಂ ನರೇಂದ್ರಸ್ಯ ಪುತ್ರಭಾವಮುಪಾಗತಃ ।
ತದಾ ಪ್ರಭೃತಿ ಸೌಖ್ಯಾನಿ ಭುಕ್ತಾನ್ಯೇವ ತ್ವಯಾ ನೃಪ ॥೨೮೬॥

ಪದ್ಮಗಂಧಾಸ್ತ್ವಯಾ ಭುಕ್ತಾ ನಾರ್ಯಃ ಕಮಲಲೋಚನಾಃ ।
ಪುತ್ರಾಶ್ಚ ಬಹವೋ ಲಬ್ಧಾಃ ಸಂಪದಶ್ಚ ನಿರಾಮಯಾಃ ॥೨೮೭॥

ಇಹೈವ ಭುಕ್ತಭೋಗಸ್ಯ ಶಿವಪೂಜಾರತಸ್ಯ ತೇ ।
ಪ್ರಯಚ್ಛತಿ ಮಹಾದೇವೋ ಮೋಕ್ಷಮಪ್ಯತಿದುರ್ಲಭಂ ॥೨೮೮॥

---

ಆಗ ದೇವದುಂದುಭಿವಾದ್ಯಗಳು ಮೊಳಗಿದವು. ಹೂಮಳೆಯಾಯಿತು. ಅಯ್ಯ ರಾಜನೇ, ನಿನ್ನ ದರ್ಶನಕ್ಕೋಸ್ಕರ ಬ್ರಹ್ಮನೇ ಮುಂತಾದ ದೇವತೆಗಳೂ ಅಲ್ಲಿಗೆ ಬಂದರು. ಆಗ ನೀನು ದಿವ್ಯವಿಮಾನವನ್ನೇರಿ ಬ್ರಹ್ಮಲೋಕಕ್ಕೆ ಹೋದೆ. ಅಲ್ಲಿ ಎಂಟೂವರೆಕೋಟಿ ಯುಗಗಳವರೆಗೆ ವಾಸಮಾಡಿದೆ. ನೀನು ಬ್ರಹ್ಮಲೋಕದಲ್ಲಿರುವವರೆಗೂ ಬ್ರಹ್ಮನೂ ನಿನ್ನನ್ನು ಆದರಪೂರ್ವಕವಾಗಿ ಪ್ರತಿದಿನವೂ ಪೂಜೆ ಮಾಡುತ್ತಿದ್ದನು. ॥೨೮೩-೨೮೪-೨೮೫॥

ಅನಂತರ ನೀನು ರಾಜಕುಮಾರನಾಗಿ ಜನಿಸಿ ಜನ್ಮಾರಭ್ಯ ನಾನಾವಿಧವಾದ ಸೌಖ್ಯಗಳನ್ನನುಭವಿಸಿದೆ. ತಾವರೆಯ ಹೂವಿನಂತೆ ಪರಿಮಳಭರಿತರಾದ ಅನೇಕ ಮಂದಿ ಕಮಲಲೋಚನೆಯರನ್ನು (ಪದ್ಮದಂತೆ ಕಣ್ಣುಳ್ಳ ಸುಂದರಾಂಗಿಯರನ್ನು) ಉಪಭೋಗಿಸಿ, ಅನೇಕಮಂದಿ ಮಕ್ಕಳನ್ನೂ, ಸಕಲೈಶ್ವರ್ಯವನ್ನೂ ಹೊಂದಿ ಆನಂದಪಟ್ಟೆ. ಈ ಲೋಕದಲ್ಲಿ ಶಿವಪೂಜಾನಿರತನಾಗಿ ಸಕಲ ದಿವ್ಯಭೋಗಗಳನ್ನೂ

ಶಿವಾರ್ಚನೇನ ಸಂಪ್ರಾಪ್ತಮಿದಂ ಭಾಗ್ಯಂ ತ್ವಯಾ ನೃಪ ।
ಸ್ಪ್ರಾಪ್ತಭಾಗ್ಯೇನ ಭೂಯೋಽಪಿ ಶಿವಃ ಸಂಪೂಜ್ಯತೇ ತ್ವಯಾ ॥೨೮೯॥

ಶಿವಾರ್ಚನಂ ವಿಹಾಯಾನ್ಯನ್ನ ಮಹದ್ಭಾಗ್ಯಕಾರಣಂ ।
ಭಾಗ್ಯಪ್ರದಃ ಶಿವಾದನ್ಯೋ ನ ಭವತ್ಯೇವ ಸರ್ವಥಾ ॥೨೯೦।

ಸಿಂಹಾಸನಾಧಿಪತ್ಯೇಚ್ಛಾ ಮೋಕ್ಷೇಚ್ಛಾಪ್ಯನಿವಾರಿತಾ ।
ಯಸ್ಯಾಸ್ತಿ ತೇನ ಕರ್ತವ್ಯಂ ಶಿವಪೂಜನಮನ್ವಹಂ ॥೨೯೧॥

ಶಿವೇ ಸಂಪೂಜಿತೇ ಸಾಂಬೇ ಸರ್ವಕಾಮಪ್ರದೇ ಸದಾ ।
ರಾಜನ್ ಸಿಧ್ಯಂತಿಸರ್ವಾರ್ಥಾಃ ಸತ್ಯಮೇವೋಚ್ಯತೇ ಮಯಾ॥೨೯೨॥

ಶಿವಂ ಸಾಂಬಂ ಸಮಾರಾಧ್ಯ ಸರ್ವದೇವಶಿಖಾಮಣಿಂ ।
ವಿಷ್ಣುರ್ವಿಷ್ಣುತ್ವಮಾಪನ್ನಸ್ತತಃ ಪೂಜ್ಯೋ ಮಹೇಶ್ವರಃ ॥೨೯೩॥

---

ಅನುಭವಿಸಿದುದರಿಂದ, ಮಹಾದೇವನು ಮುಂದೆ ನಿನಗೆ ಅತ್ಯಂತ ದುರ್ಲಭವಾದ ಮೋಕ್ಷವನ್ನೂ ಕರುಣಿಸುವನು. ॥೨೮೬-೨೮೭-೨೮೮॥

ಅಯ್ಯ ರಾಜನೇ, ಶಿವಪೂಜೆಯಿಂದ ನಿನಗೆ ಈ ಭಾಗ್ಯವುಂಟಾಗಿದೆಯೆಂದು ತಿಳಿ. ಇದಲ್ಲದೇ ಐಶ್ವರ್ಯವನ್ನು ಹೊಂದಿಯೂ ನೀನು ಆ ಶಿವನನ್ನು ಪುನಃ ಹೆಚ್ಚಾಗಿ ಪೂಜೆಮಾಡುತ್ತಿರುವೆ. ಶಿವಪೂಜೆಯನ್ನು ಬಿಟ್ಟು ಬೇರೊಂದೂ ಈ ಭಾಗ್ಯ ಪ್ರಾಪ್ತಿಗೆ ಕಾರಣವಲ್ಲವೆಂದು ತಿಳಿ. ಶಿವನಲ್ಲದೆ ಮತ್ತಾರೂ ಭಾಗ್ಯವನ್ನು ಕೊಡಲಾರರು. ಸಿಂಹಾಸನವನ್ನು ಏರಿ ರಾಜನಾಗಬೇಕೆನ್ನುವನೂ, ಮೋಕ್ಷಾಪೇಕ್ಷೆಯುಳ್ಳವನೂ ಸಹ ಪ್ರತಿನಿತ್ಯವೂ ತುಂಬಾ ನಿಯಮದಿಂದ ಶಿವಪೂಜೆಯನ್ನು ಮಾಡಬೇಕು. ॥೨೮೯-೨೯೦-೨೯೧॥

ಸಕಲ ಮನೋರಥಗಳನ್ನೂ ಕೊಡುವ ಅಂಬಿಕಾಸಮೇತನಾದ ಶಿವನನ್ನು ಪೂಜೆಮಾಡಿದರೆ ಸಕಲ ಇಷ್ಟಾರ್ಥಗಳೂ ಸತ್ಯವಾಗಿಯೂ ಸಿದ್ಧಿಸುವುವೆಂದು ನಾನು ಹೇಳುವೆನು. ಸಕಲ ದೇವತೆಗಳಿಗೂ ಚೂಡಾಮಣಿಪ್ರಾಯನಾಗಿರುವ ಅಂಬಿಕಾರಮಣನಾದ ಆ ಮಹೇಶ್ವರನನ್ನು ಪೂಜಿಸಿ ವಿಷ್ಣುವು ವಿಷ್ಣುಪದವಿಯನ್ನೈದಿದನು. ಆದ್ದರಿಂದ ಪರಮಶಿವನನ್ನು ಅವಶ್ಯವಾಗಿ ಪೂಜೆಮಾಡಬೇಕು. ॥೨೯೨-೨೯೩॥

ಬ್ರಹ್ಮಾ ಬ್ರಹ್ಮತ್ವಮಾಪನ್ನಃ ಶಂಕರಸ್ಯೈವ ಪೂಜಯಾ ।
ಇಂದ್ರೋಽಪೀಂದ್ರತ್ವಮಾಪನ್ನಃ ಶಂಕರಸ್ಯೈವ ಪೂಜಯಾ ॥೨೯೪॥

ಯೇ ನಾರ್ಚಯಂತಿ ವಿಶ್ವೇಶಂ ನಿತ್ಯಂ ಸಾಂಬಂ ಸದಾಶಿವಂ ।
ತೇ ನಿರ್ಭಾಗ್ಯಾ ಭವಂತ್ಯೇವ ಪ್ರತಿಜನ್ಮನಿ ಸರ್ವಥಾ ॥೨೯೫॥

ಅನರ್ಚಿತಮಹೇಶಾನಾಂ ಕ್ವಾನಾಯಾಸೇನ ಜೀವನಂ ।
ಕ್ವ ವಾ ಮೋಕ್ಷರಥಾ ತೇಷಾಂ ದೂರತಃ ಸಾ ಪರಾದ್ಭುತಾ ॥೨೯೬॥

ಅನರ್ಚಿತಮಹಾದೇವೈರ್ಭುಕ್ತ್ವಾ ದಾರಿದ್ರ್ಯಮನ್ವಹಂ ।
ತತೋ ಘೋರೇಷು ನರಕೇಷ್ವನಿಶಂ ಪ್ರಾಪ್ಯತೇ ಸ್ಥಿತಿಃ ॥೨೯೭॥

ಅನರ್ಚಿತಮಹೇಶಸ್ಯ ಸುಖಂ ನಾಸ್ತ್ಯೇವ ಸರ್ವಥಾ ।
ದುಃಖಾಬ್ಧಾವೇವ ಸತತಂ ಭೂಯೋ ಭೂಯಃ ಸಮುಜ್ಜತಿ ॥೨೯೮॥

---

ಬ್ರಹ್ಮನು ಬ್ರಹ್ಮಪದವಿಯನ್ನೂ ಇಂದ್ರನು ದೇವಲೋಕಾಧಿಪತ್ಯವನ್ನೂ (ಇಂದ್ರಪದವಿಯನ್ನೂ) ಆ ಶಂಕರನ ಪೂಜೆಯಿಂದಲೇ ಪಡೆದರು. ನಿತ್ಯವೂ ಅಂಬಿಕಾಸಮೇತನಾಗಿ ಜಗದೊಡೆಯನಾಗಿರುವ ಆ ಸದಾಶಿವನನ್ನು ಪೂಜೆಮಾಡದೇ ಇರುವವರು ಪ್ರತಿಯೊಂದು ಜನ್ಮದಲ್ಲಿಯೂ ದರಿದ್ರರಾಗಿಯೇ ಜನಿಸುವುದು ಖಂಡಿತವೆಂದು ತಿಳಿ. ಆ ಮಹೇಶ್ವರನನ್ನು ಪೂಜೆಮಾಡದೇ ಇದುವರಿಗೆ ಅನಾಯಾಸವಾಗಿ (ಯಾವ ವಿಧವಾದ ತೊಂದರೆಯೂ ಇಲ್ಲದೇ) ಜೀವಿಸಿರುವುದೇ ಕಷ್ಟವಾಗಿರುವುದು. ಹೀಗಿರುವಾಗ ಅವರಿಗೆ ಮೋಕ್ಷರೂಪವಾದ ಕಥೆಯ ವಿಷಯವಾದರೋ ಬಹಳ ದೂರವೇ ಆಗಿರುವುದು. ॥೨೯೪-೨೯೫-೨೯೬॥

ಆ ಮಹಾದೇವನನ್ನು ಪೂಜೆಮಾಡದೇ ಇರುವವರು ಪ್ರತಿನಿತ್ಯವೂ ಬಡತನವನ್ನನುಭವಿಸಿ ಅನಂತರ ವಿಶೇಷ ಭಯಂಕರವಾದ ನರಕಗಳಲ್ಲಿ ಯಾವಾಗಲೂ ವಾಸಮಾಡುವರು. ಆ ಮಹೇಶ್ವರನನ್ನು ಪೂಜೆಮಾಡದವರಿಗೆ ಸ್ವಲ್ಪವೂ ಸುಖವೇ ಇಲ್ಲವೆಂದು ತಿಳಿ. ಅವನು ಯಾವಾಗಲೂ ದುಃಖಸಮುದ್ರದಲ್ಲಿಯೇ ಬಿದ್ದು ಪದೇ ಪದೇ ನರಳುವನು. ॥೨೯೭-೨೯೮॥

ಇದಮೇತಾವದೈಶ್ವರ್ಯಮನ್ಯಾಲಭ್ಯಮಖಂಡಿತಂ ।
ತ್ವಯಾ ಪ್ರಾಪ್ತಮಭೂದ್ರಾಜನ್ ಕೇವಲಂ ಶಿವಪೂಜಯಾ ॥೨೯೯॥

ಶಿವಾರ್ಚನಾತ್ಪರೋ ಧರ್ಮೋ ನಾಸ್ತಿ ನ ಶ್ರೂಯತೇ ಮಯಾ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೦೦॥

ಶಿವಾರ್ಚನೇ ಸ ಧರ್ಮಾರ್ಥಕಾಮಮೋಕ್ಷಾಸ್ತು ಸರ್ವಥಾ ।
ಪ್ರಾಪ್ತವ್ಯಾ ಏವ ರಾಜೇಂದ್ರ ಸತ್ಯಂ ಸತ್ಯಂ ನ ಸಂಶಯಃ ॥೩೦೧॥

ಶಿವಾರ್ಚನಪರಾ ಏವ ರಾಜನ್ಧನ್ಯಾ ಇತಿ ಸ್ಮೃತಾಃ ।
ಅತಃ ಶಿವಾರ್ಚಕೋ ವಿಷ್ಣುರ್ಧನ್ಯ ಇತ್ಯಭಿಧೀಯತೇ ॥೩೦೨॥

ಪ್ರಯಾಂತಿ ಬ್ರಹ್ಮಸದನಂ ದೃಷ್ಟ್ವಾಪಿ ಶಿವಮರ್ಚಿತಂ ।
ಶಿವಮಭ್ಯರ್ಚ್ಯ ಯತ್ನೇನ ಬ್ರಹ್ಮತ್ವಂ ಕಿಂ ನ ಯಾಂತಿ ತೇ ॥೩೦೩॥

---

ಮತ್ತೊಂದರಿಂದ ಹೊಂದಲಸಾಧ್ಯವಾದ ಈ ಅಪಾರವಾದ ಐಶ್ವರ್ಯವು ನಿನಗೆ ಕೇವಲ ಪರಶಿವನ ಪೂಜೆಯಿಂದ ಮಾತ್ರ ಬಂದಿರುವುದೆಂದು ತಿಳಿ. ಅಯ್ಯ ರಾಜನೇ! ಶಿವಪೂಜೆಗಿಂತಲೂ ಉತ್ತಮವಾದ ಧರ್ಮವೇ ಇಲ್ಲ. ನಾನು ಕೇಳಿಯೂ ಇಲ್ಲ. ಈ ವಿಷಯವು ಸತ್ಯವು, ಇದನ್ನು ಪದೇಪದೇ ಸತ್ಯವೆಂದು ಭುಜವನ್ನೆತ್ತಿ ನಾನು ಹೇಳುತ್ತೇನೆ. ಎಲೈ ರಾಜೇಂದ್ರನೇ! ಶಿವಪೂಜೆಯಿಂದ ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳೂ ಸತ್ಯವಾಗಿಯೂ ದೊರೆತೇ ದೊರೆಯುವುವೆಂಬುದರಲ್ಲಿ ಸ್ವಲ್ಪವೂ ಸಂದೇಹವೇ ಇಲ್ಲ. ॥೨೯೯-೩೦೦-೩೦೧॥

ಎಲೈ ರಾಜನೇ! ಶಿವಪೂಜಾನಿರತರಾಗಿರುವವರೇ ಧನ್ಯರೆಂದು ಹೇಳಲ್ಪಟ್ಟಿರುವರು. ಆದ್ದರಿಂದಲೇ ಶಿವಪೂಜಕನಾದ ವಿಷ್ಣುವು ಧನ್ಯನೆಂದು ಹೇಳಲ್ಪಡುವನು. ಮತ್ತೊಬ್ಬರು ಮಾಡಿದ ಶಿವಪೂಜೆಯನ್ನು ನೋಡಿದ ಮಾತ್ರದಿಂದಲೇ ಬ್ರಹ್ಮಲೋಕಕ್ಕೆ ಹೋಗುವಾಗ, ನಿಯಮದಿಂದ ಆ ಶಂಕರನನ್ನು ಪೂಜೆಮಾಡಿದವರು ಬ್ರಹ್ಮಪದವಿಯನ್ನು ಹೊಂದಲಾರರೇ! ॥೩೦೨-೩೦೩॥

ಗಚ್ಛ ಕಾಶೀಂ ಪ್ರತಿಪ್ರೀತ್ಯಾ ವಿಶ್ವೇಶೋ ಯತ್ರ ತಿಷ್ಠತಿ ।
ಗತ್ವಾ ವಿಶ್ವೇಶ್ವರಂ ತತ್ರ ಪೂಜಯಸ್ವ ಯಥಾವಿಧಿ ॥೩೦೪॥

ಪ್ರಾತಃ ಕಾಲೇ ಪ್ರಯತ್ನೇನ ಮಣಿಕರ್ಣೀಜಲೇಽಮಲೇ ।
ಸ್ನಾತ್ವೋದ್ಧೂಲ್ಯೈವ ಸರ್ವಾಂಗಂ ತ್ರಿಪುಂಡ್ರಂ ರಚಯಾದರಾತ್ ॥೩೦೫॥

ರುದ್ರಾಕ್ಷಧಾರಣಂ ಕೃತ್ವಾ ಸಂಧ್ಯಾಂ ಕೃತ್ವಾ ಪ್ರಯತ್ನತಃ ।
ಮೌನೀ ಜಲಂ ಬಿಲ್ವಪತ್ರಾಣ್ಯಾದಾಯ ಪ್ರತಿವಾಸರಂ ॥೩೦೬॥

ಪೂಜಯಸ್ವ ಪ್ರಯತ್ನೇನ ವಿಶ್ವೇಶಂ ಸಾಂಬಮವ್ಯಯಂ ।
ವಿಶ್ವೇಶ್ವರಾರ್ಚನರತಃ ಕಾಶೀಂ ಮಾ ತ್ಯಜ ಮಾ ತ್ಯಜ ॥೩೦೭॥

ಕಿಂ ಚ ಕಿಂ ಬಹುನೋಕ್ತೇನ ಸತ್ಯಮೇಕಂ ವಚಃ ಶೃಣು ।
ಶಿವ ಏವ ಸದಾ ಪೂಜ್ಯಶ್ಚತುರ್ವರ್ಗಫಲಾರ್ಥಿಭಿಃ ॥೩೦೮॥

ಅತಃ ಪ್ರಯತ್ನತೋ ರಾಜನ್ಕುರು ಶಂಕರಪೂಜನಂ ।
ಸರ್ವದಾಪ್ಯಪ್ರಮಾದೇನ ಭಸ್ಮಧಾರಣಪೂರ್ವಕಂ ॥೩೦೯॥

---

ವಿಶ್ವೇಶ್ವರನು ನೆಲಸಿರುವ ಆ ಕಾಶೀಪಟ್ಟಣಕ್ಕೆ ಪ್ರೀತಿಯಿಂದ ಹೋಗಿ, ಅಲ್ಲಿ ವಿಶ್ವೇಶ್ವರನನ್ನು ವಿಧಿಪೂರ್ವಕವಾಗಿ ಪೂಜೆಮಾಡು. ಬೆಳಗಿನ ಹೊತ್ತು ನಿಯಮದಿಂದ ಮಣಿಕರ್ಣಿಕಾಕ್ಷೇತ್ರದ ನಿರ್ಮಲವಾದ ನೀರಿನಲ್ಲಿ ಸ್ನಾನ ಮಾಡಿ, ಎಲ್ಲಾ ಶರೀರಕ್ಕೂ ಭಸ್ಮಲೇಪನಮಾಡಿಕೊಂಡು, ತ್ರಿಪುಂಡ್ರಗಳನ್ನು ಆದರದಿಂದ ಧರಿಸು. ಅನಂತರ ರುದ್ರಾಕ್ಷಗಳನ್ನು ಧರಿಸಿ ನಿಯಮಬದ್ಧನಾಗಿ ಸಂಧ್ಯಾಕರ್ಮವನ್ನು ಮುಗಿಸಿ, ಮೌನವಾಗಿ ಆ ತೀರ್ಥದ ನೀರನ್ನೂ ಬಿಲ್ವಪತ್ರೆಗಳನ್ನೂ ಪ್ರತಿನಿತ್ಯವೂ ತಂದು ಅಂಬಿಕಾಸಮೇತನೂ, ನಾಶರಹಿತನೂ ಆದ ಆ ವಿಶ್ವೇಶ್ವರನನ್ನು ನಿಯಮದಿಂದ ಪೂಜೆಮಾಡು. ॥೩೦೪-೩೦೫-೩೦೬॥

ವಿಶ್ವೇಶ್ವರನ ಪೂಜೆಯಲ್ಲಿ ನಿರತನಾಗಿ ಆ ಕಾಶೀಕ್ಷೇತ್ರವನ್ನೆಂದಿಗೂ ಬಿಡಬೇಡ. ಅಯ್ಯಾ ರಾಜನೇ! ಹೆಚ್ಚುಮಾತಿನಿಂದೇನು ಪ್ರಯೋಜನ! ಸತ್ಯವಾದ ಒಂದು ಮಾತನ್ನು ಕೇಳು; ಧರ್ಮ, ಅರ್ಥ (ದುಡ್ಡು) ಕಾಮ (ವಿಷಯಸುಖಗಳು) ಮತ್ತು ಮೋಕ್ಷ, ಈ ರೂಪವಾದ ಪುರುಷಾರ್ಥಗಳನ್ನಪೇಕ್ಷಿಸುವರೆಲ್ಲರೂ ಆ ಶಿವನನ್ನೇ ಯಾವಾಗಲೂ ಪೂಜೆಮಾಡಬೇಕು. ಎಲೈ ರಾಜಕುಲತಿಲಕನೆ! ಆದ್ದರಿಂದ ನೀನೂ

ಅತಃ ಪರಂ ಪ್ರಯತ್ನೇನ ವಿಷಯೇಷು ರತಿಂ ತ್ಯಜ ।
ಸರ್ವದಾ ಸಾವಧಾನೇನ ಭಜ ಸಾಂಬಂ ಸದಾಶಿವಂ ॥೨೧೦॥

ಕುರು ಪ್ರಾಸಾದಮುಪುಲಂ ನಾನಾಶೃಂಗವಿರಾಜಿತಂ ।
ಮಹಾದೇವ ಪುರೋಭಾಗೇ ನಾನಾರತ್ನವಿರಾಜಿತಂ ॥೨೧೧॥

ಪ್ರಸಾದಸ್ಥಂ ಮಹಾದೇವಮುಮಾಕಾಂತಂ ವಿಲೋಕಯ ।
ಸಂಪೂಜ್ಯ ರತ್ನಮಾಲಾಭಿರ್ದಿವ್ಯವಸ್ತ್ರೈರಪಿ ಪ್ರಭುಂ ॥೨೧೨॥

ಪ್ರಸಾದಸ್ಥಮುಮಾಕಾಂತಂ ಯಃ ಪಶ್ಯತಿ ಮುದಾ ಸದಾ ।
ತಮನ್ವಹಂ ಪೂಜಯಂತಿ ವಿಷ್ಣುಬ್ರಹ್ಮಾದಯಃ ಸುರಾಃ ॥೨೧೩॥

ಸಹಸ್ರಚಕ್ರಸಂವೀತಂ ಸೌವರ್ಣಂ ರತ್ನರಂಜಿತಂ ।
ಕಾರಯಸ್ವ ರಥಂ ದಿವ್ಯಂ ಶಂಕರಾರೋಹಣೋಚಿತಂ ॥೨೧೪॥

---

ಭಸ್ಮಧಾರಣೆಯನ್ನು ಮೊದಲುಮಾಡಿಕೊಂಡು ಯಾವಾಗಲೂ ಪ್ರಮಾದವಿಲ್ಲದೇ ಶಂಕರನನ್ನು ಪೂಜೆಮಾಡು. ॥೨೦೭-೨೦೮-೨೦೯॥

ಇನ್ನು ಮುಂದೆ ಇಂದ್ರಿಯ ಸುಖಗಳಲ್ಲಿನ ಮಮತೆಯನ್ನು ಬಿಟ್ಟು ಅಂಬಿಕಾ ಸಮೇತನಾದ ಸದಾಶಿವನನ್ನೇ ಯಾವಾಗಲೂ ಸಾವಧಾನವಾಗಿ ಭಜಿಸು. ಆ ಮಹಾದೇವನಿಗೋಸ್ಕರ ನಾನಾ ವಿಧವಾದ ರತ್ನಗಳಿಂದ ಅಲಂಕೃತವಾಗಿ ಅನೇಕ ಶಿಖರಗಳಿಂದ ಕೂಡಿರುವ ಒಂದು ದೊಡ್ಡ ದೇವಾಲಯವನ್ನೇರ್ಪಡಿಸು. ಆ ದಿವ್ಯ ಪ್ರಾಸಾದದಲ್ಲಿ ಉಮಾಕಾಂತನಾದ ಮಹಾದೇವನನ್ನು ಪ್ರತಿಷ್ಠೆಮಾಡಿಸಿ, ನಿತ್ಯವೂ ರತ್ನಮಾಲೆಗಳಿಂದಲೂ ದಿವ್ಯವಾದ ವಸ್ತ್ರಗಳಿಂದಲೂ ಆ ಪ್ರಭುವನ್ನಲಂಕರಿಸಿ ಆನಂದದಿಂದ ದೇವದೇವನನ್ನು ನೋಡು. ಅಯ್ಯ ರಾಜನೇ! ದೊಡ್ಡ ದೇವಾಲಯದಲ್ಲಿರುವ ಉಮಾರಮಣನನ್ನು ಯಾವಾಗಲೂ ಪ್ರೀತಿಯಿಂದ ನೋಡುವನನ್ನು ವಿಷ್ಣು, ಬ್ರಹ್ಮ, ಮುಂತಾದ ದೇವತೆಗಳು ಪ್ರತಿದಿನವೂ ಪೂಜೆಮಾಡುತ್ತಾರೆ. ॥೨೧೦-೨೧೧-೨೧೨-೨೧೩॥

ಎಲೈ ರಾಜವಲ್ಲಭನೇ, ಸಾವಿರಚಕ್ರದಿಂದ ಕೂಡಿ, ರತ್ನಗಳಿಂದ ಕಂಗೊಳಿಸುವ ಚಿನ್ನದ ಒಂದು ರಥವನ್ನು ಆ ಶಂಕರನು ಆರೋಹಣಮಾಡಲು (ಹತ್ತಲು) ಯೋಗ್ಯವಾಗಿರುವಂತೆ ಮಾಡಿಸು. ಅನಂತರ ಆ ರಥವನ್ನು ನಾನಾವಿಧವಾದ ರತ್ನಮಾಲೆಗಳಿಂದಲೂ, ದಿವ್ಯವಾದ ವಸ್ತ್ರಗಳು, ಹೂ ಮತ್ತು ಚಾಮರ ಮುಂತಾದವುಗಳಿಂದಲೂ

ಗಚ್ಛ ಕಾಶೀಂ ಪ್ರತಿಪ್ರೀತ್ಯಾ ವಿಶ್ವೇಶೋ ಯತ್ರ ತಿಷ್ಠತಿ ।
ಗತ್ವಾ ವಿಶ್ವೇಶ್ವರಂ ತತ್ರ ಪೂಜಯಸ್ವ ಯಥಾವಿಧಿ ॥೩೦೪॥

ಪ್ರಾತಃ ಕಾಲೇ ಪ್ರಯತ್ನೇನ ಮಣಿಕರ್ಣೀಜಲೇಽಮಲೇ ।
ಸ್ನಾತ್ವೋದ್ಧೂಲ್ಯೈವ ಸರ್ವಾಂಗಂ ತ್ರಿಪುಂಡ್ರಂ ರಚಯಾದರಾತ್ ॥೩೦೫॥

ರುದ್ರಾಕ್ಷಧಾರಣಂ ಕೃತ್ವಾ ಸಂಧ್ಯಾಂ ಕೃತ್ವಾ ಪ್ರಯತ್ನತಃ ।
ಮೌನೀ ಜಲಂ ಬಿಲ್ವಪತ್ರಾಣ್ಯಾದಾಯ ಪ್ರತಿವಾಸರಂ ॥೩೦೬॥

ಪೂಜಯಸ್ವ ಪ್ರಯತ್ನೇನ ವಿಶ್ವೇಶಂ ಸಾಂಬಮವ್ಯಯಂ ।
ವಿಶ್ವೇಶ್ವರಾರ್ಚನರತಃ ಕಾಶೀಂ ಮಾ ತ್ಯಜ ಮಾ ತ್ಯಜ ॥೩೦೭॥

ಕಿಂ ಚ ಕಿಂ ಬಹುನೋಕ್ತೇನ ಸತ್ಯಮೇಕಂ ವಚಃ ಶೃಣು ।
ಶಿವ ಏವ ಸದಾ ಪೂಜ್ಯಶ್ಚತುರ್ವರ್ಗಫಲಾರ್ಥಿಭಿಃ ॥೩೦೮॥

ಅತಃ ಪ್ರಯತ್ನತೋ ರಾಜನ್ಕುರು ಶಂಕರಪೂಜನಂ ।
ಸರ್ವದಾಪ್ಯಪ್ರಮಾದೇನ ಭಸ್ಮಧಾರಣಪೂರ್ವಕಂ ॥೩೦೯॥

---

ವಿಶ್ವೇಶ್ವರನು ನೆಲಸಿರುವ ಆ ಕಾಶೀಪಟ್ಟಣಕ್ಕೆ ಪ್ರೀತಿಯಿಂದ ಹೋಗಿ, ಅಲ್ಲಿ ವಿಶ್ವೇಶ್ವರನನ್ನು ವಿಧಿಪೂರ್ವಕವಾಗಿ ಪೂಜೆಮಾಡು. ಬೆಳಗಿನ ಹೊತ್ತು ನಿಯಮದಿಂದ ಮಣಿಕರ್ಣಿಕಾಕ್ಷೇತ್ರದ ನಿರ್ಮಲವಾದ ನೀರಿನಲ್ಲಿ ಸ್ನಾನ ಮಾಡಿ, ಎಲ್ಲಾ ಶರೀರಕ್ಕೂ ಭಸ್ಮಲೇಪನಮಾಡಿಕೊಂಡು, ತ್ರಿಪುಂಡ್ರಗಳನ್ನು ಆದರ ದಿಂದ ಧರಿಸು. ಅನಂತರ ರುದ್ರಾಕ್ಷಗಳನ್ನು ಧರಿಸಿ ನಿಯಮಬದ್ಧನಾಗಿ ಸಂಧ್ಯಾಕರ್ಮ ವನ್ನು ಮುಗಿಸಿ, ಮೌನವಾಗಿ ಆ ತೀರ್ಥದ ನೀರನ್ನೂ ಬಿಲ್ವಪತ್ರೆಗಳನ್ನೂ ಪ್ರತಿ ನಿತ್ಯವೂ ತಂದು ಅಂಬಿಕಾಸಮೇತನೂ, ನಾಶರಹಿತನೂ ಆದ ಆ ವಿಶ್ವೇಶ್ವರನನ್ನು ನಿಯಮದಿಂದ ಪೂಜೆಮಾಡು. ॥೩೦೪-೩೦೫-೩೦೬॥

ವಿಶ್ವೇಶ್ವರನ ಪೂಜೆಯಲ್ಲಿ ನಿರತನಾಗಿ ಆ ಕಾಶೀಕ್ಷೇತ್ರವನ್ನೆಂದಿಗೂ ಬಿಡ ಬೇಡ. ಅಯ್ಯಾ ರಾಜನೇ! ಹೆಚ್ಚುಮಾತಿನಿಂದೇನು ಪ್ರಯೋಜನ! ಸತ್ಯವಾದ ಒಂದು ಮಾತನ್ನು ಕೇಳು; ಧರ್ಮ, ಅರ್ಥ (ದುಡ್ಡು) ಕಾಮ (ವಿಷಯಸುಖಗಳು) ಮತ್ತು ಮೋಕ್ಷ, ಈ ರೂಪವಾದ ಪುರುಷಾರ್ಥಗಳನ್ನಪೇಕ್ಷಿಸುವರೆಲ್ಲರೂ ಆ ಶಿವನನ್ನೇ ಯಾವಾಗಲೂ ಪೂಜೆಮಾಡಬೇಕು. ಎಲೈ ರಾಜಕುಲತಿಲಕನೆ! ಆದ್ದರಿಂದ ನೀನೂ

ಅತಃ ಪರಂ ಪ್ರಯತ್ನೇನ ವಿಷಯೇಷು ರತಿಂ ತ್ಯಜ ।
ಸರ್ವದಾ ಸಾವಧಾನೇನ ಭಜ ಸಾಂಬಂ ಸದಾಶಿವಂ ॥೩೧೦॥

ಕುರು ಪ್ರಾಸಾದಮುಮಲಂ ನಾನಾಶೃಂಗವಿರಾಜಿತಂ ।
ಮಹಾದೇವ ಪುರೋಭಾಗೇ ನಾನಾರತ್ನವಿರಾಜಿತಂ ॥೩೧೧॥

ಪ್ರಸಾದಸ್ಥಂ ಮಹಾದೇವಮುಮಾಕಾಂತಂ ವಿಲೋಕಯ ।
ಸಂಪೂಜ್ಯ ರತ್ನಮಾಲಾಭಿರ್ದಿವ್ಯವಸ್ತ್ರೈರಪಿ ಪ್ರಭುಂ ॥೩೧೨॥

ಪ್ರಸಾದಸ್ಥಮುಮಾಕಾಂತಂ ಯಃ ಪಶ್ಯತಿ ಮುದಾ ಸದಾ ।
ತಮನ್ವಹಂ ಪೂಜಯಂತಿ ವಿಷ್ಣುಬ್ರಹ್ಮಾದಯಃ ಸುರಾಃ ॥೩೧೩॥

ಸಹಸ್ರಚಕ್ರಸಂವೀತಂ ಸೌವರ್ಣಂ ರತ್ನರಂಜಿತಂ ।
ಕಾರಯಸ್ವ ರಥಂ ದಿವ್ಯಂ ಶಂಕರಾರೋಹಣೋಚಿತಂ ॥೩೧೪॥

---

ಭಸ್ಮಧಾರಣೆಯನ್ನು ಮೊದಲುಮಾಡಿಕೊಂಡು ಯಾವಾಗಲೂ ಪ್ರಮಾದವಿಲ್ಲದೇ ಶಂಕರನನ್ನು ಪೂಜೆಮಾಡು. ॥೩೦೭-೩೦೮-೩೦೯॥

ಇನ್ನು ಮುಂದೆ ಇಂದ್ರಿಯ ಸುಖಗಳಲ್ಲಿನ ಮಮತೆಯನ್ನು ಬಿಟ್ಟು ಅಂಬಿಕಾ ಸಮೇತನಾದ ಸದಾಶಿವನನ್ನೇ ಯಾವಾಗಲೂ ಸಾವಧಾನವಾಗಿ ಭಜಿಸು. ಆ ಮಹಾದೇವನಿಗೋಸ್ಕರ ನಾನಾ ವಿಧವಾದ ರತ್ನಗಳಿಂದ ಅಲಂಕೃತವಾಗಿ ಅನೇಕ ಶಿಖರಗಳಿಂದ ಕೂಡಿರುವ ಒಂದು ದೊಡ್ಡ ದೇವಾಲಯವನ್ನೇರ್ಪಡಿಸು. ಆ ದಿವ್ಯ ಪ್ರಾಸಾದದಲ್ಲಿ ಉಮಾಕಾಂತನಾದ ಮಹಾದೇವನನ್ನು ಪ್ರತಿಷ್ಠೆಮಾಡಿಸಿ, ನಿತ್ಯವೂ ರತ್ನಮಾಲೆಗಳಿಂದಲೂ ದಿವ್ಯವಾದ ವಸ್ತ್ರಗಳಿಂದಲೂ ಆ ಪ್ರಭುವನ್ನಲಂಕರಿಸಿ ಆನಂದದಿಂದ ದೇವದೇವನನ್ನು ನೋಡು. ಅಯ್ಯ ರಾಜನೇ! ದೊಡ್ಡ ದೇವಾಲಯ ದಲ್ಲಿರುವ ಉಮಾರಮಣನನ್ನು ಯಾವಾಗಲೂ ಪ್ರೀತಿಯಿಂದ ನೋಡುವವನನ್ನು ವಿಷ್ಣು, ಬ್ರಹ್ಮ, ಮುಂತಾದ ದೇವತೆಗಳು ಪ್ರತಿದಿನವೂ ಪೂಜೆಮಾಡುತ್ತಾರೆ. ॥೩೧೦-೩೧೧-೩೧೨-೩೧೩॥

ಎಲೈ ರಾಜವಲ್ಲಭನೇ, ಸಾವಿರಚಕ್ರದಿಂದ ಕೂಡಿ, ರತ್ನಗಳಿಂದ ಕಂಗೊಳಿಸುವ ಚಿನ್ನದ ಒಂದು ರಥವನ್ನು ಆ ಶಂಕರನು ಆರೋಹಣಮಾಡಲು (ಹತ್ತಲು) ಯೋಗ್ಯ ವಾಗಿರುವಂತೆ ಮಾಡಿಸು. ಅನಂತರ ಆ ರಥವನ್ನು ನಾನಾವಿಧವಾದ ರತ್ನಮಾಲೆ ಗಳಿಂದಲೂ, ದಿವ್ಯವಾದ ವಸ್ತ್ರಗಳು, ಹೂ ಮತ್ತು ಚಾಮರ ಮುಂತಾದವುಗಳಿಂದಲೂ

ನಾನಾಸುರತ್ನಮಾಲಾಭಿರಲಂಕುರು ರಥೋತ್ತಮಂ ।
ದಿವ್ಯವಸ್ತ್ರೈಶ್ಚ ಪುಷ್ಪೈಶ್ಚ ಚಾಮರೈಶ್ಚ ಯಥೋಚಿತಂ ॥೩೧೫॥

ಏತಾದೃಶ ಉಮಾಕಾಂತೋ ರತ್ನಾಭರಣಭೂಷಿತಃ ।
ರತ್ನಮಾಲಾಪರಿವೃತಂ ರಥಮಾರುಹ್ಯ ತಿಷ್ಠತು ॥೩೧೬॥

ಏತಾದೃಶಂ ರಥಾರೂಢಂ ಪಾರ್ವತೀರಮಣಂ ಪ್ರಭುಂ ।
ವಿಲೋಕಯಾತಿಯತ್ನೇನ ವಿಷ್ಣುಬ್ರಹ್ಮಾದಿಸೇವಿತಂ ॥೩೧೭॥

ರಥಾರೂಢಂ ಶಿವಂ ದೃಷ್ಟ್ವಾ ಸ್ತೋಮಮಭ್ಯರ್ಚಿತಂ ಮುದಾ ।
ಸಂಸಾರಸಾಗರಾದ್ಘೋರಾನ್ಮುಕ್ತೋ ಭವತಿ ಮಾನವಃ ॥೩೧೮॥

ರಥೋತ್ಸಾಹಂ ಕಾರಯಸ್ವ ಪ್ರತಿಸಂಕ್ರಮಣೇ ಪ್ರಭೋಃ ।
ಸಾಂಬಸ್ಯ ದರ್ಶನಂ ಕಾರ್ಯಂ ರಥಸ್ಥಸ್ಯ ಮುದಾ ಸದಾ ॥೩೧೯॥

ರವಿಸಂಕ್ರಮಣೇ ದೃಷ್ಟ್ವಾ ರಥಾರೂಢಮುಮಾಪತಿಂ ।
ಮುಚ್ಯತೇ ಪಾಪಕೋಟಿಭ್ಯಃ ಸದ್ಯ ಏವ ನ ಸಂಶಯಃ ॥೩೨೦॥

---

ಉಚಿತವಾಗಿರುವಂತೆ ಅಲಂಕಾರ ಮಾಡು. ರತ್ನಾಭರಣಗಳಿಂದ ಅಲಂಕೃತನಾಗಿರುವ ಈ ಉಮಾರಮಣನು ರತ್ನಮಾಲೆಗಳಿಂದ ಸುತ್ತುವರಿಯಲ್ಪಟ್ಟಿರುವ ದಿವ್ಯರಥವನ್ನೇರಿ ವಿರಾಜಿಸಲಿ. ॥೩೧೪-೩೧೫-೩೧೬॥

ವಿಷ್ಣು, ಬ್ರಹ್ಮ, ಮುಂತಾದ ದೇವತೆಗಳಿಂದ ಸೇವಿಸಲ್ಪಡುತ್ತಿರುವ ಈ ಪಾರ್ವತೀಕಾಂತನಾದ ಪ್ರಭುವು ರಥದಮೇಲೆ ಕುಳಿತಿರುವುದನ್ನು ನೋಡಿ ತೃಪ್ತಿ ಹೊಂದುವನಾಗು. ಆ ಉಮಾರಮಣನನ್ನು ಪ್ರೀತಿಯಿಂದ ಪೂಜಿಸಿ ರಥದಮೇಲೆ ಕುಳಿತಿರುವುದನ್ನು ನೋಡಿ ಮನುಷ್ಯನು ಈ ಸಂಸಾರವೆಂಬ ಸಾಗರದಿಂದ ಬಿಡುಗಡೆ ಹೊಂದುತ್ತಾನೆ. ಅಯ್ಯ ರಾಜನೇ! ಹೇಗೆ ಪ್ರತಿಯೊಂದು ಸಂಕ್ರಮಣಕಾಲದಲ್ಲಿಯೂ ಆ ಪ್ರಭುವಿಗೆ ಉತ್ಸಾಹದಿಂದ ರಥೋತ್ಸವಗಳನ್ನು ಮಾಡಿಸುತ್ತಾ ರಥವನ್ನೇರಿರುವ ಆ ಅಂಬಿಕಾಪತಿಯನ್ನು ಯಾವಾಗಲೂ ಸಂತೋಷದಿಂದ ದರ್ಶನಮಾಡಿ ಆನಂದ ಭರಿತನಾಗು. ॥೩೧೭-೩೧೮-೩೧೯॥

ಸೂರ್ಯಸಂಕ್ರಮಣದದಿವಸ ರಥವನ್ನೇರಿ ಕುಳಿತಿರುವ ಆ ಉಮಾರಮಣನನ್ನು ನೋಡಿದವನು ಕೋಟ್ಯಂತರ ಪಾತಕಗಳಿಂದಲೂ ಕೂಡಲೇ ಕೊಂಚವೂ

ಕೃತ್ವಾಪಿ ನಿತ್ಯಂ ಯತ್ನೇನ ಬ್ರಹ್ಮಹತ್ಯಾಯುತಂ ನೃಪ ।
ರಥಾರೂಢಂ ಶಿವಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ॥೩೨೧॥

ಪುರಾ ಕಶ್ಚಿನ್ಮಹಾಪಾಪೀ ನಿತ್ಯಂ ಬ್ರಹ್ಮವಧೇ ರತಃ ।
ಪರದಾರರತೋ ನಿತ್ಯಂ ಪರದ್ರವ್ಯರತಃ ಸದಾ ॥೩೨೨॥

ಮದ್ಯಮಾಂಸಾಶನೋ ನಿತ್ಯಂ ನಿತ್ಯಂ ಗೋವಧಕೃನ್ಮುದಾ ।
ಸ್ವಮಾತೃಸಂಗನಿರತೋ ಭಗಿನೀಶಮನಪ್ರಿಯಃ ॥೩೨೩॥

ಸ ದೃಷ್ಟ್ವಾ ಯುವತೀಂ ನಾರೀಂ ಬಲಾದಾಕೃಷ್ಯ ಯತ್ನತಃ ।
ಯಥೇಷ್ಟಮುಪಭುಕ್ತ್ವೈವ ಸ ರತ್ಯಂತೇ ಜಹಾತಿ ತಾಂ ॥೩೨೪॥

ಸ ಕದಾಚಿದಿಮಾಂ ಪ್ರಾಪ ಕಾಂಚೀಂ ಪುಣ್ಯೋಪಸಂಶ್ರಯಾಂ ।
ಆಗತ್ಯ ತು ಮಹಾದೇವಂ ರಥಾರೂಢಮಲೋಕಯತ್ ॥೩೨೫॥

ತತಃ ಸ ನಿರ್ಗತಃ ಕಾಂಚ್ಯಾಸ್ತತ್ರೈವ ವಿಷಯವಿಷಯಾತುರಃ ।
ತತೋ ರತ್ಯರ್ಥಮಮಲಾಂ ಬ್ರಾಹ್ಮಣೀಂ ಸ ಜಹಾರ ಚ ॥೩೨೬॥

---

ಸಂದೇಹವಿಲ್ಲದೇ ಬಿಡುಗಡೆ ಹೊಂದುವನು. ರಾಜೇಂದ್ರನೇ! ನಿತ್ಯವೂ ಹತ್ತುಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದ್ದರೂ ರಥವನ್ನೇರಿದ ಆ ಪರಶಿವನ ದರ್ಶನಮಾಡಿದರೆ ಎಲ್ಲಾ ಪಾಪಗಳಿಂದಲೂ ಮಾನವನು ಬಿಡುಗಡೆ ಹೊಂದುವನು. ॥೩೨೦-೩೨೧॥

ಹಿಂದೆ ನಿತ್ಯವೂ ಬ್ರಹ್ಮಹತ್ಯಾ, ಪರಪತ್ನೀಸಮಾಗಮ, ಪರದ್ರವ್ಯಗಳನ್ನು ಅಪಹರಿಸುವಿಕೆ, ಮುಂತಾದ ಪಾಪಕಾರ್ಯಗಳಲ್ಲಿಯೇ ನಿರತನಾಗಿದ್ದ ಒಬ್ಬ ಮಹಾ ಪಾಪಿಷ್ಠನಿದ್ದನು. ಈತನು ಹೆಂಡವನ್ನು ಕುಡಿದು ಮಾಂಸವನ್ನು ತಿನ್ನುತ್ತಾ ನಿತ್ಯವೂ ಸಂತೋಷದಿಂದ ಗೋವುಗಳನ್ನು ಕೊಲ್ಲುತ್ತಿದ್ದನು. ಈ ಪಾಪಿಯು ತನ್ನ ತಾಯಿ, ಮತ್ತು ಸಹೋದರಿಯರನ್ನೂ ಸಂಭೋಗಕ್ಕೆ ಎಳೆಯುವುದರಲ್ಲಿ ಹಿಂಜರಿಯುತ್ತಿರಲಿಲ್ಲ. ಯೌವ್ವನಭರಿತಳಾದ ಯಾವ ಹೆಂಗಸನ್ನಾದರೂ ಬಲಾತ್ಕಾರವಾಗಿ ಹಿಡಿದುಕೊಂಡು ಅವಳೊಡನೆ ತನ್ನ ಮನಸ್ಸಿಗೆ ತೋರಿದಂತೆ ವಿಹಾರಮಾಡಿ ಈ ಪಾಪಿಯು ಅವಳನ್ನು ಬಿಡುತ್ತಿದ್ದನು. ॥೩೨೨-೩೨೩-೩೨೪॥

ಅಂತಹ ಕಡುಪಾಪಿಯು ಒಂದುಸಲ ಪುಣ್ಯಗಳಿಗೆ ಆಶ್ರಯವಾಗಿರುವ ಈ ಕಾಂಚಿಯನ್ನು ಸೇರಿದನು. ಇಲ್ಲಿಗೆ ಬಂದ ಮೇಲೆ ರಥದ ಮೇಲಿದ್ದ ಆ ಮಹಾದೇವ

ತಮುವಾಚ ತತೋ ರಾಜನ್ ಬ್ರಾಹ್ಮಣೀ ಪತಿದೇವತಾ ।
ನತಾನನಾ ಭಯಗ್ರಸ್ತಾ ಧ್ಯಾಯಂತೀ ಶಂಕರಂ ಹೃದಿ ॥೩೨೭॥

ಮಾ ಮಾಸ್ಪೃಶ ಬಲಾದ್ದುಷ್ಟಾ ಯದಿ ಮಾಂ ಸ್ಪ್ರಷ್ಟುಮಿಚ್ಛಸಿ ।
ಶಿರಃ ಸಹಸ್ರಧಾ ಛಿನ್ನಂ ತವಾದ್ಯೇಹ ಭವಿಷ್ಯತಿ ॥೩೨೮॥

ಇತಿ ತದ್ವಚನಂ ಶ್ರುತ್ವಾಽಪ್ಯಗಣಯ್ಯ ಬಲಾನ್ವಿತಃ ।
ಕಾಮಾತುರಸ್ತದಗ್ರಾಂಗಂ ಪಸ್ಪರ್ಶ ರತಿಲೋಲುಪಃ ॥೩೨೯॥

ತತಸ್ತಸ್ಯ ಶಿರಶ್ಛಿನ್ನಂ ಸದ್ಯ ಏವ ಸಹಸ್ರಧಾ ।
ತತೋ ದೂತಾಃ ಸಮಾಗತ್ಯ ನಿನ್ಯುಸ್ತಂ ಯಮಮಂದಿರಂ ॥೩೩೦॥

ತತೋ ವಿಲೋಕ್ಯ ಕಾಲಸ್ತಂ ಚಿತ್ರಗುಪ್ತಂ ವಿಚಾರಕಂ ।
ಬಭಾಷೇ ಕೋಽಯಮೇತಸ್ಯ ಧರ್ಮಃ ಕ ಇತಿ ಸಾದರಂ ॥೩೩೧॥

---

ನನ್ನು ದರ್ಶನಮಾಡಿದನು. ಆಮೇಲೆ ಇಲ್ಲಿಂದ ಹೊರಟು ಕಾಮಾತುರನಾಗಿ ರತಿಕ್ರೀಡೆಗೋಸ್ಕರ ಒಬ್ಬ ಪತಿವ್ರತೆಯಾದ ಬ್ರಾಹ್ಮಣಸ್ತ್ರೀಯನ್ನು ಬಲಾತ್ಕಾರವಾಗಿ ಹಿಡಿದೆಳೆದನು. ॥೩೨೫-೩೨೬॥

ಅಯ್ಯಾ ರಾಜನೇ! ಅನಂತರ ಪತಿಯೇ ಪೂಜ್ಯದೈವವೆಂದು ನಂಬಿದ್ದ ಪತಿವ್ರತೆಯಾದ ಆ ಬ್ರಾಹ್ಮಣಸ್ತ್ರೀಯು ತಲೆಬಾಗಿ, ಹೆದರಿದವಳಾಗಿ ಮನಸ್ಸಿನಲ್ಲಿ ಆ ಶಂಕರನನ್ನು ಧ್ಯಾನಮಾಡುತ್ತಾ, "ಎಲೈ ದುಷ್ಟನೇ! ಬಲಾತ್ಕಾರದಿಂದ ನನ್ನನ್ನು ಎಳೆಯಬೇಡ, ಒಂದುವೇಳೆ ಮುಟ್ಟುವೆಯಾದರೆ ನಿನ್ನ ಈ ತಲೆಯು ಈಗಲೇ ಸಾವಿರ ಹೋಳಾಗಿ ಒಡೆದು ಬೀಳುವುದು" ಎಂದು ಹೇಳಲು, ಆ ಮಾತನ್ನು ಕೇಳಿದರೂ ಕೊಂಚವೂ ಗಣನೆಮಾಡದೇ ವಿಹಾರಾತುರನಾದ ಆ ದುಷ್ಟನು ಕಾಮೋದ್ರೇಕದಿಂದ ಆಕೆಯ ಹೃದಯಪ್ರದೇಶವನ್ನು (ಅಂದರೆ ಸ್ತನಾದಿಗಳನ್ನು) ಸ್ಪರ್ಶಮಾಡಿದನು. ೩೨೭-೩೨೮-೩೨೯॥

ಮುಟ್ಟಿದ ಕೂಡಲೆ ಅವನ ತಲೆಯು ಸಾವಿರ ಹೋಳಾಗಿ ಒಡೆಯಲು ಅವನು ಅಲ್ಲಿಯೇ ಮೃತನಾದನು. ಅನಂತರ ಯಮದೂತರು ಅಲ್ಲಿಗೆ ಬಂದು ಅವನನ್ನು ಯಮಪಟ್ಟಣಕ್ಕೆ ಎಳೆದೊಯ್ದರು. ಆಮೇಲೆ ಆ ಯಮನು ಇವನನ್ನು ನೋಡಿ, ಪ್ರಾಣಿಗಳ ಪಾಪಪುಣ್ಯಗಳನ್ನೆಲ್ಲಾ ಚೆನ್ನಾಗಿ ವಿಚಾರಮಾಡುವ ಚಿತ್ರಗುಪ್ತನನ್ನು

ಯಮಾನೇನ ಕೃತಂ ಪಾಪಮಾಜನ್ಮಾಮರಣಂ ಸದಾ ।
ಪಾತಕಾನಾಂ ಚ ಗಣನಾಂ ಕರ್ತುಮಸ್ಯ ನ ಶಕ್ಯತೇ ॥೩೩೨॥

ತಥಾಪಿ ಕೃತಮೇತೇನ ಪುಣ್ಯಮೇಕಂ ಮಹತ್ತರಂ ।
ತತ್ಪುಣ್ಯಸದೃಶಂ ಪುಣ್ಯಂ ನ ಕಿಂಚಿದಪಿ ದೃಶ್ಯತೇ ॥೩೩೩॥

ರಥಾರೂಢಮುಮಾಕಾಂತಂ ದದರ್ಶಾಯಂ ಯಮಾದರಾತ್ ।
ತದ್ದರ್ಶನೇನ ಪಾಪಾನಿ ವಿನಶ್ಯಾನ್ಯಸ್ಯ ತತ್ಕ್ಷಣೇ ॥೩೩೪॥

ಸಾಂಬೋ ದೃಷ್ಟೋ ರಥಾರೂಢೋ ಯದ್ದಿನೇ ತೇನ ತದ್ದಿನೇ ।
ತ್ಯಕ್ತ್ವಾ ತನುರತೋ ನಾಸ್ಯ ಯಮ ಯಾಮೀಯಯಾತನಾ ॥೩೩೫॥

ಯಃ ಸಾದರಂ ಶಿವಂ ಸಾಂಬಂ ರಥಾರೂಢಂ ವಿಲೋಕಯೇತ್ ।
ಸೋಽನಂತಬ್ರಹ್ಮಹತ್ಯಾದಿ ಪಾತಕೇಭ್ಯೋ ವಿಮುಚ್ಯತೇ ॥೩೩೬॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಯಮಃ ಸಂತುಷ್ಟಮಾನಸಃ ।
ದದೌ ರತ್ನಾಸನಂ ತಸ್ಮೈ ಸೋತ್ಸಾಹಂ ಸ್ಮಿತಪೂರ್ವಕಂ ॥೩೩೭॥

---

ಕುರಿತು, ಇವನಾರು? ಈತನು ಏನು ಧರ್ಮಮಾಡಿರುವನು? ಎಂಬುದನ್ನು ಕೂಡಲೇ ತಿಳಿಸೆಂದು ಕೇಳಿದನು. ॥೩೩೦-೩೩೧॥

ಯಮಧರ್ಮರಾಜ, ಈತನು ಹುಟ್ಟಿದಾರಭ್ಯ ಸಾಯುವ ವರೆಗೂ ಅಸಂಖ್ಯ ಪಾಪಕೃತ್ಯಗಳನ್ನೇ ಮಾಡಿರುವನು. ಇವನು ಮಾಡಿರುವ ಪಾಪಗಳನ್ನು ಎಣಿಸಲೂ ಸಾಧ್ಯವಿಲ್ಲ. ಹೀಗಿದ್ದರೂ ಈತನು ಒಂದು ದೊಡ್ಡ ಪುಣ್ಯಕಾರ್ಯವನ್ನು ಮಾಡಿರುವನು. ಆ ಪುಣ್ಯಕರ್ಮಕ್ಕೆ ಸರಿಯಾದ ಪುಣ್ಯವು ಮತ್ತೊಂದಿಲ್ಲ. ಯಮನೇ, ಇವನು ರಥವನ್ನೇರಿರುವ ಉಮಾರಮಣನನ್ನು ಆದರದಿಂದ ದರ್ಶನಮಾಡಿರುವನು. ಇದರಿಂದ ಇವನ ಪಾಪಗಳೆಲ್ಲಾ ಕೂಡಲೇ ನಾಶವಾಗಿ ಹೋಗಿವೆ. ॥೩೩೨-೩೩೩-೩೩೪॥

ರಥವನ್ನೇರಿದ ಅಂಬಿಕಾಪತಿಯನ್ನು ದರ್ಶನಮಾಡಿದ ದಿನವೇ ಈತನು ಈ ಶರೀರವನ್ನು ಬಿಟ್ಟಿರುವುದರಿಂದ ಇವನಿಗೆ ಯಮನು(ನೀನು)ಕೊಡುವ ನರಕಯಾತನೆಗಳು ಇಲ್ಲವೇ ಇಲ್ಲ. ಆದರದಿಂದ ರಥದಮೇಲಿರುವ ಅಂಬಿಕಾಪತಿಯಾದ ಮಹಾದೇವನನ್ನು ದರ್ಶನಮಾಡುವವನು ಅಪಾರವಾದ ಬ್ರಹ್ಮಹತ್ಯೆಯೇ ಮುಂತಾದ

ತತೋಽರ್ಘ್ಯಾದಿಭಿರಭ್ಯರ್ಚ್ಯ ಪುಷ್ಪಕೇ ಸಂನಿವೇಶಿತಂ ।
ಸಾದರಂ ಪ್ರೇಷಯಾಮಾಸ ಸ್ವರ್ಗಲೋಕಾಯ ಸತ್ವರಂ ॥೩೩೮॥

ಇಂದ್ರಸ್ತಮಾಗತಂ ದೃಷ್ಟ್ವಾ ಪುಷ್ಪಕಸ್ಥಂ ಮುದಾನ್ವಿತಃ ।
ಉಪವೇಶ್ಯಾಸನೇ ರಮ್ಯೇ ಪೂಜಯಾಮಾಸ ಸಾದರಂ ॥೩೩೯॥

ಇಂದ್ರೋಽಪಿ ಪ್ರೇಷಯಾಮಾಸ ಬ್ರಹ್ಮಲೋಕಾಯ ಸತ್ವರಂ ।
ಬ್ರಹ್ಮಾ ತಮಾಗತಂ ದೃಷ್ಟ್ವಾ ಪೂಜಯಾಮಾಸ ಸಾದರಂ ॥೩೪೦॥

ಬ್ರಹ್ಮಣಾ ಪೂಜಿತೋ ನಿತ್ಯಂ ಬ್ರಹ್ಮಲೋಕೇ ಸ ತಿಷ್ಠತಿ ।
ಸ ಕೋಟಿಯುಗಪರ್ಯಂತಂ ತತ್ರ ಸ್ಥಾಸ್ಯತಿ ಸರ್ವದಾ ॥೩೪೧॥

ತತಃ ಪರಂ ಚಕ್ರವರ್ತೀ ಸ ಭವಿಷ್ಯತಿ ಭೂಪತೇ ।
ತದಾ ಜಾತಿಸ್ಮೃತಿಸ್ತಸ್ಯ ಭವಿಷ್ಯತ್ಯೇವ ಸರ್ವದಾ ॥೩೪೨॥

ಜಾತಿಸ್ಮರಃ ಸ ದೇವೇಶಂ ಮಹಾದೇವಂ ಭಜಿಷ್ಯತಿ ।
ರಥೋತ್ಸವಾದಿಕಂ ಶಂಭೋಃ ಕಾರಯಿಷ್ಯತಿ ಸರ್ವದಾ ॥೩೪೩॥

---

ಪಾಪಗಳಿಂದಲೂ ಸಹ ಬಿಡುಗಡೆ ಹೊಂದುತ್ತಾನೆ. ಎಂದು ಚಿತ್ರಗುಪ್ತನು ಯಮನಿಗೆ ಹೇಳಲು ಅದನ್ನು ಕೇಳಿ, ಆಗ ಯಮನು ಉತ್ಸಾಹಭರಿತನಾಗಿ ಮುಗುಳುನಗೆ ನಗುತ್ತಾ ಅವನಿಗೆ ರತ್ನದ ಆಸನವನ್ನು ಕೊಟ್ಟು ಉಪಚರಿಸಿದನು. ॥೩೩೫-೩೩೬-೩೩೭॥

ಅನಂತರ ಅರ್ಘ್ಯಪಾದ್ಯಾದಿಗಳಿಂದ ಅವನನ್ನುಪಚರಿಸಿ, ಪುಷ್ಪಕ ವಿಮಾನದ ಮೇಲೆ ಕುಳ್ಳಿರಿಸಿ ಆದರದಿಂದ ಅವನನ್ನು ಸ್ವರ್ಗಲೋಕಕ್ಕೆ ಜಾಗ್ರತೆಯಾಗಿ ಕಳುಹಿಸಿ ಕೊಟ್ಟನು. ಆಗ ಇಂದ್ರನು ಹೀಗೆ ಪುಷ್ಪಕವಿಮಾನವನ್ನೇರಿ ಬರುತ್ತಿರುವ ಇವನನ್ನು ನೋಡಿ ಸಂತೋಷದಿಂದ, ಅವನನ್ನು ಮನೋಹರವಾದ ಆಸನದಲ್ಲಿ ಕೂರಿಸಿ, ಆದರಪೂರ್ವಕವಾಗಿ ಪೂಜಿಸಿ ಅನಂತರ, ಬ್ರಹ್ಮಲೋಕಕ್ಕೆ ಕಳುಹಿಸಿಕೊಟ್ಟನು. ಆಗ ಬ್ರಹ್ಮನೂ ಸಹ ತನ್ನ ಬಳಿಗೆ ವೈಭವದಿಂದ ಬಂದ ಇವನಿಗೆ ಆದರದಿಂದ ಪೂಜೆಮಾಡಿ ಗೌರವಿಸಿದನು. ॥೩೩೮-೩೩೯-೩೪೦॥

ಈತನು ಅಲ್ಲಿ ಬ್ರಹ್ಮನಿಂದ ನಿತ್ಯವೂ ಪೂಜಿಸಲ್ಪಡುತ್ತಾ ಕೋಟಿಯುಗಗಳು ಕಳೆಯುವವರೆಗೂ ಅಲ್ಲಿಯೇ ಇದ್ದು ಅನಂತರ ಚಕ್ರವರ್ತಿಯಾಗಿ ಭೂಮಿಯಲ್ಲಿ

ಮಹೇಶಪ್ರವಣೋ ನಿತ್ಯಂ ಶಿವಪೂಜಾಂ ಕರಿಷ್ಯತಿ ।
ತತಃ ಶಿವಾರ್ಚನೇನೈವ ಸಮುಕ್ತೋಽಪಿ ಭವಿಷ್ಯತಿ ॥೩೪೪॥

ಶಿವಾರ್ಚನಾತ್ಪರಂ ರಾಜನ್ನ ಮೋಕ್ಷಸ್ಯಾಸ್ತಿ ಕಾರಣಂ ।
ಸತ್ಯಮೇತತ್ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೪೫॥

ಸಂಸಾರಸಾಗರಂ ತರ್ತುಮುಪಾಯಃ ಶಿವಪೂಜನಂ ।
ಸಂಸಾರೋತ್ತಾರಣೋಪಾಯಸ್ತದನ್ಯೋ ನೈವ ದೃಶ್ಯತೇ ॥೩೪೬॥

ಭಸ್ಮರುದ್ರಾಕ್ಷಪೂತಾಂಗೋ ಯಃ ಶಿವಂ ಪೂಜಯಿಷ್ಯತಿ ।
ತಸ್ಯ ಸಂಸಾರದುಃಖಾನಿ ನ ಭವಂತ್ಯೇವ ಸರ್ವಥಾ ॥೩೪೭॥

ಸಂಸಾರಾಗಾಧಕೂಪೇಷು ತೇ ಪತಂತಿ ನರಾಧಿಪ ।
ಯೇನಾರ್ಚಯಂತಿ ಯತ್ನೇನ ಮಹಾದೇವಂ ಜಗತ್ಪ್ರಭುಂ ॥೩೪೮॥

---

ಹುಟ್ಟುತ್ತಾನೆ. ಅಯ್ಯ ರಾಜನೇ! ಆಗ ಇವನಿಗೆ ತನ್ನ ಹಿಂದಿನ ಜಾತಿಸ್ಮರಣೆ ಯುಂಟಾಗುವುದು. ಯಾವಾಗಲೂ ಮಹಿಮಾಶಾಲಿಯಾದ ಆ ಮಹಾದೇವನನ್ನು ಸೇವೆಮಾಡುತ್ತಾ ಆ ಶಂಭುವಿಗೆ ರಥೋತ್ಸವಾದಿಗಳನ್ನು ಯಾವಾಗಲೂ ಮಾಡಿಸುತ್ತಾ ಜೀವಿಸುತ್ತಾನೆ. ॥೩೪೧-೩೪೨-೩೪೩॥

ಆಗ ನಿತ್ಯವೂ ಮಹೇಶ್ವರನಲ್ಲಿಯೇ ಐಕ್ಯವಾಗಿ ಶಿವಪೂಜೆಮಾಡುತ್ತಾ ಕೊನೆಗೆ ಅದರಿಂದಲೇ ಮೋಕ್ಷ ಪಡೆಯುವನು. ಅಯ್ಯ ರಾಜನೇ! ಮೋಕ್ಷ ಪ್ರಾಪ್ತಿಗೆ ಈ ಶಿವಪೂಜೆಗಿಂತ ಉತ್ಕೃಷ್ಟವಾದ ಬೇರೊಂದು ಕಾರಣವಿಲ್ಲವೆಂದು ಸತ್ಯವಾಗಿ ಪುನಃಪುನಃ ತೋಳೆತ್ತಿ ಸಾರುವೆನು. ॥೩೪೪-೩೪೫॥

ಈ ಸಂಸಾರವೆಂಬ ಸಾಗರವನ್ನು ದಾಟಲು ಶಿವಪೂಜೆಯೆಂಬ ಉಪಾಯವನ್ನು ಬಿಟ್ಟರೆ ಬೇರೆ ಯಾವುದೂ ಕಾಣುವುದಿಲ್ಲ. ಭಸ್ಮ, ರುದ್ರಾಕ್ಷ, ಇವುಗಳ ಧಾರಣೆಯಿಂದ ಪರಿಶುದ್ಧವಾದ ಶರೀರವುಳ್ಳವನಾಗಿ ಶಿವನನ್ನು ಪೂಜೆಮಾಡುವವನಿಗೆ ಈ ಸಂಸಾರ ಸಂಬಂಧವಾದ ಯಾವ ದುಃಖಗಳೂ ಇರುವುದೇ ಇಲ್ಲ. ನಿಯಮದಿಂದ ಜಗದೊಡೆಯನಾದ ಮಹಾದೇವನನ್ನು ಪೂಜೆಮಾಡದೇ ಇರುವವರು ಮಾತ್ರ ಈ ಸಂಸಾರವೆಂಬ ಆಳವಾದ ಬಾವಿಗಳಲ್ಲಿ ಬಿದ್ದು ಸಾಯುವರೆಂದು ತಿಳಿ. ॥೩೪೬-೩೪೭-೩೪೮॥

ಅದೈನ್ಯೇನಾಪ್ರಯಾಸೇನ ಕೇವಲಂ ಶಿವಪೂಜಯಾ ।
ಮೋಕ್ಷಃ ಸಂಪ್ರಾಪ್ಯತೇ ಮರ್ತ್ಯೈಃ ಶಿವೈಕಪರದೇವತೈಃ ॥೩೪೯॥

ಶಿವಾರ್ಚನಸಮಂ ಪುಣ್ಯಂ ನ ದೃಷ್ಟಂ ನ ಶ್ರುತಂ ನೃಪ ।
ಯದರ್ಚನೇನ ಸುಲಭೋ ಮುಕ್ತಿಕಾಂತಾಕರಗ್ರಹಃ ॥೩೫೦॥

ಮುಕ್ತಿಕಾಂತಾ ವಶಂ ಯಾತಿ ವಶಂ ಯಾತಿ ಜಗತ್ತ್ರಯಂ ।
ವಶಂ ಪ್ರಯಾಂತಿ ದೇವಾಶ್ಚ ಶ್ರೀಮಹಾದೇವಪೂಜನಾತ್ ॥೩೫೧॥

ಸಹಸ್ರವಾಜಿಮೇಧಾನಾಂ ಸಾಂಗಾನಾಂ ಯತ್ಫಲಂ ನೃಪ ।
ತತೋಽನಂತಗುಣಂ ಪುಣ್ಯಂ ಲಭ್ಯತೇ ಶಿವಪೂಜಯಾ ॥೩೫೨॥

ಸಹಸ್ರರಾಜಸೂಯಾನಾಂ ಸಾಂಗಾನಾಂ ಯತ್ಫಲಂ ನೃಪ ।
ತತೋಽನಂತಗುಣಂ ಪುಣ್ಯಂ ಲಭ್ಯತೇ ಶಿವಪೂಜಯಾ ॥೩೫೩॥

ಸಹಸ್ರವಾಜಪೇಯಾನಾಂ ಸಾಂಗಾನಾಂ ಯತ್ಫಲಂ ನೃಪ ।
ತತೋಽನಂತಗುಣಂ ಪುಣ್ಯಂ ಲಭ್ಯತೇ ಶಿವಪೂಜಯಾ ॥೩೫೪॥

---

ಶಿವನೇ ಉತ್ಕೃಷ್ಟನಾದ ದೈವವೆಂದು ತಿಳಿದು ದೈನ್ಯ, ಆಯಾಸ ಇವುಗಳಿಲ್ಲದೇ ಆ ಪರಶಿವನನ್ನು ಪೂಜೆಮಾಡುವ ಮಾನವರಿಗೆ ಮುಕ್ತಿಯುಂಟಾಗುವುದು. ಅಯ್ಯ ರಾಜನೇ! ಶಿವಪೂಜೆಗೆ ಸದೃಶವಾದ ಪುಣ್ಯಕಾರ್ಯವನ್ನು ನಾನು ನೋಡಿಲ್ಲ. ಕೇಳಿಯೂ ಇಲ್ಲ. ಇದರಿಂದ ಮೋಕ್ಷಾಂಗನೆಯ ಪಾಣಿಗ್ರಹಣವು ಸುಲಭವಾಗಿ ದೊರೆಯುವುದು. (ಅಂದರೆ ಶಿವಪೂಜೆಮಾಡುವುದರಿಂದ ಆಯಾಸವಿಲ್ಲದೇ ಮೋಕ್ಷವುಂಟಾಗುವುದೆಂದು ಭಾವವು.) ॥೩೪೯-೩೫೦॥

ಮೋಕ್ಷಾಂಗನೆಯೂ, ಈ ಮೂರುಲೋಕಗಳೂ ಅಲ್ಲದೇ ಸಕಲ ದೇವತೆಗಳೂ ಸಹ ಆ ಮಹಾದೇವನನ್ನು ಪೂಜೆಮಾಡುವುದರಿಂದ ತಮ್ಮ ಅಧೀನರಾಗುವರು. ಅಯ್ಯ ರಾಜನೇ! ಅಂಗಸಹಿತವಾದ ಸಾವಿರ ಅಶ್ವಮೇಧ ಯಾಗ ಮತ್ತು ಸಾವಿರ ರಾಜಸೂಯಯಾಗಗಳಿಂದ ಬರುವ ಪುಣ್ಯಕ್ಕಿಂತಲೂ ಅತಿಶಯವಾದ ಪುಣ್ಯವು ಈ ಶಿವಪೂಜೆಯಿಂದ ಮಾನವರಿಗೆ ದೊರೆಯುವುದು. ॥೩೫೧-೩೫೨-೩೫೩॥

ಅಯ್ಯ ರಾಜನೇ! ಸಾವಿರ ವಾಜಪೇಯ, ಪೌಂಡರೀಕ, ದ್ವಾದಶಾಹ, ಮತ್ತು ಸತ್ರಗಳನ್ನು ಸಾಂಗವಾಗಿ ಮಾಡಿದುದಕ್ಕಿಂತಲೂ ಅಪರಿಮಿತವಾದ

ಸಹಸ್ರಪೌಂಡರೀಕಾಣಾಂ ಸಾಂಗಾನಾಂ ಯತ್ಫಲಂ ನೃಪ ।
ತತೋಽನಂತಗುಣಂ ಪುಣ್ಯಂ ಲಭ್ಯತೇ ಶಿವಪೂಜಯಾ ॥೩೫೫॥

ಸಹಸ್ರದ್ವಾದಶಾಹಾನಾಂ ಸಾಂಗಾನಾಂ ಯತ್ಫಲಂ ನೃಪ ।
ತತೋಽನಂತಗುಣಂ ಪುಣ್ಯಂ ಲಭ್ಯತೇ ಶಿವಪೂಜಯಾ ॥೩೫೬॥

ಸಹಸ್ರಸತ್ರಯಾಗಾನಾಂ ಸಾಂಗಾನಾಂ ಯತ್ಫಲಂ ನೃಪ ।
ತತೋಽನಂತಗುಣಂ ಪುಣ್ಯಂ ಲಭ್ಯತೇ ಶಿವಪೂಜಯಾ ॥೩೫೭॥

ಶ್ವೇತಾಶ್ವಾರ್ಬುದದಾನೇನ ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೫೮॥

ದ್ವಿರದಾರ್ಬುದದಾನೇನ ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೫೯॥

ಧೇನ್ವರ್ಬುದಪ್ರದಾನೇನ ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೬೦॥

ಸರ್ವಭೂಮಿಪ್ರದಾನೇನ ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೬೧॥

ಕೋಟಿರತ್ನತುಲಾದಾನೈರ್ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೬೨॥

ಕೋಟಿಹೇಮತುಲಾದಾನೈರ್ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೬೩॥

---

ಪುಣ್ಯವು ಈ ಶಿವಪೂಜೆಯಿಂದ ದೊರೆಯುವುದೆಂದು ತಿಳಿ. ॥೩೫೪-೩೫೫-೩೫೬-೩೫೭॥

ಅರ್ಬುದ ಸಂಖ್ಯೆಯಲ್ಲಿ ಬಿಳಿಯ ಕುದುರೆ, ಆನೆ ಮತ್ತು ಹಸು ಇವುಗಳನ್ನು ದಾನಮಾಡುವುದರಿಂದ ಬರುವ ಪುಣ್ಯಕ್ಕಿಂತಲೂ ಅಪಾರವಾದ ಸುಕೃತ ಫಲವು ಕೇವಲ ಶಿವಪೂಜೆಮಾಡುವುದರಿಂದ ಬರುವುದು. ॥೩೫೮-೩೫೯-೩೬೦॥

ಈ ಸಕಲ ಭೂದಾನ, ಕೋಟಿರತ್ನಗಳ ತುಲಾದಾನ, ಕೋಟಿಚಿನ್ನದ

ತಿಲಪರ್ವತದಾನಾನಾಮರ್ಬುದಾನಾಂ ಚ ಯತ್ಫಲಂ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೬೪॥

ಕೋಟಿಕನ್ಯಾಪ್ರದಾನೇನ ಯತ್ಫಲಂ ಸಮವಾಪ್ಯತೇ ।
ತತೋಽನಂತಗುಣಂ ಪುಣ್ಯಂ ಪ್ರಾಪ್ಯತೇ ಶಿವಪೂಜಯಾ ॥೩೬೫॥

ರಾಜನ್ಯಾವತ್ಫಲಂ ಪ್ರಾಪ್ಯಂ ಶ್ರೀಮಹಾದೇವಪೂಜಯಾ ।
ತಾವತ್ಫಲಂ ಕಥಂ ಪ್ರಾಪ್ಯಂ ತದನ್ಯೈರ್ಧರ್ಮಕೋಟಿಭಿಃ ॥೩೬೬॥

ಶಿವಾರ್ಚನೇನ ಯಲ್ಲಭ್ಯಂ ಧರ್ಮಾರ್ಥಾದಿಫಲಂ ನೃಪ ।
ತತ್ಫಲಂ ಶಿವಪೂಜಾನ್ಯಧರ್ಮೈರಪ್ರಾಪ್ಯಮೇವ ಹಿ ॥೩೬೭॥

ಕೃತಾಯಾಂ ಶಿವಪೂಜಾಯಾಂ ಧರ್ಮಾಃ ಸರ್ವೇಽಪಿ ಸತ್ಕೃತಾಃ ।
ತತಸ್ತದೃಶಂ ಪುಣ್ಯಂ ನಾಸ್ತಿ ನ ಶ್ರೂಯತೇ ಧ್ರುವಂ ॥೩೬೮॥

ಶಿವಾರ್ಚನೇನ ನಶ್ಯಂತಿ ಮಹಾಪಾತಕಪರ್ವತಾಃ ।
ತತಸ್ತತ್ಸದೃಶಂ ಪುಣ್ಯಂ ಕಿಂ ವಾ ವೇದೇ ಭವಿಷ್ಯತಿ ॥೩೬೯॥

---

ತುಲಾದಾನ ಇವುಗಳನ್ನು ಮಾಡುವುದರಿಂದ ದೊರೆಯುವ ಪುಣ್ಯಕ್ಕಿಂತಲೂ ಹೆಚ್ಚಿನ ಪುಣ್ಯವು ಶಿವಪೂಜೆಯಿಂದ ಉಂಟಾಗುವುದು. ॥೩೬೧-೩೬೨-೩೬೩॥

ಅರ್ಬುದಸಂಖ್ಯೆಯಲ್ಲಿ ಎಳ್ಳಿನ ಬೆಟ್ಟಗಳನ್ನೂ (ಬೆಟ್ಟದಷ್ಟು ಪ್ರಮಾಣವುಳ್ಳ ಎಳ್ಳನ್ನೂ) ಮತ್ತು ಕೋಟಿ ಕನ್ಯೆಯರನ್ನೂ ದಾನಮಾಡುವುದರಿಂದುಂಟಾಗುವ ಪುಣ್ಯಕ್ಕಿಂತ ಹೆಚ್ಚಿನ ಪುಣ್ಯವು ಶಿವಪೂಜೆಯಿಂದುಂಟಾಗುವುದು. ॥೩೬೪-೩೬೫॥

ರಾಜನೇ, ಆ ಸಂಪದ್ಭರಿತನಾದ ಮಹಾದೇವನ ಪೂಜೆಯಿಂದ ಪಡೆಯಬಹುದಾದ ಫಲವು ಇತರ ಧರ್ಮಗಳ ಸಮೂಹಗಳಿಂದಲೂ ಹೇಗೆತಾನೇ ಹೊಂದಲಾದೀತು? ರಾಜೇಂದ್ರನೇ, ಶಿವಪೂಜೆಯಿಂದ ಹೊಂದಲು ಸಾಧ್ಯವಾದ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಫಲಗಳು ಮತ್ತಾವುದರಿಂದಲೂ ಬರಲಾರವು. ಶಿವಪೂಜೆಯನ್ನು ಮಾಡಿದಮೇಲೆ ಎಲ್ಲಾ ಧರ್ಮಗಳನ್ನೂ ಆಚರಿಸಿದಂತೆಯೇ ಆಗುವುವು. ಆದ್ದರಿಂದ ಆದಕ್ಕೆ ಸಮಾನವಾದ ಪುಣ್ಯವು ನಿಶ್ಚಯವಾಗಿ ಇಲ್ಲವೆಂದು ಕೇಳಲ್ಪಡುತ್ತದೆ. ॥೩೬೬-೩೬೭-೩೬೮॥

ಮಹಾಪಾಪಗಳೆಂಬ ದೊಡ್ಡ ಪರ್ವತಗಳೂ ಈ ಶಿವಪೂಜೆಯಿಂದ ನಾಶವಾಗುವುವು. ಆದ್ದರಿಂದ ಆ ಶಿವಪೂಜೆಗೆ ಸಮಾನವಾದ ಪುಣ್ಯವು ವೇದದಲ್ಲಿ ಏನು

ಶಿವಾರ್ಚನಾನ್ಯಾನ್ವಿವಿಧಾನ್ ಧರ್ಮಾನ್ ಕೃತ್ವಾಪಿ ಕೋಟಿಶಃ ।
ನ ಮುಕ್ತಿಂ ಲಭತೇ ಮರ್ತ್ಯೋ ವಿನಾ ಶಂಕರಪೂಜಯಾ ॥೩೭೦॥

ಶಿವಾರ್ಚನಂ ಪರಂ ಪುಣ್ಯಂ ಶ್ರೌತಂ ಸ್ವರ್ಗಾಪವರ್ಗದಂ ।
ಅತಸ್ತತ್ಸದೃಶಂ ಪುಣ್ಯಂ ನ ಶ್ರುತಂ ಶ್ರುತಿಷು ಧ್ರುವಂ ॥೩೭೧॥

ಮುಕ್ತಿಃ ಶಿವಾರ್ಚನೇನೇತಿ ಶ್ರುತಿಡಿಂಡೀರವಃ ಶ್ರುತಃ ।
ಸ ತು ಡಿಂಡೀರವೋಽಸ್ಮಾಕಂ ಮುಕ್ತಿಕಲ್ಯಾಣಕಾರಣಂ ॥೩೭೨॥

ತತಃ ಕುರು ಪ್ರಯತ್ನೇನ ಮಹಾದೇವಾರ್ಚನಂ ನೃಪ ।
ಭಸ್ಮರುದ್ರಾಕ್ಷಪೂತಾಂಗೋ ಬಿಲ್ವಪತ್ರಾದಿಸಾಧನೈಃ ॥೩೭೩॥

ಉದ್ಧೂಳನಂ ತ್ರಿಪುಂಡ್ರಂಚ ಮನಸಾಪಿ ನ ಲಂಘಯ ।
ಉದ್ಧೂಳನ ತ್ರಿಪುಂಡ್ರಾಭ್ಯಾಂ ವಿನಾ ನಾರ್ಚಯ ಶಂಕರಂ ॥೩೭೪॥

ಜಾಬಾಲೋಕ್ತೇನ ಮಾರ್ಗೇಣ ಕುರು ರುದ್ರಾಕ್ಷಧಾರಣಂ ।
ಜಾಬಾಲೋಕ್ತೇನ ಮಾರ್ಗೇಣ ಭಸ್ಮನೋಽಪಿ ಚ ಧಾರಣಂ ॥೩೭೫॥

---

ತಾನೇ ಇದ್ದೀತು? ಇತರ ಕೋಟ್ಯಂತರ ನಾನಾಧರ್ಮಗಳನ್ನೇ ಮಾಡಿದರೂ ಮಾನವನು ಶಿವಪೂಜೆ ಮಾಡದೇ ಮುಕ್ತಿಹೊಂದಲಾರನು. ಸ್ವರ್ಗ ಮತ್ತು ಮೋಕ್ಷರೂಪವಾದ ಪುಣ್ಯಫಲಗಳನ್ನು ಕೊಡುವ ಈ ಶಿವಪೂಜೆಯೆಂಬುದು ಶ್ರುತಿ ಪ್ರಸಿದ್ಧವಾದ ಉತ್ಕೃಷ್ಟ ಪುಣ್ಯಕಾರ್ಯವೆಂದು ಪ್ರಖ್ಯಾತವಾಗಿರುವುದರಿಂದ ವೇದಗಳಲ್ಲಿ ಇದಕ್ಕೆಸಮಾನವಾದ ಪುಣ್ಯವನ್ನು ಬೇರೆ ಯಾವುದಕ್ಕೂ ಹೇಳಿಲ್ಲ.॥೩೬೯-೩೭೦-೩೭೧॥

ಶಿವಪೂಜೆಯಿಂದ ಮುಕ್ತಿಯೆಂದು ಶ್ರುತಿಯೆಂಬ ಡಿಂಡೀರವ (ವಾದ್ಯವಿಶೇಷ)ವು ಸಾರುತ್ತಿದೆ. ಆ ಧ್ವನಿವಿಶೇಷವಾದರೋ ನಮಗೆ ಮೋಕ್ಷವೆಂಬ ಮಂಗಳವನ್ನುಂಟುಮಾಡುವುದು. ಆದ್ದರಿಂದ ಎಲೈ ರಾಜನೇ, ವಿಶೇಷ ನಿಯಮದಿಂದ ಭಸ್ಮ ರುದ್ರಾಕ್ಷ ಇವುಗಳನ್ನು ಧಾರಣೆಮಾಡಿ ಬಿಲ್ವಪತ್ರೆ ಮುಂತಾದ ಸಲಕರಣೆಗಳಿಂದ ಆ ಮಹಾದೇವನನ್ನು ಪೂಜೆಮಾಡು. ಭಸ್ಮಲೇಪನ ಮತ್ತು ಭಸ್ಮತ್ರಿಪುಂಡ್ರಧಾರಣ ಇವುಗಳನ್ನು ಮನಸ್ಸಿನಲ್ಲಿಯೂ ಮೀರಬೇಡ. ಇವುಗಳನ್ನಲಂಕರಿಸದೇ ಆ ಶಂಕರನನ್ನು ಪೂಜೆ ಮಾಡಲೇಬೇಡ. ॥೩೭೨-೩೭೩-೩೭೪॥

ಜಾಬಾಲಮುನಿಯು ಹೇಳಿರುವ ರೀತಿಯನ್ನನುಸರಿಸಿ ರುದ್ರಾಕ್ಷಗಳನ್ನೂ,

ನಿತ್ಯಂ ಕಾರ್ಯಂ ಪ್ರಯತ್ನೇನ ಭೂತಿರುದ್ರಾಕ್ಷಧಾರಣಂ ।
ತಾಭ್ಯಾಂ ನ ಪ್ರಮದೋ ಭೂಯಾದಿತಿಜಾಬಾಲವಾದಿನಃ ॥೩೭೬॥

ಸರ್ವಮಂತ್ರೋತ್ತಮೋ ಮಂತ್ರಃ ಶಿವಮಂತ್ರಃ ಶ್ರುತಿಶ್ರುತಃ ।
ತತಸ್ತಮತಿಯತ್ನೇನ ಜಪ ರುದ್ರಾಕ್ಷಮಾಲಯಾ ॥೩೭೭॥

ರುದ್ರಾಕ್ಷಮಾಲಯಾ ಜಪ್ತಃ ಶಿವಮಂತ್ರಃ ಷಡಕ್ಷರಃ ।
ಮೋಕ್ಷಪ್ರದೋ ಭವತ್ಯೇವ ಸತ್ಯಮೇವೋಚ್ಯತೇ ಮಯಾ ॥೩೭೮॥

ಜಪೇ ಯಾವತ್ಫಲಂ ಪ್ರಾಪ್ಯಂ ವಿದ್ರುಮೋತ್ತಮಮಾಲಯಾ ।
ತತಃ ಸಹಸ್ರಗುಣಿತಂ ಮೌಕ್ತಿಕೋತ್ತಮಮಾಲಯಾ ॥೩೭೯॥

ಜಪೇ ಯಾವತ್ಫಲಂ ಪ್ರಾಪ್ಯಂ ಮೌಕ್ತಿಕೋತ್ತಮಮಾಲಯಾ ।
ತತಃ ಸಹಸ್ರಗುಣಿತಂ ಫಲಂ ಸ್ಫಟಿಕಮಾಲಯಾ ॥೩೮೦॥

ಜಪೇ ಯಾವತ್ಫಲಂ ಪ್ರಾಪ್ಯಂ ಮುಕ್ತಾಸ್ಫಟಿಕವಿದ್ರುಮೈಃ ।
ತತೋಽನಂತಗುಣಂ ಪುಣ್ಯಂ ಶುದ್ಧರುದ್ರಾಕ್ಷಮಾಲಯಾ ॥೩೮೧॥

---

ವಿಭೂತಿಯನ್ನೂ ಧರಿಸು. ನಿತ್ಯವೂ ನಿಯಮಪೂರ್ವಕವಾಗಿ ವಿಭೂತಿಯನ್ನೂ, ರುದ್ರಾಕ್ಷಗಳನ್ನೂ ಧಾರಣೆಮಾಡು. ಇವೆರಡು ವಿಷಯದಲ್ಲಿ ಯಾವಾಗಲೂ ಪ್ರಮಾದ ಹೊಂದಬೇಡವೆಂದು ಜಾಬಾಲಮುನಿಯನ್ನನುಸರಿಸಿರುವ ಇತರ ಮುನಿಗಳೂ ಸಾರುತ್ತಿರುವರು. ॥೩೭೫-೩೭೬॥

ಶಿವಮಂತ್ರವು ಎಲ್ಲಾ ಮಂತ್ರಗಳಿಗಿಂತಲೂ ಉತ್ತಮವಾದುದೆಂದು ವೇದಗಳಲ್ಲಿ ಹೇಳಿರುವುದರಿಂದ ಆ ಶಿವಪಂಚಾಕ್ಷರಿಜಪವನ್ನು ರುದ್ರಾಕ್ಷಮಾಲೆಯ ಸಹಾಯದಿಂದ ನೀನು ಜಪಮಾಡು. ರುದ್ರಾಕ್ಷಮಾಲೆಯನ್ನು ಧರಿಸಿ ಜಪಮಾಡಿದ ಆ ಆರಕ್ಷರದ ಶಿವಮಂತ್ರವು ('ಓಂ ನಮಃ ಶಿವಾಯ') ಅವಶ್ಯವಾಗಿ ಮೋಕ್ಷವನ್ನುಂಟುಮಾಡುತ್ತದೆಂದು ಸತ್ಯವಾಗಿ ನಾನು ಹೇಳುವೆನು. ಉತ್ತಮವಾದ ಹವಳದ ಮಾಲೆಗಿಂತಲೂ ಉತ್ತಮವಾದ ಮುತ್ತಿನ ಜಪಮಾಲೆಯನ್ನು ಧರಿಸಿ ಜಪಮಾಡುವುದರಿಂದ ಸಾವಿರಪಾಲು ಫಲವು ಹೆಚ್ಚಾಗುವುದು. ॥೩೭೭. ೩೭೮-೩೭೯॥

ಉತ್ತಮವಾದ ಮುತ್ತಿನ ಹಾರಕ್ಕಿಂತಲೂ ಸ್ಫಟಿಕದ ಜಪಸರವನ್ನು ಧರಿಸಿ ಜಪಮಾಡುವುದರಿಂದ ಇನ್ನೂ ಸಾವಿರಪಾಲು ಹೆಚ್ಚು ಫಲವುಂಟಾಗುವುದು. ಈ

ಶಿವಮಂತ್ರೋ ಬಿಲ್ವಮೂಲೇ ಜಪ್ತೋ ರುದ್ರಾಕ್ಷಮಾಲಯಾ ।
ಅಭೀಪ್ಸಿತಾರ್ಥಫಲದೋ ಭವತ್ಯೇವ ನ ಸಂಶಯಃ ॥೩೮೨॥

ಶಿವಮಂತ್ರೋ ವೇದಮಂತ್ರೋ ವೇದಾಂತೈಃ ಸಂಸ್ತುತೋ ಮುಹುಃ ।
ಅತೋ ಮಂತ್ರೋಽಯಮಮಲೋ ಜಪನೀಯಃ ಪ್ರಯತ್ನತಃ ॥೩೮೩॥

ಶಿವಮಂತ್ರಸಮೋ ಮಂತ್ರೋ ನಾಸ್ತಿ ನ ಶ್ರೂಯತೇ ಶ್ರುತೌ ।
ಅತೋಽಯಂ ವೈದಿಕೋ ಮಂತ್ರೋ ಜಪನೀಯೋ ಮುಮುಕ್ಷುಭಿಃ ॥೩೮೪॥

ನಾಭಿದಘ್ನೇ ಜಲೇ ಸ್ಥಿತ್ವಾ ಶಿವಮಂತ್ರಮನುತ್ತಮಂ ।
ಯೋ ಜಪೇದ್ಭಸ್ಮಪೂತಾಂಗಃ ಸ ಮುಕ್ತೋ ಭವತಿ ಧ್ರುವಂ ॥೩೮೫॥

ಉಪದೇಶೋಽಸ್ತು ವಾ ಮಾಸ್ತು ಶಿವಮಂತ್ರಸ್ಯ ವಸ್ತುತಃ ।
ತಥಾಪಿ ಜಪನೀಯೋಽಯಂ ಮಂತ್ರಃ ಶೈವಃ ಷಡಕ್ಷರಃ ॥೩೮೬॥

---

ಮುತ್ತು, ಸ್ಫಟಿಕ ಮತ್ತು ಹವಳ ಈ ಜಪಮಾಲೆಗಳಿಂದ ಬರುವ ಪುಣ್ಯಕ್ಕಿಂತ ಶುದ್ಧವಾದ ರುದ್ರಾಕ್ಷಮಾಲೆಗಳನ್ನು ಧರಿಸಿ ಜಪಮಾಡುವುದರಿಂದ ಅಪಾರವಾದ ಪುಣ್ಯವು ಲಭಿಸುವುದು. ॥೩೮೦-೩೮೧॥

ಬಿಲ್ವಮರದ ಬುಡದಲ್ಲಿ ರುದ್ರಾಕ್ಷಮಾಲೆಯನ್ನು ಧರಿಸಿ ಶಿವಮಂತ್ರ ಜಪ ಮಾಡಿದರೆ ಪರಶಿವನು ಇಷ್ಟಾರ್ಥಗಳನ್ನು ಕೊಡುವುದರಲ್ಲಿ ಸಂದೇಹವೇ ಇಲ್ಲ. ವೇದಮಂತ್ರವಾಗಿರುವ ಈ ಶಿವಮಂತ್ರವು ಪದೇಪದೇ ವೇದಾಂತಗಳಿಂದ ಸ್ತೋತ್ರ ಮಾಡಲ್ಪಟ್ಟಿರುವುದು. ಆದ್ದರಿಂದಲೇ ಪರಿಶುದ್ಧವಾದ ಈ ಮಂತ್ರವನ್ನು ನಿಯಮ ದಿಂದ ಜಪಮಾಡಬೇಕು. ಶಿವಮಂತ್ರಕ್ಕೆ ಸಮಾನವಾದ ಮಂತ್ರವೇ ಇಲ್ಲ. ವೇದ ಗಳಲ್ಲಿಯೂ ನಾವು ಕೇಳಿಲ್ಲ. ಆದ್ದರಿಂದ ವೇದಪ್ರತಿಪಾದ್ಯವಾದ ಈ ಮಂತ್ರವನ್ನು ಮೋಕ್ಷಾಪೇಕ್ಷೆಯುಳ್ಳವರು ಅವಶ್ಯವಾಗಿ ಜಪಮಾಡಬೇಕು. ॥೩೮೨-೩೮೩-೩೮೪॥

ಸೊಂಟದುದ್ದ ನೀರಿನಲ್ಲಿ ನಿಂತು ಅತ್ಯುತ್ತಮವಾದ ಈ ಶಿವಮಂತ್ರವನ್ನು ಭಸ್ಮಧಾರಣೆ ಮಾಡಿಕೊಂಡು ಪಾವನನಾಗಿರುವ ಮಾನವನು ಜಪಮಾಡಿದರೆ ಮೋಕ್ಷವನ್ನು ನಿಶ್ಚಯವಾಗಿಯೂ ಹೊಂದುವನು. ಉಪದೇಶವಾಗಿರಲಿ ಅಥವ ಇಲ್ಲ ದಿರಲಿ ಈ ಆರಕ್ಷರವುಳ್ಳ ಶಿವಮಂತ್ರವನ್ನು ಜಪಮಾಡಲೇಬೇಕು. ॥೩೮೫-೩೮೬॥

ಹತ್ಯಾಂ ಯತ್ನೇನ ಕೃತ್ವಾಪಿ ಬ್ರಾಹ್ಮಣಸ್ಯ ನರಾಧಿಪ ।
ಶಿವ ಇತ್ಯಕ್ಷರದ್ವಂದ್ವಮುಚ್ಚಾರ್ಯಾಘಾದ್ವಿಮುಚ್ಯತೇ ॥೩೮೭॥

ಅನಂತಬ್ರಹ್ಮಹತ್ಯಾದಿ ಪಾತಕಾನಿ ಮುಹುರ್ಮುಹುಃ ।
ಕೃತ್ವಾಪಿ ಮುಚ್ಯತೇ ರಾಜನ್ ಶಿವಮಂತ್ರಜಪಾದ್ಧ್ರುವಂ ॥೩೮೮॥

ಮದ್ಯಂ ಪೀತ್ವಾಪಿ ಮಾಂಸಾನಿ ಭುಕ್ತ್ವಾಪಿ ನೃಪಸತ್ತಮ ।
ಮುಚ್ಯತೇ ನಾತ್ರ ಸಂದೇಹಃ ಶಿವಮಂತ್ರಜಪಾದ್ಧ್ರುವಂ ॥೩೮೯॥

ಶಿವಮಂತ್ರಾನಲೋ ರಾಜನ್ಪಾಪಾರಣ್ಯವಿನಾಶಕಃ ।
ಅತ ಏವ ಪ್ರಯತ್ನೇನ ಜಪ್ಯಃ ಶೈವಃ ಷಡಕ್ಷರಃ ॥೩೯೦॥

ರುದ್ರಾಕ್ಷಧಾರಣಂ ಕೃತ್ವಾ ಭಸ್ಮನೋದ್ಧೂಳನಂ ತಥಾ ।
ತ್ರಿಪುಂಡ್ರಧಾರಣಂ ಕೃತ್ವಾ ಜಪ್ಯಃ ಶೈವಃ ಷಡಕ್ಷರಃ ॥೩೯೧॥

---

ಅಯ್ಯ ರಾಜನೇ, ಬ್ರಾಹ್ಮಣನನ್ನೇ ಬೇಕಾಗಿ ಕೊಲೆಮಾಡಿದ್ದರೂ ಶಿವ ಎಂಬೆರಡಕ್ಷರವನ್ನು ಉಚ್ಚಾರವಮಾಡಿದ ಮಾತ್ರದಿಂದಲೇ ಆ ಬ್ರಹ್ಮಹತ್ಯಾದೋಷ ದಿಂದ ಆತನು ಬಿಡುಗಡೆ ಹೊಂದುವನು. ರಾಜೇಂದ್ರನೇ, ಮಿತಿಯಿಲ್ಲದ ಬ್ರಹ್ಮಹತ್ಯ, ಸುರಾಪಾನ ಮುಂತಾದ ಮಹಾಪಾತಕಗಳನ್ನು ಮಾಡಿದ್ದರೂ ಶಿವಮಂತ್ರವನ್ನು ಜಪಮಾಡುವುದರಿಂದ ಮಾನವನು ಬಿಡುಗಡೆ ಹೊಂದುವನು. ಹೆಂಡವನ್ನು ಕುಡಿದು ಮಾಂಸವನ್ನು ತಿಂದಿದ್ದರೂ ಈ ಶಿವಮಂತ್ರಜಪ ಮಹಿಮೆಯಿಂದ ಮಾನವನು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುವನೆಂಬುದರಲ್ಲಿ ಸಂದೇಹ ವಿಲ್ಲ. ॥೩೮೭-೩೮೮-೩೮೯॥

ರಾಜನೇ, ಶಿವಮಂತ್ರವೆಂಬ ಬೆಂಕಿಯು ಪಾಪಗಳೆಂಬ ಕಾಡನ್ನು ನಾಶ ಮಾಡಿಬಿಡುವುದು. ಆದ್ದರಿಂದ ಈ ಶಿವಮಂತ್ರವನ್ನು (ಆರಕ್ಷರವುಳ್ಳ) ನಿಯಮ ದಿಂದ ಜಪ ಮಾಡಬೇಕು. ರುದ್ರಾಕ್ಷಧಾರಣೆ ಮತ್ತು ಭಸ್ಮಲೇಪನ, ತ್ರಿಪುಂಡ್ರ ಧಾರಣೆಗಳನ್ನು ಮಾಡಿಕೊಂಡು ಈ ಆರಕ್ಷರದ ಶಿವಮಂತ್ರವನ್ನು ಜಪಮಾಡಬೇಕು. ॥೩೯೦-೩೯೧॥

ರುದ್ರಾಕ್ಷಧಾರಣೇ ಯೋಗ್ಯಃ ಶೈವ ಏವ ನೃಪೋತ್ತಮ ।
ರುದ್ರಾಕ್ಷಧಾರಣಂ ಶ್ರೌತಂ ಯತೋ ವೈದಿಕಸಂಮತಂ ॥೩೯೨॥

ಉಪನೀತೈರೇವ ಕಾರ್ಯಂ ವೇದಸ್ವಾಧ್ಯಯನಂ ಯಥಾ ।
ತಥೈವ ಶಾಂಕರೈರೇವ ಕಾರ್ಯಂ ರುದ್ರಾಕ್ಷಧಾರಣಂ ॥೩೯೩॥

ಚಂಡಾಲಸ್ಯ ಯಥಾ ಯಾಗೇ ನಾಧಿಕಾರಸ್ತಥಾ ನೃಪ ।
ಅಶಾಂಕರಸ್ಯಾಧಿಕಾರೋ ನಾಸ್ತಿ ರುದ್ರಾಕ್ಷಧಾರಣೇ ॥೩೯೪॥

ಕೃತೇ ಯಾಗೇಽಪಿ ಚಂಡಾಲೋ ಯಥಾ ಪ್ರಾಪ್ನೋತಿ ದುರ್ಗತಿಂ ।
ತಥಾ ಧೃತ್ವಾಪಿ ರುದ್ರಾಕ್ಷಾನಶೈವೋ ಯಾತಿ ದುರ್ಗತಿಂ ॥೩೯೫॥

ಚಂಡಾಲೋಽಧೀತವೇದೋಽಪಿ ಯಥಾ ಪ್ರಾಪ್ನೋತಿ ದುರ್ಗತಿಂ ।
ತಥಾ ಧೃತ್ವಾಪಿ ರುದ್ರಾಕ್ಷಾನಶೈವೋ ಯಾತಿ ದುರ್ಗತಿಂ ॥೩೯೬॥

ಬ್ರಾಹ್ಮಣ್ಯಮಪಿ ಸಂಪ್ರಾಪ್ಯ ಯೋ ನ ಶೈವೋ ಭವಿಷ್ಯತಿ ।
ಸ ಪುನಃ ಪುನರಾಪ್ನೋತಿ ಚಾಂಡಾಲೀಂ ಯೋನಿಮುನ್ಮಲಾಂ ॥೩೯೭॥

---

ರಾಜಶ್ರೇಷ್ಠನೇ! ರುದ್ರಾಕ್ಷಗಳನ್ನು ಧರಿಸಲು ಅದು ವೈದಿಕವೂ ಶ್ರುತಿ ಸಂಮತವೂ ಆಗಿರುವುದರಿಂದ ಈಶ್ವರಭಕ್ತನೇ ಯೋಗ್ಯನು. ವೇದಾಧ್ಯಯನವು ಉಪನಯನವಾದವರಿಗೆ ಹೇಗೆ ಆವಶ್ಯಕವೋ ಹಾಗೆ ಶಾಂಕರರು ರುದ್ರಾಕ್ಷಗಳನ್ನು ಧರಿಸಲೇಬೇಕು. (ಅಥವ ಉಪನಯನವಾದವರೇ ವೇದಾಧ್ಯಯನಮಾಡಲು ಯೋಗ್ಯರಾಗಿರುವಂತೆ ಶಂಕರಭಕ್ತರೇ ರುದ್ರಾಕ್ಷಗಳನ್ನು ಧಾರಣೆಮಾಡಬೇಕು.) ರಾಜನೇ! ಯಾಗದಲ್ಲಿ ಅಧಿಕಾರವಿಲ್ಲದಿರುವ ಚಂಡಾಲನಂತೆ, ಈರುದ್ರಾಕ್ಷಗಳನ್ನು ಧರಿಸುವುದರಲ್ಲಿ ಶಂಕರಭಕ್ತನಲ್ಲದವನಿಗೆ ಎಂದಿಗೂ ಅಧಿಕಾರವಿಲ್ಲ ॥೩೯೨-೩೯೩-೩೯೪॥

ಯಾಗವನ್ನು ಮಾಡಿಯೂ ಚಂಡಾಲನು ಹೀನಗತಿಯನ್ನು ಹೊಂದುವಂತೆ ರುದ್ರಾಕ್ಷಮಾಲೆಗಳನ್ನು ಧರಿಸಿದ ಶೈವನಲ್ಲದವನು ದುರ್ಗತಿ ಹೊಂದುವನು. ಚಂಡಾಲನು ವೇದಾಧ್ಯಯನ ಮಾಡಿದರೂ ಹೀನಾವಸ್ಥೆಯನ್ನೇ ಹೊಂದುವಂತೆ ರುದ್ರಾಕ್ಷಮಾಲೆಗಳನ್ನಲಂಕರಿಸಿಕೊಂಡ ಶಿವಭಕ್ತಿರಹಿತರು ಹೀನಗತಿಯನ್ನೇ ಪಡೆಯುವರು. ಬ್ರಾಹ್ಮಣಜನ್ಮತಾಳಿದ್ದರೂ ಶಿವಭಕ್ತಿಯುತನಾಗದಿದ್ದರೆ ಅವನು ಪದೇ

ಶಾಂಕರಾ ನ ಭವಿಷ್ಯಂತಿ ಯದ್ಯೇವಂ ಕ್ಷತ್ರಿಯಾದಯಃ ।
ತೇಽಪಿ ಸಂಪ್ರಾಪ್ನುವಂತ್ಯೇವ ಚಂಡಾಲೀ ಯೋನಿಮುನ್ಮಲಾಂ॥೩೯೮॥

ಮೋಕ್ಷೋ ನ ಶಾಂಕರಾನ್ಯಸ್ಯ ಕಲ್ಪಾಂತೇಽಪಿ ನರೋತ್ತಮ ।
ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ॥೩೯೯॥

ಸರ್ವದೇವೋತ್ತಮತ್ವೇನ ವಿಜ್ಞಾಯ ಶಿವಮವ್ಯಯಂ ।
ಪೂಜಯಂತಿ ಶಿವಂ ನಿತ್ಯಂ ಯೇ ತೇ ಶೈವಾ ಇತಿ ಸ್ಮೃತಾಃ ॥೪೦೦॥

ಅನನ್ಯದೇವತಾ ನಿತ್ಯಂ ಶಿವೈಕಪರದೇವತಾಃ ।
ಪೂಜಯಂತಿ ಶಿವಂ ನಿತ್ಯಂ ಯೇ ತೇ ಶೈವಾ ಇತಿ ಸ್ಮೃತಾಃ ॥೪೦೧॥

ಕೃತ್ವಾ ಫಾಲಾದಿದೇಶೇಷು ಕೇವಲಂ ಭಸ್ಮಧಾರಣಂ ।
ಪೂಜಯಂತಿ ಶಿವಂ ನಿತ್ಯಂ ಯೇ ತೇ ಶೈವಾ ಇತಿ ಸ್ಮೃತಾಃ ॥೪೦೨॥

---

ಪದೇ ಕೊಳಕಿನಿಂದ ಕೂಡಿದ ಚಂಡಾಲಜನ್ಮದಲ್ಲಿಯೇ ಹುಟ್ಟುತ್ತಾನೆ. ಇದು ನಿಜ. ॥೩೯೫-೩೯೬-೩೯೭॥

ಕ್ಷತ್ರಿಯ, ವೈಶ್ಯ, ಮತ್ತು ಶೂದ್ರ ಈ ವರ್ಗದವರೂ ಕೂಡ ಹೀಗೆ ಶಂಕರ ಭಕ್ತರಾಗದೇ ಹೋದರೆ ಅವರೂ ಮಲದೂಷಿತವಾದ ಚಂಡಾಲಯೋನಿಯಲ್ಲಿಯೇ ಹುಟ್ಟುತ್ತಾರೆ. ಅಯ್ಯ ರಾಜನೇ ! ಕಲ್ಪದ ಕೊನೆಯಲ್ಲಾದರೂ ಪರಶಿವಭಕ್ತನಿಗೇ ಮೋಕ್ಷಪ್ರಾಪ್ತಿಯೆಂದು ತಿಳಿ. ಈ ವಿಷಯವು ಸತ್ಯವಾದದ್ದೆಂದು ತೋಳೆತ್ತಿ ನಾನು ಸಾರಿ ಹೇಳುವೆನು. ನಾಶರಹಿತನಾದ ಆ ಪರಶಿವನನ್ನು ಸಕಲ ದೇವತೆಗಳಲ್ಲಿಯೂ ಉತ್ತಮನೆಂದು ತಿಳಿದು ಯಾವಾಗಲೂ ಪೂಜೆಮಾಡುವವರೇ ನಿಜವಾದ ಶೈವರೆನಿಸುತ್ತಾರೆ. ॥೩೯೮-೩೯೯-೪೦೦॥

ಮತ್ತಾವ ದೇವತೆಗಳನ್ನೂ ಭಜಿಸದೇ ನಿತ್ಯವೂ ಆ ಶಿವನೊಬ್ಬನನ್ನೇ ಉತ್ತಮದೈವವೆಂದು ತಿಳಿದು ಪೂಜೆಮಾಡುವವರೂ, ಹಣೆ ಮುಂತಾದ ಪ್ರದೇಶಗಳಲ್ಲಿ ಭಸ್ಮವನ್ನು ಅಲಂಕರಿಸಿಕೊಂಡು ಆ ಮಹಾದೇವನನ್ನು ನಿತ್ಯವೂ ನಿಯಮದಿಂದ ಧ್ಯಾನಮಾಡುವವರೂ ಶೈವರೆಂದು ಹೇಳಲ್ಪಡುವರು. ॥೪೦೧-೪೦೨॥

ರಾಜನ್ ಕೇವಲಭಸ್ಮಾಂಗಾಃ ಶಿವೈಕಪರದೇವತಾಃ ।
ಶೈವಾ ಇತಿ ಸ್ಮೃತಾಸ್ತೇತು ಶಿವಪಾರಿಷದಾಃ ಸ್ಮೃತಾಃ ॥೪೦೩॥

ಮೋಕ್ಷಃ ಸಂಪ್ರಾಪ್ಯತೇ ರಾಜನ್ನೀದೃಶೈರೇವ ಶಾಂಕರೈಃ ।
ಅಶಾಂಕರೈರ್ನ ಸಂಪ್ರಾಪ್ಯೋ ಮೋಕ್ಷಃ ಸರ್ವಾತ್ಮನಾ ಧ್ರುವಂ ॥೪೦೪॥

ಪೂರ್ವೋಕ್ತಲಕ್ಷಣಭ್ರಷ್ಟಾ ಯೇ ತೇ ಸರ್ವೇ ನ ಶಾಂಕರಾಃ ।
ಅಶಾಂಕರಾಣಾಂ ಸರ್ವೇಷಾಂ ನರಕೇಷ್ವೇವ ಸಂಸ್ಥಿತಿಃ ॥೪೦೫॥

ಮೋಕ್ಷೋ ರಾಜನ್ನಶೈವಾನಾಂ ಅತ್ಯಂತಂ ದುರ್ಲಭಂ ಧ್ರುವಂ ।
ಸ್ವರ್ಗಭೋಗಪ್ರದಂ ಪುಣ್ಯಂ ಸೋಮಪಾನಂ ಶುನಾಮಿವ ॥೪೦೬॥

ಅತೋ ಗೃಹಾಣ ರಾಜೇಂದ್ರ ಶೈವದೀಕ್ಷಾಮಘಾಪಹಾಂ ।
ಶೈವೋ ಭವಾತಿಯತ್ನೇನ ಮೋಕ್ಷೇಚ್ಛಾ ಯದಿ ತೇ ಭವೇತ್ ॥೪೦೭॥

॥ ವಿಷ್ಣುರುವಾಚ ॥

ಇತ್ಯುಕ್ತ್ವಾ ಸ ತು ಶೈವೇಂದ್ರಸ್ತೇನ ಭೂಪೇನ ಪೂಜಿತಃ ।
ಯಯಾವೇಕಾಂಬರೇಶಸ್ಯ ಪೂಜಾರ್ಥಂ ಹೃಷ್ಟಮಾನಸಃ ॥೪೦೮॥

---

ರಾಜನೇ, ಕೇವಲ ಭಸ್ಮಲೇಪಿತ ಶರೀರರಾಗಿ, ಶಿವನೊಬ್ಬನನ್ನೇ ಉತ್ಕೃಷ್ಟ ದೈವವೆಂದು ತಿಳಿದಿರುವ ಆ ಶೈವರು ಶಿವನ ಸಭಾಸದರೆನಿಸುತ್ತಾರೆ. ರಾಜೇಂದ್ರನೇ, ಇಂತಹ ಶಂಕರಭಕ್ತರಿಗೇ ಮೋಕ್ಷಪ್ರಾಪ್ತಿಯಾಗುವುದು. ಶಂಕರಭಕ್ತರಲ್ಲದವರಿಗೆ ಯಾವ ರೀತಿಯಿಂದಲೂ ಮೋಕ್ಷವೆಂಬುದು ಖಂಡಿತವಾಗಿ ದೊರೆಯಲಾರದು. ॥೪೦೩-೪೦೪॥

ಹಿಂದೆ ಹೇಳಿದ ಲಕ್ಷಣಗಳಿಲ್ಲದವರೆಲ್ಲರೂ ಅಶಾಂಕರರು. ಅವರಿಗೆಲ್ಲಾ ನರಕವೇ ವಾಸಸ್ಥಾನವಾಗುವುದು. ರಾಜನೇ, ಶಿವದ್ರೋಹಿಗಳಾದವರಿಗೆ ಮೋಕ್ಷ ಪ್ರಾಪ್ತಿಯು, ನಾಯಿಗೆ ಸ್ವರ್ಗಲೋಕಭೋಗವನ್ನುಂಟುಮಾಡುವ ಪುಣ್ಯವುಳ್ಳ ಸೋಮಪಾನದಂತೆ ತುಂಬಾ ದುರ್ಲಭವೇ ಸರಿ. ಆದ್ದರಿಂದ ಎಲೈ ರಾಜೇಂದ್ರನೇ, ಪಾಪನಾಶಕವಾದ ಶೈವದೀಕ್ಷೆಯನ್ನು ಇಂದೇ ಸ್ವೀಕರಿಸು. ನಿನಗೆ ಮೋಕ್ಷಾಪೇಕ್ಷೆ ಯಿದ್ದರೆ ಜಾಗ್ರತೆಯಾಗಿ ಶೈವಧರ್ಮದವನಾಗು. ॥೪೦೫-೪೦೬-೪೦೭॥

ಹೀಗೆ ಹೇಳಿ ಆ ಶಾಂಭವಾಗ್ರೇಸರನು ಆ ವಿಶ್ವಾಭಿದರಾಜನಿಂದ ಪೂಜಿಸ

ತತಃ ಸ ಭೂಪತಿರ್ಬ್ರಹ್ಮನ್ಸಕ್ರೇ ರತ್ನಶಿವಾಲಯಂ ।
ಲಿಂಗಂ ಚ ಸ್ಥಾಪಯಾಮಾಸ ತಸ್ಮಿನ್ನೇವ ಶಿವಾಲಯೇ ॥೪೦೯॥

ರಥಂ ಚ ಕಾರಯಾಮಾಸ ಸಹಸ್ರಾರಂ ಹಿರಣ್ಮಯಂ ।
ಸಹಸ್ರದ್ವಾರಸಂವೀತಂ ರತ್ನಮಾಲಾವಿರಾಜಿತಂ ॥೪೧೦॥

ಅಯುತಂ ರಥಶೃಂಗಾಣಾಂ ರಥೋಪರಿ ವಿರಾಜಿತಂ ।
ಹೇಮಧ್ವಜಾಯುತಾಕೀರ್ಣಂ ಹೇಮಪಟ್ಟವಿರಾಜಿತಂ ॥೪೧೧॥

ವೈಕುಂಠಮಪ್ಯತೀತ್ಯೈವ ಸಂಸ್ಥಿತಂ ನಯನಶ್ರಿಯಂ ।
ಸರ್ವದೇವಸಮಾರಾಧ್ಯಂ ಸರ್ವಗಂಧರ್ವಸೇವಿತಂ ॥೪೧೨॥

ಶಂಕರಂ ತದ್ರಥಾರೂಢಂ ಸಾಂಬಂ ವೀಕ್ಷ್ಯ ಸ ಭೂಪತಿಃ ।
ಚಕಾರಾತ್ಯಂತಸಂತುಷ್ಟಃ ಪೂಜಾಂ ಸಾಂಬಸ್ಯ ಸಾದರಂ ॥೪೧೩॥

ಸಾರ್ಧಕೋಟಿತ್ರಯಂ ದೀಪಾದೀಪಿತಾಃ ಶಂಕರಾಲಯೇ ।
ತದ್ದೀಪಕಾಂತಿಪುಂಜೇನ ಕಾಂಚೀ ಸಂದೀಪಿತಾ ತದಾ ॥೪೧೪॥

---

ಲ್ಪಟ್ಟು ಅನಂತರ, ಏಕಾಂಬರೇಶ್ವರನ ಪೂಜೆಗೋಸ್ಕರ ಸಂತೋಷದಿಂದ ತೆರಳಿದನು. ಓ ಬ್ರಹ್ಮದೇವನೇ, ಆ ರಾಜನು ಶಾಂಭವನು ತನಗೆ ಹೇಳಿದಂತೆಯೇ ರತ್ನಮಯವಾದ ಶಿವದೇವಾಲಯವನ್ನು ಕಟ್ಟಿಸಿ ಅದೇ ದೇವಾಲಯದಲ್ಲಿ ಶಿವಲಿಂಗವನ್ನೂ ಸ್ಥಾಪನೆಮಾಡಿಸಿದನು. ॥೪೦೮-೪೦೯॥

ಆ ದೇವನಿಗೋಸ್ಕರ ಸಾವಿರ ಚಕ್ರಗಳಿಂದ ಕೂಡಿದ ಚಿನ್ನದ ರಥವನ್ನು ಮಾಡಿಸಿದನು. ಅದಕ್ಕೆ ಸಾವಿರ ಬಾಗಿಲುಗಳಿದ್ದವು. ಸುತ್ತಲೂ ರತ್ನಮಾಲೆಗಳು ಶೋಭಿಸುತ್ತಿದ್ದವು. ರಥದಮೇಲೆ ಹತ್ತುಸಾವಿರ ಶಿಖರಗಳನ್ನೇರ್ಪಡಿಸಿದ್ದನು. ಚಿನ್ನದ ಬಟ್ಟೆಗಳಿಂದಲಂಕೃತವಾದ ಹತ್ತು ಸಾವಿರ ಧ್ವಜಗಳು ಆ ರಥದಲ್ಲಿ ಪ್ರಕಾಶಿಸುತ್ತಿದ್ದವು. ಆ ರಥದಲ್ಲಿ ವೈಕುಂಠಲೋಕವನ್ನೂ ಮೀರಿಹೋಗಿರುವ ದೇಹಕಾಂತಿಯಿಂದ ಯುಕ್ತನಾಗಿ ಎಲ್ಲಾ ದೇವತೆಗಳಿಂದಲೂ ಮತ್ತು ಗಂಧರ್ವರಿಂದಲೂ ಸೇವಿಸಲ್ಪಡುತ್ತಿರುವ ಮಹೇಶ್ವರನು ವಿರಾಜಿಸುತ್ತಿದ್ದನು. ॥೪೧೦-೪೧೧-೪೧೨॥

ಆ ರಥವನ್ನೇರಿರುವ ಅಂಬಿಕಾಪತಿಯಾದ ಶಂಕರನನ್ನು ಈ ರಾಜನು ನೋಡಿ, ತುಂಬಾ ಸಂತೋಷಭರಿತನಾಗಿ, ಆದರದಿಂದ ಆ ಸಾಂಬನಿಗೆ ಪೂಜೆಮಾಡಿ

ಪ್ರಾಸಾದಃ ಕಾರಿತಸ್ತೇನ ಲಕ್ಷದ್ವಾರಸಮನ್ವಿತಃ ।
ಸ ಸರ್ವಸುರಸಂಸೇವ್ಯಃ ಸರ್ವಗಂಧರ್ವಸೇವಿತಃ ॥೪೧೫॥

ದೇವಗಂಧರ್ವಮೂರ್ತೀನಾಂ ಕೋಟಿಭಿಶ್ಚ ಸಮಾವೃತಃ ।
ಪ್ರಾಸಾದಶೃಂಗೈರ್ವೈಕುಂಠಃ ಸಮತೀತೋಽಪಿ ಶೋಭನೈಃ ॥೪೧೬॥

ತತ್ಪ್ರಾಸಾದವರಾರೂಢಂ ಮಹಾದೇವಂ ಸ ಭೂಪತಿಃ ।
ಪೂಜಯಾಮಾಸ ಯತ್ನೇನ ಸಂತುಷ್ಟಹೃದಯೋ ವಿಧೇ ॥೪೧೭॥

ಏವಂ ಕೃತ್ವಾ ಮಹೇಶಸ್ಯ ಪೂಜಾಂ ಯತ್ನೇನ ಭೂಪತಿಃ ।
ಪುತ್ರೇಷು ರಾಜ್ಯಂ ವಿನ್ಯಸ್ಯ ಕಾಶೀಂ ಪ್ರಾಪ ಶಿವಾತ್ಮಿಕಾಂ ॥೪೧೮॥

ಕಾಶ್ಯಾಂ ವಿಶ್ವೇಶ್ವರಂ ನಿತ್ಯಂ ಸಂಪೂಜ್ಯಾತ್ಯಂತಯತ್ನತಃ ।
ನಿತ್ಯಂ ಶಿವಕಥಾಂ ಶೃಣ್ವನ್ ಶಿವಯಾತ್ರಾಪರೋಽಭವತ್ ॥೪೧೯॥

---

ದನು. ಶಂಕರನ ದೇವಾಲಯದಲ್ಲಿ ಒಂದೂವರೆಕೋಟಿ ದೀಪಗಳು ಹತ್ತಿಸಲ್ಪಟ್ಟು, ಆ ದೀಪಗಳ ಕಾಂತಿಯಿಂದ ಕಾಂಚೀಪಟ್ಟಣವೇ ಬೆಳಕಾಗಿದ್ದಿತು. ॥೪೧೩-೪೧೪॥

ಆ ದೇವಾಲಯಕ್ಕೆ ಒಂದು ಲಕ್ಷ ಬಾಗಿಲುಳ್ಳ ಪ್ರಾಸಾದವನ್ನು ರಾಜನು ಏರ್ಪಡಿಸಿದನು. ಆ ಪ್ರಾಸಾದಗಳು ಎಲ್ಲಾ ದೇವಗಂಧರ್ವರಿಂದಲೂ ಯಾವಾಗಲೂ ಸೇವಿಸಲ್ಪಡುತ್ತಿದ್ದುವು. ಕೋಟ್ಯಂತರ ದೇವಗಂಧರ್ವರ ಮೂರ್ತಿಗಳಿಂದ ವ್ಯಾಪ್ತವಾದ ಈ ಪ್ರಾಸಾದವು ಎತ್ತರವಾಗಿ ಮನೋಹರವಾಗಿರುವ ಶಿಖರಗಳಿಂದ ಕೂಡಿದ್ದುದರಿಂದ ವೈಕುಂಠಲೋಕವನ್ನೂ ಮೀರಿಸುವಂತಿತ್ತು. ॥೪೧೫-೪೧೬॥

ಆ ಪ್ರಾಸಾದದಲ್ಲಿ ಸ್ಥಾಪಿಸಲ್ಪಟ್ಟಿರುವ ಮಹಾದೇವನನ್ನು ಸಂತೋಷಭರಿತವಾದ ಮನಸ್ಸಿನಿಂದ ಆ ರಾಜನು ನಿಯಮಬದ್ಧನಾಗಿ ಪೂಜೆಮಾಡಿದನು. ಹೀಗೆ ಅನೇಕ ದಿನಗಳು ನಿಯಮದಿಂದ ರಾಜನು ಮಹೇಶ್ವರನನ್ನು ಪೂಜಿಸಿ, ಅನಂತರ ತನ್ನ ಮಕ್ಕಳಿಗೆ ರಾಜ್ಯಭಾರವನ್ನೊಪ್ಪಿಸಿ ತಾನು ಶಿವಸ್ವರೂಪವೇ ಆಗಿರುವ ಕಾಶೀಪಟ್ಟಣಕ್ಕೆ ಬಂದನು. ॥೪೧೭-೪೧೮॥

ಆ ಕಾಶೀಪಟ್ಟಣದಲ್ಲಿ ನಿತ್ಯವೂ ವಿಶ್ವೇಶ್ವರನನ್ನು ಭಕ್ತಿ ನಿಯಮದಿಂದ ಪೂಜೆಮಾಡಿ, ನಿತ್ಯವೂ ಶಿವಕಥೆಗಳನ್ನೇ ಕೇಳುತ್ತಾ, ಶಿವಕ್ಷೇತ್ರಯಾತ್ರಾಪರ

ಕಾಶ್ಯಾಂ ಶಿವೈಕಶರಣೈಃ ಸಹ ನಿತ್ಯಂ ವಸನ್ನೃಪಃ ।
ಶೈವಧರ್ಮೇಷು ಸರ್ವೇಷು ಪ್ರೀತಿಮಾನಭವತ್ತದಾ ॥೪೨೦॥

ಗೃಹೀತ್ವಾ ಶೈವದೀಕ್ಷಾಂ ಚ ಶಿವೈಕಶರಣೋಽಭವತ್ ।
ಶೈವೋ ಭೂತ್ವಾ ತತೋ ರಾಜಾ ಸ ಮೋಕ್ಷಮುಗಮದ್ವಿಧೇ ॥೪೨೧॥

ಅತಃ ಪ್ರಯತ್ನತೋ ಗ್ರಾಹ್ಯಾ ಶೈವದೀಕ್ಷಾ ಮುಮುಕ್ಷುಭಿಃ ।
ಬ್ರಹ್ಮಕ್ಷತ್ರಿಯವಿಟ್ಛೂದ್ರೈರನ್ಯೈಶ್ಚ ವಿಧಿಪೂರ್ವಕಂ ॥೪೨೨॥

ಶಿವಂ ಮೋಕ್ಷಪ್ರದಂ ಹಿತ್ವಾ ಯಸ್ತ್ವನ್ಯಂ ಪೂಜಯಿಷ್ಯತಿ ।
ಸ ದುರ್ಭಗ ಇತಿ ಜ್ಞೇಯಃ ಸತ್ಯಂ ಸತ್ಯಂ ನ ಸಂಶಯಃ ॥೪೨೩॥

ಅಶೈವಾ ಬ್ರಾಹ್ಮಣಾ ಜಾತಾ ಭವಿಷ್ಯಂತಿ ಚ ಭೂರಿಶಃ ।
ಅಶೈವಾಸ್ತೇ ಭವಿಷ್ಯಂತಿ ಸರ್ವೇ ನಾರಕಿಣೋ ವಿಧೇ ॥೪೨೪॥

---

ನಾದನು. ಆ ರಾಜನು ಕಾಶೀಪಟ್ಟಣದಲ್ಲಿ ಶಿವಭಕ್ತರೊಡನೆ ಯಾವಾಗಲೂ ವಾಸಮಾಡುತ್ತಾ ಶೈವಧರ್ಮಗಳಲ್ಲಿಯೇ ಯಾವಾಗಲೂ ಪ್ರೀತಿಯುಳ್ಳವನಾಗಿ ಕಾಲಕಳೆಯುತ್ತಿದ್ದನು. ॥೪೧೯-೪೨೦॥

ಶೈವದೀಕ್ಷೆಯನ್ನು ಸ್ವೀಕರಿಸಿ, ಆ ರಾಜನು ಶಿವಶರಣನಾಗಿ ಕೊನೆಗೆ ಮೋಕ್ಷವನ್ನೈದಿದನು. ಆದ್ದರಿಂದ ಅಯ್ಯ ಬ್ರಹ್ಮನೇ! ಮೋಕ್ಷಾಪೇಕ್ಷೆಯುಳ್ಳವರು ನಿಯಮದಿಂದ ಶೈವದೀಕ್ಷೆಯನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮತ್ತು ಶೂದ್ರ, ಈ ಚಾತುರ್ವರ್ಣ್ಯದವರೂ ವಿಧಿಪೂರ್ವಕವಾಗಿ ಸ್ವೀಕರಿಸಬೇಕು. ಅಲ್ಲದೇ ಇತರರೂ ವಿಧಿಯನ್ನನುಸರಿಸಿ, ಶೈವದೀಕ್ಷೆಯನ್ನು ಆಶ್ರಯಿಸಬೇಕು. ಮೋಕ್ಷಪ್ರದನಾದ ಆ ಶಿವನನ್ನು ಬಿಟ್ಟು ಬೇರೆಯವರನ್ನು ಪೂಜೆಮಾಡುವವರು ನಿರ್ಭಾಗ್ಯಶಾಲಿಗಳೆಂದು ಹೇಳಲ್ಪಡುತ್ತಾರೆಂಬುದರಲ್ಲಿ ಸಂದೇಹವೇ ಇಲ್ಲ. ॥೪೨೧-೪೨೨-೪೨೩॥

ಎಲೈ ಬ್ರಹ್ಮನೇ! ಬ್ರಾಹ್ಮಣರನೇಕರು ಶಿವಭಕ್ತಿಹೀನರಾಗಿರುವರು. ಇನ್ನೂ ಮುಂದೆ ಅನೇಕರಾಗುತ್ತಾರೆ. ಆದರೆ ಇವರೆಲ್ಲರಿಗೂ ನರಕಪ್ರಾಪ್ತಿಯುಂಟಾಗುವುದರಲ್ಲಿ ಸಂದೇಹವಿಲ್ಲ. ॥೪೨೪॥

ಪೂರ್ವಂ ವೇದರತಾಃ ಸರ್ವೇ ಶೈವಾ ಏವ ಸ್ಥಿತಾ ದ್ವಿಜಾಃ ।
ಅಶೈವಾಸ್ತೇ ಕಥಂ ಜಾತಾ ಭವಿಷ್ಯಂತಿ ಕಥಂ ಹರೇ ॥೪೨೫॥

ಪುರಾ ದುರ್ಭಿಕ್ಷಮಭವದ್ದ್ವಾದಶಾಬ್ದಮವರ್ಷಣಾತ್ ।
ತದಾನೀಂ ಗೌತಮಂ ಪ್ರಾಪ್ತಾ ಋಷಯೋ ಬಹವೋ ವಿಧೇ ॥೪೨೬॥

ಸ ಗೌತಮೋ ಋಷೀನ್ದೃಷ್ಟ್ವಾ ತದಾ ದುರ್ಭಿಕ್ಷಪೀಡಿತಾನ್ ।
ಆಹಾರಂ ಕಲ್ಪಯಾಮಾಸ ತೇಭ್ಯಃ ಸ್ವತಪಸೋ ಬಲಾತ್ ॥೪೨೭॥

ತತಃ ಪರಂ ಕದಾಚಿತ್ತೇ ಗಾಂ ಕೃತ್ವಾ ಕೃತ್ರಿಮಾಂ ಮುನೇ ।
ನೀವಾರಭಕ್ಷಣಾಸಕ್ತಾನ್ಚಕ್ರುಸ್ತಾಂ ಕುಟಿಲಾಶಯಾಃ ॥೪೨೮॥

ನೀವಾರಭಕ್ಷಣಾಸಕ್ತಾಂ ಗಾಂ ದೃಷ್ಟ್ವಾ ಗೌತಮಸ್ತದಾ ।
ತೃಣೇನ ತಾಡಯಾಮಾಸ ಶನೈಸ್ತಾಂ ಗಾಂ ನಿವಾರಯನ್ ॥೪೨೯॥

ತೃಣಸಂಬಂಧಮಾತ್ರೇಣ ಸ ಭೂಮೌ ಪತಿತೈವ ಗೌಃ ।
ಗೌರ್ಹತಾ ಗೌತಮೇನೇತಿ ತದಾ ತೇ ಋಷಯೋಽವದನ್ ॥೪೩೦॥

---

ಎಲೈ ಮಹಾವಿಷ್ಣುವೇ! ಹಿಂದೆ ವೇದತತ್ಪರರಾದ ಬ್ರಾಹ್ಮಣರೆಲ್ಲರೂ ಶೈವ ಧರ್ಮದವರೇ ಆಗಿದ್ದರು. ಅವರೆಲ್ಲರೂ ಶಿವದ್ರೋಹಿಗಳಾಗಿ ಹೇಗೆ ಬದಲಾಯಿಸಿದ ರೆಂಬುದನ್ನು ನನಗೆ ತಿಳಿಸೆಂದು ಬ್ರಹ್ಮನು ವಿಷ್ಣುವನ್ನು ಪ್ರಶ್ನೆಮಾಡಿದನು. ಆಗ ವಿಷ್ಣುವು ಹೀಗೆ ನುಡಿದನು ॥೪೨೫॥

ಎಲೈ ಬ್ರಹ್ಮನೇ! ಹಿಂದೆ ಹನ್ನೆರಡು ವರ್ಷ ಮಳೆ ಹುಯ್ಯದೇ ಇದ್ದುದ ರಿಂದ ದೊಡ್ಡ ದುರ್ಭಿಕ್ಷವುಂಟಾಯಿತು. ಆಗ ಎಲ್ಲಾ ಋಷಿಗಳೂ ಗೌತಮಋಷಿಯ ಬಳಿಗೈದಿದರು. ಆಗ ಗೌತಮನು ತನ್ನ ಬಳಿಗೆ ಬರದಿಂದ ಪೀಡಿಸಲ್ಪಟ್ಟು ಬಂದಿ ರುವ ಋಷಿಗಳನ್ನು ನೋಡಿ, ತನ್ನ ತಪಶ್ಶಕ್ತಿಯಿಂದ ಅವರಿಗೆಲ್ಲಾ ಆಹಾರವನ್ನು ಕೊಟ್ಟು ರಕ್ಷಿಸಿದನು. ॥೪೨೬-೪೨೭॥

ಅಯ್ಯ ಮನನಶೀಲನಾದ ಬ್ರಹ್ಮನೇ! ಅನಂತರ ಈ ಋಷಿಗಳು ಒಂದು ದಿನ ಕೃತ್ರಿಮವಾದ ಒಂದು ಹಸುವನ್ನು ನಿರ್ಮಿಸಿ ಕುಟಿಲಬುದ್ಧಿಯುಳ್ಳವರಾಗಿ ಅದು ನವಣೆಯನ್ನು ತಿನ್ನುವಂತೆ ಏರ್ಪಾಟು ಮಾಡಿದರು. ಆಗ ಗೌತಮಮುನಿಯು ನವಣೆಯನ್ನು ತಿನ್ನುತ್ತಿರುವ ಆ ಹಸುವನ್ನು ನೋಡಿ ಒಂದು ಹುಲ್ಲುಕಡ್ಡಿಯಿಂದ ಮೆಲ್ಲಗೆ ಅದನ್ನು ಅದರಿಂದ ನಿವಾರಣೆಮಾಡಲು, ಆ ಹುಲ್ಲುಸೋಕಿದೊಡನೆ ಆ

ತತಃ ಸ ಗೌತಮೋ ಭೀತೋ ಗೌರ್ಹತೇತಿ ತತಃ ಪರಂ ।
ಅಪಶ್ಯತ್ಪ್ರಣಿಧಾನೇನ ಕಿಮೇತದಿತಿ ಸಾದರಂ ॥೪೩೧॥

ತತ್ಕೃತಾಂ ಕೃತ್ರಿಮಾಂ ಜ್ಞಾತ್ವಾ ತಾಂ ಗಾಂ ಕ್ರೋಧಸಮಾಕುಲಃ ।
ಶಶಾಪ ತಾನೃಷೀನ್ಸರ್ವಾನ್ಗೌತಮೋ ಮುನಿಪುಂಗವಃ ॥೪೩೨॥

॥ ಗೌತಮ ಉವಾಚ ॥

ಅದ್ಯ ಪ್ರಭೃತಿ ವೇದೋಕ್ತೇ ವಿಭೂತ್ಯುದ್ಧೂಳನೇ ದ್ವಿಜಾಃ ।
ಮಾಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೩॥

ಅದ್ಯ ಪ್ರಭೃತಿ ವೇದೋಕ್ತೇ ಕೇವಲೇ ಭಸ್ಮಧಾರಣೇ ।
ಮಾ ಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೪॥

ಅದ್ಯ ಪ್ರಭೃತಿ ವೇದೋಕ್ತೇ ಶುದ್ಧರುದ್ರಾಕ್ಷಧಾರಣೇ ।
ಮಾ ಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೫॥

ಅದ್ಯ ಪ್ರಭೃತಿ ವೇದೋಕ್ತೇ ಕೇವಲೇ ಶಂಕರಾರ್ಚನೇ ।
ಮಾ ಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೬॥

ಅದ್ಯ ಪ್ರಭೃತಿ ವೇದೋಕ್ತೇ ರುದ್ರಾಧ್ಯಾಯಜಪೇ ದ್ವಿಜಾಃ ।
ಮಾಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೭॥

---

ಹಸುವು ನೆಲದಮೇಲೆ ಬಿದ್ದು ಸತ್ತಿತು. ಆಗ ಋಷಿಗಳೆಲ್ಲಾ ಗೌತಮಮಹರ್ಷಿಗಳು ಹಸುವನ್ನು ಕೊಂದುಹಾಕಿದರೆಂದು ಕೂಗತೊಡಗಿದರು. ||೪೨೮-೪೨೯-೪೩೦||

ಆಗ ಆ ಗೌತಮಮುನಿಯು ಗೋಹತ್ಯೆಮಾಡಿದೆನೆಂದು ಹೆದರಿ, ಇದೇನು ಇಂತಹ ಕೆಲಸವಾಯಿತಲ್ಲ! ಎಂದು ದಿವ್ಯಜ್ಞಾನದಿಂದ ನೋಡಲು, ಆಗ ಕೃತ್ರಿಮವಾಗಿ ಈ ಋಷಿಗಳೇ ಈ ಹಸುವನ್ನು ನಿರ್ಮಿಸಿ ನನ್ನನ್ನು ಪರೀಕ್ಷಿಸಲು ಪ್ರಯತ್ನಿಸಿದರೆಂದು ತಿಳಿದು ಕೋಪಭರಿತನಾಗಿ ಆ ಋಷಿಗಳನ್ನೆಲ್ಲಾ ಹೀಗೆ ಶಪಿಸಿದನು. ||೪೩೧-೪೩೨||

" ಓ ಬ್ರಾಹ್ಮಣಾಧಮರೇ ! ಇನ್ನು ಮುಂದೆ ನಿಮಗೆ, ವೇದಪ್ರತಿಪಾದಿತವಾದ ವಿಭೂತಿಲೇಪನ, ಭಸ್ಮಧಾರಣ, ಶುದ್ಧವಾದ ರುದ್ರಾಕ್ಷಧಾರಣೆ, ಶುದ್ಧವಾದ ಶಂಕರನ

ಅದ್ಯ ಪ್ರಭೃತಿ ವೇದೋಕ್ತೇ ಶುದ್ಧೇ ಶಿವಷಡಕ್ಷರೇ ।
ಮಾ ಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೮॥

ಅದ್ಯ ಪ್ರಭೃತಿ ವೇದೋಕ್ತೇ ಶಿವರಾತ್ರಿವ್ರತೇ ದ್ವಿಜಾಃ ।
ಮಾಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೩೯॥

ಅದ್ಯ ಪ್ರಭೃತಿ ವೇದೋಕ್ತೇ ಸೋಮವಾರವ್ರತೇ ದ್ವಿಜಾಃ ।
ಮಾ ಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೪೦॥

ಅದ್ಯ ಪ್ರಭೃತಿ ವೇದೋಕ್ತೇ ಕಾಶೀವಾಸೇಽಪಿ ಮೋಕ್ಷದೇ ।
ಮಾಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೪೧॥

ಅದ್ಯ ಪ್ರಭೃತಿ ಭಾಲಾನಿ ಮೃಲ್ಲಿಪ್ತಾನಿ ಭವಂತು ವಃ ।
ಮಾಭೂಯಾದ್ಭವತಾಂ ಶ್ರದ್ಧಾ ಧರ್ಮಾದಿಫಲದಾಯಿನೀ ॥೪೪೨॥

ಪತಂತು ನರಕೇ ಯೂಯಂ ಭಾಲೇ ಮೃಲ್ಲೇಪತೋ ದ್ವಿಜಾಃ ।
ಭವಂತೋ ಮಾ ಭವಿಷ್ಯಂತು ಶಿವೈಕಪರದೇವತಾಃ ॥೪೪೩॥

---

ಪೂಜೆ, ಮತ್ತು ರುದ್ರಾಧ್ಯಾಯಮಂತ್ರಜಪ, ಇವೇ ಮೊದಲಾದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳನ್ನುಂಟುಮಾಡಿಕೊಡುವ ಕರ್ಮಗಳಲ್ಲಿ ನಿಮಗೆ ನಂಬಿಕೆಯುಂಟಾಗದೇ ಹೋಗಲಿ. ॥೪೩೩-೪೩೪-೪೩೫-೪೩೬-೪೩೭॥

ಇದು ಮೊದಲುಗೊಂಡು, ಧರ್ಮಾರ್ಥ ಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನುಂಟುಮಾಡಿಕೊಡುವ, ಶುದ್ಧವಾದ ಶಿವಷಡಕ್ಷರ ಮಹಾಮಂತ್ರ ಜಪ, ವೇದಪ್ರತಿಪಾದಿತವಾದ ಶಿವರಾತ್ರಿವ್ರತ, ಸೋಮವಾರವ್ರತ, ಮೋಕ್ಷಪ್ರದವಾದ ಕಾಶೀಕ್ಷೇತ್ರವಾಸ, ಇವುಗಳಲ್ಲಿ ನಿಮಗೆ ನಂಬಿಕೆಯುಂಟಾಗದೇ ಹೋಗಲಿ. ॥೪೩೮-೪೩೯-೪೪೦-೪೪೧॥

ಇನ್ನು ಮುಂದೆ ನಿಮ್ಮ ಹಣೆಗಳಲ್ಲೆಲ್ಲಾ ಮಣ್ಣನ್ನು ಲೇಪನಮಾಡಿಕೊಳ್ಳಿರಿ. ಧರ್ಮವೇ ಮುಂತಾದ ಪುರುಷಾರ್ಥಪ್ರದಗಳಾದ ಕರ್ಮಗಳಲ್ಲಿ ನಿಮಗೆ ನಂಬಿಕೆ ಯುಂಟಾಗದಿರಲಿ. ಹಣೆಯಮೇಲೆ ಮಣ್ಣನ್ನು ಹಚ್ಚಿಕೊಂಡು ನೀವೆಲ್ಲರೂ ನರಕದಲ್ಲಿ ಬೀಳುತ್ತೀರಿ. ನೀವು ಆ ಪರಶಿವನೊಬ್ಬನೇ ಉತ್ಕೃಷ್ಟದೇವನೆಂಬುದನ್ನು ತಿಳಿಯದವ

ಅನ್ಯದೇವಸಮತ್ವೇನ ಜಾನಂತು ಶಿವಮದ್ವಯಂ ।
ಸ ಭವಿಷ್ಯಂತಿ ಯೇ ಲೋಕೇ ಶಿವೈಕಪರದೇವತಾಃ ॥೪೪೪॥

ತೇ ಯಾಂತಿ ನರಕಂ ಘೋರಂ ಯಾವದಾಚಂದ್ರತಾರಕಂ ।
ಅನ್ಯದೇವಸಮತ್ವೇನ ಯೋ ಜಾನಾತಿ ಸದಾಶಿವಂ ॥೪೪೫॥

ಸ ವಂಶಕೋಟಿಸಂಯುಕ್ತೋ ಯಾತ್ಯೇವ ನರಕಂ ಧ್ರುವಂ ।
ಸರ್ವವೇದಾಂತಸಂವೇದ್ಯಃ ಸರ್ವದೇವೋತ್ತಮೋತ್ತಮಃ ॥೪೪೬॥

ಮಹಾದೇವಃ ಸುರಾರಾಧ್ಯಃ ಕಥಮನ್ಯಸಮೋ ಭವೇತ್ ॥೪೪೭॥

ತ್ರಿಕಾಲಶಿವಪೂಜಾಯಾಂ ಮಾ ಭೂಯಾದ್ಭವತಾಂ ಮತಿಃ ।
ಮಾಭೂಯಾದ್ಭವತಾಂ ಪ್ರೀತಿಃ ಶಿವತೀರ್ಥನಿಷೇವಣೇ ॥೪೪೮॥

ಮಾ ಭೂಯಾದ್ಭವತಾಂ ಪ್ರೀತಿಃ ಶಿವಲಿಂಗನಿರೀಕ್ಷಣೇ ।
ಮಾ ಭೂಯಾದ್ಭವತಾಂ ಪ್ರೀತಿಃ ಬಿಲ್ವಪತ್ರಾರ್ಜನೇ ದ್ವಿಜಾಃ ॥೪೪೯॥

ಮಾ ಭೂಯಾದ್ಭವತಾಂ ಪ್ರೀತಿಃ ಶಿವನೈವೇದ್ಯಭೋಜನೇ ।
ಮಾ ಭೂಯಾದ್ಭವತಾಂ ಪ್ರೀತಿಃ ಶಿವಲಿಂಗಾಗ್ರನರ್ತನೇ ॥೪೫೦॥

---

ರಾಗಿರಿ. ಅದ್ವಿತೀಯನಾದ ಆ ಶಿವನನ್ನು ಇನ್ನು ಮುಂದೆ ನೀವು ಇತರ ವಿಷ್ಣ್ವಾದಿ ದೇವತೆಗಳಿಗೆ ಸಮನೆಂದು ತಿಳಿಯುವರಾಗಿರಿ. ಲೋಕದಲ್ಲಿ ಶಿವನಲ್ಲಿಯೇ ಮುಖ್ಯವಾದ ದೈವವೆಂಬ ಭಾವನೆ ಹೊಂದದವರು ಈ ಸೂರ್ಯಚಂದ್ರರಿರುವವರೆಗೂ ಭಯಂಕರವಾದ ನರಕವನ್ನು ಹೊಂದಿ ಅಲ್ಲಿ ನರಳುತ್ತಾರೆ. ॥೪೪೨-೪೪೩-೪೪೪॥

ಆ ಸಧಾಶಿವನನ್ನು ಇತರ ದೇವತೆಗಳಿಗೆ ಸಮಾನನೆಂದು ತಿಳಿಯುವವನು ತನ್ನ ಕೋಟಿವಂಶಪಾರಂಪರ್ಯವಾಗಿ ನರಕವನ್ನು ತಪ್ಪದೇ ಹೊಂದುವನು. ಸಕಲ ವೇದಾಂತಗಳಿಂದಲೂ ತಿಳಿಯಲ್ಪಡತಕ್ಕವನೂ, ಸಕಲ ದೇವತೆಗಳಲ್ಲಿಯೂ ಅತ್ಯುತ್ತಮನೂ, ದೇವತೆಗಳಿಂದ ಪೂಜಾರ್ಹನೂ ಆಗಿರುವ ಆ ಮಹಾದೇವನು ಇತರ ದೇವತೆಗಳಿಗೆ ಹೇಗೆ ಸಮನಾದಾನು? ॥೪೪೫-೪೪೬-೪೪೭॥

ಪ್ರಾತಃಕಾಲ, ಮಧ್ಯಾಹ್ನ, ಮತ್ತು ಸಾಯಂಕಾಲಗಳಲ್ಲಿ ಮಾಡುವ ಶಿವಪೂಜೆಯಲ್ಲಿಯೂ, ಶಿವಕ್ಷೇತ್ರಸೇವೆ, ಶಿವಲಿಂಗದರ್ಶನ, ಬಿಲ್ವಪತ್ರೆಗಳನ್ನು ಸಂಗ್ರಹಿ

ಮಾ ಭೂಯಾದ್ಭವತಾಂ ಪ್ರೀತಿಃ ಶಿವಲಿಂಗಾರ್ಚನೇ ಸದಾ ।
ಶ್ರೌತೇ ಶಿವಕಥಾಲಾಪೇ ಮಾಭೂಯಾದ್ಭವತಾಂ ಮತಿಃ ॥೪೫೦॥

ಶ್ರೌತೇ ಮಹೇಶಸ್ಮರಣೇ ಮಾ ಭೂಯಾದ್ಭವತಾಂ ಮತಿಃ ।
ಶ್ರೌತೇ ಮಹೇಶಸ್ಥಾನೇ ಚ ಮಾಭೂಯಾದ್ಭವತಾಂ ಮತಿಃ ॥೪೫೨॥

ಮಹೇಶಮೂರ್ತಿಷು ಪ್ರೀತಿರ್ಮಾಭೂಯಾದ್ಭವತಾಂ ದ್ವಿಜಾಃ ।
ಮಹೇಶಯಾತ್ರಾಕರಣೇ ಮಾಭೂಯಾದ್ಭವತಾಂ ಮತಿಃ ॥೪೫೩॥

ಅದ್ಯ ದತ್ತಾ ಮಯಾ ಶಾಪಾ ಯಾವಂತೋ ದುಃಖದಾಯಕಾಃ ।
ತಾವಂತಃ ಸಂತು ಭವತಾಂ ಸಂತತಾವಪಿ ಸರ್ವದಾ ॥೪೫೪॥

ಅಶೈವಾಃ ಸಂತು ಭವತಾಂ ಪುತ್ರಪೌತ್ರಾದಯೋ ದ್ವಿಜಾಃ ।
ಪುತ್ರೈಃ ಸಹೈವ ತಿಷ್ಠಂತು ಭವಂತೋ ನರಕೇ ಸದಾ ॥೪೫೫॥

ಅಂತೇ ಭವಂತು ಚಾಂಡಾಲಾ ದುಃಖದಾರಿದ್ರ್ಯಪೀಡಿತಾಃ ॥೪೫೬॥

---

ಸುವುದು, ಶಿವನೈವೇದ್ಯವಾದ ಪದಾರ್ಥಗಳನ್ನು ತಿನ್ನುವುದು, ಮತ್ತು ಶಿವಲಿಂಗದ ಮುಂದೆ ನಾಟ್ಯವಾಡುವುದು, ಇವುಗಳಲ್ಲಿ ನಿಮಗೆ ಪ್ರೀತಿಯುಂಟಾಗದೇ ಹೋಗಲಿ. ॥೪೪೮-೪೪೯-೪೫೦॥

ಯಾವಾಗಲೂ ಶಿವಲಿಂಗಪೂಜೆಯಲ್ಲಿ ಪ್ರೀತಿಯೂ, ಶ್ರುತಿಪ್ರಸಿದ್ಧವಾದ ಶಿವಕಥೆಗಳನ್ನು ಕೇಳುವುದರಲ್ಲಿ ಬುದ್ಧಿಯೂ, ಶ್ರುತಿಪ್ರಸಿದ್ಧವಾದ ಮಹೇಶ್ವರ ಸ್ಮರಣೆ, ಮಹೇಶ್ವರನ ದೇವಾಲಯಾದಿಗಳಲ್ಲಿ ಭಕ್ತಿ, ಇವುಗಳಲ್ಲಿ ನಿಮಗೆ ನಂಬಿಕೆಯುಂಟಾಗದೇ ಹೋಗಲಿ, ಓ ಬ್ರಾಹ್ಮಣರೇ! ನಿಮಗೆ ಮಹೇಶ್ವರನ ದಿವ್ಯಮೂರ್ತಿಗಳಲ್ಲಿ ಪ್ರೀತಿಯೂ, ಮಹೇಶ್ವರನ ಸಂಬಂಧವಾದ ತೀರ್ಥಯಾತ್ರೆಗಳಲ್ಲಿ ಆಸಕ್ತಿಯೂ ಹುಟ್ಟದಿರಲಿ. ॥೪೫೧-೪೫೨-೪೫೩॥

ನಾನು ಈಗ ನಿಮಗೆ ಕೊಟ್ಟಿರುವ ದುಃಖಪ್ರದವಾದ ಶಾಪಗಳಷ್ಟೂ ನಿಮ್ಮ ವಂಶದಲ್ಲಿ ಮುಂದೆಯೂ ಅನುವರ್ತಿಸಿಕೊಂಡು ಯಾವಾಗಲೂ ಬರಲಿ. ನಿಮ್ಮ ಮಕ್ಕಳು, ಮತ್ತು ಮೊಮ್ಮಕ್ಕಳಾದಿಯಾಗಿ ಎಲ್ಲರೂ ಶಿವದ್ರೋಹಿಗಳಾಗಲಿ. ನೀವೆಲ್ಲರೂ ನಿಮ್ಮ ಮಕ್ಕಳೊಡನೆ ಯಾವಾಗಲೂ ನರಕದಲ್ಲೇ ಬಿದ್ದು ಸಾಯಿರಿ. ಕೊನೆಗೆ ನಿಮಗೆ ಚಂಡಾಲವಂಶದಲ್ಲಿ ಜನ್ಮವೇರ್ಪಟ್ಟು, ದುಃಖ ಮತ್ತು ಬಡತನ

॥ ವಿಷ್ಣುರುವಾಚ ॥

ಇತಿ ಶಪ್ತ್ವಾ ಮುನೀನ್ಸರ್ವಾನ್ಗೌತಮಃ ಸ್ವಾಶ್ರಮಂ ಯಯೌ ।
ತತಸ್ತೇ ಖಿನ್ನಹೃದಯಾ ಋಷಯೋಽಪಿ ಗತಾ ವಿಧೇ ॥೪೫೭॥

ಅತೋ ಗೌತಮಶಾಪೇನ ಶೈವಧರ್ಮಬಹಿಷ್ಕೃತಾಃ ।
ಅಶೈವಧರ್ಮಮಾಶ್ರಿತ್ಯ ಸ್ಥಿತಾಸ್ತೇ ಋಷಯಸ್ತದಾ ॥೪೫೮॥

ತತ್ಪುತ್ರಾಶ್ಚಾಭವನ್ಸರ್ವೇ ಶೈವಧರ್ಮಬಹಿಷ್ಕೃತಾಃ ।
ಅಗ್ರೇ ತದ್ವದ್ಭವಿಷ್ಯಂತಿ ತತ್ಪುತ್ರಾಶ್ಚ ಚತುರ್ಮುಖ ॥೪೫೯॥

ಅಶೈವಾ ಏವ ಬಹವೋ ಭವಿಷ್ಯಂತಿ ಕಲೌ ಯುಗೇ ।
ಶಿವಾನ್ಯದೇವಭಕ್ತಿಂ ಚ ಕರಿಷ್ಯಂತಿ ಭ್ರಮಾನ್ವಿತಾಃ ॥೪೬೦॥

ವೃತ್ತಿಕಾಂ ಲಾಪಯಿಷ್ಯಂತಿ ಲಲಾಟೇಷ್ವನ್ವಹಂ ದ್ವಿಜಾಃ ।
ದ್ವಿಜಧರ್ಮೋಽಯಮಿತ್ಯಗ್ರೇ ವರಿಷ್ಯಂತಿ ಚ ವಲ್ಗನಂ ॥೪೬೧॥

---

ಇವುಗಳಿಂದ ಯಾವಾಗಲೂ ಪೀಡೆಹೊಂದುವರಾಗಿರಿ, ಎಂದು ಗೌತಮಮುನಿಯು ಇತರ ಋಷಿಗಳಿಗೆ ಶಾಪಕೊಟ್ಟನು. ॥೪೫೪-೪೫೫-೪೫೬॥

ಅಯ್ಯ ಬ್ರಹ್ಮನೇ! ಆ ಗೌತಮುನಿಯು ಹೀಗೆ ಋಷಿಗಳಿಗೆಲ್ಲಾ ಶಾಪಕೊಟ್ಟು ತನ್ನ ಆಶ್ರಮಕ್ಕೆ ಹಿಂತಿರುಗಿದನು. ಅನಂತರ ಆ ಋಷಿಗಳೆಲ್ಲರೂ ಖಿನ್ನರಾಗಿ ಹೊರಟುಹೋದರು. ಆದ್ದರಿಂದ ಅದೇ ಋಷಿಗಳೇ ಗೌತಮಮುನಿಗಳ ಶಾಪದಿಂದ ಶೈವಧರ್ಮವನ್ನು ಬಿಟ್ಟು, ಇತರ ವಿಷ್ಣ್ವಾದಿಗಳ ಧರ್ಮವನ್ನಾಶ್ರಯಿಸಿರುವರು. ಮುಂದೆ ಅವರ ಮಕ್ಕಳೂ ಮತ್ತು ಮುಮ್ಮಕ್ಕಳೂ ಸಹ ಈ ಶೈವಧರ್ಮವನ್ನುಳಿದು ಹೋಗುವರು. ಎಲೈ ಚತುರ್ಮುಖಬ್ರಹ್ಮನೇ, ಇನ್ನು ಮುಂದೆಯೂ ಅವರ ಮಕ್ಕಳೂ ಹೀಗೆಯೇ ಆಗುತ್ತಾರೆ. ಕಲಿಯುಗದಲ್ಲಿ ಶಿವಧರ್ಮಬಹಿಷ್ಕೃತರೇ ಹೆಚ್ಚು ಮಂದಿ ಹುಟ್ಟುತ್ತಾರೆ. ಅವರೆಲ್ಲರೂ ಭ್ರಾಂತಿಯಿಂದ ವಿಷ್ಣ್ವಾದಿದೇವತೆಗಳಲ್ಲಿ ಭಕ್ತಿಯಿಡುತ್ತಾರೆ. ॥೪೫೭-೪೫೮-೪೫೯-೪೬೦॥

ಬ್ರಾಹ್ಮಣರೆಲ್ಲರೂ ಹಣೆಗಳಲ್ಲಿ ಮಣ್ಣನ್ನು ಬಳಿದುಕೊಳ್ಳುತ್ತಾರೆ. ಇದೇ ಬ್ರಾಹ್ಮಣಧರ್ಮವೆಂದು ಮುಂದೆ ಎಲ್ಲರಿಗೂ ಉಪದೇಶಮಾಡಿ ಆರ್ಭಟಮಾ

ಭೋಜನಾನಿ ಕರಿಷ್ಯಂತಿ ದಿವಸೇ ಸೋಮವಾಸರೇ ।
ಶಿವರಾತ್ರಿವ್ರತತ್ಯಾಗಂ ಕರಿಷ್ಯಂತಿ ದ್ವಿಜಾಧಮಾಃ ॥೪೬೨॥

ಕ್ವಚಿತ್ಕ್ವಚಿದ್ಭವಿಷ್ಯಂತಿ ಶೈವಾಃ ಪರಿಮಿತಾಃ ಕಲೌ ।
ಅಶೈವಾಸ್ತಾನ್ಹನಿಷ್ಯಂತಿ ಮದ್ಯಪಾ ಇವ ಸರ್ವದಾ ॥೪೬೩॥

ಅಶೈವಾ ಯೇ ಭವಿಷ್ಯಂತಿ ಮುನಿಶಾಪಹತಾಃ ಕಲೌ ।
ತೇ ಪತಿಷ್ಯಂತಿ ಘೋರೇಷು ನರಕೇಷ್ವನಿಶಂ ಧ್ರುವಂ ॥೪೬೪॥

ಅಶೈವಶಾಸನಂ ಕರ್ತುಂ ಸ್ಥಾಪಿತೋಽಸ್ತಿ ಯಮಃ ಪುರಾ ।
ನ ತಾನಶೈವಾನ್ಸತತಂ ಪೀಡಯಿಷ್ಯತಿ ಸರ್ವಥಾ ॥೪೬೫॥

ಅಶೈವಾನ್ಬ್ರಾಹ್ಮಣಾನ್ದೃಷ್ಟ್ವಾ ಕ್ಷತ್ರಿಯಾದ್ಯಾಶ್ಚ ಸರ್ವಥಾ ।
ಅಶಾಂಭವಾ ಭವಿಷ್ಯಂತಿ ನರಕಾವಾಪ್ತಯೇ ವಿಧೇ ॥೪೬೬॥

ಭೂರಪ್ಯಶಾಂಕರವ್ಯಾಪ್ತಾ ಕಲೌ ದುಃಖಂ ಕರಿಷ್ಯತಿ ।
ಅಶಾಂಕರಾಃ ಶೈವಧರ್ಮಾನ್ನಾಶಯಿಷ್ಯಂತಿ ಸರ್ವದಾ ॥೪೬೭॥

---

ಡುತ್ತಾರೆ. ಸೋಮವಾರ ದಿನ ಊಟಮಾಡುತ್ತಾರೆ. ಈ ಬ್ರಾಹ್ಮಣಾಧಮರು ಶಿವರಾತ್ರಿಯ ವ್ರತವನ್ನು ಸಹ ಬಿಟ್ಟುಬಿಡುತ್ತಾರೆ. ಈ ಕಲಿಯುಗದಲ್ಲಿ ಎಲ್ಲೋ ಕೆಲವು ಕಡೆಗಳಲ್ಲಿ ಮಾತ್ರ ಕೊಂಚ ಮಂದಿ ಈಶ್ವರಭಕ್ತರು ನೆಲಸಿರುವರು. ಆದರೆ ಅವರನ್ನೆಲ್ಲಾ ಹೆಂಡಕುಡಿದವರಂತೆ ಈ ಶಿವದ್ರೋಹಿಗಳು ಹಿಂಸೆಮಾಡುತ್ತಾರೆ. ॥೪೬೧-೪೬೨-೪೬೩॥

ಮಹರ್ಷಿ ಶಾಪದಿಂದ ಹೊಡೆಯಲ್ಪಟ್ಟವರು ಕಲಿಯುಗದಲ್ಲಿ ಶಿವದ್ರೋಹಿಗಳಾಗಿ ಹುಟ್ಟಿ ಎಲ್ಲರೂ ಭಯಂಕರವಾದ ನರಕಗಳಲ್ಲಿ ನಿಶ್ಚಯವಾಗಿಯೂ ಬೀಳುವರು. ಅಯ್ಯಾ ಬ್ರಹ್ಮನೇ, ಶಿವದ್ರೋಹಿಗಳನ್ನು ಶಿಕ್ಷೆಮಾಡುವುದಕ್ಕೋಸ್ಕರವೇ ಹಿಂದೆ ಯಮನು ನಿಯಮಿಸಲ್ಪಟ್ಟಿರುವನು. ಆತನು ಯಾವಾಗಲೂ ಶಿವದ್ರೋಹಿಗಳನ್ನು ಬಿಡದೇ ಶಿಕ್ಷೆಮಾಡುವನು ಶಿವಧರ್ಮಹೀನರಾದ ಬ್ರಾಹ್ಮಣರನ್ನು ನೋಡಿ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರವರ್ಣದವರೂ ಶಿವದ್ರೋಹಿಗಳಾಗಿ ನರಕ ಪ್ರಾಪ್ತಿಗೆ ಗುರಿಯಾಗುತ್ತಿರುವರು. ॥೪೬೪-೪೬೫-೪೬೬॥

ಈ ಭೂಮಿಯೂ ಸಹ ಶಂಕರದ್ರೋಹಿಗಳಿಂದಲೇ ತುಂಬಿ ಕಲಿಯುಗದಲ್ಲಿ

ಅಶೈವಧರ್ಮಮಾಶ್ರಿತ್ಯ ಸ್ಥಾಸ್ಯಂತಿ ಪುರುಷಾಧಮಾಃ ।
ಅಪ್ರೀತಿಂ ಜನಯಿಷ್ಯಂತಿ ಶೈವಧರ್ಮೇಷು ದುರ್ಭಗಾಃ ॥೪೬೮॥

ಶೈವಧರ್ಮೇಷು ನಷ್ಟೇಷು ಮುಕ್ತಿದೇಷು ತತಃ ಪರಂ ।
ಸುರಾಃ ಸರ್ವೇಽಪಿ ಸತತಂ ಭವಿಷ್ಯಂತ್ಯತಿದುಃಖಿತಾಃ ॥೪೬೯॥

ಅಶೈವವೃದ್ಧಿರ್ಬಹುಧಾ ಭವಿಷ್ಯತಿ ಕಲೌ ಯುಗೇ ।
ಶಿವಪೂಜಾಂ ವಿಹಾಯ್ಯೈವ ಕರಿಷ್ಯಂತ್ಯನ್ಯಪೂಜನಂ ॥೪೭೦॥

ಶಿವಾನ್ಯದೇವತಾಭಕ್ತಿಂ ಕರಿಷ್ಯಂತ್ಯತಿಯತ್ನತಃ ।
ಶಿವನಿಂದಾಂ ಕರಿಷ್ಯಂತಿ ಶೈವನಿಂದಾಮಪಿ ದ್ವಿಜಾಃ ॥೪೭೧॥

ಪ್ರೀತಿಂ ಶೈವಪುರಾಣೇಷು ನೈವ ಕುರ್ವಂತಿ ಸರ್ವಥಾ ।
ರುದ್ರಾಧ್ಯಾಯಜಪೇ ಪ್ರೀತಿಂ ನ ಕರಿಷ್ಯಂತಿ ಸರ್ವಥಾ ॥೪೭೨॥

---

ದುಃಖವನ್ನು ತಾಳುತ್ತದೆ. ಈ ಶಂಕರದ್ರೋಹಿಗಳಾದವರು ಯಾವಾಗಲೂ ಶೈವಧರ್ಮ ವನ್ನು ನಾಶಮಾಡುವುದರಲ್ಲೇ ತತ್ಪರರಾಗಿರುತ್ತಾರೆ. ಮಾನವಾಧಮರೆಲ್ಲರೂ ಶಿವಧರ್ಮಾತಿರಿಕ್ತವಾದ ಧರ್ಮವನ್ನೇ ಆಶ್ರಯಿಸಿ ಯಾವಾಗಲೂ ಭಾಗ್ಯಹೀನ ರಾಗುವರು. ಶೈವಧರ್ಮದಲ್ಲಿ ದ್ವೇಷವನ್ನೇ ಜನಗಳಿಗೆ ಹೆಚ್ಚಿಸುತ್ತಿರುತ್ತಾರೆ. ಹೀಗೆ ಮೋಕ್ಷಪ್ರದವಾದ ಶೈವಧರ್ಮಗಳೆಲ್ಲಾ ನಾಶವಾದ ಮೇಲೆ ದೇವತೆಗಳೆಲ್ಲರೂ ದುಃಖಿತರಾಗುತ್ತಾರೆ. ॥೪೬೭-೪೬೮-೪೬೯॥

ಈ ಕಲಿಯುಗದಲ್ಲಿ ಶಿವದ್ರೋಹಿಗಳೇ ಹೆಚ್ಚು ಅಭಿವೃದ್ಧಿ ಹೊಂದುವರು. ಅವರು ಶಿವನನ್ನು ಬಿಟ್ಟು ಇತರ ದೇವತೆಗಳನ್ನೇ ಪೂಜೆಮಾಡುತ್ತಾರೆ. ಅವರಿಗೆ ಯಾವಾಗಲೂ ಶಿವಾತಿರಿಕ್ತವಿಷ್ಣ್ವಾದಿದೇವತೆಗಳಲ್ಲಿಯೇ ಭಕ್ತಿಯುಂಟಾಗುತ್ತಿರುತ್ತದೆ. ಈ ಪಾಪಿಗಳು ಶಿವನಿಂದೆಯನ್ನೂ ಶಿವಭಕ್ತರ ನಿಂದೆಯನ್ನೂ ವಿಶೇಷವಾಗಿ ಮಾಡುತ್ತಾರೆ. ಎಂದೆಂದಿಗೂ ಶಿವನಸಂಬಂಧವಾದ ಪುರಾಣಗಳಲ್ಲಿ ಇವರಿಗೆ ಪ್ರೀತಿಯುಂಟಾಗುವುದಿಲ್ಲ. ಅಲ್ಲದೇ ರುದ್ರಾಧ್ಯಾಯಮಂತ್ರಜಪದಲ್ಲಂತೂ ಕೊಂಚವೂ ಪ್ರೀತಿಯುಂಟಾಗಲಾರದು. ॥೪೭೦-೪೭೧-೪೭೨॥

ಶೈವೇ ಷಡಕ್ಷರೇ ಶ್ರದ್ಧಾಂ ನ ಕರಿಷ್ಯಂತಿ ಸರ್ವಥಾ ।
ವಿಭೂತ್ಯುದ್ಧೂಳನೇ ಶ್ರದ್ಧಾಂ ನ ಕರಿಷ್ಯಂತಿ ಸರ್ವಥಾ ॥೪೭೩॥

ತ್ರಿಪುಂಡ್ರಧಾರಣೇ ಶ್ರದ್ಧಾಂ ಕೇವಲೇ ಭಸ್ಮಧಾರಣೇ ।
ರುದ್ರಾಕ್ಷಧಾರಣೇ ಶ್ರದ್ಧಾಂ ನ ಕರಿಷ್ಯಂತಿ ಸರ್ವಥಾ ॥೪೭೪॥

ಅಶಾಂಭವಾ ವ್ರತೇಷ್ವೇವ ಕರಿಷ್ಯಂತಿ ವೃತಂ ದ್ವಿಜಾಃ ।
ಶ್ರೌತೇ ಶೈವೇ ವ್ರತೇ ಶ್ರದ್ಧಾಂ ನ ಕರಿಷ್ಯಂತಿ ಸರ್ವಥಾ ॥೪೭೫॥

ಅಶೈವಾನ್ಭೋಜಯಿಷ್ಯಂತಿ ಶ್ರಾದ್ಧೇಷು ಪ್ರೀತಿಪೂರ್ವಕಂ ।
ಅಶೈವಾನ್ಭೋಜಯಿಷ್ಯಂತಿ ಪರ್ವಕಾಲೇಷು ಸಾದರಂ ॥೪೭೬॥

ಅನ್ಯೇಽಪಿ ಶಾಂಭವಾ ಧರ್ಮಾ ನ ಚಲಿಷ್ಯಂತಿ ಸರ್ವಥಾ ।
ಅಶೈವಧರ್ಮಸಂಕ್ರಾಂತಾ ಭೂರ್ವಿನಷ್ಟಾ ವಿನಶ್ಯತಿ ॥೪೭೭॥

ಭ್ರಮಪ್ರಮಾದರಹಿತಃ ಕುರು ಶಂಕರಪೂಜನಂ ।
ಆಲಸ್ಯಂ ಮಾಕುರು ಬ್ರಹ್ಮನ್ಮಹಾದೇವಾರ್ಚನೇ ಸದಾ ॥೪೭೮॥

---

ಆರಕ್ಷರವುಳ್ಳ ಶೈವಮಂತ್ರದಲ್ಲಿಯೂ, ವಿಭೂತಿ ಲೇಪನ, ಭಸ್ಮತ್ರಿಪುಂಡ್ರ ಧಾರಣ ಮತ್ತು ಶುದ್ಧವಾದ ರುದ್ರಾಕ್ಷಧಾರಣ ಇವುಗಳಲ್ಲಿ ಖಂಡಿತವಾಗಿಯೂ ಈ ಪಾಪಿಗಳಿಗೆ ನಂಬಿಕೆಯುಂಟಾಗುವುದಿಲ್ಲ. ಈ ಶಿವದ್ರೋಹಿಗಳಾದ ಬ್ರಾಹ್ಮಣರು ಶಿವನ ವ್ರತಗಳು ನಡೆಯಬೇಕಾದ ದಿವಸಗಳಲ್ಲಿಯೇ ಶ್ರಾದ್ಧಾದಿಕರ್ಮಗಳನ್ನು ಮಾಡುತ್ತಿರುತ್ತಾರೆ. ಶ್ರುತಿಪ್ರಸಿದ್ಧವಾದ ಶೈವವ್ರತಗಳಲ್ಲಿ ಇವರಿಗೆ ಕೊಂಚವೂ ನಂಬಿಕೆಯೇ ಉಂಟಾಗುತ್ತಿಲ್ಲ. ॥೪೭೩-೪೭೪-೪೭೫॥

ಆದರದಿಂದ ಶ್ರಾದ್ಧಕಾಲಗಳಲ್ಲಿಯೂ ಪರ್ವಕಾಲಗಳಲ್ಲಿಯೂ ಪ್ರೀತಿಪೂರ್ವಕ ವಾಗಿಶಿವದ್ರೋಹಿಗಳಿಗೆ ಭೋಜನಮಾಡಿಸುತ್ತಾರೆ. ಶಾಂಭವರ ಇತರ ಯಾವ ಧರ್ಮ ಗಳೂ ಖಂಡಿತವಾಗಿ ನಡೆಯುವುದಿಲ್ಲ. ಈ ಭೂಮಿಯು ಶಿವದ್ರೋಹಿಗಳ ಧರ್ಮದಿಂದ ವ್ಯಾಪ್ತವಾಗಿ ಈಗ ನಷ್ಟವಾಗಿದೆ. ಮುಂದೆ ನಾಶವಾಗುತ್ತದೆ. ಭ್ರಾಂತಿ ಮತ್ತು ಪ್ರಮಾದಗಳಿಲ್ಲದೇ ನೀನು ಆ ಶಂಕರನನ್ನು ಪೂಜೆಮಾಡು. ಬ್ರಹ್ಮನೇ ! ಆ ಮಹಾದೇವನ ಪೂಜೆಯಲ್ಲಿ ಎಂದಿಗೂ ಜುಗುಪ್ಸೆಯನ್ನು ಹೊಂದಬೇಡ. ॥೪೭೬-೪೭೭-೪೭೮॥

ಅಸ್ಮದ್ಭಾಗ್ಯವಶಾತ್ಪೂರ್ವಮಸ್ಮಭ್ಯಂ ಗೌತಮೋ ವಿಧೇ ।
ಶಾಪಂ ನ ಪ್ರದದೌ ತಸ್ಮಾದ್ವಯಂ ಧನ್ಯಾ ನ ಸಂಶಯಃ ॥೪೩೯॥

ಅಸ್ಮಾಭಿರತಿಯತ್ನೇನ ಕರ್ತವ್ಯಂ ಶಂಕರಾರ್ಚನಂ ।
ಪ್ರಾಪ್ತವ್ಯಂ ಶಂಕರಸ್ಥಾನಂ ಯೋಗಿನಾಮಪಿ ದುರ್ಲಭಂ ॥೪೪೦॥

ಏಕಾಂಬರೇಶಮನಿಶಂ ಪೂಜಯಸ್ವ ಪ್ರಯತ್ನತಃ ।
ಅಸ್ಮಾಕಂ ಜನನೀ ಮಾತಾ ಕಾಮಾಕ್ಷೀಮಪಿ ಪೂಜಯ ॥೪೪೧॥

ಬ್ರಹ್ಮನ್ನಹಮುಮಾಕಾಂತಮಂತಕಾಂತಕಮನ್ವಹಂ ।
ಅರ್ಚಯಾಮ್ಯತಿಯತ್ನೇನ ಪುಷ್ಪಾದ್ಯೈರಿಷ್ಟದೈವತಂ ॥೪೪೨॥

ದೇವತಾಸಾರ್ವಭೌಮೋಽಯಂ ಶಿವ ಏವೇಷ್ಟದೈವತಂ ।
ಅತಃ ಪ್ರಯತ್ನತೋ ನಿತ್ಯಂ ಶಿವಪೂಜಾಂ ಕರೋಮ್ಯಹಂ ॥೪೪೩॥

ಶಿವಾರ್ಚನಂ ಪರೋ ಧರ್ಮಃ ಸರ್ವಧರ್ಮೋತ್ತಮೋತ್ತಮಃ ।
ಅತಃ ಶಿವಾರ್ಚನಂ ಕಾರ್ಯಂ ತ್ಯಕ್ತ್ವಾನ್ಯಸುರಪೂಜನಂ ॥೪೪೪॥

---

ಎಲೈ ಬ್ರಹ್ಮನೇ, ನಮ್ಮ ಭಾಗ್ಯವಶದಿಂದ ಹಿಂದೆ ಆ ಗೌತಮಮುನಿಯು ನಮಗೆ ಶಾಪಕೊಡಲಿಲ್ಲವಾದ್ದರಿಂದ ನಾವೆಲ್ಲರೂ ಧನ್ಯರೇ ಸರಿ. ನಾವು ವಿಶೇಷ ನಿಯಮದಿಂದ ಆ ಶಂಕರನನ್ನು ಪೂಜೆಮಾಡಬೇಕು. ಯೋಗಿಗಳಿಗೂ ಹೊಂದಲ ಸಾಧ್ಯವಾದ ಆ ಶಂಕರ ದೇವಾಲಯಕ್ಕೆ ನಾವು ಹೋಗಬೇಕು. ॥೪೩೯-೪೪೦॥

ಎಲೈ ಬ್ರಹ್ಮದೇವನೇ, ನಿತ್ಯವೂ ನಿಯಮದಿಂದ ಆ ಏಕಾಂಬರೇಶ್ವರನನ್ನು ಅರ್ಚಿಸು. ನಮ್ಮೆಲ್ಲರ ತಾಯಿಯಾದ ಆ ಕಾಮಾಕ್ಷೀದೇವಿಯನ್ನೂ ಪೂಜೆ ಮಾಡು. ಬ್ರಹ್ಮದೇವನೇ, ಯಮನಿಗೂ ಅಂತಕನಾಗಿರುವ ನನ್ನ ಇಷ್ಟದೈವವಾದ ಆ ಉಮಾರಮಣನನ್ನು ನಾನು ತುಂಬಾ ನಿಯಮದಿಂದ ಹೂವು, ಪತ್ರೆ ಮುಂತಾದುವುಗಳಿಂದ ಪೂಜೆಮಾಡುವೆನು. ॥೪೪೧-೪೪೨॥

ದೇವತಾಸಾರ್ವಭೌಮನಾದ ಆ ಶಿವನೇ ನನಗೆ ಇಷ್ಟವಾದ ದೈವವು. ಆದ್ದರಿಂದ ನಾನು ನಿತ್ಯವೂ ಆ ಶಿವಪೂಜೆಯನ್ನು ತಪ್ಪದೇ ಮಾಡುತ್ತಿರುವೆನು. ಎಲ್ಲಾ ಧರ್ಮಗಳಲ್ಲಿಯೂ ಉತ್ತಮೋತ್ತಮವಾದ ಆ ಶಿವಪೂಜೆಯೇ ಉತ್ಕೃಷ್ಟ

ಶಿವಾರ್ಚನೇನ ಸಂಪ್ರಾಪ್ಯಮಾನಂದಂ ಪರಮಂ ಪದಂ ।
ಮುಕ್ತಿಃ ಶಿವಾರ್ಚನಾದೇವ ಸತ್ಯಂ ಸತ್ಯಂ ನ ಸಂಶಯಃ ॥೪೮೫॥

ಶಿವಾರ್ಚನೇನ ನಶ್ಯಂತಿ ಪಾತಕಾನಿ ಬಹೂನ್ಯಪಿ ।
ಶಿವಾರ್ಚನೇನ ಸಂಪ್ರಾಪ್ಯಾ ಧರ್ಮಾಶ್ಚ ಬಹವೋ ವಿಧೇ ॥೪೮೬॥

ಸಂಸಾರಿಣೋ ಭವಿಷ್ಯಂತಿ ಶಿವಲಿಂಗಾರ್ಚನಂ ವಿನಾ ।
ದರಿದ್ರಾಶ್ಚ ಭವಿಷ್ಯಂತಿ ತಥಾ ನಾರಕಿಣೋ ವಿಧೇ ॥೪೮೭॥

ನಿತ್ಯಂ ಯೇ ನ ಕರಿಷ್ಯಂತಿ ಶ್ರೀಮಹಾದೇವಪೂಜನಂ ।
ತೇ ಭವಂತ್ಯೇವ ಪಾಪಿಷ್ಠಾ ಜನ್ಮಜನ್ಮಾಂತರೇ ವಿಧೇ ॥೪೮೮॥

ಸುರಾಪಾನಾದಿಪಾಪಾನಿ ಯೈಃ ಕೃತಾನಿ ಪುರಾ ಸದಾ ।
ತೇಷಾಂ ನ ಭವತಿ ಶ್ರದ್ಧಾ ಕೇವಲೇ ಶಿವಪೂಜನೇ ॥೪೮೯॥

ಬ್ರಹ್ಮಹತ್ಯಾದಿಪಾಪಾನಿ ಯೈಃ ಕೃತಾನಿ ಪುರಾ ಸದಾ ।
ತೇಷಾಂ ನ ಭವತಿ ಶ್ರದ್ಧಾ ಕೇವಲೇ ಭಸ್ಮಧಾರಣೇ ॥೪೯೦॥

---

ವಾದ ಧರ್ಮವು. ಆದ್ದರಿಂದ ಇತರ ದೇವತೆಗಳನ್ನು ಪೂಜೆಮಾಡುವುದನ್ನು ಬಿಟ್ಟು ಆ ಶಿವನೊಬ್ಬನನ್ನೇ ಮುಖ್ಯವಾಗಿ ಪೂಜೆಮಾಡು. ॥೪೮೩-೪೮೪॥

ಶಿವಪೂಜೆಯಿಂದ ಪಡೆಯುವ ಆನಂದವು ಉತ್ಕೃಷ್ಟವಾದುದು. ಮೋಕ್ಷವು ಶಿವಪೂಜೆಯಿಂದಲೇ ದೊರೆಯುವುದು ಸತ್ಯವೆನ್ನುವುದರಲ್ಲಿ ಸಂದೇಹವಿಲ್ಲ. ॥೪೮೫॥

ಬಹಳ ಪಾಪಗಳಿದ್ದರೂ ಶಿವಪೂಜೆಯಿಂದ ಎಲ್ಲವೂ ನಾಶವಾಗುವುವು. ಬ್ರಹ್ಮನೇ ! ನಾನಾ ವಿಧವಾದ ಧರ್ಮಗಳೆಲ್ಲವೂ ಆ ಶಿವಪೂಜೆಯಿಂದಲೇ ದೊರೆಯುವುವು. ॥೪೮೬॥

ಶಿವಲಿಂಗಪೂಜೆಮಾಡದವರು ಮತ್ತೆ ಸಂಸಾರಬಂಧನಕ್ಕೊಳಗಾಗಿ ಪುನಃ ನರಕಕ್ಕೆ ಭಾಗಿಯಾಗುತ್ತಾರೆಂದು ತಿಳಿ. ಬ್ರಹ್ಮದೇವನೇ, ನಿತ್ಯವೂ ಆ ಮಹಾದೇವನನ್ನು ಪೂಜೆಮಾಡದಿರುವವರು ಮುಂದೆ ಜನ್ಮಜನ್ಮಾಂತರಗಳಲ್ಲಿಯೂ ಪಾಪಿಷ್ಠರಾಗಿಯೇ ಹುಟ್ಟುತ್ತಾರೆ. ॥೪೮೭-೪೮೮॥

ಸುರಾಪಾನ (ಹೆಂಡಕುಡಿಯುವುದು) ಮುಂತಾದ ಪಾಪಗಳನ್ನು ಹಿಂದೆ ಬಹಳವಾಗಿ ಮಾಡಿರುವರಿಗೆ ಶುದ್ಧವಾದ ಆ ಪರಶಿವನ ಪೂಜೆಯಲ್ಲಿ ನಂಬಿಕೆ

ಯೈಃ ಪಾತಕಾನಿ ಸತತಂ ಕೃತಾನಿ ಸತತಂ ವಿಧೇ ।
ತೇಷಾಂ ನ ಭವತಿ ಶ್ರದ್ಧಾ ಶುದ್ಧೇ ರುದ್ರಾಕ್ಷಧಾರಣೇ ॥೪೯೧॥

ಕಿಂ ಚ ಕಿಂ ಬಹುನೋಕ್ತೇನ ಯೇ ಮಹಾಪಾತಕಾಶ್ರಯಾಃ ।
ತೇಷಾಂ ನ ಭವತಿ ಶ್ರದ್ಧಾ ಶೈವಧರ್ಮೇಷು ಸರ್ವಥಾ ॥೪೯೨॥

॥ ಶ್ರೀ ಮಹಾದೇವ ಉವಾಚ ॥

ಇತ್ಯುಕ್ತೋ ವಿಷ್ಣುನಾ ಬ್ರಹ್ಮಾ ಮಾಮ್ಯೈವೈಕಾಂಬರೇಶ್ವರಂ ।
ಸಂಪೂಜ್ಯಾತಿಪ್ರಯತ್ನೇನ ಕಾಂಚೀವಾಸಂ ಚಕಾರ ಚ ॥೪೯೩॥

ವಿಷ್ಣುಬ್ರಹ್ಮೇಂದ್ರಚಂದ್ರಪ್ರಭೃತಿ ಸುರಶಿರೋರತ್ನನಿರ್ಯತ್ನ
ನಿರ್ಯದ್ರತ್ನಚ್ಛಾಯಾವಿರೋಧಿಸ್ಫುರದಸಘನಖರಸ್ವಚ್ಛಕಾಂತಿಪ್ರಕಾಂತಂ ।

---

ಹುಟ್ಟುವುದಿಲ್ಲ. ಬ್ರಹ್ಮಹತ್ಯ ಮುಂತಾದ ಘೋರ ಪಾಪಗಳನ್ನೆಸಗಿ ಹಿಂದೆ ಯಾವಾಗಲೂ ಪಾಪಕರ್ಮಗಳಲ್ಲಿ ನಿರತರಾಗಿರುವವರಿಗೆ ಈ ಭಸ್ಮವನ್ನು ಧರಿಸುವ ವಿಷಯದಲ್ಲಿ ನಂಬಿಕೆಯೇ ಹುಟ್ಟುವುದಿಲ್ಲ. ॥೪೮೯-೪೯೦॥

ಅಯ್ಯ ಬ್ರಹ್ಮನೇ! ಕೇಳು, ಅನವರತವೂ ಪಾಪಕೆಲಸಗಳನ್ನೇ ಮಾಡಿರುವರಿಗೆ ಪರಿಶುದ್ಧವಾಗಿರುವ ಈ ರುದ್ರಾಕ್ಷಮಾಲೆಗಳನ್ನು ಧರಿಸುವ ವಿಷಯದಲ್ಲಿ ಖಂಡಿತವಾಗಿ ನಂಬಿಕೆಯೇ ಹುಟ್ಟುವುದಿಲ್ಲ. ಹೆಚ್ಚುಮಾತಿನಿಂದೇನು! ಒಟ್ಟನಲ್ಲಿ 'ಬ್ರಹ್ಮಹತ್ಯಾ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಸಮಾಗಮ, ಮತ್ತು ಈ ನಾಲ್ವರೊಡನೆ ಸಹವಾಸ, ಈರೀತಿಯಾದ ಪಂಚಮಹಾಪಾಪಗಳಿಗೆ ಆಶ್ರಯರಾಗಿರುವರಿಗೆಲ್ಲಾ ಶಿವನ ಸಂಬಂಧವಾದ ಧರ್ಮಗಳಲ್ಲಿ ಖಂಡಿತವಾಗಿ ನಂಬಿಕೆಯುಂಟಾಗುವುದಿಲ್ಲ." ॥೪೯೧-೪೯೨॥

ವಿಷ್ಣುವಿನಿಂದ ಹೀಗೆ ಹೇಳಲ್ಪಟ್ಟ ಬ್ರಹ್ಮನು ಏಕಾಂಬರೇಶ್ವರನೆನಿಸಿದ ನನ್ನನ್ನೇ ನಿಯಮದಿಂದ ಪೂಜೆಮಾಡಿ ಕಾಂಚೀಪಟ್ಟಣದಲ್ಲಿ ವಾಸಮಾಡಿದನೆಂದು ಮಹಾದೇವನು ಪಾರ್ವತಿಗೆ ಕಾಂಚೀಪಟ್ಟಣದ ಮಹಿಮೆಯನ್ನು ವಿವರಿಸಿದನು. ॥೪೯೩॥

ವಿಷ್ಣು, ಬ್ರಹ್ಮ, ಇಂದ್ರ, ಚಂದ್ರ, ಮುಂತಾದ ದೇವತೆಗಳ ತಲೆಯ ಕಿರೀಟಗಳಲ್ಲಿರುವ ರತ್ನಗಳು, ದೇವತೆಗಳು ಮಹಾದೇವನಾದ ನನ್ನ ಪಾದಕಮಲಗಳಿಗೆ

**ಯತ್ತತ್ಪಾದಾರವಿಂದಂ ಮಮ ನಿಗಮಶಿರೋರತ್ನಭೂತಂ ಪ್ರಭೂತಂ**
**ಲಕ್ಷ್ಮೀಕಾಂತಾಕ್ಷಿಕಾಂತಂ ಗಿರಿವರತನಯೇ ಸಾಧುಸಂತೋ ಭಜಂತಿ॥೪೯೪॥**

**ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಬ್ರಹ್ಮಾಣಂ ಪ್ರತಿವಿಷ್ಣುಕೃತೋಪದೇಶೇ**
**ಕಾಂಚೀಮಾಹಾತ್ಮ್ಯೇ ವಿಂಶೋಽಧ್ಯಾಯಃ**

---

ಬಗ್ಗಿ ನಮಸ್ಕಾರಮಾಡುವಾಗ, ಆ ರತ್ನಕಾಂತಿಯು ದೇವದೇವನ ಕಾಲುಗುರುಗಳ ಮೇಲೆ ಬಿದ್ದು ಆ ಉಗುರಿನ ದಿವ್ಯಕಾಂತಿಯಿಂದ ತಡೆಯಲ್ಪಟ್ಟಾಗ ಸ್ವಚ್ಛವಾದ ಪ್ರಕಾಶದಿಂದ ಹೊಳೆಯುತ್ತಿರುವ ನನ್ನ ದಿವ್ಯ ಪಾದಕಮಲಗಳು (ಕಮಲ ದಂತೆ ಕೆಂಪಗೂ ಮೃದುವಾಗಿಯೂ ಮನೋಹರವಾಗಿಯೂ ಇರುವ ಕಾಲುಗಳು) ವೇದಾಂತಗಳಿಗೆ ಅತಿಶಯವಾದ ರತ್ನಗಳಂತಿರುವುವು. (ಅಂದರೆ ವೇದಾಂತಗಳಲ್ಲಿ ಪರಶಿವನ ಪಾದಧ್ಯಾನ, ನಮಸ್ಕಾರಾದಿಗಳೇ ಮುಖ್ಯವಾಗಿ ಹೇಳಲ್ಪಟ್ಟಿರುವುವೆಂಬ ಭಿಪ್ರಾಯದಿಂದ ಹೀಗೆ ಹೇಳಿದೆ) ಮಹಾವಿಷ್ಣುವಿನ ದಿವ್ಯವಾದ ಕಣ್ಣೇ ಈ (ನನ್ನ) ಮಹಾದೇವನ ಪಾದಗಳಿಗೆ ಪೂಜಾದ್ರವ್ಯವಾಗಿ ಮತ್ತಷ್ಟು ಪ್ರಕಾಶವನ್ನುಂಟುಮಾಡು ತ್ತಿದೆ. ಗಿರಿರಾಜಕುಮಾರಿಯೇ, ಇಂತಹ ನನ್ನ ಪಾದಗಳನ್ನು ಸತ್ಪುರುಷರು ಯಾವಾ ಗಲೂ ಚೆನ್ನಾಗಿ ಸೇವೆಮಾಡುತ್ತಾ ಧನ್ಯರಾಗುತ್ತಿರುವರು. ಎಂದು ಮಹೇಶ್ವರನು ತನ್ನ ಮಹಿಮೆಯನ್ನು ಪಾರ್ವತಿಗೆ ಪ್ರೀತಿಯಿಂದ ವಿವರಿಸಿದನು. ॥೪೯೪॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿ ವಿಷ್ಣುವು ಬ್ರಹ್ಮನಿಗೆ ಮಾಡಿದ
ಉಪದೇಶಾಂತರ್ಗತವಾದ ಕಾಂಚೀಕ್ಷೇತ್ರಮಹಿಮೆಯಲ್ಲಿ
ಇಪ್ಪತ್ತನೆಯ ಅಧ್ಯಾಯ ಮುಗಿಯಿತು.

